ವಿಷಯಾನುಕ್ರಮಣಿಕೆ

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೩೮

# ಶ್ರೀ ಮ ದ್ವಾ ಯು ಮ ಹಾ ಪು ರಾ ಣಂ

(ಕನ್ನಡ ಅನುವಾದ ಸಹಿತ)

ಸಂಚಿಕೆ ೧

ಅನುವಾದಕ :

ಸಾಹಿತ್ಯ, ವೇದಾಂತ, ಕರ್ಣಾಟಕ, ಆಸ್ಥಾನ, ವಿದ್ವಾನ್

**ಆರ್. ಸೇತುಮಾಧವಾಚಾರ್**

ಪಂಡಿತ, ಗೌ॥ ಟ್ರೈನಿಂಗ್ ಕಾಲೇಜ್, ಮೈಸೂರು.

ಮೈಸೂರು :

ಶ್ರೀ ಶಾರದಾ ಎಲೆಕ್ಟ್ರಿಕ್ ಪ್ರೆಸ್

# ಉಪೋದ್ಘಾತ

ಶ್ರೀಮನ್ನಾರಾಯಣನು ಕಲಿದೋಷದಿಂದಲೂ, ಭೃಗುಮಹರ್ಷಿಗಳ ಶಾಪದಿಂದಲೂ, ಕಲುಷಿತಚಿತ್ತರಾದ ಸಜ್ಜನರನ್ನು ಉದ್ಧರಿಸಲಿಚ್ಛೆಯುಳ್ಳವನೂ, ಬ್ರಹ್ಮಾದಿ ದೇವತೆಗಳಿಂದ ಪ್ರಾರ್ಥಿತನೂ, ಪರಮದಯಾಳುವೂ ಆಗಿ, ವ್ಯಾಸರೂಪದಿಂದ ಭೂಮಿಯಲ್ಲಿ ಅವತರಿಸಿ ವೇದಗಳನ್ನು ಉದ್ಧರಿಸಿದನು. ಮತ್ತು ವೇದಾರ್ಥನಿರ್ಣಾಯಕಗಳಾದ ಬ್ರಹ್ಮಸೂತ್ರಗಳನ್ನೂ, ಅಷ್ಟಾದಶಪುರಾಣಗಳನ್ನೂ ರಚಿಸಿರುವನು.

ಆ ಪುರಾಣಗಳು, ಪುರುಷನು ತನ್ನ ಆಪ್ತಮಿತ್ರನಿಗೆ ಹಿತವನ್ನುಪದೇಶಿಸುವಂತೆ ಸಜ್ಜನರಿಗೆ ಸದುಪದೇಶಗಳನ್ನು ಮಾಡುತ್ತವೆ. ಹೇಗೆಂದರೆ ಸತ್ಪುರುಷನು ತನ್ನ ಆಪ್ತಮಿತ್ರನು ದುರಾಚಾರಿಯೂ, ಅಧರ್ಮಿಷ್ಠನೂ, ಕ್ರೂರಿಯೂ, ಆಗಿದ್ದರೆ ಅವನನ್ನು ದುರ್ನಡತೆಗಳಿಂದ ಬಿಡಿಸುವುದಕ್ಕಾಗಿಯೂ, ಸನ್ಮಾರ್ಗಪ್ರವರ್ತಕನನ್ನಾಗಿಯೂ ಮಾಡಲು, ಅವನಿಗೆ ಅನೇಕ ದೃಷ್ಟಾಂತಗಳ ಮೂಲಕ ಉಪದೇಶಗಳನ್ನು ಮಾಡುವನು. ಪುರುಷರು ಪರೋಪಕಾರವನ್ನೂ, ಧರ್ಮವನ್ನೂ ಮಾಡಬೇಕು. ಸುಳ್ಳನ್ನು ಆಡಬಾರದು. ಸತ್ಯವನ್ನೇ ನುಡಿಯಬೇಕು. ಪರದ್ರವ್ಯವನ್ನೂ, ಪರಸ್ತ್ರೀಯರನ್ನೂ ಅಪಹರಿಸಬಾರದು. ಪ್ರಾಣಿಹಿಂಸೆಯನ್ನು ಮಾಡಬಾರದು. ಇವೇ ಮೊದಲಾದ ಸದುಪದೇಶಗಳನ್ನು ಮಾಡಿ ದುಷ್ಕಾರ್ಯಗಳನ್ನು ಮಾಡದಂತೆಯೂ, ಸತ್ಕರ್ಮಗಳನ್ನಾಚರಿಸುವಂತೆಯೂ, ಉಪದೇಶಿಸುವನು. ಹೀಗೆ ಮಿತ್ರನ ಸದುಪದೇಶದಿಂದ ಪುರುಷರು ಸನ್ಮಾರ್ಗಿಗಳಾಗುವರು. ಹಾಗೆಯೇ ಪುರಾಣಗಳೂ ಸಹ, ರಾವಣಾದಿಗಳಂತೆ ಹಿಂಸಕರೂ, ಲೋಕಕಂಟಕರೂ, ದುಷ್ಟರೂ, ಪರಸ್ತ್ರೀ, ಪರದ್ರವ್ಯಾಪಹಾರಿಗಳೂ, ವಂಚಕರೂ, ಆದರೆ ಅವರು ಸಮೂಲವಾಗಿ ನಾಶವಾಗುವರಲ್ಲದೆ, ಅಪಕೀರ್ತಿಗೆ ಭಾಗಿಯಾಗುವರೆಂದೂ, ಶ್ರೀರಾಮಚಂದ್ರ, ಯುಧಿಷ್ಠಿರರಂತೆ ಪಿತೃವಾಕ್ಯಪರಿಪಾಲಕರೂ, ಗುರುಭಕ್ತಿಯುತರೂ, ಭ್ರಾತೃವತ್ಸಲರೂ, ಲೋಕಾಪವಾದಭೀರುಗಳೂ, ಪ್ರಜಾನುರಾಗಿಗಳೂ, ಧರ್ಮಿಷ್ಠರೂ, ಸತ್ಯಸಂಧರೂ, ವರ್ಣಾಶ್ರಮ ಧರ್ಮಪಾಲಕರೂ, ಪ್ರಜಾಹಿತೈಷಿಗಳೂ ಆದರೆ, ಅಂತಹ ಪುರುಷರಿಗೆ ಇಹಲೋಕದಲ್ಲಿ ಪರಮಕಲ್ಯಾಣಕೀರ್ತಿಗಳು ಪ್ರಾಪ್ತವಾಗುವುದಲ್ಲದೆ, ಪರದಲ್ಲಿ ಪರಮಪದವಿಯೂ ಪ್ರಾಪ್ತವಾಗುವುದೆಂದು, ನಾನಾ ದೃಷ್ಟಾಂತಗಳಿಂದಲೂ, ಉಪಾಖ್ಯಾನಗಳಿಂದಲೂ, ವಿವೇಕಿಗಳಿಗೆ ಉಪದೇಶಿಸುತ್ತವೆ. ಹಾಗೆಯೇ ಸ್ತ್ರೀಯರು ಸೀತೆ, ದ್ರೌಪದಿ, ದಮಯಂತಿಯರಂತೆ ಪತಿಭಕ್ತಿಪರಾಯಣೆಯರೂ, ಪತಿವ್ರತಾಶಿರೋಮಣಿಗಳೂ, ಗುರುಭಕ್ತಿಯುತೆಯರೂ,

ಸತ್ಯವಂತೆಯರೂ, ಸದಾಚಾರಿಣಿಯರೂ ಆದರೆ, ಅವರು ಇಹಪರಗಳಲ್ಲಿ ಪರಮ ಕಲ್ಯಾಣವನ್ನು ಪಡೆಯುವರೆಂದು, ಸ್ತ್ರೀಯರಿಗೆ ಸಖಿಯರಂತೆಯೂ ಉಪದೇಶಿಸುತ್ತವೆ.

**" ನಚೇತ್ಪುರಾಣಂ ಸಂವಿದ್ಯಾನ್ನಚ ಸಸ್ಯಾದ್ವಿಚಕ್ಷಣಃ "**

ಎಂಬ ವಚನಾನುಸಾರವಾಗಿ ಮನುಷ್ಯನು ಚತುಶ್ಶಾಸ್ತ್ರ ಪಂಡಿತನಾಗಿದ್ದರೂ, ಪುರಾಣಗಳನ್ನು ತಿಳಿಯದಿದ್ದರೆ ಎಂದಿಗೂ ಜ್ಞಾನಿಯಾಗಲಾರನೆಂದೂ,

**" ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ "**

ಪುರುಷನು ಮೊದಲು ಇತಿಹಾಸ ಪುರಾಣಗಳ ಅರ್ಥಗಳನ್ನು ತಿಳಿದುಕೊಂಡು, ಅನಂತರ ತದನುಗುಣವಾಗಿ ವೇದಶಾಸ್ತ್ರಗಳನ್ನು ನಿರ್ಣಯಿಸಬೇಕೆಂದೂ, ಸ್ಪಷ್ಟವಾಗಿ ಹೇಳಿರುವುದರಿಂದಲೂ, ಪುರಾಣಗಳ ಮಹಿಮೆಗಳು, ಅಮೂಲ್ಯವಾಗಿಯೂ, ಮಾನ್ಯವಾಗಿಯೂ ಇವೆ. ಇಂತಹ ಪುರಾಣಗಳಲ್ಲಿ ವಾಯುಪುರಾಣವು ಒಂದಾಗಿದೆ.

ಈ ವಾಯು ಮಹಾಪುರಾಣವನ್ನು ವಾಯುದೇವನು ವೈಶಂಪಾಯನ ಮಹರ್ಷಿಗಳಿಗೆ ಪೂರ್ವದಲ್ಲಿ ಹೇಳಿದ್ದನು. ಅದನ್ನೇ ಸೂತರು ಶೌನಕಾದಿ ಮಹರ್ಷಿಗಳಿಗೆ ಹೇಳಿರುತ್ತಾರೆ. ಇದರಲ್ಲಿ ಪುರಾಣಲಕ್ಷಣಗಳು, ಅಂದರೆ ಸೃಷ್ಟಿ, ಅವಾಂತರಸೃಷ್ಟಿ, ಸೂರ್ಯಚಂದ್ರವಂಶ, ಮನ್ವಂತರಗಳು, ಆ ರಾಜರ ಚರಿತೆ ಎಂಬ ಐದು ವಿಷಯಗಳಿವೆ. ಇದರಿಂದ ಈ ಪುರಾಣವು ಮಹಾಪುರಾಣಗಳಲ್ಲಿ ಒಂದಾಗಿದೆ. ಈ ಪುರಾಣದಲ್ಲಿ ಪ್ರಕ್ರಿಯಾಪಾದ, ಉಪೋದ್ಘಾತಪಾದ, ಅನುಷಂಗಪಾದ, ಉಪಸಂಹಾರಪಾದಗಳೆಂದು ನಾಲ್ಕು ಪಾದಗಳಿವೆ. ಮೊದಲನೆಯ ಪಾದದಲ್ಲಿ ಜ್ಞಾನ, ಸೃಷ್ಟಿ, ಸ್ಥಿತಿ, ಲಯ ಇವುಗಳು ವಿಸ್ತಾರವಾಗಿ ವರ್ಣಿತವಾಗಿವೆ. ಉಳಿದ ಪಾದಗಳಲ್ಲಿ ನಾನಾವಿಧ ಶ್ರೌತ ಸ್ಮಾರ್ತಾಚಾರಗಳೂ, ತೀರ್ಥಕ್ಷೇತ್ರ ಮಾಹಾತ್ಮ್ಯಗಳೂ, ಗಯಾಶ್ರಾದ್ಧವಿಧಾನ, ಅದರ ಫಲಗಳೂ, ಭುವನಾಂಡಕೋಶ ಪರಿಮಾಣಗಳೂ, ಸರಿತ್ಸಮುದ್ರಶೈಲಾದಿಗಳ ವಿಭಾಗಗಳೂ, ವರ್ಣಿತವಾಗಿವೆ.

ಆಳುವ ಮಹಾಸ್ವಾಮಿಯವರು ಬಾಲ್ಯದಲ್ಲಿಯೇ ಜ್ಞಾನವೃದ್ಧರಂತೆ ಸಕಲತೀರ್ಥ ಕ್ಷೇತ್ರಗಳ ಯಾತ್ರೆಗಳನ್ನು ಮಾಡಿ, ಅನೂಚಾನವಾಗಿ ಬಂದ ಪದ್ಧತಿಗಳನ್ನು ಬಿಡದೆ ಸದಾಚಾರಸಂಪನ್ನರಾಗಿರುವರು. ಇಂತಹ ಪ್ರಭುಗಳು ಅಷ್ಟಾದಶಪುರಾಣಗಳು, ಉಪಪುರಾಣಗಳು, ಋಗ್ವೇದ, ಉಪನಿಷತ್ತು, ವೇದಾಂತಗ್ರಂಥಗಳು, ಅನೇಕ ಸ್ತೋತ್ರಗಳು ಇವೇ ಮೊದಲಾದುವುಗಳನ್ನು ಸಂಪೂರ್ಣವಾದ ಉತ್ತೇಜನದ ಮೂಲಕ

ಪರಿವರ್ತನೆಯನ್ನು ಮಾಡಿಸುತ್ತಿರುವುದು ಆಳುವ ಮಹಾಸ್ವಾಮಿಯವರಾದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ.,ಜಿ.ಸಿ.ಎಸ್.ಐ. ಮಹಾಪ್ರಭುಗಳವರ ಔದಾರ್ಯ, ಸತ್ಯಸಂಧತೆ, ಧರ್ಮನಿಷ್ಠತೆ, ಪ್ರಜೆಗಳಲ್ಲಿರುವ ಅನುರಾಗ ಶ್ರದ್ಧೆ, ಭಕ್ತಿ, ಅನುಷ್ಠಾನ ಇವೇ ಮೊದಲಾದ ಮಹಾಗುಣಗಳನ್ನು ವ್ಯಕ್ತಪಡಿಸುತ್ತದೆ.

ಮಹಾಪ್ರಭುಗಳು ಸಕಲಗುಣಸಂಪನ್ನವಾದ ಪುತ್ರಸಂತಾನವನ್ನು ಪಡೆದು, ಆಚಂದ್ರಾರ್ಕಪರ್ಯಂತ ಕೀರ್ತಿಯುತರೂ, ಧರ್ಮಾಸಕ್ತರೂ, ಆಗಿ ರಾಜ್ಯವನ್ನು ಪಾಲಿಸುತ್ತಿರಲೆಂದು ಶ್ರೀ ಭಗವಂತನನ್ನು ಪ್ರಾರ್ಥಿಸುವ.

**ಅನುವಾದಕ.**

### ಶ್ರೀಮದ್ವಾಯುಪುರಾಣದ

# ವಿಷಯಾನುಕ್ರಮಣಿಕೆ

—|| ಹರಿಃ ಓಮ್ ||—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀ ಮ ದ್ವಾ ಯು ಪು ರಾ ಣ ಂ

## ॥ ಪ್ರಥಮಾಧ್ಯಾಯಃ ॥

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥ ೧ ॥**

**ಜಯತಿ ಪರಾಶರಸೂನುಃ ಸತ್ಯವತೀ ಹೃದಯನಂದನೋ ವ್ಯಾಸಃ ।**
**ಯಸ್ಯಾಸ್ಯ ಕಮಲಗಳಿತಂ ವಾಙ್ಮಯಮಮೃತಂ ಜಗತ್ಪಿಬತಿ ॥ ೨ ॥**

---

### ಒಂದನೆಯ ಅಧ್ಯಾಯವು

೧. ಗ್ರಂಥಾರಂಭದಲ್ಲಿ ಜ್ಞಾನಿಗಳು ಶ್ರೀಮನ್ನಾರಾಯಣನಿಗೂ, ಮನುಷ್ಯೋತ್ತಮನಾದ ನರನಿಗೂ, ಸರಸ್ವತೀ ದೇವಿಗೂ, ನಮಸ್ಕರಿಸಿ ಭಗವದ್ವಿಷಯಕವಾದ ಗ್ರಂಥವನ್ನು (ಪುರಾಣವನ್ನು) ಪ್ರಾರಂಭಿಸಬೇಕು.

೨. ಯಾರ ಮುಖಕಮಲದಿಂದ ಉಂಟಾದ ಅಮೃತವನ್ನು ಜಗತ್ತು ಪಾನಮಾಡುತ್ತದೆಯೋ, ಅಂತಹ ಸತ್ಯವತೀ ದೇವಿಯ ಹೃದಯಾನಂದಜನಕರೂ, ಪರಾಶರಪುತ್ರರೂ, ಆದ ವೇದವ್ಯಾಸ ಮಹರ್ಷಿಗಳು ಸರ್ವೋತ್ಕೃಷ್ಟರಾಗಿರುತ್ತಾರೆ.

---

ಸೂಚನೆ :—ಈ ಪದ್ಯದಲ್ಲಿ ಜಯವನ್ನು ಹೇಳಬೇಕೆಂದು ಇದೆ. ಜಯವನ್ನೋ ಅಥವಾ ಮಂಗಳವನ್ನೋ, ಹೇಳಬೇಕೆಂದು ಅರ್ಥವಾದರೂ, ಸಂದರ್ಭಾನುಸಾರವಾಗಿ ಪುರಾಣವೆಂದು ಅರ್ಥವನ್ನು ಮಾಡುವುದು ಸೂಕ್ತವಾಗಿದೆ ಹೇಗೆಂದರೆ.

ಅಷ್ಟಾದಶ ಪುರಾಣಾನಿ ರಾಮಸ್ಯ ಚರಿತಸ್ಯ ಚ |
ವಿಷ್ಣು ಧರ್ಮಾಣಿ ಶಾಸ್ತ್ರಾಣಿ ಶಿವ ಧರ್ಮಾಶ್ಚ ಭಾರತ ||
ಜಯೇತಿ ನಾಮ ಏತೇಷಾಂ ಪ್ರವದಂತಿ ಮನೀಷಿಣಃ

ಈ ಪ್ರಮಾಣಾನುಸಾರವಾಗಿ ಪ್ರಕೃತ ಪುರಾಣ ಗ್ರಂಥವೆಂದು ಅರ್ಥಮಾಡಿದರೆ ಸಮಂಜಸವಾಗುವುದು.

ಪ್ರಪದ್ಯೇ ದೇವ ಮೀಶಾನಂ ಶಾಶ್ವತಂ ಧ್ರುವ ಮವ್ಯಯಂ ।
ಮಹಾದೇವಂ ಮಹಾತ್ಮಾನಂ ಸರ್ವಸ್ಯ ಜಗತಃ ಪತಿಂ ॥ ೩ ॥

ಬ್ರಹ್ಮಾಣಂ ಲೋಕಕರ್ತಾರಂ ಸರ್ವಜ್ಞಮಪರಾಜಿತಂ ।
ಪ್ರಭುಂ ಭೂತ ಭವಿಷ್ಯಸ್ಯ ಸಾಂಪ್ರತಸ್ಯ ಚ ಸತ್ಪತಿಂ ॥ ೪ ॥

ಜ್ಞಾನಮಪ್ರತಿಮಂ ಯಸ್ಯ ವೈರಾಗ್ಯಂ ಚ ಜಗತ್ಪತೇಃ ।
ಐಶ್ವರ್ಯಂ ಚೈವ ಧರ್ಮಶ್ಚ ಸಹಸಿದ್ಧಿ ಚತುಷ್ಟಯಃ ॥ ೫ ॥

ಯ ಇಮಾನ್ ಪಶ್ಯತೇ ಭಾವಾನ್ ನಿತ್ಯಂ ಸದಸದಾತ್ಮಕಂ ।
ಆವಿಶಂತಿ ಪುನಸ್ತಂ ವೈ ಕ್ರಿಯಾ ಭಾವಾರ್ಥಮೀಶ್ವರಂ ॥ ೬ ॥

ಲೋಕಕೃಲ್ಲೋಕ ತತ್ವಜ್ಞೋ ಯೋಗಮಾಸ್ಥಾಯ ತತ್ವವಿತ್ ।
ಅಸೃಜತ್ ಸರ್ವಭೂತಾನಿ ಸ್ಥಾವರಾಣಿ ಚರಾಣಿ ಚ ॥ ೭ ॥

---

೩. ಸರ್ವಜಗತ್ಪತಿಯೂ, ಮಹಾತ್ಮನೂ, ನಾಶರಹಿತನೂ, ಸ್ಥಿರನೂ, ಶಾಶ್ವತನೂ, ಈಶಾನಶಬ್ದವಾಚ್ಯನೂ, ದೇವನೂ ಆದ ಪರಮೇಶ್ವರನಿಗೆ ಅನಂತ ನಮಸ್ಕಾರಗಳು.

೪. ಲೋಕಕರ್ತನೂ, ಸರ್ವಜ್ಞನೂ, ಪರಾಜಯರಹಿತನೂ, ಭೂತ ಭವಿಷ್ಯದ್ವರ್ತಮಾನಕಾಲಗಳಲ್ಲಿರುವ ಜಗದೊಡೆಯನೂ, ಜ್ಞಾನಿಶ್ರೇಷ್ಠನೂ, ಆದ ಬ್ರಹ್ಮದೇವನನ್ನು ನಮಸ್ಕರಿಸುತ್ತೇನೆ.

೫. ಜಗತ್ಪತಿಯಾದ ಯಾವ ಬ್ರಹ್ಮದೇವನ ಜ್ಞಾನ, ವೈರಾಗ್ಯ, ಐಶ್ವರ್ಯ ಧರ್ಮಗಳೆಂಬ ನಾಲ್ಕೂ, ಅಸದೃಶವಾಗಿಯೂ, ಸಹಜ ಸಿದ್ಧವಾಗಿಯೂ ಇವೆಯೋ,

೬. ಯಾವ ಭಗವಂತನು ಸದಸದ್ರೂಪವಾದ ಈ ಪದಾರ್ಥಗಳನ್ನು ನಿತ್ಯವೂ, ನೋಡುತ್ತಾನೋ, ಯಾವ ವಸ್ತುಗಳು ಕ್ರಿಯಾ ಕರ್ಮ ಭಾವಗಳನ್ನು ಪಡೆಯುವುದಕ್ಕಾಗಿ ಯಾವ ಭಗವಂತನನ್ನು ಪ್ರವೇಶಮಾಡುತ್ತವೆಯೋ.

೭. ಲೋಕಕರ್ತನೂ, ಲೋಕತತ್ವಜ್ಞಾನಿಯೂ, ನಿಜವನ್ನರಿತವನೂ, ಆದ ಯಾವ ಭಗವಂತನು ಚರಾಚರಾತ್ಮಕವಾದ ಸರ್ವಪ್ರಾಣಿಗಳನ್ನೂ ಸೃಷ್ಟಿ ಮಾಡಿರುವನೋ,

ತಮಜಂ ವಿಶ್ವಕರ್ಮಾಣಂ ಚಿತ್ಪತಿಂ ಲೋಕಸಾಕ್ಷಿಣಂ ।
ಪುರಾಣಾಖ್ಯಾನಜಿಜ್ಞಾಸುರ್ವ್ರಜಾಮಿ ಶರಣಂ ಪ್ರಭುಂ ॥ ೮ ॥

ಬ್ರಹ್ಮವಾಯುಮಹೇಂದ್ರೇಭ್ಯೋ ನಮಸ್ಕೃತ್ಯ ಸಮಾಹಿತಃ ।
ಋಷೀಣಾಂ ಚ ವರಿಷ್ಠಾಯ ವಸಿಷ್ಠಾಯ ಮಹಾತ್ಮನೇ ॥ ೯ ॥

ತನ್ನಪ್ತ್ರೇ ಚಾತಿಯಶಸೇ ಜಾತೂಕರ್ಣಾಯ ಚರ್ಷಯೇ ।
ವಸಿಷ್ಠಾಯ ಚ ಶುಚಯೇ ಕೃಷ್ಣದ್ವೈಪಾಯನಾಯ ಚ ॥ ೧೦ ॥

ಪುರಾಣಂ ಸಂಪ್ರವಕ್ಷ್ಯಾಮಿ ಬ್ರಹ್ಮೋಕ್ತಂ ವೇದಸಮ್ಮತಂ ।
ಧರ್ಮಾರ್ಥನ್ಯಾಯಸಂಯುಕ್ತೈರಾಗಮೈಃ ಸಂವಿಭೂಷಿತಂ ॥ ೧೧ ॥

ಅಸೀಮಕೃಷ್ಣ ವಿಕ್ರಾಂತೇ ರಾಜನ್ಯನುಪಮತ್ವಿಷಿ ।
ಪ್ರಶಾಸತೀಮಾಂ ಧರ್ಮೇಣ ಭೂಮಿಂ ಭೂಮಿಪ ಸತ್ತಮ ॥ ೧೨ ॥

---

೮. ಅಂತಹ ವಿಶ್ವಕರ್ತನೂ, ಜ್ಞಾನಿಯೂ, ಲೋಕಸಾಕ್ಷಿಯೂ, ಉತ್ಪತ್ತಿ ರಹಿತನೂ ಆದ ಬ್ರಹ್ಮನಿಗೆ ಪುರಾಣೇತಿಹಾಸಗಳನ್ನು ತಿಳಿಯಲಿಚ್ಛೆಯುಳ್ಳ ನಾನು ಶರಣಾಗತನಾಗುವೆನು.

೯-೧೦. ಪುರಾಣವನ್ನು ಹೇಳುವ ನಾನು, ಸ್ಥಿರ ಚಿತ್ತನಾಗಿ ಬ್ರಹ್ಮ, ವಾಯು, ದೇವೇಂದ್ರಾದಿಗಳಿಗೂ, ಋಷ್ಯುತ್ತಮನೂ, ಮಹಾತ್ಮನೂ, ಸ್ವತಂತ್ರನೂ ಆದ ವಸಿಷ್ಠನಿಗೂ, ಅವನ ಮೊಮ್ಮಗನಿಗೂ, ಅತಿ ಕೀರ್ತಿವಂತನೂ, ಜಾತೂಕರ್ಣ ನಾಮಕನೂ ಆದ ಮಹರ್ಷಿಗೂ, ಪವಿತ್ರರಾದ ವೇದವ್ಯಾಸರಿಗೂ, ನಮಸ್ಕರಿಸಿ ಪುರಾಣವನ್ನು ತಿಳಿಸುವೆನು.

೧೧. ಬ್ರಹ್ಮದೇವನಿಂದ ನಿರೂಪಿತವೂ, ವೇದಸಮ್ಮತವೂ, ವೇದೋಕ್ತ ಗಳಾದ, ಧರ್ಮಾರ್ಥ ನ್ಯಾಯಗಳಿಂದ ಅಲಂಕೃತವೂ ಆದ ಪುರಾಣವನ್ನು ನಿಮ ಗಾಗಿ ತಿಳಿಸುವೆನು.

೧೨. ರಾಜರ ಸಮೂಹದಲ್ಲಿ ಅಸದೃಶವಾದ ಕೀರ್ತಿವಂತನೂ, ಭೂಪೋ ತ್ತಮನೂ, ಪರಾಕ್ರಮಿಯೂ ಆದ ಅಸೀಮಕೃಷ್ಣನೆಂಬ ರಾಜನು ಈ ಭೂಮಿ ಯನ್ನು ಧರ್ಮದಿಂದ ಆಳುತ್ತಿರಲಾಗಿ, ಮಹರ್ಷಿಗಳು ನೈಮಿಷಾರಣ್ಯದಲ್ಲಿ ಸತ್ರ ಯಾಗವನ್ನು ಮಾಡಿದರು.

ಋಷಯಃ ಸಂಶಿತಾತ್ಮಾನಃ ಸತ್ಯವ್ರತಪರಾಯಣಾಃ ।
ಋಜವೋ ನಷ್ಟರಜಸಃ ಶಾಂತಾ ದಾಂತಾ ಜಿತೇಂದ್ರಿಯಾಃ ॥ ೧೩ ॥

ಧರ್ಮಕ್ಷೇತ್ರೇ ಕುರುಕ್ಷೇತ್ರೇ ದೀರ್ಘಸತ್ರಂ ತು ಈಜಿರೇ ।
ನದ್ಯಾಸ್ತೀರೇ ದೃಷದ್ವತ್ಯಾಃ ಪುಣ್ಯಾಯಾಃ ಶುಚಿರೋಧಸಃ ॥ ೧೪ ॥

ದೀಕ್ಷಿತಾಸ್ತೇ ಯಥಾಶಾಸ್ತ್ರಂ ನೈಮಿಷಾರಣ್ಯಗೋಚರಾಃ ।
ದ್ರಷ್ಟುಂ ತಾನ್ ಸ ಮಹಾಬುದ್ಧಿಃ ಸೂತಃ ಪೌರಾಣಿಕೋತ್ತಮಃ ॥ ೧೫ ॥

ಲೋಮಾನಿ ಹರ್ಷಯಾಂ ಚಕ್ರೇ ಶ್ರೋತೄಣಾಂ ಯತ್ಸುಭಾಷಿತಂ ।
ಕರ್ಮಣಾ ಪ್ರಥಿತಸ್ತೇನ ಲೋಕೇಸ್ಮಿನ್ ಲೋಮಹರ್ಷಣಃ ॥ ೧೬ ॥

ತಪಃ ಶ್ರುತಾಚಾರನಿಧೇರ್ವೇದವ್ಯಾಸಸ್ಯ ಧೀಮತಃ ।
ಶಿಷ್ಯೋ ಬಭೂವ ಮೇಧಾವೀ ತ್ರಿಷು ಲೋಕೇಷು ವಿಶ್ರುತಃ ॥ ೧೭ ॥

---

೧೩-೧೪. ನೈಮಿಷಾರಣ್ಯವಾಸಿಗಳೂ, ಶಾಂತರೂ, ದಾಂತರೂ, ಜಿತೇಂದ್ರಿಯರೂ, ನಷ್ಟವಾದ ಪಾಪವುಳ್ಳವರೂ, ಯಥಾರ್ಥವಾದಿಗಳೂ, ಸತ್ಯವ್ರತಪರಾಯಣರೂ, ಶಾಂತಚಿತ್ತರೂ, ಆದ ಮಹರ್ಷಿಗಳು, ಪರಿಶುದ್ಧವೂ, ಪವಿತ್ರವೂ ಆದ ದೃಷದ್ವತೀ ನದಿಯ ತೀರದಲ್ಲಿರುವ ಧರ್ಮಾಶ್ರಯವಾದ ಕುರುಕ್ಷೇತ್ರದಲ್ಲಿ ಶಾಸ್ತ್ರೋಕ್ತವಾಗಿ ದೀಕ್ಷಿತರಾಗಿ ದೀರ್ಘಕಾಲಿಕವಾದ ಸತ್ರಯಾಗವನ್ನು ಪ್ರಾರಂಭಿಸಿದರು.

೧೫-೧೬. ಪೌರಾಣಿಕೋತ್ತಮರೂ, ಮಹಾ ಜ್ಞಾನಿಗಳೂ, ಆದ ಸೂತರು ಅವರನ್ನು ನೋಡಲು ಬಂದು ತಮ್ಮ ದಿವ್ಯ ವಾಣಿಯಿಂದ ಆ ಮಹರ್ಷಿಗಳಿಗೆ ರೋಮಾಂಚವಾಗುವಂತೆ ಸಂತೋಷವನ್ನುಂಟುಮಾಡಿದರು. ಈ ಕಾರಣದಿಂದ ಅವರು ಲೋಕದಲ್ಲಿ ಲೋಮಹರ್ಷಣ ಮಹರ್ಷಿಗಳೆಂದು ಪ್ರಖ್ಯಾತಿ ಪಡೆದರು.

೧೭. ಮಹಾಜ್ಞಾನಿಗಳಾದ ಸೂತಪುರಾಣೀಕರು, ತಪಸ್ಸು, ಜ್ಞಾನ, ಆಚಾರ, ಇವುಗಳಿಗೆ ಗಣಿಯೂ, ಬುದ್ಧಿವಂತರೂ, ಆದ ವೇದವ್ಯಾಸ ಮಹರ್ಷಿಗಳಿಗೆ ಶಿಷ್ಯರಾಗಿ ಮೂರು ಲೋಕಗಳಲ್ಲಿಯೂ ಪ್ರಖ್ಯಾತರಾದರು.

ಪುರಾಣವೇದೋ ಹ್ಯಖಿಲೋ ಯಸ್ಮಿನ್ ಸಂಯಕ್ ಪ್ರತಿಷ್ಠಿತಃ ।
ಭಾರತೀ ಚೈವ ವಿಪುಲಾ ಮಹಾಭಾರತವರ್ಧಿನೀ ॥ ೧೮ ॥

ಧರ್ಮಾರ್ಥಕಾಮಮೋಕ್ಷಾರ್ಥಾಃ ಕಥಾ ಯಸ್ಮಿನ್ ಪ್ರತಿಷ್ಠಿತಾಃ ।
ಸೂಕ್ತಾಃ ಸುಪರಿಭಾಷಾಶ್ಚ ಭೂಮಾವೋಷಧಯೋ ಯಥಾ ॥ ೧೯ ॥

ಸತಾನ್ಯಾಯೇನ ಸುಧಿಯೋ ನ್ಯಾಯವಿನ್ಮುನಿಪುಂಗವಾನ್ ।
ಅಭಿಗಮ್ಯೋಪಸಂಸೃತ್ಯ ನಮಸ್ಕೃತ್ಯ ಕೃತಾಂಜಲಿಃ ॥
ತೋಷಯಾಮಾಸ ಮೇಧಾವೀ ಪ್ರಣಿಪಾತೇನ ತಾನ್ ಋಷೀನ್ ॥ ೨೦ ॥

ತೇ ಚಾಪಿ ಸತ್ರಿಣಃ ಪ್ರೀತಾಃ ಸಸದಸ್ಯಾ ಮಹೌಜಸಃ ।
ತಸ್ಮೈ ಸಾಮ ಚ ಪೂಜಾಂ ಚ ಯಥಾವತ್ ಪ್ರತಿಪೇದಿರೇ ॥ ೨೧ ॥

ಅಥ ತೇಷಾಂ ಪುರಾಣಸ್ಯ ಶುಶ್ರೂಷಾ ಸಮಪದ್ಯತ ।
ದೃಷ್ಟ್ವಾ ತಮತಿವಿಶ್ವಸ್ತಂ ವಿದ್ವಾಂಸಂ ಲೋಮಹರ್ಷಣಂ ॥ ೨೨ ॥

---

೧೮. ವೇದಸಮವಾದ ಸಮಸ್ತ ಪುರಾಣಗಳೂ, ಅತಿ ವಿಪುಲವಾದ ಮಹಾಭಾರತ ಸಂಬಂಧಿಯಾದ ವಿಶದವಾಣಿಯೂ ಯಾರಲ್ಲಿ ಸ್ಥಿರವಾಗಿದೆಯೋ,

೧೯. ಯಾರಲ್ಲಿ ಧರ್ಮಾರ್ಥಕಾಮಮೋಕ್ಷವಿಷಯಗಳಾದ ಕಥೆಗಳೂ, ಸುಭಾಷಿತಗಳೂ ಮತ್ತು ನೀತಿಗಳೂ ಕೂಡ, ಭೂಮಿಯಲ್ಲಿ ಓಷಧಿಗಳಂತೆ ಸಮೃದ್ಧವಾಗಿವೆಯೋ.

೨೦. ಜ್ಞಾನಿಗಳೂ, ನೀತಿಶಾಸ್ತ್ರಜ್ಞರೂ; ಆದ ಅಂತಹ ಸೂತರು, ಕ್ರಮವಾಗಿ ಜ್ಞಾನಿಗಳಾದ ಮಹಾಮುನಿಗಳ ಬಳಿಗೆ ಬಂದು, ಅಂಜಲಿಬದ್ಧರಾಗಿ ನಮಸ್ಕಾರ ಮಾಡಿ, ಅವರನ್ನು ಸಂತೋಷಪಡಿಸಿದರು.

೨೧. ಮಹಾತಪಸ್ವಿಗಳೂ, ಸದಸ್ಯರೂ, ಆದ ಆ ಮಹರ್ಷಿಗಳು ಪ್ರೀತರಾಗಿ, ಆ ಸೂತರಿಗೆ ಶಾಸ್ತ್ರೋಕ್ತವಾಗಿ ಸಮಾಧಾನದಿಂದ ಪೂಜೆಗಳನ್ನು ಮಾಡಿದರು.

೨೨. ಅನಂತರ ಆ ಋಷಿಗಳಿಗೆ ನಂಬಿಕೆಗೆಅರ್ಹರೂ, ವಿದ್ವಾಂಸರೂ, ಆದ ಲೋಮಹರ್ಷಿಗಳನ್ನು ನೋಡಿ ಪುರಾಣದಲ್ಲಿ ಆಸಕ್ತಿಯುಂಟಾಯಿತು.

ತಸ್ಮಿನ್ ಸತ್ರೇ ಗೃಹಪತಿಃ ಸರ್ವಶಾಸ್ತ್ರವಿಶಾರದಃ ।
ಇಂಗಿತೈರ್ಭಾವಮಾಲಕ್ಷ್ಯ ತೇಷಾಂ ಸೂತಮನೋದಯತ್ ॥ ೨೩ ॥

ತ್ವಯಾ ಸೂತ ಮಹಾಬುದ್ಧಿರ್ಭಗವಾನ್ ಬ್ರಹ್ಮವಿತ್ತಮಃ ।
ಇತಿಹಾಸ ಪುರಾಣಾರ್ಥಂ ವ್ಯಾಸಃಸಮ್ಯಗುಪಾಸಿತಃ ॥
ದುದೋಹ ವೈಮತಿಂ ತಸ್ಯ ತ್ವಂ ಪುರಾಣಾಶ್ರಯಾಂ ಕಥಾಂ ॥ ೨೪ ॥

ಏಷಾಂಚ ಋಷಿಮುಖ್ಯಾನಾಂ ಪುರಾಣಂ ಪ್ರತಿ ಧೀಮತಾಂ ।
ಶುಶ್ರೂಷಾಸ್ತಿ ಮಹಾಬುದ್ಧೇ ತಚ್ಛ್ರಾವಯಿತುಮರ್ಹಸಿ ॥ ೨೫ ॥

ಸರ್ವೇ ಹೀಮೇ ಮಹಾತ್ಮಾನೋ ನಾನಾಗೋತ್ರಾಃ ಸಮಾಗತಾಃ ।
ಸ್ವಾನ್ ಸ್ವಾನ್ ವಂಶಾನ್ ಪುರಾಣೈಸ್ತು ಶೃಣುಯುರ್ಬ್ರಹ್ಮವಾದಿನಃ ॥ ೨೬ ॥

---

೨೩. ಆ ಯಾಗದಲ್ಲಿ ಶಾಸ್ತ್ರವಿಶಾರದನಾದ ಯಜಮಾನನು ಆ ಋಷಿಗಳ ಮನೋಭಾವಗಳನ್ನರಿತವನಾಗಿ ಸೂತರನ್ನು ಕುರಿತು ಮುಂದೆ ಹೇಳುವಂತೆ ಹೇಳಿದನು.

೨೪. ಎಲೈ, ಸೂತಪುರಾಣಿಕರೇ, ನಿಮ್ಮಿಂದ, ಅಪರಿಮಿತವಾದ ಬುದ್ಧಿಯುಳ್ಳವರೂ, ಬ್ರಹ್ಮಜ್ಞಾನಿಗಳಲ್ಲಿ ಉತ್ತಮರೂ ಮತ್ತು ಪೂಜ್ಯರೂ ಆದ ವ್ಯಾಸ ಮಹರ್ಷಿಗಳು ಇತಿಹಾಸಪುರಾಣಗಳನ್ನು ತಿಳಿಯಲೋಸ್ಕರವಾಗಿ ಚೆನ್ನಾಗಿ ಸೇವಿಸಲ್ಪಟ್ಟಿರುವರು ಮತ್ತು ಅವರಿಂದ ನೀವು ಪುರಾಣೇತಿಹಾಸಗಳ ಕಥೆಯನ್ನೂ, ದಿವ್ಯಜ್ಞಾನವನ್ನೂ ಸಂಪಾದಿಸಿರುತ್ತೀರಿ.

೨೫. ಮಹಾಜ್ಞಾನಿಗಳಾದ ಸೂತರೇ, ನಮಗೆ ಜ್ಞಾನಿಗಳಾದ ಈ ಮಹರ್ಷಿಗಳ ಪುರಾಣವನ್ನು ಕೇಳಬೇಕೆಂಬ ಇಚ್ಛೆಯು ಬಹಳವಾಗಿದೆ. ಆದುದರಿಂದ ಅದನ್ನು ತಾವು ದಯವಿಟ್ಟು ತಿಳಿಸಲು ಅರ್ಹರಾಗಿರುತ್ತೀರೆಂದು ಕೇಳಿದರು.

೨೬. ಈ ಸತ್ರಯಾಗಕ್ಕೆ ಬಂದಿರುವ ಮತ್ತು ನಾನಾ ಗೋತ್ರಗಳಲ್ಲಿ ಜನಿಸಿರುವ ಬ್ರಹ್ಮಜ್ಞಾನಿಗಳಾದ ಮಹರ್ಷಿಗಳೆಲ್ಲರೂ, ಪುರಾಣೋಕ್ತವಾದ ತಮ್ಮ ತಮ್ಮ ವಂಶಗಳನ್ನು ಕೇಳಲು ಬಹಳ ಕುತೂಹಲವುಳ್ಳವರಾಗಿರುವರು.

ಸಪುತ್ರಾನ್ ದೀರ್ಘಸತ್ರೇಽಸ್ಮಿನ್ ಶ್ರಾವಯೇಥಾ ಮುನೀನಥ ।
ದೀಕ್ಷಿಷ್ಯಮಾಣೈರಸ್ಮಾಭಿಃ ತೇನ ಪ್ರಾಗಸಿ ಸಂಸ್ಮೃತಃ ॥ ೨೭ ॥

ಇತಿ ಸನ್ನೋದಿತಃ ಸೂತಸ್ತೈರೇವ ಮುನಿಭಿಃ ಪುರಾ ।
ಪುರಾಣಾರ್ಥಂ ಪುರಾಣಜ್ಞೈಃ ಸತ್ಯವ್ರತ ಪರಾಯಣೈಃ ॥ ೨೮ ॥

ಸ್ವಧರ್ಮ ಏಷ ಸೂತಸ್ಯ ಸದ್ಭಿರ್ದೃಷ್ಟಃ ಪುರಾತನೈಃ ।
ದೇವತಾನಾಮೃಷೀಣಾಂ ಚ ರಾಜ್ಞಾಂ ಚಾಮಿತತೇಜಸಾಂ ॥ ೨೯ ॥

ವಂಶಾನಾಂ ಧಾರಣಂ ಕಾರ್ಯಂ ಶ್ರುತಾನಾಂ ಚ ಮಹಾತ್ಮನಾಂ ।
ಇತಿಹಾಸಪುರಾಣೇಷು ದಿಷ್ಟಾ ಯೇ ಬ್ರಹ್ಮವಾದಿಭಿಃ ॥ ೩೦ ॥

ನ ಹಿ ವೇದೇಷ್ವಧೀಕಾರಃ ಕಶ್ಚಿತ್ಸೂತಸ್ಯ ದೃಶ್ಯತೇ ।
ವೈನ್ಯಸ್ಯ ಹಿ ಪೃಥೋರ್ಯಜ್ಞೇ ವರ್ತಮಾನೇ ಮಹಾತ್ಮನಃ ॥
ಸುತ್ಯಾಯಾಮಭವತ್ಸೂತಃ ಪ್ರಥಮಂ ವರ್ಣವೈಕೃತಃ ॥ ೩೧ ॥

---

೨೭. ದೀರ್ಘಕಾಲ ನಡೆಯುವ ಈ ಸತ್ರಯಾಗದಲ್ಲಿ, ಪುತ್ರಪೌತ್ರಾದಿಗಳಿಂದ ಕೂಡಿರುವ ಮುನಿಗಳ ವಿಷಯಗಳನ್ನು ತಿಳಿಸುವವರಾಗಿರಿ. ನಾನೂ ಮತ್ತು ದೀಕ್ಷೆಯನ್ನು ಪಡೆದಿರುವ ಮುನಿಗಳೂ ಕೂಡ ನಿಮ್ಮನ್ನು ಮೊದಲೇ ಪ್ರಾರ್ಥಿಸಿರುತ್ತೇವೆ [ಸ್ಮರಿಸಿರುತ್ತೇವೆ].

೨೮. ಸತ್ಯವ್ರತ ಪರಾಯಣರೂ, ಪುರಾಣವನ್ನು ತಿಳಿದವರೂ, ಆದ ಮುನಿಗಳು ಪೂರ್ವದಲ್ಲಿಯೇ, ಪುರಾಣಶ್ರವಣಕ್ಕಾಗಿ ಸೂತಪುರಾಣಜ್ಞರನ್ನು ಪ್ರಾರ್ಥಿಸಿದರು.

೨೯. ದೇವತೆಗಳು, ಋಷಿಗಳು ಮತ್ತು ಅತಿತೇಜಸ್ವಿಗಳೂ ಆದ ರಾಜರು, ಇವರುಗಳ ಚರಿತ್ರೆಯನ್ನು ವರ್ಣಿಸುವುದು ಸೂತರಿಗೆ ಸ್ವಧರ್ಮವಾಗಿದೆಯೆಂದು, ಪುರಾತನರಾದ ಸಜ್ಜನರು ಹೇಳುತ್ತಾರೆ.

೩೦. ಬ್ರಹ್ಮಜ್ಞಾನಿಗಳು ಇತಿಹಾಸಪುರಾಣಗಳಲ್ಲಿ ನಿರೂಪಿಸಿರುವ ಮಹಾತ್ಮರುಗಳು ಇವರ ವಂಶಗಳನ್ನು ಜ್ಞಾಪಕದಲ್ಲಿಡುವುದು ಸೂತರ ಕರ್ತವ್ಯವಾಗಿದೆ.

೩೧. ವೇನರಾಜಸಂಬಂಧಿಯೂ, ಮಹಾತ್ಮನೂ ಆದ ಪೃಥುಮಹಾರಾಜನ ಸುತ್ಯಾನಾಮಕಯಾಗದಲ್ಲಿ ಕ್ಷತ್ರಿಯ ಬೀಜದಿಂದ ಬ್ರಾಹ್ಮಣ ಸ್ತ್ರೀಯಲ್ಲಿ ವರ್ಣವ್ಯತ್ಯಾಸವಾಗಿ ಸೂತರು ಜನಿಸಿದುದರಿಂದ, ಆ ಸೂತರಿಗೆ ವೇದಾಧಿಕಾರವಿಲ್ಲ.

**ಐಂದ್ರೇಣ ಹವಿಷಾ ತತ್ರ ಹವಿಃ ಪೃಕ್ತಂ ಬೃಹಸ್ಪತೇಃ ।**
**ಜುಹಾವೇಂದ್ರಾಯ ದೇವಾಯ ತತಃ ಸೂತೋ ವ್ಯಜಾಯತ ॥**
**ಪ್ರಮಾದಾತ್ತತ್ರ ಸಂಜಜ್ಞೇ ಪ್ರಾಯಶ್ಚಿತ್ತಂ ಚ ಕರ್ಮಸು ॥ ೩೨ ॥**

**ಶಿಷ್ಯಹವ್ಯೇನ ಯತ್ ಪೃಕ್ತಮಭಿಭೂತಂ ಗುರೋರ್ಹವಿಃ ।**
**ಅಧರೋತ್ತರ ಚಾರೇಣ ಜಜ್ಞೇ ತದ್ವರ್ಣ ವೈಕೃತಃ ॥ ೩೩ ॥**

**ಯಂ ಚ ಕ್ಷತ್ರಾತ್ಸಮಭವತ್ ಬ್ರಾಹ್ಮಣಾವರಯೋನಿತಃ ।**
**ತತಃ ಪೂರ್ವೇಣ ಸಾಧರ್ಮ್ಯಾತ್ ತುಲ್ಯಧರ್ಮಾ ಪ್ರಕೀರ್ತಿತಃ ॥ ೩೪ ॥**

**ಮಧ್ಯಮೋ ಹ್ಯೇಷ ಸೂತಸ್ಯ ಧರ್ಮಃ ಕ್ಷತ್ರೋಪಜೀವನಂ ।**
**ರಥನಾಗಾಶ್ವಚರಿತಂ ಜಘನ್ಯಂ ಚ ಚಿಕಿತ್ಸಿತಂ ॥ ೩೫ ॥**

---

೩೨. ಆ ಯಾಗದಲ್ಲಿ ಇಂದ್ರದೇವತಾಕವಾದ ಹವಿಸ್ಸಿನೊಡನೆ ಬೃಹಸ್ಪತಿಗಳ ಹವಿಸ್ಸನ್ನು ಸೇರಿಸಿ, ದೇವೇಂದ್ರನಿಗೆ ಹೋಮಮಾಡಿದುದರಿಂದ ಸೂತರು ಜನಿಸಿದರು. ಅಜ್ಞಾನದಿಂದ ಈ ಕಾರ್ಯವು ನಡೆದುದ್ದರಿಂದ ಇದರ ಪರಿಹಾರಾರ್ಥವಾಗಿ ಪ್ರಾಯಶ್ಚಿತ್ತವನ್ನು ಕೈಗೊಂಡರು. [ಮಾಡಿದರು]

೩೩. ಗುರುಗಳ ಹವಿಸ್ಸು ಶಿಷ್ಯನ ಹವಿಸ್ಸಿನೊಡನೆ ಸೇರಿದ್ದರಿಂದ ತಿರಸ್ಕೃತವಾಯಿತು. ಈ ಪೂರ್ವಾಪರೀಕಾರಗಳಿಂದ ವರ್ಣವು ಬದಲಾಯಿಸಿ ಸೂತರು ಜನಿಸಿದರು.

೩೪. ಉತ್ತಮ ಜಾತಿಯಾದ ಬ್ರಾಹ್ಮಣ ಸ್ತ್ರೀಯಲ್ಲಿ ಕ್ಷತ್ರಿಯ ಬೀಜದಿಂದ ಹುಟ್ಟಿದವನಲ್ಲಿ, ಉತ್ತಮ ಜಾತೀಯವಾದ ಬ್ರಾಹ್ಮಣ ಧರ್ಮಗಳು ಬರಲು ಯಾವವಿಧವಾದ ಆಕ್ಷೇಪವೂ ಇರುವುದಿಲ್ಲ.

೩೫. ಸೂತನು ಕ್ಷತ್ರಿಯ ಬೀಜ ಸಂಪರ್ಕದಿಂದ ಗಜಾಶ್ವ ರಥಗಳ ಸಾರಥಿತನದಿಂದ ಜೀವಿಸುವುದು ಮಧ್ಯಮ ವೃತ್ತಿಯಾಗಿಯೂ, ಚಿಕಿತ್ಸಾ ವೃತ್ತಿಯನ್ನು ಆಶ್ರಯಿಸುವುದು ಅಧಮವಾದ ವೃತ್ತಿಯಾಗಿಯೂ ಇವೆ.

ತತ್ಸ್ವಧರ್ಮಮಹಂಪೃಷ್ಟೋ ಭವದ್ಭಿರ್ಬ್ರಹ್ಮವಾದಿಭಿಃ ।
ಕಸ್ಮಾತ್ಸಮ್ಯಙ್ನ ವಿಬ್ರೂಯಾಂ ಪುರಾಣಮೃಷಿಪೂಜಿತಂ ॥ ೩೬ ॥

ಪಿತ್ರೂಣಾಂ ಮಾನಸೀ ಕನ್ಯಾ ವಾಸವೀ ಸಮಪದ್ಯತ ।
ಅಪಧ್ಯಾತಾ ಚ ಪಿತೃಭಿರ್ಮತ್ಸ್ಯಯೋನೌ ಬಭೂವ ಸಾ ॥ ೩೭ ॥

ಅರಣೀವ ಹುತಾಶಸ್ಯ ನಿಮಿತ್ತಂ ಯಸ್ಯ ಜನ್ಮನಃ ।
ತಸ್ಯಾಂ ಜಾತೋ ಮಹಾಯೋಗೀ ವ್ಯಾಸೋ ವೇದವಿದಾಂವರಃ ॥ ೩೮ ॥

ತಸ್ಮೈ ಭಗವತೇ ಕೃತ್ವಾ ನಮೋ ವ್ಯಾಸಾಯ ವೇಧಸೇ ।
ಪುರುಷಾಯ ಪುರಾಣಾಯ ಭೃಗುವಾಕ್ಯ ಪ್ರವರ್ತಿನೇ ॥
ಮಾನುಷಚ್ಛದ್ಮರೂಪಾಯ ವಿಷ್ಣವೇ ಪ್ರಭವಿಷ್ಣವೇ ॥ ೩೯ ॥

---

೩೬. ಆದುದರಿಂದ ಬ್ರಹ್ಮಜ್ಞಾನಿಗಳಾದ ನೀವು, ನನ್ನನ್ನು ಪುರಾಣವನ್ನು ಹೇಳಬೇಕೆಂದು ಕೇಳಿರುವುದು ಸ್ವಧರ್ಮವಾಗಿಯೇ ಇದೆ. ನೀವು ನನ್ನನ್ನು ಕೇಳಿರುವುದು ಯುಕ್ತವಾಗಿರುವುದರಿಂದ ಋಷಿಪೂಜಿತವಾದ ಪುರಾಣವನ್ನು ನಿಮಗಾಗಿ ನಾನು ಹೇಳದೇ ಹೇಗಿರಲಿ? ಅದನ್ನು ಕ್ರಮವಾಗಿ ತಿಳಿಸುವೆನು.

೩೭. ವಾಸವೀ ಎಂಬುವಳು ಪಿತೃದೇವತೆಗಳಿಗೆ ಮಾನಸಿಕ ಪುತ್ರಿಯಾಗಿ ಜನಿಸಿದಳು. ಆದರೆ ಅವರಿಂದಲೇ ದೂಷಿತಳಾಗಿ ಪುನಃ ಮತ್ಸ್ಯಯೋನಿಯಲ್ಲಿ ಜನಿಸಿದಳು.

೩೮. ಅಗ್ನಿಯ ಉತ್ಪತ್ತಿಗೆ ಅರಣೀ ನಾಮಕವಾದ ಕಾಷ್ಟವಿಶೇಷವು ಹೇಗೆ ಕಾರಣವೋ, ಹಾಗೆ ವ್ಯಾಸರ ಉತ್ಪತ್ತಿಗೆ ಆ ಮತ್ಸ್ಯಗಂಧಿಯು ನಿಮಿತ್ತಳಾದಳು. ವೇದಜ್ಞರಲ್ಲಿ ಉತ್ತಮರೂ, ಮಹಾಯೋಗಿಗಳೂ ಆದ ವ್ಯಾಸರು ಆ ಮತ್ಸ್ಯಗಂಧಿಯಲ್ಲಿ ಜನಿಸಿದರು. ಆದರೂ ಕೂಡ ಅವರೇ ಸರ್ವವೇದಗಳಿಗೆ ಆಶ್ರಯರಾಗಿದ್ದರು.

೩೯. ಪುರಾಣ ಪುರುಷನೂ, ಭೃಗುವಾಕ್ಯ ಪ್ರವರ್ತಕನೂ, ಸಮರ್ಥನೂ ಮಾನುಷರೂಪಧಾರಿಯೂ, ಶ್ರೀಮನ್ನಾರಾಯಣನ ಅವತಾರನೂ, ಪೂಜ್ಯನೂ, ವೇದೋದ್ಧಾರಕನೂ, ಆದ ವೇದವ್ಯಾಸದೇವರಿಗೆ ನಮಸ್ಕರಿಸಿ ಪುರಾಣವನ್ನು ಹೇಳುವೆನು.

ಜಾತಮಾತ್ರಂ ಚ ಯಂ ವೇದ ಉಪತಸ್ಥೆ ಸಸಂಗ್ರಹಃ ।
ಧರ್ಮಮೇವ ಪುರಸ್ಕೃತ್ಯ ಜಾತೂಕರ್ಣಾದವಾಪ ತಂ ॥ ೪೦ ॥

ಮತಿಂ ಮಂಥಾನಮಾವಿಧ್ಯ ಯೇನಾಸೌ ಶ್ರುತಿಸಾಗರಾತ್ ।
ಪ್ರಕಾಶಂ ಜನಿತೋ ಲೋಕೇ ಮಹಾಭಾರತ ಚಂದ್ರಮಾಃ ॥ ೪೧ ॥

ವೇದದ್ರುಮಶ್ಚ ಯಂ ಪ್ರಾಪ್ಯ ಸ ಶಾಖಃ ಸಮುಪದ್ಯ ಚ ।
ಭೂಮಿಕಾಲಗುಣಾನ್ ಪ್ರಾಪ್ಯ ಬಹುಶಾಖೋ ಯಥಾ ದ್ರುಮಃ ॥ ೪೨ ॥

ತಸ್ಮಾದಹಮುಪಶ್ರುತ್ಯ ಪುರಾಣಂ ಬ್ರಹ್ಮವಾದಿನಃ ।
ಸರ್ವಜ್ಞಾತ್ಸರ್ವವೇದೇಷು ಪೂಜಿತಾ ದ್ದೀಪ್ತತೇಜಸಃ ॥ ೪೩ ॥

ಪುರಾಣಂ ಸಂಪ್ರವಕ್ಷ್ಯಾಮಿ ಯದುಕ್ತಂ ಮಾತರಿಶ್ವನಾ ।
ಪೃಷ್ಟೇನ ಮುನಿಭಿಃ ಪೂರ್ವಂ ನೈಮಿಷೀಯೈರ್ಮಹಾತ್ಮಭಿಃ ॥ ೪೪ ॥

---

೪೦. ವ್ಯಾಸರು ಹುಟ್ಟಿದ ಕೂಡಲೇ ಸಕಲ ವೇದಗಳು ಸಂಗ್ರಹವಾಗಿ ಅವರಿಗೆ ವ್ಯಕ್ತವಾದರೂ ಕೂಡ, ಅವರು ತರುವಾಯ ಲೋಕ ಶಿಕ್ಷಾರ್ಥವಾಗಿ, ಜಾತೂಕರ್ಣನಾಮಕ ಗುರುಗಳ ಮೂಲಕವಾಗಿ ವೇದಾಭ್ಯಾಸವನ್ನು ಮಾಡಿದರು.

೪೧. ಅಂತಹ ವ್ಯಾಸರು ತಮ್ಮ ಬುದ್ಧಿ ಎಂಬ ಕಡಗೋಲಿನಿಂದ ವೇದಗಳೆಂಬ ಸಮುದ್ರವನ್ನು ಮಥಿಸಿ ಮಹಾಭಾರತನೆಂಬ ಚಂದ್ರನನ್ನು ಪಡೆದರು. ಅಂದರೆ ಜನಗಳ ಅಜ್ಞಾನಾಂಧಕಾರಗಳನ್ನು ಪರಿಹರಿಸಬೋಸುಗ ಪ್ರಕಾಶಕವಾದ ಚಂದ್ರನೆಂಬ ಮಹಾಭಾರತವನ್ನು ರಚಿಸಿದರು.

೪೨. ವೃಕ್ಷವು ಉತ್ತಮವಾದ ಭೂಮಿಯಲ್ಲಿ ಸಕಾಲದಲ್ಲಿ ನಾಟಿಹಾಕಿದರೆ ಹೇಗೆ ಶಾಖೋಪಶಾಖಿಗಳಾಗಿ ಬೆಳೆಯುತ್ತದೆಯೋ, ಹಾಗೆಯೇ ವೇದಗಳೂ ಸಹ ವ್ಯಾಸರ ಮೂಲಕ ಶಾಖೋಪಶಾಖಿಗಳಾಗಿ ವೃದ್ಧಿಯಾದುವು.

೪೩. ಅಂತಹ ಬ್ರಹ್ಮಜ್ಞಾನಿಗಳೂ, ಸರ್ವಜ್ಞರೂ, ಸಮಸ್ತ ವೇದ ಪ್ರತಿಪಾದ್ಯರೂ, ದಿವ್ಯತೇಜಸ್ವಿಗಳೂ, ಆದ ವೇದವ್ಯಾಸರಿಂದ ನಾನು ಸರ್ವವೇದಗಳನ್ನೂ ಶ್ರವಣಮಾಡಿ ನಿಮಗಾಗಿ ಹೇಳುವೆನು.

೪೪. ಪೂರ್ವದಲ್ಲಿ ನೈಮಿಷಾರಣ್ಯವಾಸಿಗಳೂ, ಮಹಾತ್ಮರೂ ಆದ ಮುನಿಗಳು ವಾಯುದೇವನನ್ನು ಪ್ರಾರ್ಥಿಸಲಾಗಿ, ಆ ವಾಯುದೇವನು ಯಾವ ಪುರಾಣವನ್ನು ಆ ಋಷಿಗಳಿಗೆ ಹೇಳಿದನೋ, ಅಂತಹ ವಾಯುಪ್ರೋಕ್ತವಾದ ಪುರಾಣವನ್ನು ನಿಮಗಾಗಿ ಹೇಳುವೆನು.

**ಮಹೇಶ್ವರಃ ಪರೋಽವ್ಯಕ್ತಶ್ಚತುರ್ಬಾಹುಶ್ಚತುರ್ಮುಖಃ ।**
**ಅಚಿಂತ್ಯಶ್ಚಾಪ್ರಮೇಯಶ್ಚ ಸ್ವಯಂಭೂರ್ಹೇತುರೀಶ್ವರಃ ॥ ೪೫ ॥**

**ಅವ್ಯಕ್ತಂ ಕಾರಣಂ ಯದ್ಯನ್ನಿತ್ಯಂ ಸದಸದಾತ್ಮಕಂ ।**
**ಮಹದಾದಿ ವಿಶೇಷಾಂತಂ ಸೃಜತೀತಿ ವಿನಿಶ್ಚಯಃ ॥ ೪೬ ॥**

**ಅಂಡಂ ಹಿರಣ್ಮಯಂ ಚೈವ ಬಭೂವಾಪ್ರತಿಮಂ ತತಃ ।**
**ಅಂಡಸ್ಯಾವರಣಂ ಚಾದ್ಭಿರಪಾಮಪಿಚ ತೇಜಸಾ ॥ ೪೭ ॥**

**ವಾಯುನಾ ತಸ್ಯ ನಭಸಾ ನಭೋ ಭೂತಾದಿನಾ ವೃತಮ್ ।**
**ಭೂತಾದಿರ್ಮಹತಾ ಚೈವ ಅವ್ಯಕ್ತೇನಾವೃತೋ ಮಹಾನ್ ॥ ೪೮ ॥**

**ಅತೋಽತ್ರ ವಿಶ್ವದೇವಾನಾಮೃಷೀಣಾಂ ಚೋಪವರ್ಣಿತಂ ।**
**ನದೀನಾಂ ಪರ್ವತಾನಾಂಚ ಪ್ರಾದುರ್ಭಾವೋಽತ್ರ ಶಸ್ಯತೇ ॥ ೪೯ ॥**

---

೪೫. ಮಹದೈಶ್ವರ್ಯವಂತನೂ, ಸರ್ವೋತ್ತಮನೂ, ಅವ್ಯಕ್ತನೂ, ಚತುರ್ಬಾಹುವೂ, ಚತುರ್ಮುಖನೂ, ಅಚಿಂತ್ಯನೂ, ಅಪ್ರಮೇಯನೂ, ಸ್ವಯಂಭವನೂ, ಆದ ಈಶ್ವರನು ಈ ಜಗತ್ತಿಗೆ ಕಾರಣನು.

೪೬. ಮಹತ್ತತ್ವಾಹಂಕಾರ ತತ್ವಗಳೇ ಮೊದಲಾದವುಗಳಿಗೆ ಕಾರಣವೂ, ಸದಸದ್ರೂಪವೂ, ಆದ ಜಗತ್ತಿಗೆ ಕಾರಣರೂಪವಾದ ಯಾವ ಅವ್ಯಕ್ತತತ್ವವಿದಿಯೋ ಆ ಅವ್ಯಕ್ತತತ್ವವೂ ಕೂಡ ಭಗವಂತನ ಅನುಗ್ರಹದಿಂದ ಜನಿತವಾಗಿದೆ ಎಂಬ ಸಂಗತಿಯು ನಿಶ್ಚಯವು.

೪೭. ಸುವರ್ಣಮಯವೂ, ಅಸದೃಶವೂ, ಆದ ಆ ಬ್ರಹ್ಮಾಂಡವೂ ಸಹ ಆ ಭಗವಂತನಿಂದಲೇ ಉಂಟಾಗಿದೆ. ಆ ಬ್ರಹ್ಮಾಂಡಕ್ಕೆ ಜಲವು ಆವರಕವೂ, ಆ ಜಲಕ್ಕೆ ಅಗ್ನಿಯು ಆವರಕವೂ ಆಗಿವೆ.

೪೮. ಆ ಅಗ್ನಿಯು ವಾಯುವಿನಿಂದಲೂ, ಆ ವಾಯುವು ಆಕಾಶದಿಂದಲೂ ಅದು ಭೂತಾದಿಗಳಿಂದಲೂ, ಆ ಪಂಚಭೂತಗಳು ಮಹತ್ತತ್ವದಿಂದಲೂ, ಆ ಮಹತ್ತತ್ವವು ಅವ್ಯಕ್ತತತ್ವದಿಂದಲೂ ಆವೃತವಾಗಿವೆ.

೪೯. ಆದುದರಿಂದ ಪುರಾಣದಲ್ಲಿ ಸಮಸ್ತರಾದ ದೇವತೆಗಳೂ, ಋಷಿಗಳೂ, ನದಿಗಳೂ, ಪರ್ವತಗಳೂ ಇವೇ ಮೊದಲಾದವುಗಳ ಸೃಷ್ಟಿಯನ್ನು ಹೇಳುವುದು ಸೂಕ್ತವಾಗಿಯೇ ಇದೆ

ಮನ್ವಂತರಾಣಾಂ ಸರ್ವೇಷಾಂ ಕಲ್ಪಾನಾಂ ಚೋಪವರ್ಣನಂ ।
ಕೀರ್ತನಂ ಬ್ರಹ್ಮ ಕ್ಷತ್ರಸ್ಯ ಬ್ರಹ್ಮಜನ್ಮ ಚ ಕೀರ್ತ್ಯತೇ ॥ ೫೦ ॥

ಅತೋ ಬ್ರಹ್ಮಣಿ ಸೃಷ್ಟ್ಯತ್ವಂ ಪ್ರಜಾಸರ್ಗೋಪವರ್ಣನಂ ।
ಅವಸ್ಥಾಶ್ಚಾತ್ರ ಕೀರ್ತ್ಯಂತೇ ಬ್ರಹ್ಮಣೋ ವ್ಯಕ್ತ ಜನ್ಮನಃ ॥ ೫೧ ॥

ಕಲ್ಪಾನಾಂ ವತ್ಸರಾಶ್ಚೈವ ಜಗತಃಸ್ಥಾಪನಂ ತಥಾ ।
ಶಯನಂ ಚ ಹರೇರತ್ರ ಪೃಥಿವ್ಯುದ್ಧರಣಂ ತಥಾ ॥ ೫೨ ॥

ಸನ್ನಿವೇಶಃ ಪುರಾದೀನಾಂ ವರ್ಣಾಶ್ರಮವಿಭಾಗಶಃ ।
ವೃಕ್ಷಾಣಾಂ ಗೃಹಸಂಸ್ಥಾನಾಂ ಸಿದ್ಧಾನಾಂಚ ವಿನಾಶನಮ್ ॥ ೫೩ ॥

ಯೋಜನಾನಾಂ ಪಥಾಂ ಚೈವ ಸಂಚರೋ ಬಹುವಿಸ್ತರಃ ।
ಸ್ವರ್ಗೇ ಸ್ಥಾನವಿಭಾಗಶ್ಚ ಮರ್ತ್ಯಾನಾಂ ಭುವಿಚಾರಿಣಾಂ ॥ ೫೪ ॥

---

೫೦. ಆದುದರಿಂದ ಸಮಸ್ತಮನ್ವಂತರಗಳನ್ನೂ, ಕಲ್ಪಗಳನ್ನೂ, ಬ್ರಾಹ್ಮಣ ಕ್ಷತ್ರಿಯಾದ ವರ್ಣಗಳನ್ನೂ, ಮತ್ತು ಬ್ರಹ್ಮೋತ್ಪತ್ತಿಯನ್ನೂ ವರ್ಣಿಸುವುದು ಉಚಿತವಾಗಿದೆ.

೫೧. ಬ್ರಹ್ಮನ ಸೃಷ್ಟಿಕ್ರಮವನ್ನೂ, ಪ್ರಜೆಗಳ ಉತ್ಪತ್ತಿಯನ್ನೂ, ಅವ್ಯಕ್ತ ತತ್ವದಿಂದ ಬ್ರಹ್ಮನ ಉತ್ಪತ್ತಿಯನ್ನೂ ಮತ್ತು ಇವರ ಅವಸ್ಥೆಯನ್ನೂ ಸಹ ಇಲ್ಲಿ ವರ್ಣಿಸುವುದು ಸೂಕ್ತವಾಗಿದೆ.

೫೨-೫೩. ಕಲ್ಪಗಳ ಕಾಲಗಳೂ, ಜಗತ್ತಿನ ಸ್ಥಿತಿಯೂ, ಹರಿಶಯನವೂ, ಪೃಥ್ವೀ ದೇವಿಯ ಉದ್ಧಾರವೂ, ನಗರಗಳ ಸನ್ನಿವೇಶವೂ, ವರ್ಣಾಶ್ರಮವಿಭಾಗ ಗಳೂ, ಗೃಹಗತಗಳಾದ ವೃಕ್ಷ ಮತ್ತು ಸಿದ್ಧಪುರುಷರೂ, ಇವರ ಉತ್ಪತ್ತಿ ವಿನಾಶಕ ಗಳೂ ಸಹ ವರ್ಣಿತವಾಗಿವೆ.

೫೪. ಯೋಜನಗಳ ವಿವರಣೆಯೂ, ಮಾರ್ಗಗಳ ಸಂಚಾರವೂ, ಭೂಮಿ ಯಲ್ಲಿ ಸಂಚರಿಸುವ ಪುರುಷರ ಸ್ಥಾನ ವಿಭಾಗಗಳೂ, ಕೂಡ ಈ ಗ್ರಂಥದಲ್ಲಿ ಉಕ್ತವಾಗಿವೆ.

ವೃಕ್ಷಾಣಾಮೋಷಧೀನಾಂ ಚ ವೀರುಧಾಂ ಚ ಪ್ರಕೀರ್ತನಂ ।
ವೃಕ್ಷನಾರಕಿ ಕೀಟತ್ವಂ ಮರ್ತ್ಯಾನಾಂ ಪರಿಕೀರ್ತನಂ ॥ ೫೫ ॥

ದೇವತಾನಾಮೃಷೀಣಾಂ ಚ ದ್ವೇ ಸೃತೀ ಪರಿಕೀರ್ತಿತೇ ।
ಅನ್ನಾದೀನಾಂ ತನೂನಾಂ ಚ ಸರ್ಜನಂತ್ಯಜನಂ ತಥಾ ॥ ೫೬ ॥

ಪ್ರಥಮಂ ಸರ್ವಶಾಸ್ತ್ರಾಣಾಂ ಪುರಾಣಂ ಬ್ರಹ್ಮಸಂಮ್ಮತಂ ।
ಅನಂತರಂ ಚ ವಕ್ತ್ರೇಭ್ಯೋ ವೇದಾಸ್ತಸ್ಯ ವಿನಿಃಸೃತಾಃ ॥ ೫೭ ॥

ಅಂಗಾನಿ ಧರ್ಮಶಾಸ್ತ್ರಂ ಚ ವ್ರತಾನಿ ನಿಯಮಾಸ್ತಥಾ ।
ಪಶೂನಾಂ ಪುರುಷಾಣಾಂ ಚ ಸಂಭವಃ ಪರಿಕೀರ್ತಿತಃ ॥ ೫೮ ॥

ತಥಾ ನಿರ್ವಚನಂ ಪ್ರೋಕ್ತಂ ಕಲ್ಪಸ್ಯ ಚ ಪರಿಗ್ರಹಃ ।
ನವ ಸರ್ಗಾಃ ಪುನಃ ಪ್ರೋಕ್ತಾ ಬ್ರಹ್ಮಣೋ ಬುದ್ಧಿಪೂರ್ವಕಾಃ ॥ ೫೯ ॥

ತ್ರಯೋಽನ್ಯೇ ಬುದ್ಧಿಪೂರ್ವಸ್ತು ತತೋ ಲೋಕಾನಕಲ್ಪಯತ್ ।
ಬ್ರಹ್ಮಣೋವಯವೇಭ್ಯಶ್ಚ ಧರ್ಮಾದೀನಾಂ ಸಮುದ್ಭವಃ ॥ ೬೦ ॥

---

೫೫. ಮರಗಿಡ ಬಳ್ಳಿಗಳು, ಔಷಧಗಳು, ಮನುಷ್ಯರು, ವೃಕ್ಷನರಕದ ಹುಳುಗಳು, ಇವುಗಳ ಉತ್ಪತ್ತಿಕ್ರಮವೂ ಕೂಡ ಈ ಗ್ರಂಥದಲ್ಲಿ ವರ್ಣಿತವಾಗಿವೆ.

೫೬. ದೇವತೆಗಳಿಗೂ, ಋಷಿಗಳಿಗೂ ಇವರ ಎರಡು ಸಲ ಸೃಷ್ಟಿಯನ್ನೂ, ಅನ್ನ ಮತ್ತು ಶರೀರಗಳ ಸರ್ಗತ್ಯಾಗಗಳನ್ನೂ ವಿವೇಚಿಸಿರುತ್ತಾರೆ.

೫೭. ಬ್ರಹ್ಮನು ಸರ್ವಶಾಸ್ತ್ರಗಳಿಗಿಂತಲೂ ಮೊದಲು ಪುರಾಣವನ್ನು ಸ್ಮರಿಸಿದನು. ತರುವಾಯ ಅವನ ಮುಖಗಳಿಂದ ನಾಲ್ಕು ವೇದಗಳು ಹೊರಟವು.

೫೮. ತರುವಾಯ ವೇದಾಂಗಗಳು, ಧರ್ಮಶಾಸ್ತ್ರಗಳು, ವ್ರತನಿಯಮ ಗಳು, ನಗರಗಳು ಮತ್ತು ಪುರುಷರು ಇವರುಗಳ ಸೃಷ್ಟಿ ಕ್ರಮವು ವರ್ಣಿತವಾಗಿವೆ.

೫೯. ಬ್ರಹ್ಮಕಲ್ಪ, ಮನುಕಲ್ಪ, ಪೈನಂದಿನ ಕಲ್ಪಗಳೆಂಬ ಕಲ್ಪಗಳ ವಿವೇಚನೆಯೂ, ಬ್ರಹ್ಮನ ಬುದ್ಧಿಪೂರ್ವಕವಾದ ನವಸರ್ಗಗಳೂ ವರ್ಣಿತವಾಗಿವೆ.

೬೦. ಅನಂತರ ಬುದ್ಧಿಪೂರ್ವಕವೂ, ಇತರವೂ ಆದ ಲೋಕತ್ರಯಗಳ ಸೃಷ್ಟಿಕ್ರಮವನ್ನೂ, ಬ್ರಹ್ಮದೇವನ ಅಂಗಗಳಿಂದ ಧರ್ಮಾದಿಗಳ ಉತ್ಪತ್ತಿಯನ್ನೂ, ಹೇಳಿರುತ್ತಾರೆ.

ಯೇ ದ್ವಾದಶ ಪ್ರಸೂಯಂತೆ ಪ್ರಜಾಃ ಕಲ್ಪೇ ಪುನಃ ಪುನಃ ।
ಕಲ್ಪಯೋರಂತರಂ ಪ್ರೋಕ್ತಂ ಪ್ರತಿಸಂಧಿಶ್ಚ ಯಸ್ತಯೋಃ ॥ ೬೧ ॥

ತಮೋ ಮಾತ್ರಾವೃತತ್ವಾಚ್ಚ ಬ್ರಹ್ಮಣೋ ಧರ್ಮಸಂಭವಃ ।
ತಥೈವ ಶತರೂಪಾಯಾಃ ಸಂಭವಶ್ಚ ತತಃ ಪರಮ್ ॥ ೬೨ ॥

ಪ್ರಿಯವ್ರತೋತ್ತಾನಪಾದೌ ಪ್ರಸೂತ್ಯಾಕೂತಯಶ್ಚ ತಾಃ ।
ಕೀರ್ತ್ಯಂತೇ ಧೂತಪಾಪ್ಮಾನೋ ಯೇಷು ಲೋಕಾಃ ಪ್ರತಿಷ್ಠಿತಾಃ ॥ ೬೩ ॥

ರುಚೇಃ ಪ್ರಜಾಪತೇಶ್ಚೋರ್ಧ್ವಮಾಕೂತ್ಯಾಂ ಮಿಥುನೋದ್ಭವಃ ।
ಪ್ರಸೂತ್ಯಾಮಪಿ ದಕ್ಷಸ್ಯ ಕನ್ಯಾನಾಂ ಪ್ರಭವಸ್ತತಃ ॥ ೬೪ ॥

ದಾಕ್ಷಾಯಣೀಷು ಚಾಪ್ಯೂರ್ಧ್ವಂ ಶ್ರದ್ಧಾದ್ಯಾಸು ಮಹಾತ್ಮನಾಂ ।
ಧರ್ಮಸ್ಯ ಕೀರ್ತ್ಯತೇ ಸರ್ಗಃ ಸಾತ್ವಿಕಸ್ಯ ಸುಖೋದಯಃ ॥ ೬೫ ॥

---

೬೧. ದ್ವಾದಶಮನುಕಲ್ಪಗಳೂ, ಆಗ ಹುಟ್ಟುವ ದ್ವಾದಶ ಪ್ರಜೆಗಳ ಪುನಃ ಪುನಃ ಸೃಷ್ಟಿಗಳೂ, ಕಲ್ಪಗಳ ಮಧ್ಯಕಾಲವೂ, ಸಂಧಿಕಾಲಗಳ ನಿಯಮ ಗಳೂ ಸಹ ವಿವರಿಸಲ್ಪಟ್ಟಿವೆ.

೬೨. ತಮೋಗುಣ ಸಂಸರ್ಗಕಾರಣದಿಂದ, ಬ್ರಹ್ಮದೇವನಿಂದ ಸೃಷ್ಟಿತ ವಾದ, ಅಧರ್ಮೋತ್ಪತ್ತಿಯನ್ನೂ, ನಂತರ ಶತರೂಪೆಯ ಸೃಷ್ಟಿಕ್ರಮವನ್ನೂ ಹೇಳಿರುತ್ತಾರೆ.

೬೩. ಯಾರಿಂದ ಲೋಕಗಳು ಸ್ಥಿರವಾಗಿ ಪ್ರಖ್ಯಾತಗೊಂಡವೋ, ಅಂತಹ ಪಾಪರಹಿತರಾದ ಪ್ರಿಯವ್ರತೋತ್ತಾನಪಾದರಾಜರುಗಳ ವಿಷಯಗಳನ್ನೂ, ಅನಂತರ ಪ್ರಸೂತಿ, ಆಕೂತಿ ಎಂಬುವರ ವಿಷಯಗಳನ್ನೂ ಹೇಳಿರುತ್ತಾರೆ.

೬೪. ರುಚಿ ಪ್ರಜಾಪತಿಗಳಿಗಿಂತಲೂ ಪೂರ್ವದಲ್ಲಿ, ಆಕೂತಿ ದೇವಿಯಲ್ಲಿ ದಂಪತಿಗಳ ಉತ್ಪತ್ತಿಯೂ, ದಕ್ಷಪ್ರಜಾಪತಿಗೆ ಪ್ರಸೂತೀ ದೇವಿಯಲ್ಲಿ ಕನ್ಯೋತ್ಪ ತ್ತಿಯೂ ಉಕ್ತವಾಗಿವೆ.

೬೫. ದಾಕ್ಷಾಯಣೀ ದೇವಿಯ ಉತ್ಪತ್ತಿ ವಿಷಯವು ನಿರೂಪಿತವಾದ ಮೇಲೆ ಮಹಾತ್ಮರಾದ ಶ್ರದ್ಧಾದಿಗಳ ಧರ್ಮಸೃಷ್ಟಿಯನ್ನೂ, ಸಾತ್ವಿಕ ಸುಖೋ ದಯವನ್ನು ವರ್ಣಿಸಿರುತ್ತಾರೆ.

ತಥಾ ಧರ್ಮಸ್ಯ ಹಿಂಸಾಯಾಂ ತಾಮಸೋ ಶುಭಲಕ್ಷಣಃ ।
ಮಹೇಶ್ವರಸ್ಯ ಸತ್ಯಾಂ ಚ ಪ್ರಜಾಸರ್ಗಃ ಪ್ರಕೀರ್ತಿತಃ ॥ ೬೬ ॥

ನಿರಾಮಯಂಚ ಬ್ರಹ್ಮಾಣಂ ತಾದೃಶಂ ಕೀರ್ತಿತಂ ಪುನಃ ।
ಯೋಗಂ ಯೋಗನಿಧಿಃ ಪ್ರಾಹ ದ್ವಿಜಾನಾಂ ಮುಕ್ತಿಕಾಂಕ್ಷಿಣಾಂ ॥ ೬೭ ॥

ಅವತಾರಶ್ಚ ರುದ್ರಸ್ಯ ಮಹಾಭಾಗ್ಯಂ ತಥೈವ ಚ ।
ತ್ರೈವೇದಿಕಾಂ ಕಥಾಂ ಚಾಪಿ ಸಂವಾದಃ ಪರಮೋ ಮಹಾನ್ ॥ ೬೮ ॥

ಬ್ರಹ್ಮನಾರಾಯಣಾಭ್ಯಾಂ ಚ ಯತ್ರ ಸ್ತೋತ್ರಂ ಪ್ರಕೀರ್ತಿತಮ್ ।
ಸ್ತುತಸ್ತಾಭ್ಯಾಂ ಸ ದೇವೇಶಸ್ತುತೋಷ ಭಗವಾನ್ ಶಿವಃ ॥ ೬೯ ॥

ಪ್ರಾದುರ್ಭಾವೋಥ ರುದ್ರಸ್ಯ ಬ್ರಹ್ಮಣೋಂಗೇ ಮಹಾತ್ಮನಃ ।
ಕೀರ್ತ್ಯತೇ ನಾಮ ಹೇತುಶ್ಚ ಯಥಾ ರೋದೀನ್ಮಹಾಮನಾಃ ॥ ೭೦ ॥

---

೬೬. ಪೂರ್ವದಲ್ಲಿ ನಿರೂಪಿಸಿದಂತೆ ಅಧರ್ಮದಿಂದ ಹಿಂಸಾದೇವಿಯಲ್ಲಿ ತಮೋಗುಣದ ಸಂಬಂಧದಿಂದ ಅಶುಭ ಸ್ವರೂಪವಾದ ಪ್ರಜಾಸೃಷ್ಟಿಯೂ, ಮಹೇಶ್ವರನಿಂದ ಸತೀದೇವಿಯಲ್ಲಿ ಉಂಟಾದ ಪ್ರಜಾಸೃಷ್ಟಿಯೂ ಸಹ ವರ್ಣಿತವಾಗಿದೆ.

೬೭. ಮುಕ್ತಿಯನ್ನು ಕೋರತಕ್ಕ ದ್ವಿಜರಿಗೆ ಮೋಕ್ಷೋಪಾಯವನ್ನೂ, ನಿರ್ದುಃಖಿಯಾದ ಬ್ರಹ್ಮನನ್ನು ಕುರಿತು ಜ್ಞಾನಸಾಧನೆಯ ಕ್ರಮವನ್ನೂ ಕೂಡ ಯೋಗೀಶ್ವರನು ನಿರೂಪಿಸಿರುವನು.

೬೮. ಮಹೇಶ್ವರನ ಅವತಾರವೂ, ಅದನ್ನು ಕೇಳುವ ಶ್ರೋತುಗಳಿಗೆ ಆಗತಕ್ಕ ಭಾಗ್ಯೋದಯವೂ, ಋಗ್ಯಜುಸ್ಸಾಮ ವೇದಗಳ ಕಥೆಯೂ, ಮಹಾತ್ಮರ ಉತ್ತಮ ಸಂವಾದವೂ ಸಹ ವಿವೇಚಿಸಲ್ಪಟ್ಟಿವೆ.

೬೯. ಬ್ರಹ್ಮನಾರಾಯಣರು ಎಲ್ಲಿ ಸ್ತೋತ್ರವನ್ನು ಮಾಡಿದರೋ, ಅದೂ ಮತ್ತು ಅದರಿಂದ ಪೂಜ್ಯನಾದ ಪರಮೇಶ್ವರನು ಹೇಗೆ ಸಂತೋಷವನ್ನು ಹೊಂದಿದನೋ ಅದೂ ಸಹ ಉಕ್ತವಾಗಿದೆ.

೭೦. ಮಹಾತ್ಮನಾದ ಬ್ರಹ್ಮದೇವನ ಅವಯವದಿಂದ ರುದ್ರದೇವನು ಹುಟ್ಟಿದ ಕ್ರಮವೂ, ಅವನ ಹೆಸರೂ, ಅದರ ಕಾರಣವೂ, ಮತ್ತು ರೋಧನ ಕ್ರಮವೂ ಸಹ ವರ್ಣಿತವಾಗಿವೆ.

ರುದ್ರಾದೀನಿ ಯಥಾ ಹ್ಯಷ್ಟಾ ನಾಮಾನ್ಯಾಪ್ನೋತ್ ಸ್ವಯಂಭುವಃ ।
ಯಥಾ ಚ ತೈರ್ವ್ಯಾಪ್ತಮಿದಂ ತ್ರೈಲೋಕ್ಯಂ ಸಚರಾಚರಂ ॥ ೭೦ ॥

ಭೃಗ್ವಾದೀನಾಮೃಷೀಣಾಂ ಚ ಪ್ರಜಾಸರ್ಗೋಪವರ್ಣನಂ ।
ವಸಿಷ್ಠಸ್ಯ ಚ ಬ್ರಹ್ಮರ್ಷೇ ಯತ್ರ ಗೋತ್ರಾನುಕೀರ್ತನಂ ॥ ೭೧ ॥

ಅಗ್ನೇಃ ಪ್ರಜಾಯಾಃ ಸಂಭೂತಾಃ ಸ್ವಾಹಾಯಾಂ ಯತ್ರ ಕೀರ್ತಿತಾ ।
ಪಿತೄಣಾಂ ದ್ವಿಪ್ರಕಾರಾಣಾಂ ಸ್ವಧಾಯಾಸ್ತದನಂತರಂ ॥ ೭೨ ॥

ಪಿತೃವಂಶಪ್ರಸಂಗೇನ ಕೀರ್ತ್ಯತೇ ಚ ಮಹೇಶ್ವರಾತ್ ।
ದಕ್ಷಸ್ಯ ಶಾಪಃ ಸತ್ಯರ್ಥೇ ಭೃಗ್ವಾದೀನಾಂ ಚ ಧೀಮತಾಂ ॥ ೭೪ ॥

ಪ್ರತಿಶಾಪಶ್ಚ ರುದ್ರಸ್ಯ ದಕ್ಷಾದದ್ಭುತ ಕರ್ಮಣಃ ।
ಪ್ರತಿಷೇಧಶ್ಚ ವೈರಸ್ಯ ಕೀರ್ತ್ಯತೇ ಯತ್ರ ವಿಸ್ತರಾತ್ ॥ ೭೫ ॥

---

೭೦. ಈಶ್ವರನಿಗೆ ಬ್ರಹ್ಮದೇವನಿಂದ ರುದ್ರಾದಿ ಎಂಟು ನಾಮಗಳು ಬಂದ ವಿಷಯವನ್ನೂ, ಮೂರು ಲೋಕಗಳಲ್ಲಿರುವ ಚರಾಚರಾತ್ಮಕವಾದ ಪದಾರ್ಥಗಳೆಲ್ಲವೂ ಆ ನಾಮಗಳಿಂದ ಹೇಗೆ ವ್ಯಾಪ್ತವಾಗಿವೆಯೆಂಬ ವಿಷಯವನ್ನೂ ಕೂಡ ಹೇಳಿರುತ್ತಾರೆ.

೭೧. ಭೃಗ್ವಾದಿ ಮಹರ್ಷಿಗಳ ಪ್ರಜಾಸೃಷ್ಟಿಯೂ, ಬ್ರಹ್ಮರ್ಷಿಯಿಂದ ವಸಿಷ್ಠಗೋತ್ರ ವರ್ಣನೆಯೂ ಕೂಡ ಉಕ್ತವಾಗಿವೆ.

೭೨. ಅಗ್ನಿಪುರುಷನಿಂದ ಸ್ವಾಹಾದೇವಿಯಲ್ಲಿ ಪ್ರಜಾಸೃಷ್ಟಿ ವಿಷಯವೂ, ಎರಡು ವಿಧವಾದ ಪಿತೃದೇವತೆಗಳ ಸೃಷ್ಟಿಕ್ರಮವೂ, ಅನಂತರ ಸ್ವಧಾದೇವಿಯು ಸೃಷ್ಟಿ ವಿವರಣವೂ ಸಹ ಉಕ್ತವಾಗಿವೆ.

೭೪. ಪಿತೃವಂಶ ಪ್ರಸಕ್ತಿಯಿಂದ ಪರಮೇಶ್ವರನು ಸತೀದೇವಿಯ ನಿಮಿತ್ತವಾಗಿ ದಕ್ಷನಿಗೂ, ಜ್ಞಾನಿಗಳಾದ ಭೃಗ್ವಾದಿ ಮಹರ್ಷಿಗಳಿಗೂ ಕೊಟ್ಟ ಶಾಪವನ್ನು ವರ್ಣಿಸಿರುತ್ತಾರೆ.

೭೫. ಅದ್ಭುತ ಕಾರ್ಯವುಳ್ಳ ದಕ್ಷನು ರುದ್ರದೇವನಿಗೆ ಕೊಟ್ಟ ಶಾಪವನ್ನೂ ಮತ್ತು ವೈರದ ಪ್ರತಿಷೇಧವನ್ನೂ ಕೂಡ ವಿಸ್ತಾರವಾಗಿ ವರ್ಣಿಸಿರುತ್ತಾರೆ.

ತೇಷಾಂ ನಿಯೋಗೋ ದ್ವೀಪೇಷು ದೇಶೇಷು ಚ ಪೃಥಕ್ ಪೃಥಕ್ ।
ಸ್ವಾಯಂಭುವಸ್ಯ ಸರ್ಗಸ್ಯ ತತಶ್ಚಾಪ್ಯನುಕೀರ್ತನಂ ॥ ೭೬ ॥

ಉಕ್ತೋ ನಾಭೇರ್ನಿಸರ್ಗಶ್ಚ ರಜಸಶ್ಚ ಮಹಾತ್ಮನಃ ।
ದ್ವೀಪಾನಾಂ ಸ ಸಮುದ್ರಾಣಾಂ ಪರ್ವತಾನಾಂ ಚ ಕೀರ್ತನಂ ॥ ೭೭ ॥

ವರ್ಷಾಣಾಂ ಚ ನದೀನಾಂ ಚ ತದ್ಭೇದಾನಾಂ ಚ ಸರ್ವಶಃ ।
ದ್ವೀಪಭೇದೆ ಸಹಸ್ರಾಣಾಮಂತರ್ಭೇದಶ್ಚ ಸಪ್ತಸು ॥ ೭೮ ॥

ವಿಸ್ತಾರಾತ್ ಮಂಡಲಾಚ್ಚೈವ ಜಂಬೂದ್ವೀಪ ಸಮುದ್ರಯೋಃ ।
ಪ್ರಮಾಣಂ ಯೋಜನಾಗ್ರೇಣ ಕೀರ್ತ್ಯತೇ ಪರ್ವತೈಃ ಸಹ ॥ ೭೯ ॥

ಹಿಮವಾನ್ ಹೇಮಕೂಟಸ್ತು ನಿಷಧೋ ಮೇರುರೇವ ಚ ।
ನೀಲಃ ಶ್ವೇತಃ ಶೃಂಗವಾಂಶ್ಚ ಕೀರ್ತ್ಯಂತೇ ವರ್ಷಪರ್ವತಾಃ ॥ ೮೦ ॥

---

೭೬. ಆಯಾ ರಾಜರುಗಳನ್ನು ಆಯಾ ದ್ವೀಪಗಳಲ್ಲಿಯೂ ಮತ್ತು ಆಯಾ ದೇಶಗಳಲ್ಲಿಯೂ, ಪ್ರತ್ಯೇಕ ಪ್ರತ್ಯೇಕ ಸ್ಥಾಪನೆಯೂ, ಸ್ವಾಯಂಭುವ ಮನುವಿನ ಸೃಷ್ಟಿಯೂ ಮತ್ತು ತರುವಾಯ ವರದ ವಿಚಾರವೂ ಸಹ ಉಕ್ತವಾಗಿದೆ.

೭೭. ಮಹಾತ್ಮರಾದ ನಾಭಿ ಮತ್ತು ರಜೋನಾಮಕ ರಾಜ ಇವರುಗಳ ಸೃಷ್ಟಿಯನ್ನೂ ಸಮುದ್ರಗಳಿಂದ ಕೂಡಿದ ದ್ವೀಪ ಮತ್ತು ಪರ್ವತ, ಇವುಗಳ ವರ್ಣನೆಯನ್ನೂ ನಿರೂಪಿಸಿರುತ್ತಾರೆ.

೭೮. ದೇಶಗಳು, ನದಿಗಳು, ಇವುಗಳ ಸಂಪೂರ್ಣ ಪ್ರಭೇದಗಳೂ, ಸಪ್ತ ದ್ವೀಪಗಳೂ ಮತ್ತು ಅವುಗಳ ಒಳ ಭೇದವುಳ್ಳ ಸಹಸ್ರಾರು ದ್ವೀಪಗಳೂ ಕೂಡ ವರ್ಣಿತವಾಗಿವೆ.

೭೯. ಜಂಬೂದ್ವೀಪ ಸಮುದ್ರಗಳ ಅಂತರಾಳ ವಿಸ್ತಾರಗಳನ್ನೂ ಪರ್ವತ ಗಳೊಡನೆ ಅವುಗಳ ಯೋಜನಾಪ್ರಮಾಣವನ್ನೂ ಕೂಡ ವರ್ಣಿಸಿರುತ್ತಾರೆ.

೮೦. ಹಿಮವಂತ, ಹೇಮಕೂಟ, ನಿಷಧ, ಮೇರು, ನೀಲ, ಶ್ವೇತವೆಂಬ ಶಿಖರಗಳಿರುವ ಪರ್ವತಗಳೂ, ವರ್ಷಪರ್ವತಗಳೂ ಸಹ ವರ್ಣಿತವಾಗಿವೆ.

ತೇಷಾಮಂತರವಿಷ್ಕಂಭಾಃ ಉಚ್ಛ್ರಾಯಾಯಾಮವಿಸ್ತರಾಃ ।
ಕೀರ್ತ್ಯಂತೇ ಯೋಜನಾಗ್ರೇಣ ಯೇ ಚ ತತ್ರ ನಿವಾಸಿನಃ ॥ ೮೧ ॥

ಭಾರತಾದೀನಿ ವರ್ಷಾಣಿ ನದೀಭಿಃ ಪರ್ವತೈ ಸ್ತಥಾ ।
ಭೂತೈಶ್ಚೋಪನಿವಿಷ್ಟಾನಿ ಗತಿಮದ್ಭಿರ್ಧ್ರುವೈಸ್ತಥಾ ॥ ೮೨ ॥

ಜಂಬೂದ್ವೀಪಾದಯೋ ದ್ವೀಪಾಃ ಸಮುದ್ರೈಃ ಸಪ್ತಭಿರ್ವೃತಾಃ ।
ತತಶ್ಚಾಪ್ಯಮಯೀ ಭೂಮಿರ್ಲೋಕಾಲೋಕಶ್ಚ ಕೀರ್ತ್ಯತೇ ॥ ೮೩ ॥

ಅಂಡಸ್ಯಾಂತಸ್ತ್ವಿಮೇ ಲೋಕಾಃ ಸಪ್ತ ದ್ವೀಪಾ ಚ ಮೇದಿನೀ ।
ಭೂರಾದಯಶ್ಚ ಕೀರ್ತ್ಯಂತೇ ವರಣೈಃ ಪ್ರಾಕೃತೈಃ ಸಹ ॥ ೮೪ ॥

ಸರ್ವಂ ಚ ತತ್ಪ್ರಧಾನಸ್ಯ ಪರಿಮಾಣೈಕ ದೇಶಿಕಂ ।
ಸವ್ಯಾಸ ಪರಿಮಾಣಂಚ ಸಂಕ್ಷೇಪೇಣೈವ ಕೀರ್ತ್ಯತೇ ॥ ೮೫ ॥

---

೮೧. ಆ ಪರ್ವತಗಳ ಮಧ್ಯದಲ್ಲಿರುವ ಪ್ರಮಾಣ, ಔನ್ನತ್ಯವೂ, ಉದ್ದ ಮತ್ತು ಅಗಲ ಇವುಗಳ ಯೋಜನ ವಿಸ್ತಾರವೂ, ಅಲ್ಲಿ ವಾಸಿಸುವ ಜನಗಳೂಸಹ ವರ್ಣಿಸಲ್ಪಟ್ಟಿದ್ದಾರೆ.

೮೨. ನದಿಗಳು, ಪರ್ವತಗಳು, ಇವೇ ಮೊದಲಾದ ಚರಾಚರಾತ್ಮಕವಾದ ಪ್ರಾಣಿಗಳಿಂದ ಕೂಡಿರುವ, ಭಾರತಾದಿ ದೇಶಗಳೂ ಸಹ ವರ್ಣಿತವಾಗಿವೆ-

೮೩. ಸಪ್ತಸಮುದ್ರಗಳಿಂದ ಆವೃತವಾಗಿರುವ ಜಂಬೂದ್ವೀಪವೇ ಮೊದಲಾದ ದ್ವೀಪಗಳೂ, ತದನಂತರದಲ್ಲಿರುವ ಜಲಮಯವಾದ ಭೂಮಿಯೂ, ಲೋಕಾಲೋಕ ಪರ್ವತವೂ, ವರ್ಣಿಸಲ್ಪಟ್ಟಿವೆ.

೮೪. ಆ ಬ್ರಹ್ಮಾಂಡದೊಳಗೆ ಈ ಲೋಕಗಳೂ, ಸಪ್ತದ್ವೀಪಗಳಿಂದ ಕೂಡಿದ ಭೂಮಿಯೂ, ಭೂರಾದಿ ಲೋಕಗಳೂ, ಪ್ರಾಕೃತರಾದ ಆಭರಣಗಳಿಂದೊಡಗೂಡಿ ವರ್ಣಿಸಲ್ಪಟ್ಟಿವೆ.

೮೫. ಇವೆಲ್ಲವೂ ಪ್ರಧಾನವಾದ ಪ್ರಕೃತಿಯ ಪರಿಮಾಣದ ಏಕದೇಶವಾಗಿವೆ. ಅದರ ಪರಿಮಾಣವು ವಿಸ್ತಾರವಾಗಿದ್ದರೂ, ಸಂಕ್ಷೇಪವಾಗಿ ವಿವರಿಸಲ್ಪಟ್ಟಿದೆ.

ಸೂರ್ಯಾಚಂದ್ರಮಸೋಶ್ಚೈವ ಪೃಥಿವ್ಯಾಶ್ಚಾಪ್ಯಶೇಷತಃ ।
ಪ್ರಮಾಣಂ ಯೋಜನಾಗ್ರೇಣ ಸಾಂಪ್ರತ್ಯೈರಭಿಮಾನಿಭಿಃ ।
ಮಹೇಂದ್ರಾದ್ಯಾಃ ಸಭಾಃ ಪುಣ್ಯಾ ಮಾನಸೋತ್ತರ ಮೂರ್ಧನಿ ॥ ೮೬ ॥

ಅತ ಊರ್ಧ್ವಂ ಗತಿಶ್ಚೋಕ್ತಾ ಸ್ವರ್ಗಸ್ಯಾಲಾತ ಚಕ್ರವತ್ ।
ನಾಗವೀಥ್ಯಜವೀಥ್ಯೋಶ್ಚ ಲಕ್ಷಣಂ ಪರಿಕೀರ್ತ್ಯತೇ ॥ ೮೭ ॥

ಕಾಷ್ಠಯೋರ್ಲೇಖಯೋಶ್ಚೈವ ಮಂಡಲಾನಾಂ ಚ ಯೋಜನೈಃ ।
ಲೋಕಾಲೋಕಸ್ಯ ಸಂಧ್ಯಾಯಾ ಅಹ್ನೋ ವಿಷುವತಸ್ತಥಾ ॥ ೮೮ ॥

ಲೋಕಪಾಲಾಃ ಸ್ಥಿತಾಶ್ಚೋರ್ಧ್ವಂ ಕೀರ್ತ್ಯಂತೇ ಯೇ ಚತುರ್ದಿಶಂ ।
ಪಿತೄಣಾಂ ದೇವತಾನಾಂ ಚ ಪಂಥಾನೌ ದಕ್ಷಿಣೋತ್ತರೌ ॥ ೮೯ ॥

ಗೃಹಿಣಾಂ ನ್ಯಾಸಿನಾಂ ಚೋಕ್ತೌ ರಜಃ ಸತ್ವಸಮಾಶ್ರಯಾತ್ ।
ಕೀರ್ತ್ಯತೇ ಚ ಪದಂ ವಿಷ್ಣೋರ್ಧರ್ಮಾದ್ಯಾ ಯತ್ರಧಿಷ್ಠಿತಾಃ ॥ ೯೦ ॥

---

೮೬. ಸೂರ್ಯಚಂದ್ರರೂ, ಅಶೇಷ ಭೂಮಂಡಲವೂ, ಇವುಗಳ ಯೋಜನ ಪ್ರಮಾಣವೂ, ಅವುಗಳ ಅಭಿಮಾನಿಗಳೂ, ಇಂದ್ರಾದಿ ದೇವತೆಗಳೂ, ಮಾನಸ ಸರೋವರದ ಉತ್ತರ ಭಾಗದ ಶಿಖರದಲ್ಲಿರುವ ಪವಿತ್ರವಾದ ಸಭೆಗಳೂ ವಿವರಿಸಲ್ಪಟ್ಟಿವೆ.

೮೭. ಆದರ ತರುವಾಯ ಅಲಾತ ಚಕ್ರದಂತೆ ಸ್ವರ್ಗದ ಗಮನಾಗಮನಗಳೂ, ನಾಗವೀಥಿ, ಅಜವೀಥಿಗಳ ಲಕ್ಷಣಗಳೂ ಸಹ ವರ್ಣಿತವಾಗಿವೆ.

೮೮. ದಿಕ್ಕುಗಳು, ದೇವತೆಗಳು, ಸೂರ್ಯಮಂಡಲ, ಲೋಕಾಲೋಕ ಪರ್ವತ, ಸಂಧ್ಯೆ, ಹಗಲು ರಾತ್ರಿ ವಿಷುವತ್ಪುಣ್ಯದಿವಸ ಇವುಗಳ ಪರಿಣಾಮವೂ ವಿವರಿಸಲ್ಪಟ್ಟಿದೆ.

೮೯-೯೦. ನಾಲ್ಕುದಿಕ್ಕುಗಳ ಊರ್ಧ್ವಭಾಗದಲ್ಲಿರತಕ್ಕ ಲೋಕಪಾಲಕರ ವಿಷಯಗಳನ್ನೂ, ಪಿತೃಗಳು, ದೇವತೆಗಳು, ಗೃಹಸ್ಥರು, ಸನ್ಯಾಸಿಗಳು, ಇವರುಗಳ ದಕ್ಷಿಣೋತ್ತರ ಮಾರ್ಗಗಳನ್ನೂ, ಧರ್ಮಾದಿಗಳು ನೆಲೆಸಿರುವ ವಿಷ್ಣುವಿನ ವೈಕುಂಠಾದಿ ಲೋಕಗಳನ್ನೂ ವರ್ಣಿಸಿರುತ್ತಾರೆ.

**ಸೂರ್ಯಾಚಂದ್ರಮಸೋಶ್ಚಾರೋ ಗ್ರಹಾಣಾಂ ಜ್ಯೋತಿಷಾಂ ತಥಾ ।**
**ಕೀರ್ತ್ಯತೇ ಧ್ರುವಸಾಮರ್ಥ್ಯಾತ್ ಪ್ರಜಾನಾಂ ಚ ಶುಭಾಶುಭಂ ॥೯೧॥**

**ಬ್ರಹ್ಮಣಾ ನಿರ್ಮಿತಃ ಸೌರಃ ಸ್ಯಂದನೋರ್ಥವಶಾತ್ಸ್ವಯಂ ।**
**ಕೀರ್ತ್ಯತೇ ಭಗವಾನ್ ಯೇನ ಪ್ರಸರ್ಪತಿ ದಿವಿ ಸ್ವಯಂ ॥೯೨॥**

**ಸ ರಥೋಽಧಿಷ್ಠಿತೋ ದೇವೈ ಆದಿತ್ಯೈ ಋಷಿಭಿಸ್ತಥಾ ।**
**ಗಂಧರ್ವೈರಪ್ಸರೋಭಿಶ್ಚ ಗ್ರಾಮಣೀ ಸರ್ಪ ರಾಕ್ಷಸೈಃ ॥೯೩॥**

**ಅಪಾಂಸಾರಮಯಸ್ಯೇಂದೋಃ ಕೀರ್ತ್ಯತೇ ಚ ರಥಸ್ತಥಾ ।**
**ವೃದ್ಧಿಕ್ಷಯೌ ಚ ಸೋಮಸ್ಯ ಕೀರ್ತ್ಯೇತೇ ಸೂರ್ಯಕಾರಿಕೌ ॥೯೪॥**

**ಸೂರ್ಯಾದೀನಾಂ ಸ್ಯಂದನಾನಾಂ ಧ್ರುವಾದೇವ ಪ್ರಕೀರ್ತನಂ ।**
**ಕೀರ್ತ್ಯತೇ ಶಿಶುಮಾರಶ್ಚ ಯಸ್ಯ ಪುಚ್ಛೇ ಧ್ರುವಃ ಸ್ಥಿತಃ ॥೯೫॥**

---

೯೧. ಧ್ರುವಗತಿಗನುಸಾರವಾಗಿ ನಡೆಯತಕ್ಕ ಸೂರ್ಯಚಂದ್ರಾದಿ ಗ್ರಹಗಳ ಸಂಚಾರವನ್ನೂ ಮನುಷ್ಯರಿಗೆ ಉಂಟಾಗುವ ಶುಭಾಶುಭ ಫಲಗಳನ್ನೂ ವರ್ಣಿಸಿರುತ್ತಾರೆ.

೯೨. ಬ್ರಹ್ಮದೇವನು ಸ್ವಂತಪ್ರಯೋಜನೋದ್ದೇಶದಿಂದ ಸೂರ್ಯನ ರಥವನ್ನು ಸೃಷ್ಟಿಸಿದನು. ಪೂಜ್ಯನಾದ ಸೂರ್ಯದೇವನು ಆ ರಥದಿಂದ ಆಕಾಶದಲ್ಲಿ ಸಂಚರಿಸುವನು ಎಂಬ ವಿಷಯವು ವರ್ಣಿಸಲ್ಪಟ್ಟಿದೆ.

೯೩. ಅಂಥಹ ರಥವನ್ನು, ದೇವತೆಗಳು, ದ್ವಾದಶಾದಿತ್ಯರು, ಋಷಿಗಳು, ಗಂಧರ್ವರು, ಅಪ್ಸರಸ್ತ್ರೀಯರು, ಗ್ರಾಮಾಧಿಕಾರಿಗಳು, ಸರ್ಪರಾಕ್ಷಸರು, ಇವರೇ ಮೊದಲಾದವರು ಹತ್ತಿ ಸಂಚರಿಸುವ ವಿಷಯವು ವರ್ಣಿತವಾಗಿದೆ.

೯೪. ಜಲಮಯನಾದ ಚಂದ್ರನ ರಥ ಮತ್ತು ಸೂರ್ಯನಿಂದ ಅವನಿಗೆ ಉಂಟಾಗುವ ವೃದ್ಧಿಕ್ಷಯಗಳು, ಇವುಗಳನ್ನು ಸಹ ವರ್ಣಿಸಿರುತ್ತಾರೆ.

೯೫. ಸೂರ್ಯಚಂದ್ರಾದಿಗಳ ಸಂಚಾರವು ಧ್ರುವಗತಿಗೆ ಅನುಸಾರವಾಗಿದೆ. ಅಂತಹ ಧ್ರುವನು ಶಿಶುಮಾರ ಮೂರ್ತಿಯ ಪುಚ್ಛವನ್ನು ಅವಲಂಬಿಸಿರುತ್ತಾನೆ ಎಂಬುದು ವರ್ಣಿತವಾಗಿದೆ.

ತಾರಾ ರೂಪಾಣಿ ಸರ್ವಾಣಿ ನಕ್ಷತ್ರಾಣಿ ಗ್ರಹೈಃ ಸಹ ।
ನಿವಾಸಾ ಯತ್ರ ಕೀರ್ತ್ಯಂತೇ ದೇವಾನಾಂ ಪುಣ್ಯಕಾರಿಣಾಂ ॥ ೯೬ ॥

ಸೂರ್ಯರಶ್ಮಿ ಸಹಸ್ರೇ ಚ ವರ್ಷ ಶೀತೋಷ್ಣನಿಸ್ರವಃ ।
ಪ್ರವಿಭಾಗಶ್ಚ ರಶ್ಮೀನಾಂ ನಾಮತಃ ಕರ್ಮತೋರ್ಥತಃ ॥ ೯೭ ॥

ಪರಿಮಾಣಗತೀ ಚೋಕ್ತೇ ಗ್ರಹಾಣಾಂ ಸೂರ್ಯ ಸಂಶ್ರಯಾತ್ ।
ಯ.ಥಾ ಚಾಶು ವಿಷಾತ್ ಪ್ರಾಪ್ತಾ ಶಂಭೋಃಕಂಠಸ್ಯ ನೀಲತಾ ॥ ೯೮ ॥

ಬ್ರಹ್ಮ ಪ್ರಸಾದಿತಸ್ಯಾಶು ವಿಷಾದಃ ಶೂಲಪಾಣಿನಃ ।
ಸ್ತೂಯಮಾನಃ ಸುರೈರ್ವಿಷ್ಣುಃ ಸ್ತೌತಿ ದೇವಂ ಮಹೇಶ್ವರಂ ॥ ೯೯ ॥

ಲಿಂಗೋದ್ಭವ ಕಥಾಪುಣ್ಯಾ ಸರ್ವಪಾಪ ಪ್ರಣಾಶಿನೀ ।
ವಿಶ್ವರೂಪಾತ್ಪ್ರಧಾನಸ್ಯ ಪರಿಣಾಮೋಯಮುದ್ಭುತಃ ॥ ೧೦೦ ॥

---

೯೬. ಪುಣ್ಯಕಾರಿಗಳಾದ ದೇವತೆಗಳಿಗೆ, ಶುಭಫಲದಾಯಕಗಳೂ, ತಾರಾ ರೂಪಗಳೂ, ಆದ ನಕ್ಷತ್ರಗಳು ಮತ್ತು ಗ್ರಹ ಮುಂತಾದವುಗಳು ಆ ಧ್ರುವಗತಿಯನ್ನೇ ಅವಲಂಬಿಸಿರುತ್ತವೆ ಎಂಬುದು ವರ್ಣಿತವಾಗಿದೆ.

೯೭-೯೮-೯೯. ಸೂರ್ಯನ ಶಕ್ತಿಯಿಂದ ಅವನ ಸಹಸ್ರಾರು ಕಿರಣಗಳಲ್ಲಿ ಮಳೆ, ಶೀತ, ಉಷ್ಣ, ಇವುಗಳ ಉತ್ಪತ್ತಿ ವಿಭಾಗಗಳೂ, ನಾಮ, ಕಾರ್ಯ, ಪ್ರಯೋಜನಗಳೂ, ಗ್ರಹಗಳ ಪರಿಮಾಣಗತಿಗಳೂ ಸಹ ಉಂಟಾಗುವುವು. ಬ್ರಹ್ಮನಿಂದ ಪ್ರಾರ್ಥಿತನೂ, ವಿಷಭಕ್ಷಕನೂ, ಶೂಲಪಾಣಿಯೂ, ಆದ ಮಹೇಶ್ವರನ ಕಂಠದ ನೈಲ್ಯವು ವಿಷ ಸಂಪರ್ಕದಿಂದ ಹೇಗೆ ಉಂಟಾಗುತ್ತದೆಯೋ, ಹಾಗೆಯೇ ಈ ಗತಿಗಳೂ ಸಹ ಉಂಟಾಗುವುವು. ದೇವತೆಗಳಿಂದ ಪ್ರಾರ್ಥಿತನಾದ ಶ್ರೀ ಹರಿಯು ದೇವೇಶನಾದ ಈಶ್ವರನನ್ನು ಬಹಳವಾಗಿ ಹೊಗಳಿದನು. "ಇವೂ ಸಹ ವರ್ಣಿತವಾಗಿವೆ"

೧೦೦. ಲಿಂಗೋತ್ಪತ್ತಿ ಕಥೆಯು ಪವಿತ್ರವಾಗಿಯೂ, ಸಮಸ್ತಪಾಪಪರಿಹಾರಕವಾಗಿಯೂ ಇದೆ. ವಿಶ್ವರೂಪಧಾರಿಯಾದ ಶ್ರೀ ಭಗವಂತನಿಂದ ಪ್ರಧಾನ ತತ್ವಕ್ಕುಂಟಾದ ಪರಿಣಾಮವೂ ಆಶ್ಚರ್ಯ ಜನಕವಾಗಿದೆ.

ಪುರೂರವಸ ಐಲಸ್ಯ ಮಾಹಾತ್ಮ್ಯಾನುಪಕೀರ್ತನಂ ।
ಪಿತೄಣಾಂ ದ್ವಿಪ್ರಕಾರಾಣಾಂ ತರ್ಪಣಂ ಚಾಮೃತಸ್ಯ ವೈ ॥ ೧೦೧ ॥

ತತಃ ಪರ್ವಾಣಿ ಕೀರ್ತ್ಯಂತೇ ಪರ್ವಣಾಂ ಚೈವ ಸಂಧಯಃ ।
ಸ್ವರ್ಗಲೋಕಗತಾನಾಂ ಚ ಪ್ರಾಪ್ತಾನಾಂ ಚಾಪ್ಯಧೋ ಗತಿಂ ।
ಪಿತೄಣಾಂ ದ್ವಿಪಕಾರಾಣಾಂ ಶ್ರಾದ್ಧೇನಾನುಗ್ರಹೋ ಮಹಾನ್ ॥ ೧೦೨ ॥

ಯುಗಸಂಖ್ಯಾ ಪ್ರಮಾಣಂ ಚ ಕೀರ್ತ್ಯತೇ ಚ ಕೃತೇ ಯುಗೇ ।
ತ್ರೇತಾಯುಗೇ ಚಾಪಕರ್ಷಾದ್ವಾರ್ತಾಯಾಃ ಸಂಪ್ರವರ್ತನಂ ॥ ೧೦೩ ॥

ವರ್ಣಾನಾಮಾಶ್ರಮಾಣಾಂ ಚ ಸಂಖ್ಯಾನಂ ಚ ಪ್ರವರ್ತನಂ ।
ವರ್ಣಾನಾಮಾಶ್ರಮಾಣಾಂ ಚ ಸಂಸ್ಥಿತಿಃ ಧರ್ಮತಸ್ತಥಾ ॥ ೧೦೪ ॥

ಯಜ್ಞಪ್ರವರ್ತನಂ ಚೈವ ಸಂವಾದೋ ಯತ್ರ ಕೀರ್ತ್ಯತೇ ।
ಋಷೀಣಾಂ ವಸುನಾ ಸಾರ್ಧಂ ವಸೋಶ್ಚಾಧಃ ಪುನರ್ಗತಿಃ ॥ ೧೦೫ ॥

---

೧೦೧. ಐಲ ರಾಜನ ಪುತ್ರನಾದ ಪುರೂರವಸನ ಮಹಾತ್ಮ್ಯೆಯೂ ಉಭಯ ವಿಧರಾದ ಪಿತೃಗಳ ತರ್ಪಣವು ಮೋಕ್ಷಕ್ಕೆ ಕಾರಣವು ಎಂಬ ವಿಷಯವೂ ವರ್ಣಿತವಾಗಿವೆ.

೧೦೨. ಅನಂತರ ಪರ್ವಕಾಲ ಸಂಧಿಕಾಲಗಳೂ, ಸ್ವರ್ಗ ನರಕಾದಿ ಲೋಕಗಳನ್ನು ಹೊಂದಿರುವ ಉಭಯವಿಧರಾದ ಪಿತೃಗಳಿಗೆ ಮಾಡಿದ ಶ್ರಾದ್ಧಗಳಿಂದುಂಟಾಗುವ ಮಹಾಫಲವೂ ಕೂಡ ಉಕ್ತವಾಗಿವೆ.

೧೦೩. ಕೃತಯುಗಾದಿ ಸಂಖ್ಯೆಯೂ, ಅವುಗಳ ಕಾಲಪ್ರಮಾಣಗಳೂ, ಕೃತಯುಗಕ್ಕಿಂತಲೂ, ತ್ರೇತಾಯುಗಾದಿಗಳಲ್ಲಿ ನಡೆಯುವ ನ್ಯೂನತೆಯೂ, ಪ್ರಜಾಜೀವನವೂ ಸಹ ಉಕ್ತವಾಗಿವೆ.

೧೦೪. ವರ್ಣಾಶ್ರಮಗಳ ಗಣನೆ, ಪ್ರವೃತ್ತಿ, ಅವುಗಳ ಧಾರ್ಮಿಕ ಸ್ಥಿತಿಗತಿಗಳೂ ಸಹ ಉಕ್ತವಾಗಿವೆ.

೧೦೫. ಯಾಗಮಾಡತಕ್ಕ ವಿಧಾನಗಳು, ಅವುಗಳಲ್ಲಿ ಋಷಿಗಳಿಗೂ, ವಸುಗಳಿಗೂ ಉಂಟಾದ ವಿವಾದ, ಋಷಿಗಳ ಅವಮಾನದಿಂದುಂಟಾದ ವಸುಗಳ ಅಧೋಗತಿಗಳು, ಇವನ್ನು ವರ್ಣಿಸಿರುತ್ತಾರೆ.

ಪ್ರಶ್ನಾನಾಂ ದುರ್ವಚತ್ವಂ ಚ ಸ್ವಾಯಂಭುವಮೃತೇಮನುಂ ।
ಪ್ರಶಂಸಾ ತಪಸಶ್ಚೋಕ್ತಾ ಯುಗಾವಸ್ಥಾಶ್ಚ ಕೃತ್ಸ್ನಶಃ ।
ದ್ವಾಪರಶ್ಚ ಕಲೇಶ್ಚಾತ್ರ ಸಂಕ್ಷೇಪೇಣ ಪ್ರಕೀರ್ತನಂ ॥ ೧೦೬ ॥

ದೇವತಿರ್ಯಙ್ಮನುಷ್ಯಾಣಾಂ ಪ್ರಮಾಣಾನಿ ಯುಗೇ ಯುಗೇ ।
ಕೀರ್ತ್ಯಂತೇ ಯುಗಸಾಮರ್ಥ್ಯಾತ್ ಪರಿಣಾಹೋಚ್ಛ್ರಯಾಯುಷಃ ॥

ಶಿಷ್ಟಾದೀನಾಂ ಚ ನಿರ್ದೇಶಃ ಪ್ರಾದುರ್ಭಾವಶ್ಚ ಕೀರ್ತ್ಯತೇ ।
ವೇದಸ್ಯ ತದ್ವಿಜಾತಾನಾಂ ಮಂತ್ರಾಣಾಂ ಚ ಪ್ರಕೀರ್ತನಂ ॥ ೧೦೮ ॥

ಶಾಖಾನಾಂ ಪರಿಮಾಣಂ ಚ ವೇದವ್ಯಾಸಾದಿ ಶಬ್ದನಂ ।
ಮನ್ವಂತರಾಣಾಂ ಸಂಹಾರಃ ಸಂಹಾರಾಂತೇ ಚ ಸಂಭವಃ ॥ ೧೦೯ ॥

ದೇವತಾನಾಂಋಷೀಣಾಂ ಚ ಮನೋಃ ಪಿತೃಗಣಸ್ಯ ಚ ।
ನ ಶಕ್ಯಂ ವಿಸ್ತರಾದ್ವಕ್ತುಮಿತ್ಯುಕ್ತಂ ಚ ಸಮಾಸತಃ ॥ ೧೧೦ ॥

---

೧೦೬. ಸ್ವಾಯಂಭುವ ಮನುವನ್ನು ಬಿಟ್ಟರೆ ಮಿಕ್ಕವರು ಪ್ರಶ್ನೆಗಳಿಗೆ ಉತ್ತರವನ್ನು ಹೇಳುವುದು, ಅಸಾಧ್ಯವೆಂಬುದೂ, ತಪೋವರ್ಣನೆಯೂ, ಸಂಪೂರ್ಣವಾದ ಯುಗಗಳ ಅವಸ್ಥೆಗಳೂ, ಕಲಿ, ದ್ವಾಪರ ಯುಗಗಳ ಸಂಕ್ಷೇಪ ವರ್ಣನೆಯೂ ಸಹ ನಿರೂಪಿಸಲ್ಪಟ್ಟವೆ.

೧೦೭. ದೇವತೆಗಳು, ಮನುಷ್ಯರು, ಪ್ರಾಣಿಗಳು, ಇವರ ಸಂಖ್ಯೆ, ವಿಶಾಲತೆ, ಏಳಿಗೆ, ಆಯುಸ್ಸು ಮುಂತಾದವು ಆಯಾ ಯುಗಾನುಗುಣವಾಗಿ ವರ್ಣಿಸಲ್ಪಟ್ಟವೆ.

೧೦೮-೧೦೯. ಶಿಷ್ಟರೇ ಮೊದಲಾದವರ ಉತ್ಪತ್ತಿಗಳೂ, ವೇದಮಂತ್ರಗಳ ವರ್ಣನೆಯೂ, ವೇದಗಳ ಶಾಖೆಗಳೂ, ಮತ್ತು ಪರಿಮಾಣವೂ, ವೇದವ್ಯಾಸಶಬ್ದ ನಿರ್ವಚನವೂ, ಮನ್ವಂತರಗಳ ಲಯೋತ್ಪತ್ತಿಗಳೂ ಈ ಗ್ರಂಥದಲ್ಲಿ ಉಕ್ತವಾಗಿವೆ.

೧೧೦. ದೇವತೆಗಳು, ಮನುಗಳು, ಮತ್ತು ಋಷಿಗಳು, ಪಿತೃಗಣಗಳು ಇವನ್ನು ವಿಸ್ತಾರವಾಗಿ ವರ್ಣಿಸುವುದು ಅಸಾಧ್ಯವಾದುದರಿಂದ ಸಂಕ್ಷೇಪವಾಗಿ ವರ್ಣಿಸಲ್ಪಟ್ಟವೆ.

**ಮನ್ವಂತರಸ್ಯ ಸಂಖ್ಯಾ ಚ ಮಾನುಷೇಣ ಪ್ರಕೀರ್ತಿತಾ ।**
**ಮನ್ವಂತರಾಣಾಂ ಸರ್ವೇಷಾಮೇತದೇವ ಚ ಲಕ್ಷಣಂ ॥ ೧೧೧ ॥**

**ಅತೀತಾನಾಗತಾನಾಂ ಚ ವರ್ತಮಾನೇನ ಕೀರ್ತ್ಯತೇ ।**
**ತಥಾ ಮನ್ವಂತರಾಣಾಂ ಚ ಪ್ರತಿಸಂಧಾನಲಕ್ಷಣಂ ॥ ೧೧೨ ॥**

**ಅತೀತಾನಾಗತಾನಾಂ ಚ ಪ್ರೋಕ್ತಂ ಸ್ವಾಯಂಭುವೇಂತರೇ ।**
**ಮನ್ವಂತರ ತ್ರಯಂ ಚೈವ ಕಾಲಜ್ಞಾನಂ ಚ ಕೀರ್ತ್ಯತೇ ॥ ೧೧೩ ॥**

**ಮನ್ವಂತರೇಷು ದೇವಾನಾಂ ಪ್ರಜೇಶಾನಾಂ ಚ ಕೀರ್ತನಂ ।**
**ದಕ್ಷಸ್ಯ ಚಾಪಿ ದೌಹಿತ್ರಾಃ ಪ್ರಿಯಾಯಾ ದುಹಿತುಃ ಸುತಾಃ ।**
**ಬ್ರಹ್ಮಾದಿಭಿಸ್ತೇ ಜನಿತಾ ದಕ್ಷೇಣೈವ ಚ ಧೀಮತಾ ॥ ೧೧೪ ॥**

---

೧೧೧. ಮನ್ವಂತರವೂ ಮತ್ತು ಅದರ ಸಂಖ್ಯೆಯೂ ಮಾನುಷಪ್ರಮಾಣಾನುಗುಣವಾಗಿ ಹೇಳಿವೆ. ಇದೇ ಕ್ರಮದಲ್ಲಿಯೇ ಸಕಲ ಮನ್ವಂತರಗಳ ಸ್ವರೂಪಗಳೂ ವಿವರಿಸಲ್ಪಟ್ಟಿವೆ.

೧೧೨. ಅತೀತಾನಾಗತ ಮನ್ವಂತರ ವಿಷಯಗಳನ್ನು, ಈಗ ಇರತಕ್ಕ ಮನ್ವಂತರದಂತೆಯೂ, ಅವುಗಳ ಸೃಷ್ಟಿಕ್ರಮಗಳೂ ಸಹ ವರ್ತಮಾನ ಮನ್ವಂತರದಂತೆಯೂ, ವರ್ಣಿಸಲ್ಪಟ್ಟಿವೆ.

೧೧೩. ಸ್ವಾಯಂಭುವಮನ್ವಂತರದಲ್ಲಿ ಅತೀತಾನಾಗತ ಮನ್ವಂತರ ವಿಷಯಗಳನ್ನೂ, ಮೂರು ಮನ್ವಂತರ ಸ್ವರೂಪಗಳನ್ನೂ, ಮತ್ತು ಕಾಲಜ್ಞಾನವನ್ನೂ ವರ್ಣಿಸಿರುತ್ತಾರೆ.

೧೧೪. ಮನ್ವಂತರಗಳಲ್ಲಿ ದೇವತೆಗಳು ಮತ್ತು ರಾಜರುಗಳ ವರ್ಣನೆಯೂ, ಬ್ರಹ್ಮಾದಿದೇವತೆಗಳಿಂದಲೂ, ದಕ್ಷಬ್ರಹ್ಮನಿಂದಲೂ, ಜನಿತರಾದ, ದಕ್ಷಬ್ರಹ್ಮನ ಪ್ರಿಯಪುತ್ರಿಯ ಮಕ್ಕಳಿಂದ ತನ್ನ ದೌಹಿತ್ರರ ನಿರೂಪಣೆಯೂ ವರ್ಣಿತವಾಗಿದೆ.

**ಸಾವರ್ಣಾದ್ಯಾಶ್ಚ ಕೀರ್ತ್ಯಂತೇ ಮನವೋ ಮೇರುಮಾಶ್ರಿತಾಃ ।**
**ಧ್ರುವಸ್ಯೋತ್ತಾನಪಾದಸ್ಯ ಪ್ರಜಾಸರ್ಗೋಪವರ್ಣನಂ ॥ ೧೧೫ ॥**

**ಪೃಥುನಾಪಿ ಚ ವೈನ್ಯೇನ ಭೂಮೇರ್ದೋಹಪ್ರವರ್ತನಂ ।**
**ಪಾತ್ರಾಣಾಂ ಪಯಸಾಂ ಚೈವ ವಂಶಾನಾಂ ಚ ವಿಶೇಷಣಂ ।**
**ಬ್ರಹ್ಮಾದಿಭಿಃ ಪೂರ್ವಮೇವ ದುಗ್ಧಾ ಚೇಯಂ ವಸುಂಧರಾ ॥ ೧೧೬ ॥**

**ದಶಭ್ಯಸ್ತು ಪ್ರಚೇತೇಭ್ಯೋ ಮಾರಿಷಾಯಾಂ ಪ್ರಜಾಪತೇಃ ।**
**ದಕ್ಷಸ್ಯ ಕೀರ್ತ್ಯತೇ ಜನ್ಮ ಸೋಮಸ್ಯಾಂಶೇನ ಧೀಮತಃ ॥ ೧೧೭ ॥**

**ಭೂತಭವ್ಯಭವೇಶತ್ವಂ ಮಹೇಂದ್ರಾಣಾಂ ಚ ಕೀರ್ತ್ಯತೇ ।**
**ಮನ್ವಾದಿಕಾ ಭವಿಷ್ಯಂತಿ ಆಖ್ಯಾನೈರ್ಬಹುಭಿರ್ವೃತಾಃ ॥ ೧೧೮ ॥**

---

೧೧೫. ಸುವರ್ಣಮಯವಾದ ಮೇರ್ವಾದಿವರ್ಣನೆಯೂ, ಮೇರುವನ್ನಾಶ್ರಯಿಸಿರುವ ಮನುಗಳ ನಿರೂಪಣೆಯೂ, ಧ್ರುವ ಮತ್ತು ಉತ್ತಾನಪಾದ ಚಕ್ರವರ್ತಿ ಇವರುಗಳ ಪ್ರಜಾಸೃಷ್ಟಿಯೂ ಸಹ ನಿರೂಪಿತವಾಗಿವೆ.

೧೧೬. ಪೃಥು ಮತ್ತು ವೇನರಾಜರು ಭೂಮಿಯನ್ನು ಹಾಲು ಕರೆದ ವಿಚಾರವೂ, ಪಾತ್ರೆ, ಹಾಲು, ವಂಶ ವಿಶೇಷಗಳ ವಿಷಯಗಳೂ, ಬ್ರಹ್ಮಾದಿ ದೇವತೆಗಳು ಪೂರ್ವದಲ್ಲಿಯೇ ಭೂಮಿಯನ್ನು ಹಾಲು ಕರೆದ ವಿಚಾರವೂ ಉಕ್ತವಾಗಿವೆ.

೧೧೭. ದಶಸಂಖ್ಯಾಕರಾದ ಪ್ರಚೇತಸರಿಂದ ಮಾರೀಷಾ ದೇವಿಯಲ್ಲಿ ಜನಿಸಿದ ಸೋಮ ಸಂಭೂತನೂ, ಜ್ಞಾನಿಯೂ, ಆದ ಪ್ರಜಾಪತಿಯ ವಿಷಯವೂ, ಅವನು ಜ್ಞಾನಿಯಾದ ಸೋಮನ ವಂಶದಿಂದ ಜನಿಸಿರುವ ವಿಷಯವೂ ಉಕ್ತವಾಗಿದೆ.

೧೧೮. ಭೂತ ಭವಿಷ್ಯದ್ವರ್ತಮಾನ ಕಾಲಗಳಲ್ಲಿರುವವರೆಲ್ಲರ ದೊರೆತನವು ಇಂದ್ರಾದಿ ದೇವತೆಗಳಿಗೆ ಸೇರಿರುತ್ತದೆ. ಬಹು ವಿಧಗಳಾದ ಇತಿಹಾಸಗಳಿಂದ ಕೂಡಿದ ಮನ್ವಾದಿಗಳ ವಿಷಯಗಳೂ ಸಹ ಉಕ್ತವಾಗಿವೆ.

ವೈವಸ್ವತಸ್ಯ ಚ ಮನೋಃ ಕೀರ್ತ್ಯತೇ ಸರ್ಗವಿಸ್ತರಃ ।
ದೇವಸ್ಯ ಮಹತೋಯಜ್ಞೇ ವಾರುಣೀಂ ಬಿಭ್ರತಸ್ತನುಂ ॥
ಬ್ರಹ್ಮಶುಕ್ರಾತ್ ಸಮುತ್ಪತ್ತಿಃ ಭೃಗವಾದಿನಾಂಚ ಕೀರ್ತನಂ ॥ ೧೧೯ ॥

ವಿನಿವೃತ್ತೇ ಪ್ರಜಾಸರ್ಗೇ ಚಾಕ್ಷುಷಸ್ಯ ಮನೋಃಶುಭೇ ।
ದಕ್ಷಸ್ಯ ಕೀರ್ತ್ಯತೇ ಸರ್ಗೋ ಧ್ಯಾನಾದ್ವೈವಸ್ವತೇಂತರೇ ॥ ೧೨೦ ॥

ನಾರದಃ ಪ್ರಿಯಸಂವಾದೀ ದಕ್ಷಪುತ್ರಾನ್ಮಹಾಬಲಾನ್ ।
ನಾಶಯಾಮಾಸ ಶಾಪಾಯ ಆತ್ಮನೋ ಬ್ರಹ್ಮಣಃ ಸುತಃ ॥ ೧೨೧ ॥

ತತೋ ದಕ್ಷೋಽಸೃಜತ್ ಕನ್ಯಾ ವೀರಿಣ್ಯಾಮೇವ ವಿಶ್ರುತಾಃ ।
ಕೀರ್ತ್ಯತೇ ಧರ್ಮಸರ್ಗಶ್ಚ ಕಾಶ್ಯಪಸ್ಯ ಚ ಧೀಮತಃ ॥ ೧೨೨ ॥

ಅತ ಊರ್ಧ್ವಂ ಬ್ರಹ್ಮಣಶ್ಚ ವಿಷ್ಣೋಶ್ಚೈವ ಭವಸ್ಯ ಚ ।
ಏಕತ್ವಂ ಚ ಪೃಥಕ್ತ್ವಂ ಚ ವಿಶೇಷತ್ವಂ ಚ ಕೀರ್ತ್ಯತೇ ॥ ೧೨೩ ॥

---

೧೧೯. ವೈವಸ್ವತ ಮನುವಿನ ಸೃಷ್ಟಿ ಕ್ರಮವೂ, ವಾರುಣೀ ರೂಪಧಾರಿಯಾದ ಭಗವನ್ಮಹಿಮೆಯೂ, ಬ್ರಹ್ಮದೇವನ ತೇಜಸ್ಸಿನಿಂದ ಭೃಗ್ವಾದಿಮಹರ್ಷಿಗಳ ಉತ್ಪತ್ತಿಕ್ರಮವೂ, ವ್ಯಕ್ತವಾಗಿದೆ.

೧೨೦. ಪ್ರಜಾಸೃಷ್ಟಿಯು ನಡೆದ ತರುವಾಯ, ಚಾಕ್ಷುಷ ಮನ್ವಂತರದಲ್ಲಿ ದಕ್ಷ ಪ್ರಜಾಪತಿಯ ಸೃಷ್ಟಿಕ್ರಮವೂ ಸಹ ಇರುತ್ತದೆ.

೧೨೧. ಬ್ರಹ್ಮಪುತ್ರರೂ, ಪ್ರಿಯವಾಣಿವುಳ್ಳವರೂ ಆದ ನಾರದರು, ಮಹಾ ಬಲಶಾಲಿಗಳಾದ ದಕ್ಷ ಪ್ರಜಾಪತಿಯ ಮಕ್ಕಳನ್ನು ನಾಶಮಾಡಿದುದರಿಂದ ಶಾಪವನ್ನು ಹೊಂದಿದರು.

೧೨೨. ಅನಂತರ ದಕ್ಷಪ್ರಜಾಪತಿಯು ವಾರುಣೀ ದೇವಿಯಲ್ಲಿ ಪ್ರಖ್ಯಾತರಾದ ಹೆಣ್ಣು ಮಕ್ಕಳನ್ನು ಪಡೆದ ವಿಷಯವೂ ಮತ್ತು ಜ್ಞಾನಿಗಳಾದ ಕಶ್ಯಪರ ಧರ್ಮ ಸೃಷ್ಟಿಯೂ ಕೂಡ ವರ್ಣಿಸಲ್ಪಟ್ಟಿದೆ.

೧೨೩. ಅನಂತರ ಬ್ರಹ್ಮ ವಿಷ್ಣು, ಮಹೇಶ್ವರರಾದ ಈ ಮೂವರು ಒಬ್ಬನೇಯೆಂಬ ಐಕ್ಯಭಾವವೂ, ಭಿನ್ನ, ಭಿನ್ನರೆಂಬ ಭೇದ ಭಾವಾದಿ ವೈಶಿಷ್ಟ್ಯವೂ ಕೂಡ ವಿವೇಚಿಸಲ್ಪಟ್ಟಿದೆ.

ಈಶತ್ವಾಚ್ಚ ಯಥಾ ಶಪ್ತಾ ಜಾತಾ ದೇವಾಃ ಸ್ವಯಂಭುವಾ।
ಮರುತ್ಪ್ರಸಾದೋ ಮರುತಾಂ ದಿತ್ಯಾ ದೇವಾಂಶಸಂಭವಾಃ ॥ ೧೨೪ ॥

ಕೀರ್ತ್ಯಂತೇ ಮರುತಾಂ ಚಾಥ ಗಣಾಸ್ತೇ ಸಪ್ತ ಸಪ್ತಕಾಃ।
ದೇವತ್ವಂ ಪಿತೃವಾಕ್ಯೇನ ವಾಯುಸ್ಕಂಧೇನ ಚಾಶ್ರಯಃ ॥ ೧೨೫ ॥

ದೈತ್ಯಾನಾಂ ದಾನವಾನಾಂ ಚ ಗಂಧರ್ವೋರಗ ರಾಕ್ಷಸಾಂ।
ಸರ್ವಭೂತಪಿಶಾಚಾನಾಂ ಪಶೂನಾಂ ಪಕ್ಷಿವೀರುಧಾಂ।
ಉತ್ಪತ್ತಯಶ್ಚಾಪ್ಸರಸಾಂ ಕೀರ್ತ್ಯಂತೇ ಬಹುವಿಸ್ತರಾತ್ ॥ ೧೨೬ ॥

ಸಮುದ್ರಸಂಯೋಗಕೃತಂ ಜನ್ಮೈರಾವತಹಸ್ತಿನಃ।
ವೈನತೇಯಸಮುತ್ಪತ್ತಿಸ್ತಥಾ ಚಾಸ್ಯಾಭಿಷೇಚನಂ ॥ ೧೨೭ ॥

---

೧೨೪. ದಿತೀ ದೇವಿಯಿಂದ ಶಾಪಹೊಂದಿದ ದೇವತೆಗಳು ಸ್ವಾಮಿಯಾದ ಬ್ರಹ್ಮದೇವನ, ದೇವಾಂಶಗಳಿಂದ ಕೂಡಿಯೇ ಸೃಷ್ಟಿಸಲ್ಪಟ್ಟರು. ವಾಯುದೇವನ ಅನುಗ್ರಹಕ್ಕೆ ಪಾತ್ರರಾದ ಮರುದ್ಗಣವೂ ಕೂಡ ಸೃಷ್ಟವಾದುವು.

೧೨೫. ಈ ರೀತಿಯಲ್ಲಿ ಸೃಷ್ಟಿತರಾದ ದೇವತೆಗಳು ಮತ್ತು ಮರುತ್ತುಗಳು ಪ್ರತ್ಯೇಕವಾಗಿ ಏಳೇಳು ಗಣಗಳಾಗಿ ವಿಂಗಡಿಸಲ್ಪಟ್ಟರು. ತರುವಾಯ ಅವರ ಮಾತಿನಿಂದಲೇ ದೇವಪುರುಷರಾಗಿ (ದೇವತೆಗಳಾಗಿ) ಇದ್ದರು. ಅವರು ವಾಯು ಸ್ಕಂಧದಲ್ಲಿ ಆಶ್ರಯರಾಗಿದ್ದುಕೊಂಡು ಲೋಕಕ್ಕೆ ಆಧಾರರಾಗಿದ್ದರು.

೧೨೬. ದೈತ್ಯರು, ದಾನವರು, ಗಂಧರ್ವರು, ಸರ್ಪರು, ರಾಕ್ಷಸರು ಸರ್ವ ಭೂತಗಳು, ಪಿಶಾಚಗಳು, ಪಶುಗಳು, ಪಕ್ಷಿಗಳು, ಗಿಡಮರ ಬಳ್ಳಿಗಳು ಮತ್ತು ಅಪ್ಸರ ಸ್ತ್ರೀಯರು ಇವರುಗಳ ಸೃಷ್ಟಿ ಕ್ರಮವು ಬಹಳ ವಿಸ್ತಾರವಾಗಿ ವರ್ಣಿತ ವಾಗಿದೆ.

೧೨೭. ಸಮುದ್ರಗಳ ಸಂಯೋಗದಿಂದ ಐರಾವತ ವೆಂಬ ಆನೆಯ ಜನ್ಮವೂ ಗರುಡರಾಜನ ಉತ್ಪತ್ತ್ಯಭಿಷೇಕಗಳೂ ಸಹ ವರ್ಣಿತವಾಗಿವೆ.

ಭೃಗೂಣಾಂ ವಿಸ್ತರಶ್ಚೋಕ್ತಸ್ತಥಾ ಚಾಂಗೀರಸಾಮಪಿ ।
ಕಶ್ಯಪಸ್ಯ ಪುಲಸ್ತ್ಯಸ್ಯ ತಥೈವಾತ್ರೇರ್ಮಹಾತ್ಮನಃ ॥ ೧೨೮ ॥

ಪರಾಶರಸ್ಯ ಚ ಮುನೇಃ ಪ್ರಜಾನಾಂ ಯತ್ರ ವಿಸ್ತರಃ ।
ದೇವತಾನಾಮೃಷೀಣಾಂ ಚ ಪ್ರಜೋತ್ಪತ್ತಿಸ್ತತಃ ಪರಂ ॥ ೧೨೯ ॥

ತಿಸ್ರಃ ಕನ್ಯಾಃ ಪ್ರಕೀರ್ತ್ಯಂತೇ ಯಾಸು ಲೋಕಾಃ ಪ್ರತಿಷ್ಠಿತಾಃ ।
ಪಿತೃದೌಹಿತ್ರನಿರ್ದೇಶೋ ದೇವಾನಾಂ ಜನ್ಮ ಚೋಚ್ಯತೇ ॥ ೧೩೦ ॥

ವಿಸ್ತರಸ್ತೈ ಭಗವತಃ ಪಂಚಾನಾಂ ಸುಮಹಾತ್ಮನಾಂ ।
ಇಲಾಯಾ ವಿಸ್ತರಶ್ಚೋಕ್ತ ಆದಿತ್ಯಸ್ಯ ತತಃ ಪರಂ ॥ ೧೩೧ ॥

ವಿಕುಕ್ಷಿಚರಿತಂ ಚೋಕ್ತಂ ಧುಂಧೋಶ್ಚೈವ ನಿಬರ್ಹಣಂ ।
ಬೃಹದ್ಬಲಾಂತಸಂಕ್ಷೇಪಾದಿಕ್ಷ್ವಾಕ್ವಾದ್ಯಾ ಪ್ರಕೀರ್ತಿತಾಃ ॥ ೧೩೨ ॥

ನಿಮ್ಯಾದೀನಾಂ ಕ್ಷಿತೀಶಾನಾಂ ಯಾವಜ್ಜನ್ಹುಗಣಾದಿತಿ ।
ಕೀರ್ತ್ಯತೇ ವಿಸ್ತರೋ ಯಶ್ಚ ಯಯಾತೇರಪಿ ಭೂಪತೇಃ ॥ ೧೩೩ ॥

---

೧೨೮-೧೨೯. ಮಹಾತ್ಮರಾದ ಕಶ್ಯಪ, ಅತ್ರಿ, ಭೃಗು, ಅಂಗೀರಸ, ಪುಲಸ್ತ್ಯ, ಪ್ರಜಾವಿಸ್ತಾರಕ್ಕೆ ಕಾರಣರಾದ ಪರಾಶರ, ದೇವತೆಗಳು ಮತ್ತು ಮುನಿಗಳು, ಇವರುಗಳ ಉತ್ಪತ್ತಿಕ್ರಮವೂ ಸಹ ವಿಸ್ತಾರವಾಗಿ ವರ್ಣಿತವಾಗಿವೆ.

೧೩೦. ಸಮಸ್ತ ಲೋಕ ಸ್ಥಿತಿಗತಿಗಳಿಗೆ ಕಾರಣರಾದ ಮೂವರು ಕುಮಾರಿಯರು ಪಿತೃ ಮತ್ತು ಮೊಮ್ಮಕ್ಕಳು ಇವರ ನಿರೂಪಣೆಯೂ, ದೇವತೆಗಳ ಜನ್ಮವೂ ಇದರಲ್ಲಿ ಉಕ್ತವಾಗಿವೆ.

೧೩೧. ಪೂಜ್ಯನಾದ ಭಗವಂತನು ಪಂಚ ಮಹಾ ಪುರುಷರು ಭೂಮಾತೆ ಮತ್ತು ಸೂರ್ಯದೇವ ಇವರ ವಿಷಯಗಳೂ ಸಹ ವಿಸ್ತಾರವಾಗಿ ವಿವರಿಸಲ್ಪಟ್ಟಿವೆ.

೧೩೨-೧೩೩. ತರುವಾಯ ವಿಕುಕ್ಷಿರಾಜನ ಚರಿತವೂ, ಧುಂಧುರಾಜನ ನಾಶಕ್ರಮವೂ, ಇಕ್ಷ್ವಾಕು ಮಹಾರಾಜನ ಮಹತ್ತಾದ ಸೈನ್ಯಗಳ ಸ್ಥಿತಿಗತಿಗಳೂ ನಿಮಿ ಮೊದಲಾದ ರಾಜರುಗಳ ಜನ್ಹುಗಣಗಳೂ, ಯಯಾತಿರಾಜನ ರಾಜ್ಯಭಾರ ಕ್ರಮಾದಿಗಳೂ ಸಹ ತಿಳಿದು ಬಂದಿವೆ.

ಯದುವಂಶಸಮುದ್ದೇಶೋ ಹೈಹಯಸ್ಯ ಚ ವಿಸ್ತರಃ ।
ಕ್ರೋಷ್ಟೋರನಂತರಂ ಚೋಕ್ತಸ್ತಥಾ ವಂಶಸ್ಯ ವಿಸ್ತರಃ ॥ ೧೩೪ ॥

ಜ್ಯಾಮಘಸ್ಯ ಚ ಮಾಹಾತ್ಮ್ಯಂ ಪ್ರಜಾಸರ್ಗಶ್ಚ ಕೀರ್ತ್ಯತೇ ।
ದೇವಾವೃಧಸ್ಯ ತ್ವರ್ಕಸ್ಯ ವೃಷೇಶ್ಚೈವ ಮಹಾತ್ಮನಃ ॥ ೧೩೫ ॥

ಅತ್ರಿಮಿತ್ರಾನ್ವಯಶ್ಚೈವ ವಿಷ್ಣೋರ್ದಿವ್ಯಾಭಿಶಂಸನಂ ।
ವಿವಸ್ವತೋಽಥ ಸಂಪ್ರಾಪ್ತಿರ್ಮಣಿರತ್ನಸ್ಯ ಧೀಮತಃ ॥ ೧೩೬ ॥

ಯುಧಾಜಿತಃ ಪ್ರಜಾಸರ್ಗಃ ಕೀರ್ತ್ಯತೇ ಚ ಮಹಾತ್ಮನಃ ।
ಕೀರ್ತ್ಯತೇ ಚಾನ್ವಯಃ ಶ್ರೀಮಾನ್ ರಾಜರ್ಷೇರ್ದೇವಮೀಢುಷಃ ॥ ೧೩೭ ॥

ಪುನಶ್ಚ ಜನ್ಮ ಚಾಪ್ಯುಕ್ತಂ ಚರಿತಂ ಚ ಮಹಾತ್ಮನಃ ।
ಕಂಸಸ್ಯ ಚಾಪಿ ದೌರಾತ್ಮ್ಯಂ ಏಕಾಂತೇನ ಸಮುದ್ಭವಃ ॥ ೧೩೮ ॥

ವಾಸುದೇವಸ್ಯ ದೇವಕ್ಯಾಂ ವಿಷ್ಣೋರ್ಜನ್ಮ ಪ್ರಜಾಪತೇಃ ।
ವಿಷ್ಣೋರನಂತರಂ ಚಾಪಿ ಪ್ರಜಾಸರ್ಗೋಪ ವರ್ಣನಂ ॥ ೧೩೯ ॥

---

೧೩೪-೧೩೫-೧೩೬-೧೩೭. ಯದುವಂಶವು ಜನಿತವಾಗಲು ಕಾರಣವೂ, ಹೈಹಯರಾಜನ ಚರಿತೆಯೂ, ಮತ್ತು ಕ್ರೋಷ್ಟುರಾಜನ ನಂತರ ಉಂಟಾದ ವಂಶವಿಸ್ತಾರವೂ, ಕೂಡ ಉಕ್ತವಾಗಿದೆ. ತರುವಾಯ ಜ್ಯಾಮಘರಾಜನ ಮಹಿಮೆ ಅವನ ಪ್ರಜಾಸೃಷ್ಟಿ, ದೇವವೃಧ, ಅರ್ಕ, ಅತ್ರಿ, ಈ ಮಹಾತ್ಮರ ಗುಣಾನುವಾದ, ಅತ್ರಿಮಿತ್ರರ ಅನ್ವಯ ವರ್ಣನೆ, ಭಗವನ್ಮಾಹಾತ್ಮ್ಯೆ, ಮಹಾಪುರುಷನಾದ ಯುಧಾಜಿತದ್ರಾಜನು ಸೂರ್ಯದೇವನಿಂದ ಶಮಂತಕಮಣಿಯನ್ನು ತಂದ ವಿಷಯು, ಅವನ ಪ್ರಜಾಸೃಷ್ಟಿ, ದೇವತೆಗಳಿಗೆ ತೃಪ್ತಿಯನ್ನುಂಟುಮಾಡಿದ ರಾಜರ್ಷಿಗಳು ಮತ್ತು ಅವರ ಪ್ರಜೆಗಳ ಸೃಷ್ಟಿಯೇ ಮೊದಲಾದ ವಿಷಯಗಳೂ ಕೂಡ ಇಲ್ಲಿ ನಿರೂಪಿತವಾಗಿವೆ.

೧೩೮-೧೩೯. ಮಹಾತ್ಮರಾದ ಪುರುಷರ ಪುನರುತ್ಪತ್ತಿ ಮಹಿಮೆಗಳೂ, ಕಂಸನ ದುಷ್ಟತನವೂ, ಅನಂತರ ಸ್ವಾಮಿಯಾದ ಮಹಾವಿಷ್ಣುವು ವಸುದೇವರಾಜ ನಿಂದ ದೇವಕೀ ದೇವಿಯಲ್ಲಿ ರಹಸ್ಯವಾಗಿ ಜನ್ಮವೆತ್ತಿದ ಸಂಗತಿಯೂ, ತದನಂತರ ವಾದ ಪ್ರಜಾಸೃಷ್ಟಿಯೂ ವರ್ಣಿತವಾಗಿವೆ.

ದೈವಾಸುರೇ ಸಮುತ್ಪನ್ನೇ ವಿಷ್ಣುನಾ ಸ್ತ್ರೀವಧೇ ಕೃತೇ ।
ಸಂರಕ್ಷತಾ ಶಕ್ರವಧಂ ಶಾಪಃ ಪ್ರಾಪ್ತಃ ಪುರಾ ಭೃಗೋಃ ॥
ಭೃಗುಶ್ಚೋತ್ಥಾಪಯಾಮಾಸ ದಿವ್ಯಾಂ ಶುಕ್ರಸ್ಯ ಮಾತರಂ ॥ ೧೪೦ ॥

ದೇವಾನಾಮಸುರಾಣಾಂ ಚ ಸಂಗ್ರಾಮಾ ದ್ವಾದಶಾಯುತಾಃ ।
ನಾರಸಿಂಹಪ್ರಭೃತಯಃ ಕೀರ್ತ್ಯಂತೇ ಪ್ರಾಣನಾಶನಾಃ ॥ ೧೪೧ ॥

ಶುಕ್ರೇಣಾರಾಧನಂ ಸ್ಥಾಣೋರ್ಧೀರೇಣ ತಪಸಾ ಕೃತಂ ।
ವರದಾನ ಪ್ರಲುಬ್ಧೇನ ಯತ್ರ ಶರ್ವಸ್ತವಃ ಕೃತಃ ॥
ಅನಂತರಂ ವಿನಿರ್ದಿಷ್ಟಂ ದೇವಾಸುರವಿಚೇಷ್ಟಿತಂ ॥ ೧೪೨ ॥

ಜಯಂತ್ಯಾ ಸಹ ಸಕ್ತೇ ತು ಯತ್ರ ಶುಕ್ರೇ ಮಹಾತ್ಮನಿ ।
ಅಸುರಾನ್ ಮೋಹಯಾಮಾಸ ಶುಕ್ರರೂಪೇಣ ಬುದ್ಧಿಮಾನ್ ॥
ಬೃಹಸ್ಪತಿಸ್ತು ತಾನ್ ಶುಕ್ರಃ ಶಶಾಪ ಸ ಮಹಾದ್ಯುತಿಃ ॥ ೧೪೩ ॥

---

೧೪೦. ದೇವಾಸುರರು ಹುಟ್ಟಲಾಗಿ ಮಹಾವಿಷ್ಣುವು ಸ್ತ್ರೀವಧೆಯನ್ನು ಮಾಡಿದನು. ಆ ಸಂದರ್ಭದಲ್ಲಿ ಇಂದ್ರನನ್ನು ರಕ್ಷಿಸಿದ ಭೃಗುಋಷಿಗಳಿಗೆ ಶಾಪ ಪ್ರಾಪ್ತಿಯಾಯಿತು. ಆದರೂ ಸಹ ಭೃಗುಮಹರ್ಷಿಗಳು ಶುಕ್ರಾಚಾರ್ಯರ ತಾಯಿಯು ಶಾಪವನ್ನು ಪರಿಹರಿಸಿ ಉದ್ಧರಿಸಿದರು.

೧೪೧. ದೇವಾಸುರರಿಗೆ ಯುದ್ಧವು ಹನ್ನೆರಡುಸಾವಿರ ವರ್ಷಗಳ ಕಾಲ ನಡೆಯಿತು. ಹಿರಣ್ಯಾಕ್ಷನೇ ಮೊದಲಾದವರ ನಾಶಕ್ಕಾಗಿ ನರಸಿಂಹಾದ್ಯವತಾರಗಳು ಉಂಟಾದುವು.

೧೪೨. ಧೈರ್ಯಶಾಲಿಯಾದ ಶುಕ್ರಾಚಾರ್ಯರು ಪರಮೇಶ್ವರನನ್ನು ಕುರಿತು ಘೋರವಾದ ತಪಸ್ಸನ್ನು ಮಾಡಿದರು. ಅದರಿಂದ ಈಶ್ವರನು ಸಂತುಷ್ಟನಾಗಿ ವರವನ್ನು ಕೊಡಲು ಪುನಃ ಸ್ತೋತ್ರ ಮಾಡಿದರು. ಇದಾದ ತರುವಾಯ ದೇವಾಸುರರ ಕಾರ್ಯಗಳು ವರ್ಣಿಸಲ್ಪಟ್ಟಿವೆ.

೧೪೩. ಮಹಾತ್ಮರಾದ ಶುಕ್ರಾಚಾರ್ಯರು ಜಯಂತಿಯೊಡನೆ ಸೇರಲಾಗಿ ಜ್ಞಾನಿಗಳಾದ ಬೃಹಸ್ಪತಿಗಳು ಶುಕ್ರರೂಪವನ್ನು ಹೊಂದಿ ಅಸುರರನ್ನು ಮೋಹಗೊಳಿಸಿದರು. ಆಗ ಅದನ್ನರಿತ ಜ್ಞಾನಿಯಾದ ಶುಕ್ರಾಚಾರ್ಯರು ಅಸುರರಿಗೆ ಶಾಪಕೊಟ್ಟರು.

ಉಕ್ತಂ ಚ ವಿಷ್ಣುಮಾಹಾತ್ಮ್ಯಂ ವಿಷ್ಣೋರ್ಜನ್ಮಾದಿ ಶಬ್ದನಂ ।
ತುರ್ವಸುಃ ಶುಕ್ರದೌಹಿತ್ರ್ಯೋ ದೇವಯಾನ್ಯಾಂ ಯದೋರಭೂತ್ ॥
ಅನುದ್ರುಹ್ಯುಸ್ತಥಾ ಪೂರುರ್ಯಯಾತಿ ತನಯಾನ್ನೃಪಾಃ ॥ ೧೪೪ ॥

ಅತ್ರ ವಂಶ್ಯಾ ಮಹಾತ್ಮನಸ್ತೇಷಾಂ ಪಾರ್ಥಿವಸತ್ತಮಾಃ ।
ಕೀರ್ತ್ಯಂತೇ ದೀರ್ಘಯಶಸೋ ಭೂರಿದ್ರವಿಣ ತೇಜಸಃ ॥ ೧೪೫ ॥

ಕುಶಿಕಸ್ಯ ಚ ವಿಪ್ರರ್ಷೇಃ ಸಮ್ಯಗ್ಯೋ ಧರ್ಮಸಂಶ್ರಯಃ ।
ಬಾರ್ಹಸ್ಪತ್ಯಂತು ಸುರಭಿರ್ಯತ್ರ ಶಾಪಮಿಹಾನುದತ್ ॥ ೧೪೬ ॥

ಕೀರ್ತನಂ ಜನ್ಹುವಂಶಸ್ಯ ಶಂತನೋರ್ವೀರ್ಯಶಬ್ದನಂ ।
ಭವಿಷ್ಯತಾಂ ತಥಾ ರಾಜ್ಞಾಮುಪಸಂಹಾರ ಶಬ್ದನಂ ॥ ೧೪೭ ॥

ಅನಾಗತಾನಾಂ ಸಪ್ತಾನಾಂ ಮನೂನಾಂ ಚೋಪವರ್ಣನಂ ।
ಭೌಮಸ್ಯಾಂತೆ ಕಲಿಯುಗೇ ಕ್ಷೀಣೇ ಸಂಹಾರವರ್ಣನಂ ॥ ೧೪೮ ॥

---

೧೪೪. ತರುವಾಯ ವಿಷ್ಣುವಿನ ಮಹಿಮೆಯೂ, ಜನನಾದಿಗಳೂ ನಿರೂಪಿತವಾಗಿವೆ. ಆಮೇಲೆ ಯದುರಾಜನಿಗೆ ದೇವಯಾನೀ ದೇವಿಯಲ್ಲಿ ಶುಕ್ರನ ಮೊಮ್ಮಗನಾದ ತುರ್ವಸು ರಾಜನೂ, ಶರ್ಮಿಷ್ಠೆಯಲ್ಲಿ ಯಯಾತಿ ರಾಜನಿಗೆ ಅನುದ್ರುಹ್ಯ, ಪೂರು ಎಂಬ ಮೂವರು ಮಕ್ಕಳು ಹುಟ್ಟಿದರು.

೧೪೫. ಈ ಯಾದವ ವಂಶದಲ್ಲಿ ಮಹಾತ್ಮರೂ, ಅತ್ಯಂತ ಕೀರ್ತಿವಂತರೂ ಅಧಿಕವಾದ ಧನ ಮತ್ತು ತೇಜಸ್ಸುಗಳುಳ್ಳವರೂ ಆದ ನೃಪೋತ್ತಮರು ಜನಿಸಿದರು.

೧೪೬. ಬೃಹಸ್ಪತಿಗಳು ಧರ್ಮಜ್ಞರಾದ ಕುಶಿಕ ಮಹರ್ಷಿಗಳಿಗೆ ಶಾಪವನ್ನು ಕೊಡಲು ಆ ಶಾಪವನ್ನು ಕಾಮಧೇನುವು ಪರಿಹರಿಸಿತು.

೧೪೭. ಜನ್ಹು ಮಹರ್ಷಿಗಳೂ ಮತ್ತು ಶಂತನು ಚಕ್ರವರ್ತಿ ಇವರ ವಂಶ ಮತ್ತು ಕೀರ್ತಿ ಇವುಗಳ ವರ್ಣನೆಯೂ, ಮುಂದೆ ಹುಟ್ಟುವ ರಾಜರ ಲಯವೂ ಕೂಡ ತಿಳಿಸಿದೆ.

೧೪೮. ಮುಂದೆ ಬರತಕ್ಕ ಸಪ್ತಮನುಗಳ ವರ್ಣನೆಯೂ, ಕಲಿಯುಗವು ಕ್ಷೀಣವಾಗಲು ಭೂಸಂಬಂಧಿಗಳಾದ ವಸ್ತುಗಳ ಸಂಹಾರ ಕೀರ್ತನೆಗಳೂ ವರ್ಣಿತವಾಗಿವೆ.

ಪರಾರ್ಧಪರಯೋಶ್ಚೈವ ಲಕ್ಷಣಂ ಪರಿಕೀರ್ತ್ಯತೇ ।
ಬ್ರಹ್ಮಣೋ ಯೋಜನಾಗ್ರೇಣ ಪರಿಮಾಣ ವಿನಿರ್ಣಯಃ ॥ ೧೪೯ ॥

ನೈಮಿತ್ತಿಕಃ ಪ್ರಾಕೃತಿಕಸ್ತಥೈವಾತ್ಯಂತಿಕಃ ಸ್ಮೃತಃ ।
ತ್ರಿವಿಧಃ ಸರ್ವಭೂತಾನಾಂ ಕೀರ್ತ್ಯತೇ ಪ್ರತಿ ಸಂಚರಃ ॥ ೧೫೦ ॥

ಅನಾವೃಷ್ಟಿರ್ಭಾಸ್ಕರಾಚ್ಚ ಘೋರಃ ಸಂವರ್ತಕೋನಲಃ ।
ಮೇಘೋಹ್ಯೇಕಾರ್ಣವಂ ವಾಯುಸ್ತಥಾ ರಾತ್ರಿರ್ಮಹಾತ್ಮನಃ ॥ ೧೫೧ ॥

ಸಂಖ್ಯಾಲಕ್ಷಣಮುದ್ದಿಷ್ಟಂ ತತೋ ಬ್ರಾಹ್ಮಂ ವಿಶೇಷತಃ ।
ಭೂರಾದೀನಾಂ ಚ ಲೋಕಾನಾಂ ಸಪ್ತಾನಾಮುಪವರ್ಣನಂ ॥
ಕೀರ್ತ್ಯಂತೇ ಚಾತ್ರ ನಿರಯಾಃ ಪಾಪಾನಾಂ ರೌರವಾದಯಃ ॥ ೧೫೨ ॥

ಬ್ರಹ್ಮಲೋಕೋಪರಿಷ್ಟಾತ್ತು ಶಿವಸ್ಯ ಸ್ಥಾನಮುತ್ತಮಂ ।
ಯತ್ರ ಸಂಹಾರಮಾಯಾಂತಿ ಸರ್ವಭೂತಾನಿ ಸಂಕ್ಷಯೇ ॥ ೧೫೩ ॥

---

೧೪೯. ಪರಾರ್ಧ ಪರಗಳ ಲಕ್ಷಣಗಳೂ, ಬ್ರಹ್ಮಯೋಜನ ವಿವಕ್ಷೆಯಿಂದ ಬ್ರಹ್ಮಲೋಕದ ಅಳತೆಯೂ, ನಿರೂಪಿತವಾಗಿವೆ.

೧೫೦. ಸರ್ವಪ್ರಾಣಿಗಳಿಗೂ ನೈಮಿತ್ತಿಕ, ಪ್ರಾಕೃತಿಕ ಮತ್ತು ಆತ್ಯಂತಿಕ ವೆಂಬುದಾಗಿ ಮೂರು ವಿಧವಾದ ಸಂಚಾರಗಳು [ಸಂಹಾರಗಳು] ಉಕ್ತವಾಗಿವೆ.

೧೫೧. ಮಹಾತ್ಮನಾದ ಬ್ರಹ್ಮದೇವನ ರಾತ್ರಿಯಾದ ಪ್ರಳಯ ಕಾಲದಲ್ಲಿ ಸೂರ್ಯನಿಂದ ಅನಾವೃಷ್ಟಿಯೂ, ಘೋರವಾದ ಪ್ರಳಯಾಗ್ನಿಯೂ, ಜಗಜ್ಜಲ ಮಯವಾಗುವಂತೆ ಮೇಘವರ್ಷಣವೂ, ಘೋರವಾದ ವಾಯು ಸಂಚಾರವೂ ಆಗುವುದೆಂದು ವರ್ಣಿತವಾಗಿವೆ.

೧೫೨. ಬ್ರಹ್ಮದೇವನ ಆಯುಷ್ಯದ ಕಾಲನಿರ್ಣಯವೂ, ಭೂವ್ಯಾದಿ ಸಪ್ತಲೋಕಗಳ ವರ್ಣನೆಯೂ, ಪಾಪಿಗಳು ಅನುಭವಿಸಬೇಕಾದ ರೌರವಾದಿ ನರಕಗಳೂ ವಿವರಿಸಲ್ಪಟ್ಟಿವೆ.

೧೫೩. ಪ್ರಳಯಕಾಲದಲ್ಲಿ ಸರ್ವಭೂತಗಳೂ, ಯಾವ ಸ್ಥಳದಲ್ಲಿ ಲಯ ವಾಗುತ್ತವೆಯೋ, ಅಂತಹ ಪರಮೇಶ್ವರನ ಸ್ಥಾನವು ಬ್ರಹ್ಮಲೋಕಕ್ಕಿಂತಲೂ ಶ್ರೇಷ್ಟವಾಗಿಯೂ, ಊರ್ಧ್ವಗತವಾಗಿಯೂ ಪ್ರಕಾಶಿಸುತ್ತದೆ.

ಸರ್ವೇಷಾಂ ಚೈವ ಸತ್ವಾನಾಂ ಪರಿಣಾಮವಿನಿರ್ಣಯಃ ।
ಬ್ರಹ್ಮಣಃ ಪ್ರತಿಸಂಸರ್ಗೇ ಸರ್ವಸಂಹಾರವರ್ಣನಂ ॥ ೧೫೪ ॥

ಅಷ್ಟರೂಪ್ಯಮತಃ ಪ್ರೋಕ್ತಂ ಪ್ರಾಣಸ್ಯಾಷ್ಟಕ ಮೇವ ಚ ।
ಗತಿಶ್ಚೋರ್ಧ್ವಮಧಶ್ಚೋಕ್ತಾ ಧರ್ಮಾಧರ್ಮ ಸಮಾಶ್ರಯಾತ್ ॥ ೧೫೫ ॥

ಕಲ್ಪೇ ಕಲ್ಪೇ ಚ ಭೂತಾನಾಂ ಮಹತಾಮಪಿ ಸಂಕ್ಷಯಃ ।
ಪ್ರಸಂಖ್ಯಾಯ ಚ ದುಃಖಾನಿ ಬ್ರಹ್ಮಣಶ್ಚಾಪ್ಯನಿತ್ಯತಾ ॥ ೧೫೬ ॥

ದೌರಾತ್ಮ್ಯಂ ಚೈವ ಭೋಗಾನಾಂ ಪರಿಣಾಮವಿನಿರ್ಣಯಃ ।
ದುರ್ಲಭತ್ವಂ ಚ ಮೋಕ್ಷಸ್ಯ ವೈರಾಗ್ಯಾದ್ದೋಷದರ್ಶನಂ ॥ ೧೫೭ ॥

ವ್ಯಕ್ತಾವ್ಯಕ್ತಂ ಪರಿತ್ಯಜ್ಯ ಸತ್ವಂ ಬ್ರಹ್ಮಣಿ ಸಂಸ್ಥಿತಂ ।
ನಾನಾತ್ವದರ್ಶನಾಚ್ಛುದ್ಧಂ ತತಸ್ತದಭಿವರ್ತತೇ ॥ ೧೫೮ ॥

---

೧೫೪. ಬ್ರಹ್ಮದೇವನ ಅವಾಂತರದ ಪ್ರತಿಯೊಂದು ಸೃಷ್ಟಿ ಮತ್ತು ಸಂಹಾರಗಳಲ್ಲಿ ಸಮಸ್ತ ಪ್ರಾಣಿಗಳ ಪರಿಣಾಮ ವಿಪರ್ಯಯಗಳು ಉಂಟಾಗುತ್ತವೆ.

೧೫೫. ಅನಂತರ ಅಷ್ಟರೂಪ್ಯವೂ, ಪ್ರಾಣದೇವನ ಅಷ್ಟಕತ್ವವೂ, ಧರ್ಮಾಧರ್ಮಾನುಗುಣವಾಗಿ ಅಧೋಲೋಕ ಊರ್ಧ್ವಲೋಕ ಗಮನವೂ ವರ್ಣಿಸಲ್ಪಟ್ಟಿವೆ.

೧೫೬. ಪ್ರತಿಯೊಂದು ಕಲ್ಪದಲ್ಲಿಯೂ ಪಂಚಭೂತಗಳೂ ಮಹಾತ್ಮರೂ ಕೂಡ ನಾಶವಾಗುತ್ತಾರೆ. ಈ ಅನಿತ್ಯವಾದ ದುಃಖದ ವಿವೇಚನೆಯಿಂದ ಬ್ರಹ್ಮನಿಗೂ ಅನಿತ್ಯತೆಯು ಸಿದ್ಧವಾಗುತ್ತದೆ.

೧೫೭. ವಿಷಯ ಸುಖಾನುಭವಗಳಿಂದ ದುಷ್ಟತನವೂ, ದುಷ್ಪರಿಣಾಮವೂ, ಆಗುವುದಲ್ಲದೆ ಮಹಾದೋಷಗಳೂ ಸಂಭವಿಸುತ್ತವೆ. ಮೋಕ್ಷವಾದರೋ ವೈರಾಗ್ಯ ಶಮದಮಾದಿಗಳು ಇಲ್ಲದಿದ್ದರೆ ಪಡೆಯಲು ಬಹಳ ಅಸಾಧ್ಯವಾಗುವುದು.

೧೫೮. ಪ್ರಳಯಾನಂತರ ಬ್ರಹ್ಮನು ವ್ಯಕ್ತಾವ್ಯಕ್ತ ರೂಪಗಳನ್ನು ಬಿಟ್ಟು, ಶುದ್ಧಸತ್ವರೂಪಿಯಾಗಿರುವನು. ಆ ಶುದ್ಧಸತ್ವದ ಸಂಸರ್ಗದಿಂದ ನಾನಾ ರೂಪಿಯಾಗಿ ಕಾಣುವನು.

ತತಸ್ತ್ವಾಪತ್ರಯೋತೀತೋ ನಿರೂಪಾಖ್ಯೋ ನಿರಂಜನಃ ।
ಆನಂದೋ ಬ್ರಹ್ಮಣಃ ಪ್ರೋಕ್ತೋ ನ ಬಿಭೇತಿ ಕುತಶ್ಚನ ॥ ೧೫೯ ॥

ಕೀರ್ತ್ಯತೇ ಚ ಪುನಃ ಸರ್ಗೋ ಬ್ರಹ್ಮಣೋನ್ಯಸ್ಯ ಪೂರ್ವವತ್ ।
ಕೀರ್ತ್ಯತೇ ಋಷಿವಂಶಶ್ಚ ಸರ್ವಪಾಪಪ್ರಣಾಶನಃ ॥ ೧೬೦ ॥

ಇತಿ ಕೃತ್ಯಸಮುದ್ದೇಶಃ ಪುರಾಣಸ್ಯೋಪವರ್ಣಿತಃ ।
ಕೀರ್ತ್ಯಂತೇ ಜಗತೋ ಹ್ಯತ್ರ ಸರ್ವಪ್ರಲಯವಿಕ್ರಿಯಾಃ ॥
ಪ್ರವೃತ್ತಯಶ್ಚ ಭೂತಾನಾಂ ನಿವೃತ್ತೀನಾಂ ಫಲಾನಿ ಚ ॥ ೧೬೧ ॥

ಪ್ರಾದುರ್ಭಾವೋ ವಸಿಷ್ಠಸ್ಯ ಶಕ್ತೇರ್ಜನ್ಮ ತಥೈವ ಚ ।
ಸೌದಾಸಾನ್ನಿಗ್ರಹಸ್ತಸ್ಯ ವಿಶ್ವಾಮಿತ್ರಕೃತೇನ ಚ ॥ ೧೬೨ ॥

ಪರಾಶರಸ್ಯ ಚೋತ್ಪತ್ತಿರದೃಶ್ಯತ್ವಂ ತಥಾ ವಿಭೋಃ ।
ಜಜ್ಞೇ ಪಿತೄಣಾಂ ಕನ್ಯಾಯಾಂ ವ್ಯಾಸಶ್ಚಾಪಿ ಯಥಾ ಮುನಿಃ ॥ ೧೬೩ ॥

---

೧೫೯. ಬ್ರಹ್ಮನ ಆನಂದವು ಆಧ್ಯಾತ್ಮಿಕಾದಿ ತಾಪತ್ರಯ ರಹಿತವಾಗಿಯೂ, ಪ್ರಾಕೃತ ರೂಪರಹಿತವಾಗಿಯೂ, ನಿರ್ದೋಷವಾಗಿಯೂ ಇರುವುದರಿಂದ, ಆ ಬ್ರಹ್ಮನು ಯಾರಿಗೂ ಹೆದರುವುದಿಲ್ಲವು.

೧೬೦. ಅನಂತರ ಬ್ರಹ್ಮಾತಿರಿಕ್ತವಾದ ಸರ್ವಲೋಕಗಳ ಸೃಷ್ಟಿಕ್ರಮಗಳೂ, ಸರ್ವಪಾಪ ಪರಿಹಾರಕವಾದ ಋಷಿಗಳ ವಂಶವೂ ಸಹ ನಿರೂಪಿತವಾಗಿವೆ.

೧೬೧. ಪೂರ್ವೋಕ್ತರೀತಿಯಲ್ಲಿ ಪುರಾಣಗಳ ಮುಖ್ಯೋದ್ದೇಶ್ಯಗಳಿಂದ ವಿಷಯಗಳೆಲ್ಲವನ್ನೂ, ತಿಳಿಸಿದ್ದಾಗಿದೆ. ಈಗ ಜಗತ್ಪ್ರಲಯದಿಂದಾಗುವ ಸರ್ವ ವಿಷಯಗಳನ್ನೂ ತಿಳಿಸುವೆವು. ಮತ್ತು ಸರ್ವಭೂತಗಳ ಪ್ರವೃತ್ತಿ, ನಿವೃತ್ತಿಗಳೂ ಅವುಗಳ ಫಲಗಳೂ ನಿರೂಪಿಸಲ್ಪಟ್ಟಿವೆ.

೧೬೨. ವಸಿಷ್ಠಮಹರ್ಷಿಗಳ ಉತ್ಪತ್ತಿಯೂ, ಶಕ್ತಿಯೆಂಬುವನ ಜನ್ಮವೂ, ವಿಶ್ವಾಮಿತ್ರರು ಮತ್ತು ಸೌದಾಸನರು ಮಾಡಿದ ಶಕ್ತಿಯ ನಿಗ್ರಹವೂ ನಿರೂಪಿತವಾಗಿವೆ.

೧೬೩-೧೬೪. ಆಗ ಪರಾಶರರ ಜನನವೂ, ಭಗವಂತನ ಅದೃಶ್ಯತೆಯೂ, ಪಿತೃಕನ್ಯೆಯಲ್ಲಿ ಮುನೀಶ್ವರರಾದ ವ್ಯಾಸರ ಉತ್ಪತ್ತಿಯೂ ಪುತ್ರಸಹಿತರೂ,

ಶುಕ್ರಸ್ಯ ಚ ತಥಾ ಜನ್ಮ ಸಹ ಪುತ್ರಸ್ಯ ಧೀಮತಃ ।
ಪರಾಶರಸ್ಯ ಪ್ರದ್ವೇಷೋ ವಿಶ್ವಾಮಿತ್ರಕೃತೋ ಯಥಾ ॥ ೧೬೪ ॥

ವಸಿಷ್ಠಸಂಭೃತಶ್ಚಾಗ್ನಿರ್ವಿಶ್ವಾಮಿತ್ರಜಿಘಾಂಸಯಾ ।
ಸಂತಾನಹೇತೋರ್ವಿಭುನಾ ಚೀರ್ಣಃ ಸ್ಕಂಧೇನ ಧೀಮತಾ ॥
ದೈವೇನ ವಿಧಿನಾ ವಿಪ್ರ ವಿಶ್ವಾಮಿತ್ರಹಿತೈಷಿಣಾ ॥ ೧೬೫ ॥

ಏಕಂ ವೇದಂ ಚತುಷ್ಪಾದಂ ಚತುರ್ಧಾ ಪುನರೀಶ್ವರಃ ।
ಯಥಾ ವಿಭೇದ ಭಗವಾನ್ ವ್ಯಾಸಃ ಸರ್ವಾನ್ ಸ್ವಬುದ್ಧಿತಃ ॥
ತಸ್ಯ ಶಿಷ್ಯೈಃ ಪ್ರಶಿಷ್ಯೈಶ್ಚ ಶಾಖಾಭೇದಾಃ ಪುನಃ ಕೃತಾಃ ॥ ೧೬೬ ॥

ಪ್ರಯೋಗೈಃ ಷಡ್ಗುಣೇರ್ಯೈಶ್ಚ ಯಥಾ ಪೃಷ್ಟಃ ಸ್ವಯಂಭುವಾ ।
ಪೃಷ್ಟೇನ ಚಾನುಪೃಷ್ಟಾಸ್ತೇ ಮುನಯೋ ಧರ್ಮಕಾಂಕ್ಷಿಣಃ ॥
ದೇಶಂ ಪುಣ್ಯಮಭೀಪ್ಸಂತೋ ವಿಭುನಾ ತದ್ಧಿತೈಷಿಣಾ ॥ ೧೬೭ ॥

---

ಜ್ಞಾನಿಗಳೂ ಆದ ಶುಕ್ರಾಚಾರ್ಯರ ಜನನವೂ, ವಿಶ್ವಾಮಿತ್ರರು ಪರಾಶರರಿಗೆ ಮಾಡಿದ ಅಧಿಕವಾದ ದ್ವೇಷವೂ ಸಹ ವರ್ಣಿತವಾಗಿವೆ.

೧೬೫. ವಿಶ್ವಾಮಿತ್ರ ಸಂಹಾರಕ್ಕಾಗಿ, ವಸಿಷ್ಠರು ಅಗ್ನಿಯನ್ನು ವೃದ್ಧಿ ಪಡಿಸಿದರು. ಆದರೆ ವಿಶ್ವಾಮಿತ್ರ ಹಿತೈಷಿಯೂ, ಜ್ಞಾನಿಯೂ ಆದ ಕುಮಾರ ಸ್ವಾಮಿಯು ದೈವಸಹಾಯದಿಂದ ಸಂತಾನಾಭಿವೃದ್ಧಿಗೋಸ್ಕರ ಆ ಅಗ್ನಿಯನ್ನು ಚೂರ್ಣಮಾಡಿದನು.

೧೬೬. ನಾರಾಯಣ ಅಪರಾವತಾರವೂ, ಪೂಜ್ಯರೂ ಆದ ವ್ಯಾಸ ಮಹರ್ಷಿಗಳು ಅಖಂಡವಾದ ವೇದವನ್ನು ನಾಲ್ಕು ಪಾದಗಳುಳ್ಳದ್ದನ್ನಾಗಿಯೂ, ಅವುಗಳನ್ನು ಪುನಃ ನಾಲ್ಕು ವಿಭಾಗಗಳನ್ನಾಗಿಯೂ, ಸ್ವಬುದ್ಧಿಯಿಂದ ವಿಭಾಗಿಸಿ ಸಜ್ಜನರನ್ನು ಉದ್ಧಾರಮಾಡಿದರು. ಹಾಗೆಯೇ ಆ ವ್ಯಾಸರ ಶಿಷ್ಯ ಪ್ರಶಿಷ್ಯರೂ ಕೂಡ ಅವುಗಳನ್ನು ಅನೇಕ ವಿಭಾಗಗಳನ್ನಾಗಿ ಮಾಡಿದರು.

೧೬೭. ಧರ್ಮಕಾಂಕ್ಷಿಗಳಾದ ಮುನಿಗಳು ಆರು ಗುಣಗಳಿಂದ ಕೂಡಿರುವ ಪ್ರಯೋಗಕ್ಕನುಗುಣವಾದ ದೇಶವು ಯಾವುದೆಂದು ಬ್ರಹ್ಮನನ್ನು ಕೇಳಲಾಗಿ, ಅದಕ್ಕೆ ಅವನು ಪವಿತ್ರವಾದ ದೇಶವನ್ನು ಕೋರತಕ್ಕ ಮಹರ್ಷಿಗಳಿಗೆ ಇಂತೆಂದನು.

ಸುನಾಭಂ ದಿವ್ಯರೂಪಾಖ್ಯಂ ಸತ್ಯಾಂಗಂ ಶುಭವಿಕ್ರಮಂ ।
ಅನೋಪಮ್ಯಮಿದಂ ಚಕ್ರಂ ವರ್ತಮಾನಮತಂದ್ರಿತಾಃ ॥
ಪೃಷ್ಠತೋ ಯಾತ ನಿಯತಾಸ್ತತಃ ಪ್ರಾಪ್ಸ್ಯಥ ಯದ್ಧಿತಂ ॥ ೧೬೮ ॥

ಗಚ್ಛತೋ ಧರ್ಮಚಕ್ರಸ್ಯ ಯತ್ರ ನೇಮಿರ್ವಿಶೀರ್ಯತೇ ।
ಪುಣ್ಯಃ ಸದೇಶೋ ಮಂತವ್ಯ ಇತ್ಯುವಾಚ ತದಾ ಪ್ರಭುಂ ॥
ಉಕ್ತ್ವಾ ಚೈವಮೃಷೀನ್ ಬ್ರಹ್ಮಾ ಹ್ಯದೃಶ್ಯತ್ವಮಗಾತ್ಪುನಃ ॥ ೧೬೯ ॥

ಗಂಗಾ ಗರ್ಭಸಮಾಹಾರಂ ನೈಮಿಷೇಯತ್ವಮೇವ ಚ ।
ಈಜಿರೇ ಚೈವ ಸತ್ರೇಣ ಮುನಯೋ ನೈಮಿಷೇ ತದಾ ॥
ಮೃತೇ ಶರದ್ವತಿ ತಥಾ ತಸ್ಯ ಚೋತ್ಥಾಪನಂಕೃತಂ ॥ ೧೭೦ ॥

ಋಷಯೋ ನೈಮಿಷೇಯಾಸ್ತು ಶ್ರದ್ಧಯಾ ಪರಯಾ ಪುನಃ ।
ನಿಃಸೀಮಾಂ ಗಾಮಿಮಾಂ ಕೃತ್ಸ್ನಾಂ ಕೃತ್ವಾ ರಾಜಾನಮಾಹರನ್ ॥
ಯಥಾವಿಧಿ ಯಥಾಶಾಸ್ತ್ರಂ ತಮಾತಿಥ್ಯೈರಪೂಜಯನ್ ॥ ೧೭೧ ॥

---

೧೬೮-೧೬೯. ಎಲೈ ಮಹರ್ಷಿಗಳೇ ಸುಂದರವಾದ ರಂಧ್ರವೂ, ಸುರೂಪವೂ ಶುಭಾಂಗವೂ, ಶುಭಪರಾಕ್ರಮಿಯೂ, ಅಸದೃಶವೂ ಆಗಿ ತಿರುಗುತ್ತಿರುವ ಈ ಧರ್ಮ ಚಕ್ರವನ್ನು ನೀವು ಹಿಂಬಾಲಿಸಿ ಹೊರಡಿರಿ. ಹಾಗೆ ಹೋಗತಕ್ಕ ಧರ್ಮಚಕ್ರವು ಎಲ್ಲಿ ಪಟ್ಟೆಯು ಕಳಚಿ ನಿಲ್ಲುತ್ತದೆಯೋ, ಅದೇ ನಿಮ್ಮ ಯಾಗಕ್ಕೆ ಉತ್ತಮವಾದ ಪುಣ್ಯಕ್ಷೇತ್ರವೆಂದು ತಿಳಿಯಿರಿ ಎಂದು ಬ್ರಹ್ಮನು ಹೇಳಿ ಮಾಯವಾದನು.

೧೭೦. ಗಂಗಾದೇವಿಯ ಗರ್ಭೋತ್ಪತ್ತಿಯೂ, ನೈಮಿಷೇಯತ್ವವೂ, ಸಿದ್ಧ ವಾದ ಆ ನೈಮಿಷಾರಣ್ಯದಲ್ಲಿ ಮುನಿಗಳು ಸತ್ರಯಾಗವನ್ನು ಮಾಡಿದರು. ಆ ಸಮಯದಲ್ಲಿ ಶರದ್ವಂತನು ಮೃತನಾಗಲು ಮಹರ್ಷಿಗಳು ಅವನನ್ನು ಬದುಕಿಸಿದರು.

೧೭೧. ನೈಮಿಷಾರಣ್ಯವಾಸಿಗಳಾದ ಮುನಿಗಳು ಅಧಿಕವಾದ ಶ್ರದ್ಧೆಯಿಂದ ಕೂಡಿ ಆ ಅರಣ್ಯವನ್ನು ಅತ್ಯಂತವಾಗಿ ವಿಸ್ತರಿಸಿ ರಾಜನನ್ನು ಕರೆತಂದು ಬಹಳವಾಗಿ ಅವನನ್ನು ಉಪಚರಿಸಿದರು.

ಪ್ರೀತಂ ತಥಾ ಕೃತಾತಿಥ್ಯಂ ರಾಜಾನಂ ವಿಧಿವತ್ತಥಾ ।
ಅಂತರ್ಧಾನಗತಃ ಕ್ರೂರಃ ಸ್ವರ್ಭಾನುರಸುರೋಽ ಹರತ್ ॥ ೧೭೨ ॥

ಅನುಸಸ್ರುರ್ಹೃತಂ ಚಾಪಿ ನೃಪಮೈಡಂ ಯಥಾ ಪುರಾ ।
ಗಂಧರ್ವಸಹಿತಂ ದೃಷ್ಟ್ವಾ ಕಲಾಪಗ್ರಾಮವಾಸಿನಂ ॥ ೧೭೩ ॥

ಸನ್ನಿಪಾತಃ ಪುನಸ್ತಸ್ಯ ಯಥಾ ಯಜ್ಞೇ ಮಹರ್ಷಿಭಿಃ ।
ದೃಷ್ಟ್ವಾ ಹಿರಣ್ಮಯಂ ಸರ್ವಂ ಯಜ್ಞೇ ವಸ್ತು ಮಹಾತ್ಮನಾಂ ॥ ೧೭೪ ॥

ತದಾ ವೈ ನೈಮಿಷೇಯಾಣಾಂ ಸತ್ರೇ ದ್ವಾದಶವಾರ್ಷಿಕೇ ।
ಯಥಾ ವಿವಿಧಮಾನಸ್ತು ಐಡಃ ಸಂಸ್ಥಾಪಿತಸ್ತು ತೈಃ ॥ ೧೭೫ ॥

ಜನಯಿತ್ವಾ ತ್ವರಣ್ಯಾಂತೇ ಐಡಪುತ್ರಂ ಯಥಾಯುಷಂ ।
ಸಮಾಪಯಿತ್ವಾ ತತ್ಸತ್ರಮಾಯುಷಂ ಪರ್ಯುಪಾಸತೇ ॥ ೧೭೬ ॥

---

೧೭೨-೧೭೩. ಈ ರೀತಿಯಲ್ಲಿ ಮರ್ಯಾದೆಯನ್ನು ಹೊಂದಿ ಪ್ರೀತನಾಗಿರುವ ಆ ರಾಜನನ್ನು ಮಾಯಾವಿಯೂ, ಕ್ರೂರನೂ ಆದ ಸ್ವರ್ಭಾನುವೆಂಬ ಅಸುರನು ಅಪಹರಿಸಿದನು. ಆಗ ಪೂರ್ವದಲ್ಲಿ ಏಡಮಹಾರಾಜನನ್ನು ಅನುಸರಿಸಿದಂತೆ ಅವನನ್ನು ಆ ಋಷಿಗಳು ಹಿಂಬಾಲಿಸಿ ಕಲಾಪಗ್ರಾಮವಾಸಿಯೂ, ಗಂಧರ್ವ ಸಹಿತನೂ ಆದ ಆ ಅಸುರನನ್ನು ನೋಡಿದರು.

೧೭೪. ಆಗ ಮಹರ್ಷಿಗಳೆಲ್ಲರೂ ಯಾಗಶಾಲೆಯಲ್ಲಿ ಆ ಅಸುರನನ್ನು ಕೆಡವಿದರು. ಅವನ ಸಂಪರ್ಕದಿಂದ ಆ ಯಾಗಶಾಲೆಯ ಸರ್ವವಸ್ತುಗಳೂ ಸುವರ್ಣಮಯವಾದುವು.

೧೭೫. ಆಗ ದ್ವಾದಶವರ್ಷಗಳ ಕಾಲ ನಡೆಯಬೇಕಾದ ಸತ್ರಯಾಗದಲ್ಲಿ ನೆರೆದಿರುವ ಮಹರ್ಷಿಗಳಿಗೆ ಪರಸ್ಪರ ವಿವಾದವು ಸಂಭವಿಸಲು ಆ ಮಹರ್ಷಿಗಳು ಐಡರಾಜನನ್ನು ಒಮ್ಮತದಿಂದ ರಾಜನನ್ನಾಗಿ ಚುನಾಯಿಸಿದರು.

೧೭೬. ಅನಂತರ ಐಡನಿಗೆ ಆಯುರ್ನಾಮಕನಾದ ಪುತ್ರನು ಜನಿಸಲು, ಅವನ ಮೂಲಕ ಮಹರ್ಷಿಗಳು ಆ ಯಾಗವನ್ನು ನೆರವೇರಿಸಿ ಆ ರಾಜನನ್ನು ಮರ್ಯಾದಿಸಿದರು.

**ಏತತ್ಸರ್ವಂ ಯಥಾವ್ಯಕ್ತಂ ವ್ಯಾಖ್ಯಾತಂ ದ್ವಿಜಸತ್ತಮಾಃ ।**
**ಋಷೀಣಾಂ ಪರಮಂ ಚಾತ್ರ ಲೋಕತಂತ್ರಮನುತ್ತಮಂ ॥ ೧೭೭ ॥**

**ಬ್ರಹ್ಮಣಾ ಯತ್ಪುರಾ ಪ್ರೋಕ್ತಂ ಪುರಾಣಂ ಜ್ಞಾನಮುತ್ತಮಂ ।**
**ಅವತಾರಶ್ಚ ರುದ್ರಸ್ಯ ದ್ವಿಜಾನುಗ್ರಹಕಾರಣಾತ್ ॥ ೧೭೮ ॥**

**ತಥಾ ಪಾಶುಪತಾ ಯೋಗಾಃ ಸ್ಥಾನಾನಾಂಚೈವ ಕೀರ್ತನಂ ।**
**ಲಿಂಗೋದ್ಭವಸ್ಯ ದೇವಸ್ಯ ನೀಲಕಂಠತ್ವಮೇವ ಚ ॥ ೧೭೯ ॥**

**ಕಥ್ಯತೇ ಯತ್ರ ವಿಪ್ರಾಣಾಂ ವಾಯುನಾ ಬ್ರಹ್ಮವಾದಿನಾ ।**
**ಧನ್ಯಂ ಯಶಸ್ಯಮಾಯುಷ್ಯಂ ಪುಣ್ಯಂ ಪಾಪಪ್ರಣಾಶನಂ ॥**
**ಕೀರ್ತನಂ ಶ್ರವಣಂ ಚಾಸ್ಯ ಧಾರಣಂ ಚ ವಿಶೇಷತಃ ॥ ೧೮೦ ॥**

---

೧೭೭. ಎಲೈ ವಿಪ್ರೋತ್ತಮರೇ, ನಿಮಗಾಗಿ ಋಷಿಗಳು, ದೇವತೆಗಳು ಮತ್ತು ಲೋಕಗಳು ಇವುಗಳ ಅತ್ಯುತ್ತಮವಾದ ವೃತ್ತಾಂತಗಳೆಲ್ಲವನ್ನೂ ತಿಳಿಸಿರುತ್ತೇನೆ.

೧೭೮. ಪೂರ್ವದಲ್ಲಿ ಬ್ರಹ್ಮದೇವನು ಬ್ರಾಹ್ಮಣರಿಗೆ ಅನುಗ್ರಹವನ್ನುಂಟು ಮಾಡುವುದಕ್ಕೋಸ್ಕರ ಜ್ಞಾನಪ್ರದವೂ, ಅತ್ಯುತ್ತಮವೂ ಆದ ಈ ಪುರಾಣವನ್ನೂ ಮತ್ತು ರುದ್ರದೇವನ ಅವತಾರವನ್ನೂ ಕೂಡ ಸಾಂಗವಾಗಿ ನಿರೂಪಿಸಿದನು.

೧೭೯. ಹಾಗೆಯೇ ದೇವನಾದ ಪರಮೇಶ್ವರನ ಯೋಗಾಭ್ಯಾಸಕ್ರಮ, ಅದರ ಸ್ಥಾನ, ಲಿಂಗಪ್ರಾದುರ್ಭಾವ ಮತ್ತು ನೀಲಕಂಠನಾಗಲು ಕಾರಣ ಇವೆಲ್ಲ ವನ್ನೂ ವರ್ಣಿಸಿರುವೆನು.

೧೮೦. ಯಾವ ಪುರಾಣವನ್ನು ಬ್ರಹ್ಮಜ್ಞಾನಿಯಾದ ವಾಯುದೇವನು ಮಹಾತ್ಮರಿಗಾಗಿ ಅನುಗ್ರಹಪೂರ್ವಕ ಹೇಳಿದನೋ, ಅಂತಹ ಪುರಾಣದ ಶ್ರವಣ, ಮನನ, ಕೀರ್ತನಧಾರಣಾದಿಗಳಿಂದ ಯಶಸ್ಸು, ಆಯುಷ್ಯ, ಪುಣ್ಯ, ಪಾಪನಾಶನ ಇವೇ ಮೊದಲಾದ ಸಕಲಾಭೀಷ್ಟಗಳೂ ಪ್ರಾಪ್ತವಾಗುವುದರಲ್ಲಿ ಲೇಶಮಾತ್ರವೂ ಸಂಶಯವಿಲ್ಲ.

ಅನೇನ ಹಿ ಕ್ರಮೇಣೇದಂ ಪುರಾಣಂ ಸಂಪ್ರವಕ್ಷ್ಯತೇ ।
ಸುಖಮರ್ಥಃ ಸಮಾಸೇನ ಮಹಾನಪ್ಯುಪಲಭ್ಯತೇ ॥
ತಸ್ಮಾತ್ಕಿಂಚಿತ್ಸಮುದ್ದಿಶ್ಯ ಪಶ್ಚಾದ್ವಕ್ಷ್ಯಾಮಿ ವಿಸ್ತರಂ ॥ ೧೮೧ ॥

ಪಾದಮಾದ್ಯಮಿದಂ ಸಂಯಕ್ ಯೋಧೀಯೀತ ಜಿತೇಂದ್ರಿಯಃ ।
ತೇನಾಧೀತಂ ಪುರಾಣಂ ತತ್ ಸರ್ವಂ ನಾಸ್ತ್ಯತ್ರ ಸಂಶಯಃ ॥ ೧೮೨ ॥

ಯೋ ವಿದ್ಯಾಚ್ಚತುರೋ ವೇದಾನ್ ಸಾಂಗೋಪನಿಷದೋ ದ್ವಿಜಃ ।
ನ ಚೇತ್ಪುರಾಣಂ ಸಂವಿದ್ಯಾನ್ನೈವ ಸ ಸ್ಯಾದ್ವಿಚಕ್ಷಣಃ ॥ ೧೮೩ ॥

ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।
ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರತರಿಷ್ಯತಿ ॥ ೧೮೪ ॥

---

೧೮೧. ಇದೇ ರೀತಿಯಲ್ಲಿಯೇ ಈ ಮಹಾಪುರಾಣದ ಶ್ರವಣಕೀರ್ತನಾದಿಗಳಿಂದ ಐಹಿಕದಲ್ಲಿ ಮಹದೈಶ್ವರ್ಯವೇ ಮೊದಲಾದ ಸಕಲಾಭೀಷ್ಟಗಳೂ ಸಂಭವಿಸುವುವು. ಅಲ್ಲದೆ ಪಾರತ್ರಿಕದಲ್ಲಿಯೂ ಶಾಶ್ವತವಾದ ಮೋಕ್ಷಸುಖವೂ ಕೂಡ ಲಭಿಸುವುದು. ಈ ಪುರಾಣವನ್ನು ಮೊದಲು ಸಂಕ್ಷೇಪವಾಗಿ ಹೇಳಿ ನಂತರ ವಿಸ್ತಾರವಾಗಿ ನಿರೂಪಿಸುವೆನು.

೧೮೨. ಯಾವ ಮನುಷ್ಯನು ಜಿತೇಂದ್ರಿಯನಾಗಿ ಈ ಪುರಾಣದ ಮೊದಲನೆಯ ಪಾದವನ್ನು ಮನಃಪೂರ್ವಕವಾಗಿ ಪಠನಮಾಡುವನೋ ಅವನು ಈ ಮಹಾಪುರಾಣವನ್ನು ಸಂಪೂರ್ಣವಾಗಿ ಭಕ್ತಿಯಿಂದ ಪಠಿಸಿದರೆ ಯಾವ ಫಲವು ಲಭಿಸುವುದೋ ಅಂತಹ ಫಲವನ್ನು ಹೊಂದುವನು.

೧೮೩. ಯಾವ ಬ್ರಾಹ್ಮಣನು ವ್ಯಾಕರಣಾದಿ ಷಡಂಗಗಳ ಸಮೇತವಾಗಿ ನಾಲ್ಕು ವೇದಗಳನ್ನು ಓದಿದರೂ ಕೂಡ ಪುರಾಣಗಳನ್ನು ಓದಿ ಅವುಗಳ ಅರ್ಥಗಳನ್ನು ತಿಳಿಯಲಾರನೋ, ಅವನು ನಿಜವಾಗಿಯೂ ಜ್ಞಾನಿಯಾಗಲಾರನು.

೧೮೪. ಯಾವ ಬ್ರಾಹ್ಮಣನು ಜ್ಞಾನಿಯಾಗಲು ಬಯಸುವನೋ ಅವನು ಮೊದಲು ಇತಿಹಾಸಪುರಾಣಗಳನ್ನು ಅಭ್ಯಾಸಮಾಡಿ ತನ್ಮೂಲಕವಾಗಿ ವೇದಾರ್ಥಗಳನ್ನು ತಿಳಿಯಬೇಕು. ಹಾಗೆ ಪುರಾಣಾದಿಗಳನ್ನು ತಿಳಿಯದ ಅಲ್ಪಜ್ಞನಾದ ಮನುಷ್ಯನು ವೇದಗಳಿಗೆ ಅಪಾರ್ಥವನ್ನು ಮಾಡುವುದರಿಂದ ವೇದಗಳೂ ಸಹ ಅವನಿಗೆ ಹೆದರುತ್ತವೆ.

**ಅಭ್ಯಸನ್ನಿಮಮಧ್ಯಾಯಂ ಸಾಕ್ಷಾತ್ಪ್ರೋಕ್ತಂ ಸ್ವಯಂಭುವಾ ।**
**ಆಪದಂ ಪ್ರಾಪ್ಯ ಮುಚ್ಯೇತ ಯಥೇಷ್ಟಾಂ ಪ್ರಾಪ್ನುಯಾದ್ಗತಿಂ ॥ ೧೮೫ ॥**

**ಯಸ್ಮಾತ್ಪುರಾ ಹ್ಯನಿತೀದಂ ಪುರಾಣಂ ತೇನ ತತ್ಸ್ಮೃತಂ ।**
**ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಸಮುಚ್ಯತೇ ॥ ೧೮೬ ॥**

**ನಾರಾಯಣಃ ಸರ್ವಮಿದಂ ವಿಶ್ವಂ ವ್ಯಾಪ್ಯ ಪ್ರವರ್ತತೇ ।**
**ತಸ್ಯಾಪಿ ಜಗತಃಸ್ರಷ್ಟುಃ ಸ್ರಷ್ಟಾದೇವೋ ಮಹೇಶ್ವರಃ ॥ ೧೮೭ ॥**

**ಅತಶ್ಚ ಸಂಕ್ಷೇಪಮಿದಂ ಶೃಣುಧ್ವಂ ।**
**ಮಹೇಶ್ವರಃ ಸರ್ವಮಿದಂ ಪುರಾಣಂ ॥**
**ಸ ಸರ್ಗಕಾಲೇ ಚ ಕರೋತಿ ಸರ್ಗಾನ್ ।**
**ಸಂಹಾರಕಾಲೇ ಪುನರಾದದೀತ ॥ ೧೮೮ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ ಅನುಕ್ರಮಣಿಕಾ ನಾಮ ಪ್ರಥಮೋಽಧ್ಯಾಯಃ**

---

೧೮೫. ಯಾವ ಪುರುಷನು ಸಾಕ್ಷಾತ್ ಬ್ರಹ್ಮನಿಂದ ಹೇಳಲ್ಪಟ್ಟ ಜ್ಞಾನ ದಾಯಕವಾದ ಈ ಪುರಾಣದ ಪ್ರಥಮಾಧ್ಯಾಯವನ್ನು ಅಭ್ಯಾಸಮಾಡುತ್ತಾನೆಯೋ ಅವನು ವಿಪತ್ತನ್ನು ಹೊಂದಿದರೂ ಕೂಡ ಅದರಿಂದ ಮುಕ್ತನಾಗಿ ಉತ್ತಮವಾದ ಸದ್ಗತಿಯನ್ನು ಹೊಂದುವನು.

೧೮೬. ಯಾವ ಕಾರಣದಿಂದ ಪೂರ್ವದಲ್ಲಿಯೇ (ಅನಿತಿ) ಜ್ಞಾನವನ್ನು ಕೊಡತಕ್ಕದ್ದೆಂದು ಅವಯವಾರ್ಥವನ್ನು ಯಾವನು ತಿಳಿಯುತ್ತಾನೆಯೋ ಅವನು ಸರ್ವಪಾಪಗಳಿಂದಲೂ ವಿಮುಕ್ತನಾಗುವನು.

೧೮೭. ಶ್ರೀಮನ್ನಾರಾಯಣನು ಈ ಸಕಲ ಜಗತ್ತನ್ನೂ ವ್ಯಾಪಿಸಿರುತ್ತಾನೆ. ಜಗತ್ಕರ್ತನಾದ ಅವನಿಗೂ ಸಹ ಸ್ವಾಮಿಯಾದ ಮಹೇಶ್ವರನೇ ಸೃಷ್ಟಿಕರ್ತನಾಗಿರುವನು.

೧೮೮. ಆದುದರಿಂದ ಎಲೈ ಮಹರ್ಷಿಗಳೇ, ಈ ಪುರಾಣವನ್ನು ಸಂಕ್ಷೇಪವಾಗಿ ತಿಳಿಸುವೆನು ಕೇಳಿ. ಮಹದೈಶ್ವರ್ಯಸಂಪನ್ನನಾದ ಆ ಭಗವಂತನು ಸೃಷ್ಟಿಕಾಲದಲ್ಲಿ ಅವುಗಳನ್ನು ಸೃಷ್ಟಿಸಿ ಸಂಹಾರಕಾಲದಲ್ಲಿ ಅವುಗಳನ್ನು ಉಪಸಂಹಾರಮಾಡುವನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ಅನುಕ್ರಮಣಿಕೆಯೆಂಬ ಒಂದನೆಯ ಅಧ್ಯಾಯವು ಸಮಾಪ್ತವಾದುದು.

## ಪ್ರಥಮಾಧ್ಯಾಯದ ಸಾರಾಂಶ

**ಈ** ಪ್ರಥಮಾಧ್ಯಾಯವು ಅನುಕ್ರಮಣಿಕಾಧ್ಯಾಯವಾಗಿದೆ, ಇದನ್ನು ಸೂಚನಾಧ್ಯಾಯವೆನ್ನಬಹುದು, ಹೇಗೆಂದರೆ, ಸೂಚನೆಯ ಪದ್ಯವು ಒಂದು ಅಧ್ಯಾಯದ ಸಂಪೂರ್ಣಾರ್ಥವನ್ನು ಹೇಗೆ ಸೂಚಿಸುತ್ತದೆಯೋ, ಹಾಗೆಯೇ ಈ ಮೊದಲನೆಯ ಅಧ್ಯಾಯವೂ ಸಹ, ಸಂಪೂರ್ಣವಾದ ಶ್ರೀಮದ್ವಾಯುಮಹಾಪುರಾಣದ ಸಮಸ್ತಗಳಾದ ಅಧ್ಯಾಯಾರ್ಥಗಳನ್ನೂ ಸಂಕ್ಷೇಪವಾಗಿ ತಿಳಿಸುತ್ತದೆ. ಆದುದರಿಂದ ಮೊದಲನೆಯ ಈ ಒಂದು ಅಧ್ಯಾಯವನ್ನು ಯಾವನು ಭಕ್ತಿಯಿಂದ ಪಠಿಸುವನೋ ಅವನಿಗೆ ಸಮಗ್ರಪುರಾಣವನ್ನು ಪಠಿಸಿದ ಫಲವು ಬರುವುದೆಂದು ಈ ಅಧ್ಯಾಯದ ಕೊನೆಯಲ್ಲಿ ನಿರೂಪಿತವಾಗಿದೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀ ಮ ದ್ವಾ ಯು ಪು ರಾ ಣ ಂ

## ॥ ದ್ವಿತೀಯೋಽಧ್ಯಾಯಃ ॥

**॥ ಶುಕ ಉವಾಚ ॥**

**ಪ್ರತ್ಯಬ್ರುರ್ವ ಪುನಃ ಸೂತಮೃಷಯಸ್ತೇ ತಪೋಧನಾಃ ।**
**ಕುತ್ರ ಸತ್ರಂ ಸಮಭವತ್ತೇಷಾಮದ್ಭುತಕರ್ಮಣಾಂ ॥ ೧ ॥**

**ಕಿಯಂತಂ ಚೈವ ತತ್ಕಾಲಂ ಕಥಂ ಚ ಸಮವರ್ತತ ।**
**ಆಚಚಕ್ಷ ಪುರಾಣಂ ಚ ಕಥಂ ತೇಭ್ಯಃ ಪ್ರಭಂಜನಃ ॥ ೨ ॥**

**ಆಚಕ್ಷ್ವ ವಿಸ್ತರೇಣೇದಂ ಪರಂ ಕೌತೂಹಲಂ ಹಿ ನಃ ।**
**ಇತಿ ಸಂನ್ನೋದಿತಃ ಸೂತಃ ಪ್ರತ್ಯುವಾಚ ಶುಭಂ ವಚಃ ॥ ೩ ॥**

---

೧-೨. ಶುಕನು ಹೇಳಿದನು :—ತಪೋಧನರಾದ ಆ ಮಹರ್ಷಿಗಳು ಅದ್ಭುತ ಕರ್ಮಗಳುಳ್ಳ ಮಹಾತ್ಮರ ಸತ್ರಯಾಗವು ಯಾವ ಸ್ಥಳದಲ್ಲಿ, ಎಷ್ಟು ಕಾಲದ ವರೆಗೂ, ಹೇಗೆ ನಡೆಯಿತು. ಆಗ ವಾಯುದೇವನು ಅವರಿಗೆ ಈ ಪುರಾಣ ವನ್ನು ಏಕೆ ಹೇಳಿದನು ? ಎಂಬೀ ವಿಷಯಗಳನ್ನು ತಿಳಿಸಬೇಕೆಂದು ಸೂತ ಪುರಾಣೀಕರನ್ನು ಪ್ರಾರ್ಥಿಸಿಕೊಂಡರು.

೩. ಎಲೈ ಸೂತರೇ, ನಮಗೆ ಈ ವಿಷಯಗಳನ್ನು ಕೇಳಲು ಬಹಳವಾಗಿ ಕುತೂಹಲವಿರುವುದರಿಂದ, ಇದನ್ನು ವಿಸ್ತಾರವಾಗಿ ನಿರೂಪಿಸಬೇಕೆಂದು ಮುನಿಗಳು ಪ್ರಾರ್ಥಿಸಲು ಸೂತರು ಈ ಮಂಗಳಕರವಾದ ವಿಷಯಗಳನ್ನು ಹೇಳಿದರು.

ಶೃಣುಧ್ವಂ ಯತ್ರ ತೇ ಧೀರಾಃ ಈಜಿರೇ ಸತ್ರಮುತ್ತಮಂ ।
ಯಾವಂತಂಚಾಭವತ್ಕಾಲಂ ಯಥಾ ಚ ಸಮವರ್ತತ ॥ ೪ ॥

ಸಿಸೃಕ್ಷಮಾಣಾ ವಿಶ್ವಂ ಹಿ ಯತ್ರ ವಿಶ್ವಸೃಜಃ ಪುರಾ ।
ಸತ್ರಂ ಹಿ ಈಜಿರೇ ಪುಣ್ಯಂ ಸಹಸ್ರಂ ಪರಿವತ್ಸರಾನ್ ॥ ೫ ॥

ತಪೋ ಗೃಹಪತಿರ್ಯತ್ರ ಬ್ರಹ್ಮಾ ಬ್ರಹ್ಮಾಭವತ್ಸ್ವಯಂ ।
ಇಲಾಯಾ ಯತ್ರ ಪತ್ನೀತ್ವಂ ಶಾಮಿತ್ರಂ ಯತ್ರ ಬುದ್ಧಿಮಾನ್ ।
ಮೃತ್ಯುಶ್ಚಕ್ರೇ ಮಹಾತೇಜಾಸ್ತಸ್ಮಿನ್ ಸತ್ರೇ ಮಹಾತ್ಮನಾಂ ॥ ೬ ॥

ವಿಬುಧಾ ಈಜಿರೇ ತತ್ರ ಸಹಸ್ರಂ ಪ್ರತಿವತ್ಸರಾನ್ ।
ಭ್ರಮತೋ ಧರ್ಮಚಕ್ರಸ್ಯ ಯತ್ರ ನೇಮಿರಶೀರ್ಯತ ॥
ಕರ್ಮಣಾ ತೇನ ವಿಖ್ಯಾತಂ ನೈಮಿಷಂ ಮುನಿಪೂಜಿತಂ ॥ ೭ ॥

---

೪. ಎಲೈ ಮುನಿಗಳಿರಾ, ಧೀರರಾದ ಆ ಮಹರ್ಷಿಗಳು ಸರ್ವೋತ್ತಮವಾದ ಆ ಸತ್ರಯಾಗವನ್ನು ಎಷ್ಟುಕಾಲ, ಎಲ್ಲಿ, ಹೇಗೆ ಮಾಡಿದರೆಂಬುದನ್ನು ನಿಮಗಾಗಿ ತಿಳಿಸುವೆನು ಕೇಳಿರೆಂದು ಸೂತರು ಹೇಳಿದರು.

೫. ಪೂರ್ವದಲ್ಲಿ ಸೃಷ್ಟಿಕರ್ತೃಗಳಾದ ಬ್ರಹ್ಮಾದಿ ದೇವತೆಗಳು ಜಗತ್ತನ್ನು ಸೃಷ್ಟಿಸಲಿಚ್ಛೆಯುಳ್ಳವರಾಗಿ ಎಲ್ಲಿ ಸಹಸ್ರ ವರ್ಷಗಳ ಕಾಲ ಸತ್ರಯಾಗವನ್ನು ಮಾಡಿದರೋ?

೬. ಯಾವ ಯಾಗದಲ್ಲಿ ತಪಸ್ಸು ಯಜಮಾನನೂ, ಬ್ರಹ್ಮನು ಬ್ರಹ್ಮಸ್ಥಾನವನ್ನು ಪಡೆದವನೂ, ಭೂಮಾತೆಯು ಯಜಮಾನಿಯೂ, ಜ್ಞಾನಿಗಳು ಯಾಗಸಾಮಗ್ರಿಗಳೂ ಆಗಿ ಇದ್ದರೋ ಅಲ್ಲಿ, ಮಹಾತೇಜಸ್ವಿಯಾದ ಯಮದೇವನು, ಮಹಾತ್ಮರ ಸತ್ರಯಾಗವನ್ನು ಮಾಡಿದನು.

೭. ಸಂಚರಿಸುತ್ತಿರುವ ಧರ್ಮಚಕ್ರದ ಪಟ್ಟಿಯು ಯಾವ ಸ್ಥಳದಲ್ಲಿ ಕಳಚಿ ಬಿದ್ದಿತೋ, ಅಂತಹ ಜಾಗದಲ್ಲಿ ದೇವತೆಗಳು ಸಹಸ್ರವರ್ಷಗಳ ಕಾಲ ಯಾಗವನ್ನು ಮಾಡಿದರು. ಆ ಚಕ್ರದ ಪಟ್ಟಿಯು ಎಲ್ಲಿ ಶೀರ್ಣವಾಗಿ ಬಿದ್ದಿತೋ, ಆ ಪ್ರದೇಶವು ನೈಮಿಷಾರಣ್ಯವೆಂದು ಪ್ರಸಿದ್ಧಿಹೊಂದಿದೆ.

ಯತ್ರ ಸಾ ಗೋಮತೀ ಪುಣ್ಯಾ ಸಿದ್ಧಚಾರಣಸೇವಿತಾ ।
ರೋಹಿಣೀ ಸುಷುವೇ ತತ್ರ ತತಃ ಸೋಽನ್ಯೋಽಭವತ್ ಸುತಃ ॥ ೮ ॥

ಶಕ್ತಿರ್ಜ್ಯೇಷ್ಠಃ ಸಮಭವದ್ವಸಿಷ್ಠಸ್ಯ ಮಹಾತ್ಮನಃ ।
ಅರುಂಧತ್ಯಾಃ ಸುತಾ ಯತ್ರ ಶತಮುತ್ತಮತೇಜಸಃ ॥ ೯ ॥

ಕಲ್ಮಾಷಪಾದೊ ನೃಪತಿಃ ಯತ್ರ ಶಪ್ತಶ್ಚ ಶಕ್ತಿನಾ ।
ಯತ್ರ ವೈರಂ ಸಮಭವದ್ವಿಶ್ವಾಮಿತ್ರ ವಸಿಷ್ಠಯೋಃ ॥ ೧೦ ॥

ಅದೃಶ್ಯಂತ್ಯಾಂ ಸಮಭವನ್ಮುನಿರ್ಯತ್ರ ಪರಾಶರಃ ।
ಪರಾಭವೋ ವಸಿಷ್ಠಸ್ಯ ಯಸ್ಮಿನ್ ಜಾತೇಽಪ್ಯವರ್ತತ ॥ ೧೧ ॥

ತತ್ರ ತೇ ಈಜಿರೇ ಸತ್ರಂ ನೈಮಿಷೇ ಬ್ರಹ್ಮವಾದಿನಃ ।
ನೈಮಿಷೇ ಈಜಿರೇ ಯತ್ರ ನೈಮಿಷೇಯಾಸ್ತತಃ ಸ್ಮೃತಾಃ ॥ ೧೨ ॥

---

೮. ಯಾವ ಸ್ಥಳದಲ್ಲಿ ಪವಿತ್ರವೂ, ಸಿದ್ಧಚಾರಣಸೇವಿತವೂ, ಆದ ಗೋಮತೀ-ಎಂಬ ನದಿಯು ಹರಿಯುತ್ತಿರುವುದೋ, ಅಲ್ಲಿ ರೋಹಿಣೀ ದೇವಿಯು ಸೌಮ್ಯನೆಂಬಪುತ್ರನನ್ನು ಪಡೆದಳು.

೯. ಯಾವ ಸ್ಥಳದಲ್ಲಿ ಮಹಾತ್ಮರಾದ ವಸಿಷ್ಠರಿಗೆ ಅರುಂಧತೀ ದೇವಿಯಲ್ಲಿ ಮಹಾತೇಜಸ್ವಿಗಳಾದ ನೂರು ಮಕ್ಕಳು ಜನಿಸಿದರೋ ಮತ್ತು ಅವರಲ್ಲಿ ಶಕ್ತಿಯೆಂಬುವನು ಹಿರಿಯ ಮಗನಾಗಿದ್ದನೋ,

೧೦. ಯಾವ ಸ್ಥಳದಲ್ಲಿ ಶಕ್ತಿಯೆಂಬುವನಿಂದ ಕಲ್ಮಾಷಪಾದ ರಾಜನಿಗೆ ಶಾಪವೂ ವಿಶ್ವಾಮಿತ್ರ ವಶಿಷ್ಠರಿಗೆ ಕಲಹವೂ ಜನಿಸಿತೋ,

೧೧. ಯಾವ ಸ್ಥಳದಲ್ಲಿ ಅದೃಶ್ಯಂತೀ ಎಂಬುವಳಲ್ಲಿ ಪರಾಶರರಂತಹ ಮುನಿಗಳು ಜನಿಸಿದರೂ ವಸಿಷ್ಠರ ಪರಾಭವವು ಪರಿಹಾರವಾಗಲಿಲ್ಲವೋ,

೧೨. ಅಂತಹ ನೈಮಿಷಾರಣ್ಯದಲ್ಲಿ ಬ್ರಹ್ಮಜ್ಞಾನಿಗಳಾದ ಮುನಿಗಳು ಬಹುಕಾಲಿಕವಾದ ಸತ್ರಯಾಗವನ್ನು ಮಾಡಿದರು. ಆದರಿಂದ ಆ ಮುನಿಗಳಿಗೆ ನೈಮಿಷೇಯರೆಂಬ ನಾಮವು ಪ್ರಾಪ್ತವಾಯಿತು.

**ತತ್ಸತ್ರಮಭವತ್ತೇಷಾಂ ಸಮಂದ್ವಾದಶ ಧೀಮತಾಂ ।**
**ಪುರೂರವಸಿ ವಿಕ್ರಾಂತೇ ಪ್ರಶಾಸತಿ ವಸುಂಧರಾಂ ॥ ೧೩ ॥**

**ಅಷ್ಟಾದಶ ಸಮುದ್ರಸ್ಯ ದ್ವೀಪಾನಶ್ನನ್ ಪುರೂರವಾಃ ।**
**ತುತೋಷ ನೈವ ರತ್ನಾನಾಂ ಲೋಭಾದಿತಿ ಹಿ ನಃ ಶ್ರುತಂ ॥ ೧೪ ॥**

**ಊರ್ವಶೀ ಚಕಮೇ ಯಂ ಚ ದೇವಹೂತಿಪ್ರಚೋದಿತಾ ।**
**ಆಜಹಾರ ಚ ತತ್ಸತ್ರಂ ಸ್ವರ್ವೇಶ್ಯಾ ಸಹ ಸಂಗತಃ ॥ ೧೫ ॥**

**ತಸ್ಮಿನ್ನರಪತೌ ಸತ್ರಂ ನೈಮಿಷೇಯಾಃ ಪ್ರಚಕ್ರಿರೇ ।**
**ಯಂ ಗರ್ಭೇ ಸುಷುವೇ ಗಂಗಾ ಪಾವಕಾದ್ದೀಪ್ತತೇಜಸಂ ॥**
**ತದುಲ್ಬಂ ಪರ್ವತೇ ನ್ಯಸ್ತಂ ಹಿರಣ್ಯಂ ಪ್ರತ್ಯಪದ್ಯತ ॥ ೧೬ ॥**

---

೧೩. ಪುರೂರವಸ್ಸು ಎಂಬ ಮಹಾರಾಜನು ಬಹಳ ಪರಾಕ್ರಮಿಯಾಗಿ ಈ ಭೂಮಿಯನ್ನು ಆಳುತ್ತಿರಲಾಗಿ ನೈಮಿಷಾರಣ್ಯದಲ್ಲಿ ಜ್ಞಾನಿಗಳಾದ ಮಹರ್ಷಿಗಳು ಸತ್ರಯಾಗವನ್ನು ನಡೆಸಿದರು.

೧೪. ಆ ಪುರೂರವಸ್ಸು ಎಂಬ ರಾಜನು ಹದಿನೆಂಟು ಸಮುದ್ರಗಳಿಂದ ಕೂಡಿದ ದ್ವೀಪಗಳನ್ನು ಆಳುತ್ತಿದ್ದರೂ ರತ್ನಗಳ ಲೋಭದಿಂದ ತೃಪ್ತನಾಗಿರಲಿಲ್ಲವೆಂದು ನಮಗೆ ಶ್ರುತವಾಗಿದೆ.

೧೫. ದೇವಹೂತಿಯಿಂದ ಪ್ರೇರಿತಳಾದ ಊರ್ವಶಿಯು ಯಾರನ್ನು (ವರಿಸಿದಳೋ) ಕೋರಿದಳೋ ಅಂತಹ ಪುರೂರವ ರಾಜನು ಆ ಊರ್ವಶಿಯೊಡನೆ ಆ ಸತ್ರಯಾಗವನ್ನು ಮಾಡಿದನು.

೧೬. ಆ ರಾಜನು ಭೂಮಿಯನ್ನು ಆಳುತ್ತಿರಲಾಗಿ ಮುನಿಗಳು ಸತ್ರಯಾಗವನ್ನು ಪ್ರಾರಂಭಮಾಡಿದರು. ಆಗ (ಯಜ್ಞಪುರುಷನಿಂದ) ಅಗ್ನಿಯಿಂದ ಗಂಗಾದೇವಿಯು ದಿವ್ಯ ತೇಜಸ್ಸುಳ್ಳ ಗರ್ಭವನ್ನು ಹೆತ್ತಳು. ಆ ಗರ್ಭಾವೃತವಾದ ಚರ್ಮದ ಚೀಲವನ್ನು ಪರ್ವತದಲ್ಲಿಡಲು ಅದು ಸುವರ್ಣಮಯವಾಯಿತು.

**ಹಿರಣ್ಮಯಂ ತತಶ್ಚಕ್ರೇ ಯಜ್ಞವಾಟಂ ಮಹಾತ್ಮನಾಂ ।**
**ವಿಶ್ವಕರ್ಮಾ ಸ್ವಯಂ ದೇವೋ ಭಗವಾನ್ ಲೋಕಪಾವನಂ ॥ ೧೭ ॥**

**ಬೃಹಸ್ಪತಿಸ್ತತಸ್ತತ್ರ ತೇಷಾಮಮಿತತೇಜಸಾಂ ।**
**ಐಲಃಪುರೂರವಾ ಭೇಜೇ ತಂ ದೇಶಂ ಮೃಗಯಾ ಚರನ್ ॥ ೧೮ ॥**

**ತಂ ದೃಷ್ಟ್ವಾ ಮಹದಾಶ್ಚರ್ಯಂ ಯಜ್ಞವಾಟಂ ಹಿರಣ್ಮಯಂ ।**
**ಲೋಭೇನ ಹತವಿಜ್ಞಾನಸ್ತದಾದಾತುಂ ಪ್ರಚಕ್ರಮೇ ॥ ೧೯ ॥**

**ನೈಮಿಷೇಯಾಸ್ತತಸ್ತಸ್ಯ ಚಕ್ರುಃಥುರ್ನೃಪತೇ ಭೃಶಂ ।**
**ನಿಜಘ್ನುಶ್ಚಾಪಿ ಸಂಕ್ರುದ್ಧಾಃ ಕುಶವಜ್ರೈರ್ಮನೀಷಿಣಃ ॥ ೨೦ ॥**

**ತತೋ ನಿಶಾಂತೇ ರಾಜಾನಂ ಮುನಯೋ ದೈವನೋದಿತಾಃ ।**
**ಕುಶವಜ್ರೈರ್ವಿನಿಷ್ಪಿಷ್ಟಃ ಸ ರಾಜಾ ವ್ಯಜಹಾತ್ತನುಂ ॥**
**ಔರ್ವಶೇಯಂ ತತಸ್ತಸ್ಯ ಪುತ್ರಂ ಚಕ್ರುರ್ನೃಪಂ ಭುವಿ ॥ ೨೧ ॥**

---

೧೭. ಅನಂತರ ಪ್ರಪಂಚದ ಸೃಷ್ಟಿಕರ್ತನಾದ ಶ್ರೀ ಭಗವಂತನು ತಾನೇ ಮಹಾತ್ಮರಾದ ಮುನಿಗಳ ಲೋಕಪವಿತ್ರವಾದ ಯಾಗಶಾಲೆಯನ್ನು ಸುವರ್ಣ ಮಯವನ್ನಾಗಿ ಮಾಡಿದನು.

೧೮. ಅಪರಿಮಿತ ತೇಜಸ್ವಿಗಳಾದ ಮುನಿಗಳ ಮಧ್ಯದಲ್ಲಿ ಬೃಹಸ್ಪತಿಗಳಿರ ಲಾಗಿ ಪುರೂರವ ನಾಮಕವಾದ ಐಲರಾಜನು ಬೇಟೆಯಾಡುತ್ತಾ ಆ ಸ್ಥಳಕ್ಕೆ ಬಂದನು.

೧೯. ಮಹದಾಶ್ಚರ್ಯಕರವೂ ಸುವರ್ಣಮಯವೂ ಆದ ಯಾಗಶಾಲೆ ಯನ್ನು ನೋಡಿ ಲೋಭದಿಂದ ವಿವೇಕಶೂನ್ಯನಾಗಿ ಅದನ್ನು ಅಪಹರಿಸಲು ಪ್ರಯತ್ನಿಸಿದನು.

೨೦-೨೧. ಅನಂತರ ಆ ಮಹರ್ಷಿಗಳು ರಾಜನ ಮೇಲೆ ಸಿಟ್ಟಾಗಿ ವಜ್ರಾ ಯುಧದಂತಿರುವ ದರ್ಭೆಗಳಿಂದ ಅವನನ್ನು ಹೊಡೆದರು. ಹೀಗೆ ಹೋರಾಟವಾಗಲು ದೈವಪ್ರೇರಿತರಾದ ಮುನಿಗಳು ವಜ್ರಾಯುಧಕ್ಕೆ ಸಮವಾದ ದರ್ಭೆಗಳ ಹೊಡೆತ ದಿಂದ ಕೆಡಹಿ ಬೆಳಗಿನ ಜಾವದಲ್ಲಿ ಅವನನ್ನು ಕೊಂದರು. ಹೀಗೆ ಆ ರಾಜನು ಶರೀರವನ್ನು ಬಿಡಲಾಗಿ ಅವನ ಮಗನೂ ಊರ್ವಶೀ ಸಂಭವನೂ ಆದ ಆಯು ಯೆಂಬವನನ್ನು ರಾಜನನ್ನಾಗಿ ಮಾಡಿದರು.

ನಹುಷಸ್ಯ ಮಹಾತ್ಮಾನಂ ಪಿತರಂ ಯಂ ಪ್ರಚಕ್ಷತೇ ।
ಸ ತೇಷು ವರ್ತತೇಸಮ್ಯಗ್ಧರ್ಮಶೀಲೋ ಮಹೀಪತಿಃ ॥
ಆಯುರಾರೋಗ್ಯಮತ್ಯುಗ್ರಂ ತಸ್ಮಿನ್ ಸ ನರಸತ್ತಮಃ ॥ ೨೨ ॥

ಸಾಂತಯಿತ್ವಾ ಚ ರಾಜಾನಂ ತತೋ ಬ್ರಹ್ಮವಿದಾಂ ವರಾಃ ।
ಸತ್ರಮಾರೇಭಿರೇ ಕರ್ತುಂ ಯಥಾವದ್ಧರ್ಮಭೂತಯೇ ॥ ೨೩ ॥

ಬಭೂವ ಸತ್ರಂ ತತ್ತೇಷಾಂ ಬಹ್ವಾಶ್ಚರ್ಯಂ ಮಹಾತ್ಮನಾಂ ।
ವಿಶ್ವಂ ಸೃಸಕ್ಷಮಾಣಾನಾಂ ಪುರಾ ವಿಶ್ವಸೃಜಾಮಿವ ॥ ೨೪ ॥

ವೈಖಾನಸೈಃ ಪ್ರಿಯಸಖೈರ್ವಾಲಖಿಲ್ಯೈರ್ಮರೀಚಕೈಃ ।
ಅನ್ಯೈಶ್ಚ ಮುನಿಭಿರ್ಜುಷ್ಟಂ ಸೂರ್ಯವೈಶ್ವಾನರಪ್ರಭೈಃ ॥ ೨೫ ॥

---

೨೨. ಆ ರಾಜನು ಮಹಾತ್ಮನಾದ ನಹುಷ ಮಹಾರಾಜನ ತಂದೆಯೆಂದು ಪ್ರಖ್ಯಾತನಾಗಿ ಧರ್ಮದೃಷ್ಟಿಯಿಂದ ಋಷಿಗಳಲ್ಲಿ ನಮ್ರನಾಗಿ ರಾಜ್ಯವನ್ನು ಪಾಲಿಸಲಾಗಿ ದೇಶವು ಆಯುರಾರೋಗ್ಯಸಂಪನ್ನವಾಯಿತು.

೨೩. ಅನಂತರ ಮಹಾಜ್ಞಾನಿಗಳಾದ ಮುನಿಗಳು ಪಿತೃವಧೆಯಿಂದ ಖಿನ್ನನಾದ ರಾಜನನ್ನು ಸಮಾಧಾನಮಾಡಿ ಧರ್ಮಸ್ಥಾಪನೆಗಾಗಿ ಯಾಗವನ್ನಾರಂಭಿಸಿದರು.

೨೪. ಮಹಾತ್ಮರು ಮಾಡಿದ ಆ ಯಾಗವು ಲೋಕಗಳನ್ನು ಸೃಷ್ಟಿಸಲಿಚ್ಛೆಯುಳ್ಳ ಬ್ರಹ್ಮಾದಿದೇವತೆಗಳು ಪೂರ್ವದಲ್ಲಿ ಮಾಡಿದ ಯಾಗದಂತೆ ಅತ್ಯಾಶ್ಚರ್ಯಕರವಾಗಿಯೂ ಲೋಕಮಾನ್ಯವಾಗಿಯೂ ಇತ್ತು.

೨೫. ಪ್ರಿಯ ಮಿತ್ರರಿಂದಸಹಿಕರೂ ಸೂರ್ಯಾಗ್ನಿಗಳಿಗೆ ಸಮರೂ ತೇಜಸ್ವಿಗಳೂ ಆದ ವೈಖಾನಸರು ವಾಲಖಿಲ್ಯರು ಮರೀಚಕರು ಇವರೇ ಮೊದಲಾದ ಮುನಿಗಳಿಂದ ಆ ಯಾಗಮಂಟಪವು ಅಲಂಕೃತವಾಗಿತ್ತು.

ಪಿತೃದೇವಾಪ್ಸರಃಸಿದ್ಧೈರ್ಗಂಧರ್ವೋರಗಚಾರಣೈಃ ।
ಸಂಭಾರೈಸ್ತು ಶುಭೈರ್ಜುಷ್ಟಂ ತೈರೇವೇಂದ್ರಸದೋ ಯಥಾ ॥ ೨೬ ॥

ಸ್ತೋತ್ರಸತ್ರಗೃಹೈರ್ದೇವಾನ್ ಪಿತೄನ್ ಪಿತ್ರ್ಯೈಶ್ಚ ಕರ್ಮಭಿಃ ।
ಆನರ್ಚುಶ್ಚ ಯಥಾ ಜಾತಿ ಗಂಧರ್ವಾದೀನ್ ಯಥಾವಿಧಿ ॥ ೨೭ ॥

ಆರಾಧಯಿತುಮಿಚ್ಛಂತಸ್ತತಃ ಕರ್ಮಾಂತರೇಷ್ವಥ ।
ಜಗುಃ ಸಾಮಾನಿ ಗಂಧರ್ವಾ ನನೃತುಶ್ಚಾಪ್ಸರೋ ಗಣಾಃ ॥ ೨೮ ॥

ವ್ಯಾಜಹ್ರುರ್ಮುನಯೋ ವಾಚಂ ಚಿತ್ರಾಕ್ಷರಪದಾಂ ಶುಭಾಂ ।
ಮಂತ್ರಾದಿ ತತ್ತ್ವ ವಿದ್ವಾಂಸೋ ಜಗದುಶ್ಚ ಪರಸ್ಪರಂ ॥ ೨೯ ॥

---

೨೬. ಇಂದ್ರಲೋಕದಲ್ಲಿ ದೇವೇಂದ್ರನ ಸಭೆಯಂತೆ ಪಿತೃಗಳು ದೇವತೆಗಳು ಅಪ್ಸರಸ್ತ್ರೀಯರು, ಸಿದ್ಧರು, ಗಂಧರ್ವರು, ಸರ್ಪರು, ಚಾರಣರು ಇವರೇ ಮೊದಲಾದವರಿಂದಲೂ ಸಕಲ ಸಾಹಿತ್ಯದಿಂದಲೂ ಪೂರ್ಣವಾದ ಆ ಸತ್ರಯಾಗವು ವಿಶ್ವಮೋಹಕರವಾಗಿತ್ತು.

೨೭. ಅಲ್ಲಿ ಮುನಿಗಳು ಸ್ತೋತ್ರಮಾಡತಕ್ಕ ಮನೆ ಸತ್ರಯಾಗ ನಡೆಯತಕ್ಕ ಗೃಹ ಇವೇ ಮೊದಲಾದವುಗಳಿಂದ ದೇವತೆಗಳನ್ನೂ ಅವರ ಜಾತಿ ಮತ ಕುಲಾನುಸಾರವಾಗಿ ಯೋಗ್ಯತಾನುಗುಣವಾಗಿ ಪಿತೃಗಳನ್ನೂ ಗಂಧರ್ವಾದಿಗಳನ್ನೂ ಪೂಜೆಯನ್ನು ಮಾಡಿ ಸಂತೋಷಪಡಿಸಿದರು.

೨೮. ಬೇರೆ ರೀತಿಗಳಿಂದ ಸರ್ವರಿಗೂ ಸಂತೋಷಮಾಡುವುದಕ್ಕಾಗಿ ಗಂಧರ್ವರು ಗಾನವನ್ನೂ, ಅಪ್ಸರಸ್ತ್ರೀಯರು ನರ್ತನವನ್ನೂ ಮಾಡಿದರು.

೨೯. ಮಹರ್ಷಿಗಳು ವಿಚಿತ್ರವಾದ ಅಕ್ಷರ ಪದ ಇವುಗಳಿಂದ ಮಂಗಳದಾಯಕವಾದ ಭಾಷಣಮಾಡಿದರು. ಮಂತ್ರಾದಿ ತತ್ತ್ವಾರ್ಥಗಳನ್ನು ತಿಳಿದವರು ಪರಸ್ಪರ ಭಾಷಣ ಮಾಡಿದರು.

**ವಿತಂಡವಚನಾಶ್ಚಕ್ರೇ ನಿಜಘ್ನುಃ ಪ್ರತಿವಾದಿನಃ ।**
**ಋಷಯಸ್ತತ್ರ ವಿದ್ವಾಂಸಃ ಸಾಂಖ್ಯಾರ್ಥನ್ಯಾಯಕೋವಿದಾಃ ॥ ೩೦ ॥**

**ನ ತತ್ರ ದುರಿತಂ ಕಿಂಚಿತ್ ವಿದಧು ಬ್ರಾಹ್ಮರಾಕ್ಷಸಾಃ ।**
**ನ ಚ ಯಜ್ಞಹನೋ ದೈತ್ಯಾ ನ ಚ ಯಜ್ಞಮುಷೋಽಸುರಾಃ ॥ ೩೧ ॥**

**ಪ್ರಾಯಶ್ಚಿತ್ತಂ ದುರಿಷ್ಟಂ ವಾ ನ ತತ್ರ ಸಮಜಾಯತ ।**
**ಶಕ್ತಿ ಪ್ರಜ್ಞಾ ಕ್ರಿಯಾ ಯೋಗೈರ್ವಿಧಿರಾಸೀತ್ಸ್ವನುಷ್ಠಿತಃ ॥ ೩೨ ॥**

**ಭೃಗ್ವಾದ್ಯಾ ಋಷಯೋ ಧೀರಾಃ ಜ್ಯೋತಿಷ್ಟೋಮಾನ್ ಪೃಥಕ್ ಪೃಥಕ್ ।**
**ಚಕ್ರಿರೇ ಪೃಷ್ಠಗಮನಾನ್ ಸರ್ವಾನಯುತದಕ್ಷಿಣಾನ್ ॥ ೩೩ ॥**

---

೩೦. ಅವರಲ್ಲಿ ಕೆಲವರು ವಿತಂಡಾವಾದ ಮಾಡಿದರು. ಪ್ರತಿವಾದಿಗಳು ಅದಕ್ಕೆ ಸರಿಯಾಗಿ ಸಮಾಧಾನ ಹೇಳಿದರು. ಜ್ಞಾನಿಗಳೂ ಸಾಂಖ್ಯ ವೇದಾಂತ ನ್ಯಾಯ ಈ ಶಾಸ್ತ್ರಗಳಲ್ಲಿ ವಿದ್ವಾಂಸರಾದವರೂ ಆ ವಿವಾದವನ್ನು ಪರಿಹರಿಸಿದರು.

೩೧. ಆ ಯಾಗ ನಡೆಯುವ ಸಮಯದಲ್ಲಿ ಬ್ರಹ್ಮರಾಕ್ಷಸರು ಯಾವ ವಿಧವಾದ ವಿಘ್ನಗಳನ್ನೂ ಮಾಡಲಿಲ್ಲ. ದೈತ್ಯರೂ ಕೂಡ ಯಾಗವನ್ನು ನಾಶ ಮಾಡಲಿಲ್ಲ. ಅಸುರರೂ ಸಹ ಯಾವ ವಿಧವಾದ ಪದಾರ್ಥಗಳನ್ನೂ ಕದಿಯಲಿಲ್ಲ. ಹೀಗೆ ಆ ಸತ್ರಯಾಗವು ನಿರ್ವಿಘ್ನವಾಗಿ ನಡೆಯಿತು,

೩೨. ಆ ಯಾಗದಲ್ಲಿ ಯಾವ ವಿಧವಾದ ಲೋಪವೂ ವ್ಯತಿಕ್ರಮವೂ ನಡೆಯಲಿಲ್ಲ. ಅಲ್ಲಿ ಶಕ್ತಿ, ಜ್ಞಾನ, ಕ್ರಿಯಾ ಇವುಗಳುಳ್ಳ ಮಹಾಜ್ಞಾನಿಗಳು ಇರುವುದರಿಂದ ನಿರ್ವಿಘ್ನವಾಗಿ ಪೂರ್ಣವಾಯಿತು.

೩೩. ಹೀಗೆ ಮಹಾಜ್ಞಾನಿಗಳು ನಿರ್ವಿಘ್ನವಾಗಿ ಸತ್ರಯಾಗವನ್ನು ಹನ್ನೆರಡು ವರ್ಷಕಾಲ ನಡೆಸಲು ಧೈರ್ಯವಂತರಾದ ಭೃಗ್ವಾದಿ ಮಹರ್ಷಿಗಳೂ ಕೂಡ ಪ್ರತ್ಯೇಕ ಪ್ರತ್ಯೇಕವಾಗಿ ಜ್ಯೋತಿಷ್ಟೋಮಾದಿ ಯಾಗಗಳನ್ನು ಮಾಡಿ ಸರ್ವರಿಗೂ ಹತ್ತುಸಾವಿರ ರೂಪಾಯಿಗಳ ದಕ್ಷಿಣೆಯನ್ನು ಕೊಟ್ಟು ಅನುಮತಿಯನ್ನಿತ್ತು ಕಳುಹಿಸಿದರು.

**ಸಮಾಪ್ತಯಜ್ಞಾಸ್ತೇ ಸರ್ವೇ ವಾಯುಮೇವ ಮಹಾಧಿಪಂ ।**
**ಪಪ್ರಚ್ಛುರಮಿತಾತ್ಮಾನಃ ಭವದ್ಭಿರ್ಯದಹಂ ದ್ವಿಜಾಃ ॥**
**ಪ್ರಣೋದಿತಶ್ಚ ವಂಶಾರ್ಥಂ ಸ ಚ ತಾನಬ್ರವೀತ್ಪ್ರಭುಃ ॥ ೩೪ ॥**

**ಶಿಷ್ಯಃ ಸ್ವಯಂಭುವೋ ದೇವಃ ಸರ್ವಪ್ರತ್ಯಕ್ಷದೃಗ್ವಶೀ ।**
**ಅಣಿಮಾದಿಭಿರಷ್ಟಾಭಿರೈಶ್ವರ್ಯೈರ್ಯಃ ಸಮನ್ವಿತಃ ॥ ೩೫ ॥**

**ತಿರ್ಯಗ್ಯೋನ್ಯಾದಿಭಿರ್ಧರ್ಮೈಃ ಸರ್ವಲೋಕಾನ್ ಬಿಭರ್ತಿ ಯಃ ।**
**ಸಪ್ತ ಸ್ಕಂಧಾದಿಕಂ ಶಶ್ವತ್ ಪ್ಲವತೋ ಯೋಜನಾದ್ವರಃ ॥ ೩೬ ॥**

**ವಿಷಯೇನಿಯತಾ ಯಸ್ಯ ಸಂಸ್ಥಿತಾಃ ಸಪ್ತಕಾಗಣಾಃ ।**
**ವ್ಯೂಹಾಂ ಸ್ತ್ರಯಾಣಾಂ ಭೂತಾನಾಂ ಕುರ್ವನ್ ಯಶ್ಚ ಮಹಾಬಲಃ ॥ ೩೭ ॥**

---

೩೪. ಹೀಗೆ ಮುನಿಗಳೆಲ್ಲರೂ ಯಾಗವನ್ನು ಮುಗಿಸಿಕೊಂಡು ವಾಯುದೇವನ ಬಳಿಗೆ ಹೋಗಿ ಜ್ಞಾನಿಯಾದ ಅವನನ್ನು ಕೇಳಿದರು. ಆಗ ವಾಯುದೇವನು ವಂಶಾಭಿವೃದ್ಧಿಗಾಗಿ ನೀವು ಕೇಳಿದ ಪ್ರಶ್ನೆಯು ಉತ್ತಮವಾದುದು ಎಂದು ಹೇಳಿದನು ಎಂಬಿವೇ ಮೊದಲಾದ ವಿಷಯಗಳನ್ನು ಮುಂದೆ ತಿಳಿಸುವೆನೆಂದು ಹೇಳಿದರು.

೩೫-೩೬. ಅಣಿಮಾದ್ಯಷ್ಟೈಶ್ವರ್ಯಸಂಪನ್ನನೂ ಸರ್ವಪ್ರತ್ಯಕ್ಷಕ್ಕೂ ಜ್ಞಾನಕ್ಕೂ ವಿಷಯನೂ ದೇವನೂ ಸ್ವಯಂಭುವನೂ, ಆದ ಯಾವ ಭಗವಂತನು ಮತ್ಸ್ಯಾದಿ ತಿರ್ಯಗ್ಯೋನಿಗಳಲ್ಲಿ ಜನಿಸಿ ಸರ್ವಲೋಕಗಳನ್ನೂ ಧರಿಸುತ್ತಾನೋ ಅಂತಹ ಭಗವಂತನ ಶಿಷ್ಯನಾದ ವಾಯುದೇವನು ಸರ್ವದಾ ಸಪ್ತಸ್ಕಂಧಾದಿಗಳನ್ನು ಧರಿಸಿಕೊಂಡು ಯೋಜನದವರೆಗೂ ಹಾರುವುದರಿಂದ ಶ್ರೇಷ್ಠನಾಗಿರುತ್ತಾನೆ.

೩೭. ಮಹಾಬಲಶಾಲಿಯಾದ ಯಾವ ವಾಯುದೇವನು ತನ್ನಧೀನದಲ್ಲಿ ಸಪ್ತಗಣಗಳನ್ನೂ ಇಟ್ಟುಕೊಂಡು ಮೂರು ಮೂರು ಭೂತಗಳ ಗುಂಪನ್ನು ಮಾಡಿಕೊಂಡಿರುತ್ತಾನೆಯೋ.

ತೇಜಸಶ್ಚಾತ್ಮ್ಯಪಧ್ಯಾನನ್ ದಧಾತೀಮಂ ಶರೀರಣಂ ।
ಪ್ರಾಣಾದ್ಯಾ ವೃತ್ತಯಃ ಪಂಚ ಕರಣಾನಾಂ ಚ ವೃತ್ತಿಭಿಃ ॥
ಪ್ರೇರ್ಯಮಾಣಾಃ ಶರೀರಾಣಾಂ ಕುರ್ವತೇ ಯಾಸ್ತು ಧಾರಣಂ ॥ ೩೮ ॥

ಆಕಾಶಯೋನಿರ್ಹಿ ಗುಣಃ ಶಬ್ದಸ್ಪರ್ಶಸಮನ್ವಿತಃ ।
ತೇಜಸ ಪ್ರಕೃತಿಶ್ಚೋಕ್ತೋಪ್ಯಯಂ ಭಾವೋ ಮನೀಷಿಣಃ ॥ ೩೯ ॥

ತತ್ರಾಭಿಮಾನೀ ಭಗವಾನ್ ವಾಯುಶ್ಚಾತಿ ಕ್ರಿಯಾತ್ಮಕಃ ।
ವಾತಾರಣಿಃ ಸಮಾಖ್ಯಾತಃ ಶಬ್ದಶಾಸ್ತ್ರವಿಶಾರದಃ ॥ ೪೦ ॥

ಭಾರತ್ಯಾ ಶ್ಲಕ್ಷ್ಣಯಾ ಸರ್ವಾನ್ ಮುನೀನ್‌ಪ್ರಹ್ಲಾದಯನ್ನಿವ ।
ಪುರಾಣಜ್ಞಃ ಸುಮನಸಃ ಪುರಾಣಾಶ್ರಯಯುಕ್ತಯಾ ॥ ೪೧ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ ದ್ವಾದಶವಾರ್ಷಿಕೆ ಸತ್ರ
ನಿರೂಪಣಂ ನಾಮ ದ್ವಿತೀಯೋಽಧ್ಯಾಯಃ

---

೩೮. ಯಾವನು ಅಗ್ನಿಪ್ರೇರಕನೂ, ಶರೀರಧಾರಣೆಗೆ ಸಾಧಕನೂ, ಪ್ರಾಣಾಪಾನಾದಿ ಪಂಚಪ್ರಾಣಿಗಳಿಗೂ, ಪಂಚೇಂದ್ರಿಯಗಳಿಗೂ, ಅವುಗಳ ವೃತ್ತಿಗಳಿಗೂ, ಆಶ್ರಯನೂ, ಸರ್ವಪ್ರಾಣಿಗಳ ಪ್ರೇರಕನೂ, ಸರ್ವಶರೀರಧಾರಕನೂ ಆಗಿ ಪ್ರಖ್ಯಾತನಾಗಿರುವನೋ.

೩೯. ಶಬ್ದಸ್ಪರ್ಶಗಳೆಂಬ ಎರಡುಗುಣಗಳಿಂದ ಕೂಡಿದ ವಾಯುವು ಶಬ್ದಮಾತ್ರ ಗುಣವುಳ್ಳ ಆಕಾಶದಲ್ಲಿ ಹುಟ್ಟಿ ರೂಪ, ಶಬ್ದ, ಸ್ಪರ್ಶ ಎಂಬ ಈ ಮೂರು ಗುಣಗಳಿರುವ ತೇಜಸ್ಸಿಗೆ ಕಾರಣವಾಗಿದೆಯೆಂಬುದೇ ಜ್ಞಾನಿಗಳಿಗೆ ಅಭಿಪ್ರೇತವಾದ ವಿಷಯವಾಗಿದೆ.

೪೦. ಅಲ್ಲಿ ಅಭಿಮಾನದೇವತೆಯಾದ ಮಹತ್ಕ್ರಿಯಾಶಕ್ತಿಯುಳ್ಳವನೂ ವ್ಯಾಕರಣಶಾಸ್ತ್ರವಿಶಾರದನೂ ಆದ ವಾಯುದೇವನು ವಾತಾರಿಣಿ ಎಂಬ ಹೆಸರಿನಿಂದ ಪ್ರಖ್ಯಾತನಾಗಿರುತ್ತಾನೆ.

೪೧. ಅಂತಹ ವಾಯುದೇವನು ದೇವತೆಗಳ ಪುರಾಣವನ್ನರಿತವನಾಗಿ ಪುರಾಣಗತವಾದ ಯುಕ್ತಿಯುಳ್ಳ ಅತಿಮನೋಹರವಾದ ಮಧುರವಾಣಿಯಿಂದ ಆ ಸತ್ರ ಯಾಗದಲ್ಲಿ ಮಿಳಿತರಾದ ಸರ್ವ ಋಷಿಗಳಿಗೂ ಆನಂದವನ್ನುಂಟು ಮಾಡಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ಹನ್ನೆರಡುವರ್ಷದ ಯಾಗದ ವಿವರಣೆಯೆಂಬ ಎರಡನೆಯ ಅಧ್ಯಾಯವು ಮುಗಿದುದು.

## ಎರಡನೆಯ ಅಧ್ಯಾಯದ ಸಾರಾಂಶವು

ನೈಮಿಷಾರಣ್ಯ ವಾಸಿಗಳಾದ ಮುನಿಗಳು ಸೂತನನ್ನು ಕುರಿತು ಆ ಸತ್ರ ಯಾಗವು ಎಲ್ಲಿ? ಎಷ್ಟುಕಾಲ? ಹೇಗೆ? ನಡೆಯಿತು ವಾಯುದೇವನು ಪುರಾಣ ವನ್ನು ಹೇಗೆ ಹೇಳಿದನು ಇವನ್ನು ವಿಸ್ತಾರವಾಗಿ ಹೇಳಬೇಕೆಂದು ಕೇಳಲಾಗಿ ಸೂತರು ಹೇಳಿದ್ದೇನೆಂದರೆ :—ಪೂರ್ವದಲ್ಲಿ ಬ್ರಹ್ಮಾದಿ ದೇವತೆಗಳು ಸಾವಿರವರ್ಷ ಯಾಗಮಾಡಲು ಧರ್ಮಚಕ್ರವು ಜನಿಸಿ ತಿರುಗುತ್ತಾ ಹೊರಟು ಯಾವಸ್ಥಳದಲ್ಲಿ ಅದು ಪಟ್ಟೆ ಕಳೆದು ನಿಂತಿತೋ ಆ ಜಾಗಕ್ಕೆ ನೈಮಿಷಾರಣ್ಯವೆಂದು ನಾಮಕರಣ ವಾಯಿತು. ಅಲ್ಲಿಯೇ ಮುನಿಗಳು ಹನ್ನೆರಡುವರ್ಷ ಸತ್ರಯಾಗವನ್ನು ಮಾಡಿ ದರು. ಆಗ ಅಗ್ನಿಯಿಂದ ಗಂಗಾದೇವಿಯಲ್ಲಿ ಗರ್ಭೋತ್ಪತ್ತಿಯಾಗಿ ಅದನ್ನು ಪರ್ವತದಲ್ಲಿ ಹಾಕಲು ಸುವರ್ಣಮಯವಾದ ಅಂಡವಾಯಿತು. ಅದನ್ನು ತಂದು ಯಜ್ಞವಾಟವನ್ನು ಸುವರ್ಣಮಯವನ್ನಾಗಿ ಮಾಡಿದರು. ಆಗ ಆಳುತ್ತಿದ್ದ ಪುರೂರವನ ಮಗನು ಅದನ್ನು ಅಪಹರಿಸಲು ಬರಲು ಋಷಿಗಳು ಕುಶಗಳಿಂದ ಕೊಂದರು. ಬಳಿಕ ಅವನ ಮಗನಾದ ಆಯುರಾಜನಿಗೆ ಪಟ್ಟವಾಗಿ ನಿರ್ವಿಘ್ನವಾಗಿ ಯಾಗವು ಮುಗಿಯಿತು. ದೇವತೆಗಳೆಲ್ಲರೂ ಸಂತೋಷವಾಗಿ ಹೊರಟರು. ಎಂಬ ವಿಷಯಗಳು ಉಕ್ತವಾಗಿವೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ॥ ತೃತೀಯೋಽಧ್ಯಾಯಃ ॥

॥ ಸೂತ ಉವಾಚ ॥

ಮಹೇಶ್ವರಾಯೋತ್ತಮವೀರ್ಯಕರ್ಮಣೇ
ಸುರರ್ಷಭಾಯಾಮಿತಬುದ್ಧಿತೇಜಸೇ ।
ಸಹಸ್ರಸೂರ್ಯಾನಲವರ್ಚಸೇ ನಮಃ
ತ್ರಿಲೋಕಸಂಹಾರವಿಸೃಷ್ಟಯೇ ನಮಃ ॥ ೧ ॥

ಪ್ರಜಾಪತೀನ್ ಲೋಕನಮಸ್ಕೃತಾಂ ಸ್ತಥಾ
ಸ್ವಯಂಭು ರುದ್ರ ಪ್ರಭೃತೀನ್ಮಹೇಶ್ವರಾನ್ ।
ಭೃಗುಂ ಮರೀಚಿಂ ಪರಮೇಷ್ಠಿನಂ ಮನುಂ
ರಜಸ್ತಮೋಧರ್ಮಮಥಾಪಿ ಕಶ್ಯಪಂ ॥ ೨ ॥

---

## ಮೂರನೆಯ ಅಧ್ಯಾಯವು

೧. ಸೂತನು ಹೇಳಿದನು:-ತ್ರಿಲೋಕಗಳ ಸೃಷ್ಟಿ, ಸ್ಥಿತಿ, ಸಂಹಾರಕರ್ತನೂ, ಸಹಸ್ರಾರು ಸೂರ್ಯಾಗ್ನಿಗಳಿಗೆ ಸಮವಾದ ಕಾಂತಿಯುಳ್ಳವನೂ, ದೇವೋತ್ತಮನೂ ಉತ್ಕೃಷ್ಟವಾದ ವೀರ್ಯಕರ್ಮಗಳುಳ್ಳವನೂ ಆದ ಮಹೇಶ್ವರನಿಗೆ ನಮಸ್ಕಾರವೆಂದು ವಾಯುದೇವನು ಪುರಾಣಾರಂಭದಲ್ಲಿ ಮಂಗಳವನ್ನು ಆಚರಿಸಿದನು

೨-೪. ಅನಂತರ ಲೋಕಪೂಜ್ಯರಾದ ಪ್ರಜಾಪತಿಗಳಿಗೂ ಬ್ರಹ್ಮರುದ್ರರೇ ಮೊದಲಾದ ದೇವತೆಗಳಿಗೂ, ಸೃಷ್ಟಿಕರ್ತರಾದ ಭೃಗು, ಮರೀಚಿ, ಮನು ಇವರಿಗೂ, ರಜಸ್ತಮೋಗುಣಗಳುಳ್ಳವರಾದ ಕಾಶ್ಯಪ, ವಸಿಷ್ಠ, ದಕ್ಷ, ಪುಲಸ್ತ್ಯ ಕರ್ದಮ, ರುಚಿ, ವಿವಸ್ವಂತ, ಕ್ರತು, ಅಂಗಿರಸ, ಪುಲಹ ಇವರಿಗೂ, ಪ್ರಜಾವೃದ್ಧಿಗಾಗಿ ಶಾಸನವನ್ನು

ವಸಿಷ್ಠದಕ್ಷಾತ್ರಿ ಪುಲಸ್ತ್ಯ ಕರ್ದಮಾ೯
ರುಚಿಂ ವಿವಸ್ವಂತಮಥಾಪಿ ಚ ಕ್ರತುಂ ।
ಮುನಿಂ ತಥೈವಾಂಗಿರಸಂ ಪ್ರಜಾಪತಿಂ
ಪ್ರಣಮ್ಯ ಮೂರ್ಧ್ನಾ೯ ಪುಲಹಂ ಚ ಭಾವತಃ ॥ ೩ ॥

ತಥೈವ ಚ ಕ್ರೋಧನಮೇಕವಿಂಶತಿಂ
ಪ್ರಜಾವಿವೃದ್ಧ್ಯರ್ಪಿತ ಕಾರ್ಯಶಾಸನಂ ।
ಪುರಾತನಾನಪ್ಯಪರಾಂಶ್ಚ ಶಾಶ್ವತಾ೯
ತಥೈವ ಚಾನ್ಯಾನ್ ಸಗಣಾನವಸ್ಥಿತಾ೯ ॥ ೪ ॥

ತಥೈವ ಚನ್ಯಾನಪಿ ಧೈರ್ಯಶೋಭಿನೋ
ಮುನೀ೯ ಬೃಹಸ್ಪತ್ಯುಶನಃ ಪುರೋಗಮಾ೯ ।
ತಪಃ ಶುಭಾಚಾರ ಋಷೀ೯ ದಯಾನ್ವಿತಾ೯
ಪ್ರಣಮ್ಯ ವಕ್ಷ್ಯೇ ಕಲಿಪಾಪನಾಶಿನೀಂ ॥ ೫ ॥

ಪ್ರಜಾಪತೇಃ ಸೃಷ್ಟಿಮಿಮಾಮನುತ್ತಮಾಂ
ಸುರೇಶ ದೇವರ್ಷಿ ಗಣೈರಲಂಕೃತಾಂ ।
ಶುಭಾಮತುಲ್ಯಾಮನಘಾಮೃಷಿಪ್ರಿಯಾಂ
ಪ್ರಜಾಪತೀನಾಮಪಿ ಚೋಲ್ಬಣಾರ್ಚಿಷಾಂ ॥ ೬ ॥

---

ಮಾಡುವ ಇಪ್ಪತ್ತೊಂದು ಸಂಖ್ಯಾಕರಾದ ಕ್ರೋಧನನಾಮಕ ಪುರುಷರಿಗೂ, ಪುರಾತನರೂ, ಶಾಶ್ವತರೂ ಇವರೇ ಮೊದಲಾದವರಿಗೂ ನಮಸ್ಕರಿಸಿ ಈ ಮಹಾ ಪುರಾಣವನ್ನು ಪ್ರಾರಂಭಮಾಡುವೆನು.

೫. ಮತ್ತು ಧೈರ್ಯಶಾಲಿಗಳಾದ ಮುನಿಗಳಿಗೂ, ಬೃಹಸ್ಪತಿ, ಶುಕ್ರನೇ ಮೊದಲಾದವರಿಗೂ, ತಪಸ್ಸು, ಆಚಾರ, ದಯ ಇವುಗಳಿಂದ ಕೂಡಿದ ಮಹರ್ಷಿ ಗಳಿಗೂ ನಮಸ್ಕರಿಸಿ, ಕಲಿಪಾಪನಾಶಕವಾದ ಈ ಮಹಾಪುರಾಣವನ್ನು ಹೇಳುವೆನು.

೬-೭. ಮೊದಲು ಅತ್ಯುತ್ತಮವೂ, ಇಂದ್ರಾದಿದೇವತೆಗಳು ಮಹರ್ಷಿಗಳು- ಇವರಿಂದ ಅಲಂಕೃತವೂ, ಅಸದೃಶವೂ, ಮಂಗಳದಾಯಕವೂ, ದೋಷರಹಿತವೂ, ಋಷಿಪ್ರಿಯವೂ, ಮಹಾತೇಜಸ್ವಿಗಳಾದ ಪ್ರಜಾಪತಿಗಳು, ತಪಸ್ವಿಗಳು ಇವರಿಗೆ

ತಪೋ ಭೃತಾಂ ಬ್ರಹ್ಮದಿನಾದಿ ಕಾಲಿಕೀಂ
ಪ್ರಭೂತಮಾವಿಷ್ಕೃತ ಪೌರುಷ ಶ್ರಿಯಂ ।
ಶ್ರುತೌ ಸ್ಮೃತೌ ಚ ಪ್ರಸೃತಾಮುದಾಹೃತಾಂ
ಪರಾಂ ಪರಾಣಾಮನಿಲಪ್ರಕೀರ್ತಿತಾಂ ॥ ೭ ॥

ಸಮಾಸಬಂಧೈರ್ನಿಯತೈರ್ಯಥಾ ಕಥಂ ।
ವಿಶಬ್ದನೇನಾಪಿ ಮನಃ ಪ್ರಹರ್ಷಿಣೀ ॥
ಯಸ್ಯಾಂ ಚ ಬದ್ಧಾ ಪ್ರಥಮಾ ಪ್ರವೃತ್ತಿಃ ।
ಪ್ರಾದಾನಕೀ ಚೇಶ್ವರ ಕಾರಿತಾ ಚ ॥ ೮ ॥

ಯತ್ತಸ್ತ್ವ ಪ್ರೃತಂ ಕಾರಣಪ್ರಮೇಯಂ ।
ಬ್ರಹ್ಮಪ್ರಧಾನಂ ಪ್ರಕೃತಿಪ್ರಸೂತಿ ॥
ಆತ್ಮಾ ಗುಹಾಯೋನಿರಥಾಪಿ ಚಕ್ಷುಃ ।
ಕ್ಷೇತ್ರಂ ತಥೈವಾಮೃತಮಕ್ಷರಂ ಚ ॥ ೯ ॥

ಶುಕ್ರಂ ತಪಃ ಸತ್ವಮತಿಪ್ರಕಾಶಂ ।
ತದ್ವ್ಯಷ್ಟಿ ನಿತ್ಯಂ ಪುರುಷಂ ದ್ವಿತೀಯಂ ॥
ತಮಪ್ರಮೇಯಂ ಪುರುಷೇಣ ಯುಕ್ತಂ ।
ಸ್ವಯಂಭುವಾ ಲೋಕಪಿತಾಮಹೇನ ॥ ೧೦ ॥

---

ಸಮ್ಮತವೂ, ಬ್ರಹ್ಮನ ದಿನಕಾಲಪರಿಮಾಣ ಇವುಗಳ ನಿರೂಪಕವೂ, ಶಕ್ತಿನಿರ್ಣಾಯಕವೂ, ಶ್ರುತಿಸ್ಮೃತ್ಯಾದಿಗಳಿಂದ ಉದಾಹೃತವೂ, ವಾಯುದೇವನಿಂದ ನಿರೂಪಿತವೂ, ಆಗಿರುವ ಬ್ರಹ್ಮಸೃಷ್ಟಿಯನ್ನು ನಿರೂಪಿಸುವೆನು.

೮. ಪ್ರಥಮ ಸೃಷ್ಟಿಯು ಸಮಾಸಾದಿ ನಿಯಮರಹಿತವೂ, ವ್ಯಾಕರಣ ವಿರುದ್ಧವಾದ ಅಪಶಬ್ದಗಳಿಂದ ವರ್ಣಿತವೂ, ಆದರೂ ಕೂಡ ಶ್ರೋತೃಗಳ ಮನಸ್ಸಿಗೆ ಆನಂದದಾಯಕವಾಗದೇ ಇರದು.

೯. ಪ್ರಧಾನವಾದ ಪ್ರಕೃತಿಗೆ ಕಾರಣನೂ, ಹೃದಯಗುಹಾವರ್ತಿಯೂ, ಅಮೃತನೂ, ನಾಶರಹಿತನೂ, ಚಕ್ಷುಶ್ರೋತ್ರಪ್ರೇರಕನೂ, ಅಪ್ರಮೇಯನೂ, ಆತ್ಮಸ್ವರೂಪನೂ ಆದ ಬ್ರಹ್ಮನೇ ಈ ಸೃಷ್ಟಿಗೆ ಮೂಲಕಾರಣನಾಗಿರುವನು.

೧೦. ಶುಭ್ರವೂ, ತಪೋರೂಪವೂ, ಪ್ರಕಾಶಕವೂ, ಆದ ಸತ್ವಗುಣವು ತನಗೆ ದ್ವಿತೀಯನಾದ ಪುರುಷನ ಸಂಸರ್ಗದಿಂದ ವೃಷ್ಟಿರೂಪವಾಗಿ ಲೋಕಪಿತಾಮಹನಾದ ಬ್ರಹ್ಮನ ಸೃಷ್ಟಿಗೆ ಕಾರಣವಾಗುತ್ತದೆ.

ಉತ್ಪಾದಕತ್ವಾದ್ರಜಸೋತಿರೇಕಾತ್ ।
ಕಾಲಸ್ಯ ಯೋಗಾನ್ನಿಗಮಾವಧೇಶ್ಚ ॥
ಕ್ಷೇತ್ರಜ್ಞಯುಕ್ತಾನ್ ನಿಯತಾನ್ವಿಕಾರಾನ್ ।
ಲೋಕಸ್ಯ ಸಂತಾನವಿವೃದ್ಧಿ ಹೇತೋಃ ॥ ೧೧ ॥

ದೇವಾಸುರಾದ್ರಿ ದ್ರುಮಸಾಗರಾಣಾಂ ।
ಮನುಪ್ರಜೇಶರ್ಷಿ ಪಿತೃದ್ವಿಜಾನಾಂ ॥
ಪಿಶಾಚ ಯಕ್ಷೋರಗ ರಾಕ್ಷಸಾನಾಂ
ತಾರಾಗ್ರಹಾರ್ಕರ್ಕ್ಷ ನಿಶಾಚರಾಣಾಂ ॥ ೧೨ ॥

ಮಾಸರ್ತು ಸಂವತ್ಸರ ರಾತ್ರ್ಯಹಾನಾಂ
ದಿಕ್ಕಾಲ ಯೋಗಾದಿ ಯುಗಾಯನಾನಾಂ ।
ವನೌಷಧೀನಾಮಪಿ ವೀರುಧಾಂ ಚ
ಜಲೌಕಸಾಮಪ್ಸರಸಾಂ ಪಶೂನಾಂ ॥ ೧೩ ॥

ವಿದ್ಯುತ್ಸರಿನ್ಮೇಘ ವಿಹಂಗಮಾನಾಂ
ಯತ್ಸೂಕ್ಷ್ಮಗಂ ಯದ್ಭುವಿ ಯದ್ವಿಯಸ್ಥಂ ।
ಯತ್ ಸ್ಥಾವರಂ ಯತ್ರ ಯದಸ್ತಿ ಕಿಂಚತ್
ಸರ್ವಸ್ಯ ತಸ್ಯಾಸ್ತಿ ಗತಿರ್ವಿಭಕ್ತಿಃ ॥ ೧೪ ॥

---

೧೧. ಸ್ವಾಭಾವಿಕವಾದ ಪ್ರಕೃತಿಯು ಮಹೇಶ್ವರನ ಸಂಕಲ್ಪಾನುಸಾರವಾಗಿಯೂ ಮತ್ತು ಸಹಜವಾಗಿಯೂ ಸೃಷ್ಟಿಮಾಡುವ ಸ್ವಭಾವವುಳ್ಳದ್ದಾಗಿದೆ. ಇದರಿಂದಲೂ, ರಜೋಗುಣಪ್ರಾಚುರ್ಯದಿಂದಲೂ, ಕಾಲಸಂಬಂಧದಿಂದಲೂ, ವೇದಾನುಸಾರವಾಗಿಯೂ, ಲೋಕಸಂತಾನವೃದ್ಧಿಕಾರಣವಾಗಿಯೂ, ಆತ್ಮನಿಂದ ಕೂಡಿದ ನಿಯಮಿತವಿಕಾರಿಯಾಗಿಯೂ ಆಗಿ ವಸ್ತುಗಳನ್ನು ಸೃಷ್ಟಿಮಾಡಿತು.

೧೨-೧೪. ದೇವಾಸುರರು, ಪರ್ವತ, ವೃಕ್ಷ, ಸಮುದ್ರಗಳು, ಮನು, ಪ್ರಜೇಶರು, ಋಷಿಗಳು; ಪಿತೃಗಳು, ದ್ವಿಜರು, ಪಿಶಾಚ, ಯಕ್ಷ, ಸರ್ಪ, ರಾಕ್ಷಸರೂ, ತಾರಾಗ್ರಹಗಳು, ರಾತ್ರಿಂಚರರು ಮತ್ತು ಸೂಕ್ಷ್ಮವಾದವೂ, ಭೂಗತಗಳೂ, ಆಕಾಶಗತವೂ, ಸೂರ್ಯಗತವೂ, ಮತ್ತು ಎಲ್ಲೆಲ್ಲಿ ಯಾವ ಯಾವ ವಸ್ತುಗಳಿವೆಯೋ, ಅವುಗಳಿಗೆಲ್ಲಾ ಪ್ರತ್ಯೇಕ ಪ್ರತ್ಯೇಕ ಸ್ಥಾನಗಳಿವೆಯೆಂದು ವರ್ಣಿತವಾಗಿವೆ.

ಛಂದಾಂಸಿ ವೇದಾಃ ಸ ಋಚೋ ಯಜೂಂಷಿ
ಸಾಮಾನಿ ಸೋಮಶ್ಚ ತಥೈವ ಯಜ್ಞಃ ।
ಆಜೀವ್ಯಮೇಷಾಂ ಯದಭೀಪ್ಸಿತಂಚ
ದೇವಸ್ಯ ತಸ್ಯೈವ ಚ ವೈ ಪ್ರಜಾಪತೇಃ ॥ ೧೫ ॥

ವೈವಸ್ವತಸ್ಯಾಸ್ಯ.ಮನೋಃ ಪುರಸ್ತಾತ್
ಸಂಭೂತಿರುಕ್ತಾ ಪ್ರಸವಶ್ಚ ತೇಷಾಂ ।
ಯೇಷಾಮಿದಂ ಪುಣ್ಯಕೃತಾಂ ಪ್ರಸೂತ್ಯಾ
ಲೋಕತ್ರಯಂ ಲೋಕನಮಸ್ಕೃತಾನಾಂ ॥
ಸುರೇಶ ದೇವರ್ಷಿ ಮನು ಪ್ರಧಾನಾ
ಮಾಪೂರಿತಂ ಚೋಪರಿ ಭೂಷಿತಂ ಚ ॥ ೧೬ ॥

ರುದ್ರಸ್ಯ ಶಾಪಾತ್ ಪುನರದ್ಭವಶ್ಚ
ದಕ್ಷಸ್ಯ ಚಾಪ್ಯತ್ರ ಮನುಷ್ಯಲೋಕೇ ।
ವಾಸಃ ಕ್ಷಿತೌ ವಾ ನಿಯಮಾದ್ಭವಸ್ಯ
ದಕ್ಷಸ್ಯ ಚಾತ್ರ ಪ್ರತಿಶಾಪಲಾಭಃ ॥ ೧೭ ॥

---

೧೫. ಛಂದಸ್ಸು, ವೇದಗಳು, ಋಕ್ಕುಗಳು, ಯಜಸ್ಸು, ಸಾಮ, ಸೋಮ ಮತ್ತು ಯಜ್ಞಾದಿಕೋರಿಕೆಗಳು, ಅಂದರೆ ಇಷ್ಟಾರ್ಥಗಳು, ಇವನ್ನು ಆ ಸೃಷ್ಟಿಕರ್ತನಾದ ಭಗವಂತನೇ ಸೃಷ್ಟಿಸಿರುವನು.

೧೬. ಲೋಕತ್ರಯ ವಂದಿತರೂ, ಭಾಗ್ಯಶಾಲಿಗಳೂ, ಆದ ಯಾವ ಮಹಾತ್ಮರ ಸೃಷ್ಟಿಯಿಂದ ಲೋಕತ್ರಯವು ಪವಿತ್ರವಾಯಿತೋ, ಅಂತಹ ಮಹಾತ್ಮರು ವೈವಸ್ವತ ಮನುವಿನ ಜನನಾತ್ಪೂರ್ವದಲ್ಲಿಯೇ ಜನಿಸಿದರು. ಮತ್ತು ಅಂತಹ ಜಗತ್ತು ಸ ರೇಶರು, ದೇವರ್ಷಿಗಳು, ಮನುವೇ ಪ್ರಧಾನರಾದ ಮಹಾತ್ಮರಿಂದ ಪೂರ್ಣವೂ, ಅಲಂಕೃತವೂ ಆಯಿತು.

೧೭. ರುದ್ರದೇವನ ಶಾಪದಿಂದ ದಕ್ಷಬ್ರಹ್ಮನು ಭೂಮಿಯಲ್ಲಿ ಪುನರ್ಜನನವಾದ ವಿಷಯವೂ, ದಕ್ಷನ ಶಾಪದಿಂದ ರುದ್ರದೇವನು ಭೂಮಿಯಲ್ಲಿ ನಿಯಮವಾಗಿ ವಾಸಿಸುವ ವಿಷಯಗಳೂ ಸಹ ವರ್ಣಿಸಲ್ಪಟ್ಟಿದೆ.

ಮನ್ವಂತರಾಣಾಂ ಪರಿವರ್ತನಾನಿ
ಯುಗೇಷು ಸಂಭೂತಿ ವಿಕಲ್ಪನಂ ಚ ।
ಋಷಿತ್ವಮಾರ್ಷಸ್ಯ ಚ ಸಂಪ್ರವೃದ್ಧಿ
ರ್ಯಥಾ ಯುಗಾದಿಷ್ವಪಿ ಚೇತ್ತದತ್ರ ॥ ೧೮ ॥

ಯೇ ದ್ವಾಪರೇಷು ಪ್ರಥಯಂತಿ ವೇದಾ ।
ವ್ಯಾಸಶ್ಚ ತೇತ್ರ ಕ್ರಮತೋ ನಿಬದ್ಧಾಃ ॥
ಕಲ್ಪಸ್ಯ ಸಂಖ್ಯಾ ಭುವನಸ್ಯ ಸಂಖ್ಯಾ ।
ಬ್ರಾಹ್ಮಸ್ಯ ಚಾಪ್ಯತ್ರ ದಿನಸ್ಯ ಸಂಖ್ಯಾ ॥ ೧೯ ॥

ಅಂಡೋದ್ಭಿಜಸ್ವೇದಜರಾಯುಜಾನಾಂ ।
ಧರ್ಮಾತ್ಮನಾಂ ಸ್ವರ್ಗ ನಿವಾಸನಾಂ ವಾ ॥
ಯೇ ಯಾತನಾಸ್ಥಾನಗತಾಶ್ಚ ಜೀವಾ ।
ಸ್ತರ್ಕೇಣ ತೇಷಾಮಪಿ ಚ ಪ್ರಮಾಣಂ ॥ ೨೦ ॥

ಅತ್ಯಾಂತಿಕಃ ಪ್ರಾಕೃತಿಕಶ್ಚ ಯೋಽಯಂ ।
ನೈಮಿತ್ತಿಕಶ್ಚ ಪ್ರತಿಸರ್ಗಹೇತುಃ ॥
ಬಂದಶ್ಚ ಮೋಕ್ಷಶ್ಚ ವಿಶಿಷ್ಯ ತತ್ರ ।
ಪ್ರೋಕ್ತಾ ಚ ಸಂಸಾರಗತಿಃ ಪರಾ ಚ ॥ ೨೧ ॥

---

೧೮. ಕೃತಯುಗಾದಿಗಳಲ್ಲಿ ಮನ್ವಂತರಗಳ ಪರಿವರ್ತನ ಸಂಭವವಿಕಲ್ಪಗಳೂ, ಋಷಿಗಳ ಆರ್ಷತ್ವವೂ, ವೃದ್ಧಿಗಳೂ ಕೂಡ ಯುಗಾನುಗುಣವಾಗಿ ವರ್ಣಿತವಾಗಿವೆ.

೧೯. ದ್ವಾಪರ ಯುಗಾದಿಗಳಲ್ಲಿ ಯಾರು ವೇದಗಳ ಪ್ರಸಿದ್ಧಿ ವಿಸ್ತಾರಗಳನ್ನು ಕ್ರಮವಾಗಿ ಮಾಡಿದರೋ, ಆ ವಿಷಯಗಳೂ, ಮತ್ತು ಕಲ್ಪ, ಭುವನ, ಬ್ರಹ್ಮದೇವನ ದಿನ ಇವುಗಳ ಸಂಖ್ಯೆಗಳೂ, ಸಹ ಕ್ರಮವಾಗಿ ನಿರೂಪಿಸಲ್ಪಟ್ಟಿವೆ.

೨೦. ಅಂಡಜ, ಸ್ವೇದಜ, ಜರಾಯುಜ, ಇವುಗಳ ಉತ್ಪತ್ತಿಯೂ, ಧರ್ಮಾತ್ಮರಾದ ಸ್ವರ್ಗನಿವಾಸಿಗಳ ಸ್ಥಿತಿಯೂ, ಸ್ವರ್ಗ ನರಕಾದಿ ಯಾತನಾ ಸ್ಥಾನಗಳಲ್ಲಿರ ತಕ್ಕವರ ಸಂಖ್ಯೆಯೂ ನಿರೂಪಿಸಲ್ಪಟ್ಟಿವೆ.

೨೧. ಲಯವು, ಅತ್ಯಂತಿಕ, ಪ್ರಾಕೃತಿಕ, ನೈಮಿತ್ತಿಕವೆಂಬುದಾಗಿ ಮೂರು ವಿಧವಾಗಿದೆ. ಮತ್ತು ಬಂಧಮೋಕ್ಷಗಳೂ, ಸಂಸಾರದ ಗಮನಾಗಮನಗಳೂ, ಕೂಡ ವರ್ಣಿಸಲ್ಪಟ್ಟಿವೆ.

ಪ್ರಕೃತ್ಯವಸ್ಥೇಷು ಚ ಕಾರಣೇಷು ।
ಯಾ ಚ ಸ್ಥಿತಿರ್ಯಾ ಚ ಪುನಃ ಪ್ರವೃತ್ತಿಃ ॥
ತಚ್ಛಾಸ್ತ್ರಯುಕ್ತ್ಯಾ ಸ್ವಮತಿಪ್ರಯತ್ನಾತ್ ।
ಸಮಸ್ತಮಾವಿಷ್ಕೃತ ಧೀಧೃತಿಭ್ಯಃ ॥
ವಿಪ್ರಾ ಋಷಿಭ್ಯಃ ಸಮುದಾಹೃತಂ ಯ ।
ದ್ಯಥಾತಥಂ ತಚ್ಛೃಣು ಚೋಚ್ಯಮಾನಂ ॥ ೨೨ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ ಸೃಷ್ಟಿಪ್ರಕರಣಂ
ನಾಮ ತೃತೀಯೋಽಧ್ಯಾಯಃ

---

೨೨. ಜಗತ್ಕಾರಣವಾದ ಪ್ರಕೃತಿಯು ಯಾವ ರೀತಿಯಲ್ಲಿದ್ದಿತೋ, ಮತ್ತು ಪುನಃ ಹೇಗೆ ಪ್ರವೃತ್ತವಾಯಿತೋ, ಅದನ್ನು ಶಾಸ್ತ್ರ ಯುಕ್ತಿಗಳಿಂದಲೂ, ಸ್ವಬುದ್ಧಿ ಯಿಂದಲೂ, ಜ್ಞಾನಿಗಳು ನಿರೂಪಿಸಿರುವ ಕ್ರಮದಿಂದಲೂ, ತಿಳಿಸುವೆನು. ಪೂರ್ವದಲ್ಲಿ ವಿಪ್ರರು ಋಷಿಗಳಿಗೋಸ್ಕರ ಯಾವ ಸಂಗತಿಗಳನ್ನು ಹೇಳಿದರೊ, ಯಥಾಕ್ರಮವಾಗಿ ನಿರೂಪಿಸಿರುವ ಆ ವಿಷಯಗಳನ್ನು ಕೇಳುವವರಾಗರಿ ಎಂದು ಹೇಳಿದನು.

ಇತಿ ಮಹಾಪುರಾಣದಲ್ಲಿ ವಾಯುಪ್ರೋಕ್ತವಾದ ಸೃಷ್ಟಿಕ್ರಮವೆಂಬ
ಮೂರನೆಯ ಅಧ್ಯಾಯವು ಸಮಾಪ್ತವು.

## ಮೂರನೆಯ ಅಧ್ಯಾಯದ ಸಾರಾಂಶವು

ಸೂತಪುರಾಣಿಕರು ಮೊದಲು ಬ್ರಹ್ಮ, ವಿಷ್ಣು ಮಹೇಶ್ವರಾದಿ ದೇವತೆಗಳು, ಇಂದ್ರಾದಿ ಲೋಕಪಾಲಕರು, ಸೂರ್ಯಾದಿ ಗ್ರಹಗಳು, ಭೃಗ್ವಾದಿ ಮಹರ್ಷಿಗಳು, ಬ್ರಹ್ಮಾದಿಗಳ ದಿನ, ಮಾನ, ಪಶು, ಪಕ್ಷ್ಯಾದಿಗಳು ಇವರುಗಳಿಗೆಲ್ಲಾ ನಮಸ್ಕರಿಸಿ ತರುವಾಯ ಸಕಲ ಭೂತಗಳು ಎಲ್ಲಿ ಲೀನವಾಗುವುವೋ, ಅಂತಹ ಪ್ರಕೃತಿ ಗುಣತ್ರಯ ಪುರುಷರ ಸಂಸರ್ಗದಿಂದ ಉಂಟಾಗುವ ಸೃಷ್ಟಿಯನ್ನೂ, ಮತ್ತೂ ಚತುರ್ವಿಂಶತಿ ತತ್ವಗಳಿಂದ ಉಂಟಾಗುವ ದೇವಾಸುರಾದಿ, ಸಕಲ ಚರಾಚರ ಪ್ರಾಣಿಗಳ ಸೃಷ್ಟಿ ಯನ್ನೂ, ಸಂಕ್ಷೇಪವಾಗಿ ತಿಳಿಸಿರುತ್ತಾರೆ

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಚತುರ್ಥೋಽಧ್ಯಾಯಃ

ಋಷಯಸ್ತು ತತಃ ಶ್ರುತ್ವಾ ನೈಮಿಷಾರಣ್ಯವಾಸಿನಃ ।
ಪ್ರತ್ಯೂಚುಸ್ತೇ ತತಃ ಸರ್ವೇ ಸೂತಂ ಪರ್ಯಾಕುಲೇಕ್ಷಣಾಃ ॥ ೧ ॥

ಭವಾನ್ ವೈ ವಂಶಕುಶಲೋ ವ್ಯಾಸಾತ್ ಪ್ರತ್ಯಕ್ಷದರ್ಶವಾನ್ ।
ತಸ್ಮಾತ್ತ್ವಂ ಭವನಂ ಕೃತ್ಸ್ನಂ ಲೋಕಸ್ಯಾಮುಷ್ಯ ವರ್ಣಯ ॥ ೨ ॥

ಯಸ್ಯ ಯಸ್ಯಾನ್ವಯಾ ಯೇ ಯೇ ತಾಂಸ್ತಾನಿಚ್ಛಾಮ ವೇದಿತುಂ ।
ತೇಷಾಂ ಪೂರ್ವರ್ಷಿ ಸೃಷ್ಟಿಂ ಚ ವಿಚಿತ್ರಾಂ ತಾಂ ಪ್ರಜಾಪತೇಃ ॥ ೩ ॥

---

## ನಾಲ್ಕನೆಯ ಅಧ್ಯಾಯವು

೧-೨. ಅನಂತರ ನೈಮಿಷಾರಣ್ಯವಾಸಿಗಳಾದ ಮಹರ್ಷಿಗಳು ಕುತೂಹಲವುಳ್ಳವರಾಗಿ ಸೂತರನ್ನು ಪ್ರಶ್ನೆ ಮಾಡಿದರು. ತಾವು ವ್ಯಾಸಮಹರ್ಷಿಗಳನ್ನು ಪ್ರತ್ಯಕ್ಷವಾಗಿ ನೋಡಿರುವುದರಿಂದ ವಂಶಗಳನ್ನು ಹೇಳುವುದರಲ್ಲಿ ಸಮರ್ಥರಾಗಿರುವಿರಿ. ಆದುದರಿಂದ ಈ ಸಕಲ ಲೋಕಗಳ ಸೃಷ್ಟಿಕ್ರಮಗಳನ್ನು ವಿಶದವಾಗಿ ನಿರೂಪಿಸಬೇಕೆಂದು ಅರಿಕೆಮಾಡಿಕೊಂಡರು.

೩. ಯಾರು ಯಾರು ಯಾವ ಯಾವ ವಂಶಗಳಲ್ಲಿ ಜನಿಸಿದರು ? ಅವರವರ ಪೂರ್ವಿಕರಾದ ಮಹರ್ಷಿಗಳು ಯಾರು ಯಾರು ? ಸೃಷ್ಟಿಕರ್ತನ ಮಹಿಮೆಯಿಂದ ಕೂಡಿದ ಈ ವಿಚಿತ್ರವಾದ ಸೃಷ್ಟಿಕ್ರಮವನ್ನು ತಿಳಿಸಬೇಕೆಂದು ಮಹರ್ಷಿಗಳು ಸೂತರನ್ನು ಪ್ರಾರ್ಥಿಸಿದರು.

ಅಸಕೃತ್ಪರಿಪೃಷ್ಟಸ್ತೈರ್ಮಹಾತ್ಮಾ ಲೋಮಹರ್ಷಣಃ ।
ವಿಸ್ತಾರೇಣಾನುಪೂರ್ವ್ಯಾ ಚ ಕಥಯಾಮಾಸ ಸತ್ತಮಃ ॥ ೪ ॥

॥ ಲೋಮಹರ್ಷಣ ಉವಾಚ ॥

ಪೃಷ್ಟಾಂ ಚೈತಾಂ ಕಥಾಂ ದಿವ್ಯಾಂ ಶ್ಲಕ್ಷ್ಣಾಂ ಪಾಪಪ್ರಣಾಶಿನೀಂ ।
ಕಥ್ಯಮಾನಾಂ ಮಯಾ ಚಿತ್ರಾಂ ಬಹ್ವರ್ಥಾಂ ಶ್ರುತಿಸಮ್ಮತಾಂ ॥ ೫ ॥

ಯಶ್ಚೇಮಾಂ ಧಾರಯೇನ್ನಿತ್ಯಂ ಶೃಣುಯಾದ್ವಾಪ್ಯಭೀಕ್ಷ್ಣಶಃ ।
ಶ್ರಾವಯೇಚ್ಚಾಪಿ ವಿಪ್ರೇಭ್ಯೋ ಯತಿಭ್ಯಶ್ಚ ವಿಶೇಷತಃ ॥ ೬ ॥

ಶುಚಿಃ ಪರ್ವಸು ಯುಕ್ತಾತ್ಮಾ ತೀರ್ಥೇಷ್ವಾಯತನೇಷು ಚ ।
ದೀರ್ಘಮಾಯುರವಾಪ್ನೋತಿ ಸ ಪುರಾಣಾನುಕೀರ್ತನಾತ್ ॥
ಸ್ವವಂಶಧಾರಣಂ ಕೃತ್ವಾ ಸ್ವರ್ಗಲೋಕೇ ಮಹೀಯತೇ ॥ ೭ ॥

ವಿಸ್ತಾರಾವಯವಂ ತೇಷಾಂ ಯಥಾಶಬ್ದಂ ಯಥಾಶ್ರುತಂ ।
ಕೀರ್ತ್ಯಮಾನಂ ನಿಬೋಧಧ್ವಂ ಸರ್ವೇಷಾಂ ಕೀರ್ತಿವರ್ಧನಂ ॥ ೮ ॥

---

೪. ಹೀಗೆ ಆ ಸೂತನು ಮಹರ್ಷಿಗಳಿಂದ ಪದೇ ಪದೇ ಪ್ರಾರ್ಥಿಸಲ್ಪಟ್ಟವರಾಗಿ ಸುಜನೋತ್ತಮರಾದ ಅವರು ಕ್ರಮವಾಗಿ ವಿಸ್ತಾರವಾಗಿ ಹೇಳತೊಡಗಿದರು.

೫-೭. ಲೋಮಹರ್ಷಣನು ಹೇಳಿದನು:— ಎಲೈ ಮಹರ್ಷಿಗಳೇ, ನೀವು ಕೇಳಿದ್ದರಿಂದ ನಾನು ನಿಮಗಾಗಿ ಹೇಳುವ ಕಥೆಯು ಸಕಲಪಾಪಪರಿಹಾರಕವಾಗಿಯೂ, ದಿವ್ಯವಾಗಿಯೂ, ಬಹಳ ವಿಚಿತ್ರವಾಗಿಯೂ ಇದೆ. ಯಾರು ಈ ಕಥೆಯನ್ನು ಪದೇ ಪದೇ ಕೇಳಿ ಮನಸ್ಸಿನಲ್ಲಿ ಧಾರಣಮಾಡುತ್ತಾರೋ ಮತ್ತು ಬ್ರಾಹ್ಮಣರಿಗೂ, ಯತಿಗಳಿಗೂ ತಿಳಿಸುತ್ತಾರೆಯೋ, ಪರ್ವಕಾಲಗಳಲ್ಲಿ ಶುದ್ಧರಾಗಿ ತೀರ್ಥಕ್ಷೇತ್ರಗಳಲ್ಲಿ ಪಠನಮಾಡುತ್ತಾರೆಯೋ, ಅವರು ಆಯುರಾರೋಗ್ಯಾದಿ ಸಕಲ ಇಷ್ಟಾರ್ಥಗಳನ್ನೂ ಪಡೆಯುವರಲ್ಲದೆ ಸದ್ವಂಶದ ತಿಳುವಳಿಕೆಯಿಂದ ಶಾಶ್ವತವಾದ ಸ್ವರ್ಗಸುಖವನ್ನು ಪಡೆಯುತ್ತಾರೆ.

೮. ನಾನು ಯಾವ ಆನುಪೂರ್ವಿಯನ್ನು ಹೇಗೆ ಕೇಳಿದೆನೋ ಅದೇ ರೀತಿಯಲ್ಲಿ, ಅದೇ ಶಬ್ದಗಳಿಂದಲೇ ಹೇಳುವ ಈ ಕಥೆಯು ಸರ್ವರಿಗೂ ಕೀರ್ತಿಪ್ರದವಾಗಿದೆ.

ಧನ್ಯಂ ಯಶಸ್ಯಂ ಶತ್ರುಘ್ನಂ ಸ್ವರ್ಗಮಾಯುರ್ವಿವರ್ಧನಂ ।
ಕೀರ್ತನಂ ಸ್ಥಿರಕೀರ್ತೀನಾಂ ಸರ್ವೇಷಾಂ ಪುಣ್ಯಕಾರಿಣಾಂ ॥ ೯ ॥

ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।
ವಂಶಾನು ಚರಿತಂ ಚೇತಿ ಪುರಾಣಂ ಪಂಚಲಕ್ಷಣಂ ॥ ೧೦ ॥

ಕಲ್ಪೇಭ್ಯೋಽಪಿ ಹಿ ಯಃ ಕಲ್ಪಃ ಶುಚಿಭ್ಯೋ ನಿಯತಃ ಶುಚಿಃ ।
ಪುರಾಣಂಸಂಪ್ರವಕ್ಷ್ಯಾಮಿ ಮಾರುತಂ ವೇದಸಮ್ಮಿತಂ ॥ ೧೧ ॥

ಪ್ರಬೋಧಃ ಪ್ರಲಯಶ್ಚೈವ ಸ್ಥಿತಿರುತ್ಪತ್ತಿರೇವ ಚ ।
ಪ್ರಕ್ರಿಯಾ ಪ್ರಥಮಃ ಪಾದಃ ಕಥ್ಯವಸ್ತು ಪರಿಗ್ರಹಃ ॥ ೧೨ ॥

ಉಪೋದ್ಘಾತೋಽನುಷಂಗಶ್ಚ ಉಪಸಂಹಾರ ಏವ ಚ ।
ಧರ್ಮ್ಯಂ ಯಶಸ್ಯಮಾಯುಷ್ಯಂ ಸರ್ವಪಾಪ ಪ್ರಣಾಶನಂ ॥ ೧೩ ॥

---

೯. ಇದನ್ನು ಶ್ರವಣಮಾಡಿದ ಮಹಾತ್ಮರು ಆಯುಸ್ಸು, ಸ್ವರ್ಗ, ಧನ, ಯಶಸ್ಸು, ಶತ್ರುನಾಶನ ಇವೇ ಮೊದಲಾದವುಗಳನ್ನು ಹೊಂದುವುದರಲ್ಲಿ ಸಂದೇಹ ವಿಲ್ಲ.

೧೦. ಸೃಷ್ಟಿ, ಲಯ, ಸೂರ್ಯಚಂದ್ರಾದಿಗಳ ವಂಶಗಳು ಮನ್ವಂತರಗಳು ಮತ್ತು ಆಯಾ ವಂಶದಲ್ಲಿ ಹುಟ್ಟಿದ ರಾಜಾದಿಗಳ ಚರಿತ್ರೆ, ಅವಾಂತರಸೃಷ್ಟಿ ಇವುಗಳ ವರ್ಣನವೆಂಬ ಐದು ಲಕ್ಷಣಗಳಿಂದ ಕೂಡಿರುವುದು ಪುರಾಣವೆನಿಸಿಕೊಳ್ಳುವುದು. ಅಂತಹ ಪುರಾಣವನ್ನು ನಿಮಗಾಗಿ ತಿಳಿಸುವೆನು.

೧೧. ವಾಯುದೇವನಿಂದ ಉಕ್ತವೂ, ವೇದಗಳಿಗೆ ಸಮವೂ ಆದ ಈ ಪುರಾಣವು ಕಲ್ಪವೃಕ್ಷಾದಿಗಳಿಗಿಂತ ಶ್ರೇಷ್ಠವಾಗಿಯೂ, ಪವಿತ್ರವಾಗಿಯೂ ಇದೆ. ಅಂತಹ ಪುರಾಣವನ್ನು ಹೇಳುವೆನು.

೧೨-೧೩. ಈ ಪುರಾಣದಲ್ಲಿ ಪ್ರಕ್ರಿಯಾಪಾದ, ಉಪೋದ್ಘಾತಪಾದ, ಅನುಷಂಗಪಾದ, ಉಪಸಂಹಾರಕಪಾದಗಳೆಂದು ನಾಲ್ಕು ಪಾದಗಳಿವೆ. ಮೊದಲನೆಯ ಪಾದದಲ್ಲಿ ಪ್ರಬೋಧ [ಜ್ಞಾನ] ಸೃಷ್ಟಿಸ್ಥಿತಿಲಯಗಳೂ, ಎರಡನೆಯ ಪಾದದಲ್ಲಿ ಕಥಾವಸ್ತುಸಂಗ್ರಹವೂ, ಮೂರನೆಯ ಪಾದದಲ್ಲಿ ಧರ್ಮಗಳೂ, ನಾಲ್ಕನೆಯ ಪಾದದಲ್ಲಿ ಆಯುಷ್ಯಪಾಪನಾಶವೂ ಉಕ್ತವಾಗಿವೆ.

ಏವಂ ಹಿ ಪಾದಾಶ್ಚತ್ವಾರಃ ಸಮಾಸಾತ್ ಕೀರ್ತಿತಾ ಮಯಾ ।
ವಕ್ಷ್ಯಾಮ್ಯೇತಾನ್ ಪುನಸ್ತಾಂತು ವಿಸ್ತರೇಣ ಯಥಾಕ್ರಮಂ ॥ ೧೪ ॥

ತಸ್ಮೈ ಹಿರಣ್ಯಗರ್ಭಾಯ ಪುರುಷಾಯೇಶ್ವರಾಯ ಚ ।
ಅಂತಾಯ ಪ್ರಥಮಾಯೈವ ವಿಶಿಷ್ಟಾಯ ಪ್ರಜಾತ್ಮನೇ ॥
ಬ್ರಹ್ಮಣೇ ಲೋಕತಂತ್ರಾಯ ನಮಸ್ಕೃತ್ಯ ಸ್ವಯಂಭುವೇ ॥ ೧೫ ॥

ಮಹದಾದ್ಯಂ ವಿಶೇಷಾಂತಂ ಸರ್ವರೂಪ್ಯಂ ಸಲಕ್ಷಣಂ ।
ಪಂಚಪ್ರಮಾಣಂ ಷಟ್ ಶ್ವೇತಂ ಪುರುಷಾಧಿಷ್ಠಿತಂ ನುತಂ ।
ಅಸಂಶಯಾತ್ಪ್ರವಕ್ಷ್ಯಾಮಿ ಭೂತಸರ್ಗಮನುತ್ತಮಂ ॥ ೧೬ ॥

ಅವ್ಯಕ್ತಂ ಕಾರಣಂ ಯತ್ತು ನಿತ್ಯಂ ಸದಸದಾತ್ಮಕಂ ।
ಪ್ರಧಾನಂ ಪ್ರಕೃತಿಂ ಚೈವ ಯಮಾಹುಸ್ತತ್ವಚಿಂತಕಾಃ ॥ ೧೭ ॥

---

೧೪. ಹೀಗೆ ಸಂಕ್ಷೇಪವಾಗಿ ನಾಲ್ಕುಪಾದಗಳ ವಿಷಯಗಳನ್ನು ಹೇಳಿರುತ್ತೇನೆ. ಮುಂದೆ ಇವುಗಳನ್ನು ವಿಸ್ತಾರವಾಗಿ ನಿರೂಪಿಸುವೆನು.

೧೫. ಹಿರಣ್ಯಗರ್ಭನೂ, ಪುರುಷಶಬ್ದವಾಚ್ಯನೂ, ಮಹದೈಶ್ವರ್ಯವಂತನೂ, ಪ್ರಥಮಪುರುಷನೂ, ಅಂತಕನೂ, ವಿಶೇಷಗುಣವುಳ್ಳವನೂ, ಪ್ರಜಾರೂಪನೂ, ಲೋಕಕಾರಕನೂ, ಸ್ವಯಂಭುವನೂ ಆದ ಬ್ರಹ್ಮನಿಗೆ ನಮಸ್ಕಾರವನ್ನು ಮಾಡಿ ಪುರಾಣವನ್ನು ಹೇಳುವೆನು.

೧೬. ವೈರೂಪ್ಯಲಕ್ಷಣಗಳಿಂದ ಸಹಿತವೂ, ಐದು ಪ್ರಮಾಣಗಳಿಂದ ಕೂಡಿರುವುದೂ, ಬಿಳುಪಾಗಿರುವುದೂ, ಪುರುಷಾಧಿಷ್ಠಿತವೂ, ಶ್ರೇಷ್ಠವೂ, ಮಹದಾದಿಯಾಗಿ ವಿಶೇಷಾಂತಗಳೂ, ಆದ ಭೂತಸೃಷ್ಟಿಯನ್ನು ನಿಸ್ಸಂದೇಹವಾಗಿ ಹೇಳುವೆನು.

೧೭. ತತ್ವಜ್ಞಾನಿಗಳು ಯಾವುದನ್ನು ಪ್ರಧಾನವೆಂದೂ ಮತ್ತು ಪ್ರಕೃತಿಯೆಂದೂ ಕರೆಯುತ್ತಾರೆಯೋ, ಅಂತಹ ನಿತ್ಯವೂ, ಸದಸದ್ರೂಪವೂ ಆದ ಅವ್ಯಕ್ತ ತತ್ವವೇ ಜಗತ್ಕಾರಣವಾಗಿದೆ.

**ಗಂಧವರ್ಣರಸೈರ್ಹೀನಂ ಶಬ್ದಸ್ಪರ್ಶವಿವರ್ಜಿತಂ ।**
**ಅಜಾತಂ ಧ್ರುವಮಕ್ಷಯ್ಯಂ ನಿತ್ಯಂ ಸ್ವಾತ್ಮನ್ಯವಸ್ಥಿತಂ ॥ ೧೮ ॥**

**ಜಗದ್ಯೋನಿಂ ಮಹದ್ಭೂತಂ ಪರಂ ಬ್ರಹ್ಮ ಸನಾತನಂ ।**
**ವಿಗ್ರಹಂ ಸರ್ವಭೂತಾನಾಮವ್ಯಕ್ತಮಭವತ್ ಕಿಲ ॥ ೧೯ ॥**

**ಅನಾದ್ಯಂತಮಜಂ ಸೂಕ್ಷ್ಮಂ ತ್ರಿಗುಣಂ ಪ್ರಭವಾವ್ಯಯಂ ।**
**ಅಸಾಂಪ್ರತಮವಿಜ್ಞೇಯಂ ಬ್ರಹ್ಮಾಗ್ರೇ ಸಮವರ್ತತ ॥ ೨೦ ॥**

**ತಸ್ಯಾತ್ಮನಾ ಸರ್ವಮಿದಂ ವ್ಯಾಪ್ತಮಾಸೀತ್ತಮೋಮಯಂ ।**
**ಗುಣಸಾಮ್ಯೇ ತದಾ ತಸ್ಮಿನ್ ಗುಣಭಾವೇ ತಮೋಮಯೇ ॥ ೨೧ ॥**

**ಸರ್ಗಕಾಲೇ ಪ್ರಧಾನಸ್ಯ ಕ್ಷೇತ್ರಜ್ಞಾಧಿಷ್ಠಿತಸ್ಯ ವೈ ।**
**ಗುಣಭಾವಾದಾಚ್ಯಮಾನೋ ಮಹಾನ್ ಪ್ರಾದುರ್ಬಭೂವ ಹ ॥ ೨೨ ॥**

---

೧೮-೧೯. ಆ ಅವ್ಯಕ್ತತತ್ವವು ರೂಪರಸಶಬ್ದಸ್ಪರ್ಶವರ್ಣರಹಿತವೂ ಉತ್ಪತ್ತಿಶೂನ್ಯವೂ, ನಿತ್ಯವೂ, ನಾಶರಹಿತವೂ, ಆತ್ಮಾಶ್ರಯವೂ, ಜಗತ್ಕಾರಣವೂ, ಮಹಾಭೂತರೂಪವೂ, ಪುರಾತನವೂ, ಪರಬ್ರಹ್ಮಸ್ವರೂಪವೂ ಸರ್ವಭೂತಕಾರಣವೂ ಆಗಿರುತ್ತದೆ.

೨೦. ಅನಾದ್ಯಂತನೂ, ಉತ್ಪತ್ತಿ ಇಲ್ಲದವನೂ, ಸೂಕ್ಷ್ಮರೂಪನೂ, ತ್ರಿಗುಣರೂಪನೂ, ನಾಶರಹಿತನೂ, ಅವಿಜ್ಞೇಯನೂ, ಅಸಾಂಪ್ರತನೂ, ಆದ ಬ್ರಹ್ಮನು ಜಗತ್ಸೃಷ್ಟಿಯಾಗುವುದಕ್ಕೆ ಪೂರ್ವದಲ್ಲಿಯೇ ಇದ್ದನು.

೨೧. ಆ ಬ್ರಹ್ಮನ ಸ್ವರೂಪದಿಂದಲೇ ತಮೋರೂಪವಾದ ಸರ್ವ ಜಗತ್ತು ವ್ಯಾಪ್ತವಾಗಿದೆ ಆಗ ಕೆಲವು ಗುಣಸಾಮ್ಯದಿಂದ, ಗುಣರೂಪವಾಗಿಯೂ, ಮತ್ತೆ ಕೆಲವು ತಮೋಮಯವಾಗಿಯೂ ಇದ್ದವು.

೨೨ ಸೃಷ್ಟಿಕಾಲದಲ್ಲಿ ಕ್ಷೇತ್ರಜ್ಞನಾದ ಪುರುಷನಿಂದ ಅಧಿಷ್ಠಿತವಾದ ಪ್ರಕೃತಿತತ್ವದಿಂದ ಒಳ್ಳೆಯ ಗುಣವುಳ್ಳ ಮಹತ್ತತ್ವವು ಜನಿಸಿತು.

ಸೂಕ್ಷ್ಮೇಣ ಮಹತಾ ಸೋಥ ಅವ್ಯಕ್ತೇನ ಸಮಾವೃತಃ ।
ಸತ್ವೋದ್ರಿಕ್ತೋ ಮಹಾನಗ್ರೇ ಸತ್ವಮಾತ್ರಪ್ರಕಾಶಕಂ ॥
ಮನೋ ಮಹಾಂಶ್ಚ ವಿಜ್ಞೇಯೋ ಮನಸತ್ಕಾರಣಂ ಸ್ಮೃತಂ ॥ ೨೩ ॥

ಲಿಂಗಮಾತ್ರಸಮುತ್ಪನ್ನಃ ಕ್ಷೇತ್ರಜ್ಞಾಧಿಷ್ಠಿತಸ್ತು ಸಃ ।
ಧರ್ಮಾದೀನಾಂತು ರೂಪಾಣಿ ಲೋಕತತ್ವಾರ್ಥಹೇತವಃ ॥
ಮಹಾಂಸ್ತು ಸೃಷ್ಟಿಂ ಕುರುತೇ ನೋದ್ಯಮಾನಃ ಸಿಸೃಕ್ಷಯಾ ॥ ೨೪ ॥

ಮನೋ ಮಹಾನ್ಮತಿರ್ಬ್ರಹ್ಮಾ ಪೂರ್ಬುದ್ಧಿಃ ಖ್ಯಾತಿರೀಶ್ವರಃ ।
ಪ್ರಜ್ಞಾ ಚಿತಿಃ ಸ್ಮೃತಿಃ ಸಂವಿತ್ ವಿಪುರಂ ಚೋಚ್ಯತೇ ಬುಧೈಃ ॥ ೨೫ ॥

ಮನುತೇ ಸರ್ವ ಭೂತಾನಾಂ ಯಸ್ಮಾಚ್ಚೇಷ್ಟಾಫಲಂ ವಿಭುಃ ।
ಸೌಕ್ಷ್ಮ್ಯಾತ್ತೇನ ವಿವೃದ್ಧಾನಾಂ ತೇನ ತನ್ಮನ ಉಚ್ಯತೇ ॥ ೨೬ ॥

---

೨೩. ತರುವಾಯ ಸೂಕ್ಷ್ಮರೂಪವೂ, ಮಹತ್ತವೂ ಆದ ಅವ್ಯಕ್ತತತ್ವವು ಮೊದಲು ಸ್ವತಂತ್ರ ಪ್ರಕಾಶಕವಾಗಿ ಸತ್ವಗುಣಪ್ರಾಚುರ್ಯದಿಂದ ಪ್ರಕಾಶಿಸಿತು. ಅದರಿಂದಲಾದರೋ ಅಹಂಕಾರತತ್ವವು ಜನಿಸಿತು. ಅದಕ್ಕೆ ಮನಸ್ಸೇ ಆಶ್ರಯ ವಾಗಿರುವುದು.

೨೪. ಪುರುಷಾಧಿಷ್ಠಿತವೂ, ಪ್ರಕೃತಿಜನ್ಯವೂ, ಧರ್ಮಸ್ವರೂಪವೂ, ಲೋಕ ತತ್ವಗಳಿಗೆ ಕಾರಣವೂ, ಆದ ಮಹತ್ತತ್ವವು ಪುರುಷೇಚ್ಛೆಯಿಂದ ಪ್ರೇರಿತವಾಗಿ ಸೃಷ್ಟಿಯನ್ನು ಮಾಡುತ್ತದೆ

೨೫ ಜ್ಞಾನಿಗಳು ಆದನ್ನು ಮನಸ್ಸು, ಮಹಾನ್, ಮತಿ, ಬ್ರಹ್ಮಾ, ಪುರ, ಬುದ್ಧಿ, ಖ್ಯಾತಿ, ಈಶ್ವರ, ಪ್ರಜ್ಞಾ, ಚಿತಿ, ಸ್ಮೃತಿ, ಸಂವಿತ್, ವಿಪುರ, ಎಂಬ ನಾನಾ ವಿಧವಾದ ಹೆಸರುಗಳಿಂದ ಕರೆಯುತ್ತಾರೆ.

೨೬. ಸಾಕ್ಷಾದ್ಭಗವಂತನು ಯಾವಕಾರಣದಿಂದ, ಅತಿಸೂಕ್ಷ್ಮವಾಗಿ ವೃದ್ಧಿ ಹೊಂದಿರುವ ಸರ್ವಭೂತಗಳ ಚೇಷ್ಟಾವಿಷಯಗಳನ್ನು ತಿಳಿಯುತ್ತಾನೆಯೋ, ಅದಕ್ಕೆ ಮನಸ್ಸೆಂಬ ನಾಮವು ಸಾರ್ಥಕವಾಗಿದೆ.

**ತತ್ವಾನಾಮಗ್ರಜೋ ಯಸ್ಮಾತ್ ಮಹಾಂಶ್ಚ ಪರಿಮಾಣತಃ ।**
**ಶಿಷ್ಟೇಭ್ಯೋಽಪಿ ಗುಣೇಭ್ಯೋಽಸೌ ಮಹಾನಿತಿ ತತಃ ಸ್ಮೃತಃ ॥ ೨೭ ॥**

**ಬಿಭರ್ತಿ ಮಾನಂ ಮನುತೇ ವಿಭಾಗಂ ಮನ್ಯತೇಽಪಿ ಚ ।**
**ಪುರುಷೋ ಭೋಗಸಂಬಂಧಾತ್ ತೇನ ಚಾಸೌ ಮತಿಃ ಸ್ಮೃತಃ ॥ ೨೮ ॥**

**ಬೃಹತ್ವಾದ್ಬೃಂಹಣತ್ವಾಚ್ಚ ಭಾವಾನಾಂ ಸಲಿಲಾಶ್ರಯಾತ್ ।**
**ಯಸ್ಮಾದ್ಬೃಂಹಯತೇ ಭಾವಾನ್ ಬ್ರಹ್ಮಾ ತೇನ ನಿರುಚ್ಯತೇ ॥ ೨೯ ॥**

**ಆಪೂರಯಿತ್ವಾ ಯಸ್ಮಾಚ್ಚ ಕೃತ್ಸ್ನಾನ್ ದೇಹಾನನುಗ್ರಹೈಃ ।**
**ತತ್ವಭಾವಾಂಶ್ಚ ನಿಯತಾಂಸ್ತೇನ ಪೂರಿತಿ ಚೋಚ್ಯತೇ ॥ ೩೦ ॥**

**ಬುಧ್ಯತೇ ಪುರುಷಶ್ಚಾತ್ರ ಸರ್ವಾನ್ ಭಾವಾನ್ ಹಿತಾಹಿತಾನ್ ।**
**ಯಸ್ಮಾದ್ಬೋಧಯತೇ ಚೈವ ತೇನ ಬುದ್ಧಿರ್ನಿರುಚ್ಯತೇ ॥ ೩೧ ॥**

---

೨೭. ಇದು ಮಿಕ್ಕ ತತ್ವಗಳಿಗಿಂತಲೂ ಮೊದಲು ಜನಿಸಿದ್ದರಿಂದಲೂ, ಪರಿಮಾಣದಲ್ಲಿಯೂ, ಮಹತ್ತಾಗಿರುವುದರಿಂದಲೂ, ಮಹತ್ತತ್ವವು, ಮಹಾ ಎಂಬ ಅನ್ವರ್ಥನಾಮವನ್ನು ಹೊಂದಿ ಇತರ ಗುಣಗಳಿಗಿಂತಲೂ ಉತ್ತಮವಾಗಿರುತ್ತದೆ.

೨೮. ಪುರುಷನು ಶರೀರಸಂಸರ್ಗವುಳ್ಳ ಏತರಿಂದ ತತ್ವಗಳ ವಿಭಾಗಗಳನ್ನೂ ಪ್ರಮಾಣವನ್ನೂ ತಿಳಿಯುವನೋ, ಅದಕ್ಕೆ ಮತಿ ಎಂಬ ನಾಮವು ಬಂದಿದೆ.

೨೯. ಯಾವುದು ಸ್ವತಃ ಬೃಹತ್ತಾಗಿಯೂ, ಪೂರ್ಣವಾಗಿಯೂ, ಜಲಾಶ್ರಯವಾದ ಇತರ ವಸ್ತುಗಳನ್ನು ವೃದ್ಧಿಗೊಳಿಸುವುದಾಗಿಯೂ, ಭಾವಗಳನ್ನು ಹೊರಡಿಸುವುದಾಗಿಯೂ, ಮತ್ತು ಸುಪ್ರಸಿದ್ಧವಾಗೆಯೂ ಇದೆಯೋ, ಅದು ಬ್ರಹ್ಮ ಎಂಬ ನಾಮದಿಂದ ಪ್ರಸಿದ್ಧವಾಗಿದೆ.

೩೦. ಏತರಿಂದ ಭಗವಂತನು ಸಮಸ್ತದೇಹಗಳಿಗೂ ಸಂಪೂರ್ಣಾನುಗ್ರಹವನ್ನು ಮಾಡಿರುವನೋ, ಮತ್ತು ನಿಯಮಿತವಾದ ವಿಷಯಗಳಿನ್ನು ತುಂಬಿರುವನೋ, ಆದಕ್ಕೆ ಪುರವೆಂಬ ನಾಮವು ಪ್ರಾಪ್ತವಾಗಿದೆ.

೩೧. ಪುರುಷನು ಏತರಿಂದ ಹಿತಾಹಿತಗಳಾದ ಸರ್ವವಿಷಯಗಳನ್ನೂ ತಿಳಿಯುವನೋ, ಮತ್ತು ಇತರರಿಗೆ ತಿಳಿಸುವನೋ, ಅದಕ್ಕೆ ಬುದ್ಧಿ ಎಂದು ಹೆಸರಾಗಿದೆ.

ಖ್ಯಾತಿಃ ಪ್ರತ್ಯುಪಭೋಗಶ್ಚ ಯಸ್ಮಾತ್ ಸಂವರ್ತತೇ ತತಃ ।
ಭೋಗಶ್ಚ ಜ್ಞಾನನಿಷ್ಠತ್ವಾತ್ ತೇನ ಖ್ಯಾತಿರಿತಿ ಸ್ಮೃತಃ ॥ ೩೨ ॥

ಖ್ಯಾಯತೇ ತದ್ಗುಣೈರ್ವಾಪಿ ನಾಮಾದಿಭಿರನೇಕಶಃ ।
ತಸ್ಮಾಚ್ಚ ಮಹತಃ ಸಂಜ್ಞಾ ಖ್ಯಾತಿರಿತ್ಯಭಿದೀಯತೇ ॥ ೩೩ ॥

ಸಾಕ್ಷಾತ್ ಸರ್ವಂ ವಿಜಾನಾತಿ ಮಹಾತ್ಮಾತೇನ ಚೇಶ್ವರಃ ।
ತಸ್ಮಾಜ್ಜಾತಾ ಗ್ರಹಾಶ್ಚೈವ ಪ್ರಜ್ಞಾ ತೇನ ಸ ಉಚ್ಯತೇ ॥ ೩೪ ॥

ಜ್ಞಾನಾದೀನಿ ಚ ರೂಪಾಣಿ ಕ್ರತುಕರ್ಮ ಫಲಾನಿ ಚ ।
ಚಿನೋತಿ ಯಸ್ಮಾದ್ಭೋಗಾರ್ಥಾ ತೇನಾಸೌ ಚಿತಿರುಚ್ಯತೇ ॥ ೩೫ ॥

ವರ್ತಮಾನಾನ್ಯತೀತಾನಿ ತಥಾ ಚಾನಾಗತಾನ್ಯಪಿ ।
ಸ್ಮರತೇ ಸರ್ವಕಾರ್ಯಾಣಿ ತೇನಾಸೌ ಸ್ಮೃತಿರುಚ್ಯತೇ ॥ ೩೬ ॥

---

೩೨. ಪ್ರಸಿದ್ಧಿ ಪ್ರತ್ಯುಪಭೋಗಗಳು ಏತರಿಂದುಂಟಾಗುತ್ತವೆಯೋ, ಅಂತಹ ಭೋಗವು ಜ್ಞಾನವನ್ನಾಶ್ರಯಿಸುವುದರಿಂದ ಖ್ಯಾತಿಯೆಂಬ ಹೆಸರು ಬಂದಿದೆ.

೩೩. ನಾಮದಿಂದಲೂ, ಗುಣದಿಂದಲೂ, ಯಾವುದು ಪ್ರಸಿದ್ಧವಾಗಿದೆಯೋ, ಅಂತಹ ಮಹತ್ತತ್ವಕ್ಕೆ ಖ್ಯಾತಿಯೆಂದು ನಾಮವು ಪ್ರಾಪ್ತವಾಗಿದೆ.

೩೪. ಮಹಾತ್ಮನಾದ ಪರಮೇಶ್ವರನು ಏತರಿಂದ ಸರ್ವವಿಷಯಗಳನ್ನು ತಿಳಿಯುತ್ತಾನೆಯೋ, ಯಾವುದರಿಂದ ಗ್ರಹಗಳೆಲ್ಲವೂ ಹುಟ್ಟಿದೆಯೋ, ಅದಕ್ಕೆ ಪ್ರಜ್ಞೆ ಎಂಬುದಾಗಿ ಹೆಸರು ಬಂದಿದೆ.

೩೫. ಯಾವುದು ಭೋಗಾದಿವಿಷಯಗಳಿಂದ ಯಾಗಗಳ ಕರ್ಮಫಲಗಳನ್ನೂ, ಜ್ಞಾನಾದಿ ರೂಪಗಳನ್ನೂ, ಕೂಡ ಕೂಡಿಹಾಕುತ್ತದೆಯೋ, ಅಥವಾ ವೃದ್ಧಿಪಡಿಸುತ್ತದೆಯೋ ಅಂತಹ ಮಹತ್ತತ್ವಕ್ಕೆ ಚಿತಿ ಎಂಬ ಸಂಜ್ಞೆ ಬಂದಿದೆ.

೩೬. ಭೂತಭವಿಷ್ಯದ್ವರ್ತಮಾನಗಳಲ್ಲಿರುವ ಸರ್ವಕಾರ್ಯಗಳನ್ನೂ ಯಾವುದು ಸ್ಮರಿಸುತ್ತದೆಯೋ, ಅದಕ್ಕೆ ಸ್ಮೃತಿಯೆಂದು ಹೆಸರು ಉಂಟಾಗಿದೆ.

ಕೃತ್ಸ್ನಂ ಚ ವಿಂದತೇ ಜ್ಞಾನಂ ತಸ್ಮಾನ್ಮಾಹಾತ್ಮ್ಯಮುಚ್ಯತೇ ।
ತಸ್ಮಾದ್ವಿದೇರ್ವಿದೇಶ್ಚೈವ ಸಂವಿದಿತ್ಯಭಿಧೀಯತೇ ॥ ೩೭ ॥

ವಿದ್ಯತೇ ಸ ಚ ಸರ್ವಸ್ಮಿನ್ ಸರ್ವಂ ತಸ್ಮಿಂಶ್ಚ ವಿದ್ಯತೇ ।
ತಸ್ಮಾತ್ಸಂವಿದಿತಿ ಪ್ರೋಕ್ತೋ ಮಹಾನ್ ವೈ ಬುದ್ಧಿಮತ್ತರೈಃ ॥ ೩೮ ॥

ಜ್ಞಾನಾತ್ತು ಜ್ಞಾನಮಿತ್ಯಾಹ ಭಗವಾನ್ ಜ್ಞಾನಸನ್ನಿಧಿಃ ।
ದ್ವಂದ್ವಾನಾಂ ವಿಪುರೀ ಭವಾದ್ವಿಪುರಂ ಪ್ರೋಚ್ಯತೇ ಬುಧೈಃ ॥ ೩೯ ॥

ಸರ್ವೇಶತ್ವಾಚ್ಚ ಲೋಕಾನಾಮವಶ್ಯಂ ಚ ತಥೇಶ್ವರಃ ।
ಬೃಹತ್ವಾಚ್ಚ ಸ್ಮೃತೋ ಬ್ರಹ್ಮಾಭೂತತ್ವಾದ್ಭವ ಉಚ್ಯತೇ ॥ ೪೦ ॥

ಕ್ಷೇತ್ರ ಕ್ಷೇತ್ರಜ್ಞ ವಿಜ್ಞಾನಾದೇಕತ್ವಾಚ್ಚ ಸಕಃ ಸ್ಮೃತಃ ।
ಯಸ್ಮಾತ್ಪುರ್ಯನುಶೇತೇ ಚ ತಸ್ಮಾತ್ ಪುರುಷ ಉಚ್ಯತೇ ॥ ೪೧ ॥

---

೩೭. ಸಂಪೂರ್ಣ ಜ್ಞಾನವನ್ನು ಹೊಂದಿರುವುದರಿಂದ ಅದರ ಮಹಿಮೆಯು ಮಹತ್ತಾಗಿದೆ. ಇಂತಹ ಸರ್ವವಿಷಯಗಳನ್ನು ತಿಳಿದಿರುವ ತತ್ವಕ್ಕೆ ಸಂವಿತ್ತೆಂದು ಹೆಸರು ಪ್ರಾಪ್ತವಾಗಿದೆ.

೩೮. ಯಾವುದು ಸರ್ವ ವಸ್ತುಗಳಲ್ಲಿರುತ್ತದೆಯೋ, ಏತರಲ್ಲಿ ಎಲ್ಲಾ ವಸ್ತುಗಳೂ ಇವೆಯೋ, ಈ ಕಾರಣಗಳಿಂದಲೂ ಜ್ಞಾನಿಗಳು ಆ ಮಹತ್ತತ್ವವನ್ನು ಸಂವಿತ್ತೆಂದು ಹೇಳುತ್ತಾರೆ.

೩೯. ಸರ್ವಜ್ಞನ ಸನ್ನಿಧಾನದಿಂದಲೂ, ಸರ್ವವನ್ನೂ ತಿಳಿಸುವುದರಿಂದಲೂ, ಜ್ಞಾನವೆಂಬ ಹೆಸರೂ, ದ್ವಂದವಾದ ಸುಖದುಃಖಗಳನ್ನು ಪರಿವರ್ತಿಸುವುದರಿಂದ ವಿಪುರವೆಂಬ ನಾಮವೂ ಪ್ರಾಪ್ತವಾಯಿತೆಂದು ಜ್ಞಾನಿಗಳು ಹೇಳುವರು.

೪೦. ಭಗವಂತನಿಗೆ ಲೋಕಗಳಿಗೆಲ್ಲ ಒಡೆಯನಾಗಿರುವುದರಿಂದಲೂ, ವಶನಾಗದೇ ಇರುವುದರಿಂದಲೂ, ಈಶ್ವರನೆಂದೂ, ಬೃಹದ್ವಸ್ತುವಾದ ಕಾರಣ ಬ್ರಹ್ಮನೆಂದೂ, ಅವತರಿಸುವುದರಿಂದ ಭವನೆಂದೂ ಹೆಸರು ಬಂದಿದೆ

೪೧. ಬ್ರಹ್ಮನು ಕ್ಷೇತ್ರ, ಕ್ಷೇತ್ರಜ್ಞವಿಜ್ಞಾನದಿಂದಲೂ, ಒಬ್ಬಂಟಿಗನಾಗಿರುವುದರಿಂದಲೂ, ಬ್ರಹ್ಮಶಬ್ದವಾಚ್ಯನೂ, ದೇಹದಲ್ಲಿರುವುದರಿಂದ ಪುರುಷಶಬ್ದವಾಚ್ಯನೂ ಆಗಿರುತ್ತಾನೆ.

ಪರ್ಯಾಯವಾಚಕೈಃ ಶಬ್ದೈಸ್ತತ್ವಮಾದ್ಯಮನುತ್ತಮಂ ।
ವ್ಯಾಖ್ಯಾತಂ ತತ್ವಭಾವಜ್ಞೈರೇವಂ ಸದ್ಭಾವಚಿಂತಕೈಃ ॥ ೪೨ ॥

ಮಹಾನ್ ಸೃಷ್ಟಿಂ ವಿಕುರುತೇ ಚೋದ್ಯಮಾನಃ ಸಿಸೃಕ್ಷಯಾ ।
ಸಂಕಲ್ಪೋಧ್ಯವಸಾಯಶ್ಚ ತಸ್ಯ ವೃತ್ತಿದ್ವಯಂ ಸ್ಮೃತಂ ॥ ೪೩ ॥

ಧರ್ಮಾದೀನಿ ಚ ರೂಪಾಣಿ ಲೋಕತತ್ವಾರ್ಥಹೇತವಃ
ತ್ರಿಗುಣಸ್ತು ಸ ವಿಜ್ಞೇಯಃ ಸತ್ವರಾಜಸತಾಮಸಃ ॥ ೪೪ ॥

ತ್ರಿಗುಣಾದ್ರಜಸೋದ್ರಿಕ್ತಾದಹಂಕಾರ ಸ್ತತೋಭವತ್ ।
ಮಹತಾ ಚಾವೃತಃ ಸರ್ಗೋ ಭೂತಾದಿರ್ವಿಕೃತಸ್ತು ಸಃ ॥ ೪೫ ॥

ತಸ್ಮಾಚ್ಚ ತಮಸೋ ದ್ರಿಕ್ತಾದಹಂಕಾರಾದ ಜಾಯತ !
ಭೂತತನ್ಮಾತ್ರಸರ್ಗಸ್ತು ಭೂತಾದಿಸ್ತಾಮಸಸ್ತು ಸಃ ॥ ೪೬ ॥

---

೪೨. ಸದ್ವಿಷಯಜ್ಞರಾದ ತತ್ವಜ್ಞಾನಿಗಳು ಮೇಲೆ ನಿರೂಪಿಸಿರುವ ಪ್ರಕೃತಿಯನ್ನು ಪರ್ಯಾಯ ಶಬ್ದಗಳಿಂದ ಸರ್ವೋತ್ತಮವಾದ ಮೊದಲನೆಯ ತತ್ವವೆಂದು ಕರೆಯುತ್ತಾರೆ.

೪೩. ಸೃಷ್ಟಿಮಾಡುವ, ಇಚ್ಛೆಯಿಂದ ಪ್ರೇರಿತವಾದ ಮಹತ್ತತ್ವವು ಸೃಷ್ಟಿಸುವುದು. ಸಂಕಲ್ಪ, ಅಧ್ಯವಸಾಯವೆಂಬುದಾಗಿ ಅದಕ್ಕೆ ವೃತ್ತಿದ್ವಯಗಳಿವೆ.

೪೪ ಧರ್ಮಾದಿ ರೂಪಗಳು ಲೋಕತತ್ವ ಜ್ಞಾನದ ಕಾರಣಗಳಾಗಿವೆ. ಸತ್ವ, ರಜಸ್ಸು, ತಮಸ್ಸುಗಳನ್ನು ತ್ರಿಗುಣಗಳೆಂಬುದಾಗಿ ತಿಳಿಯಬೇಕು.

೪೫. ರಜೋಗುಣ ಪ್ರಾಚುರ್ಯವುಳ್ಳ ತ್ರಿಗುಣಗಳಿಂದ ಅಹಂಕಾರತತ್ವವೂ, ಅದರಿಂದ ಭೂತತನ್ಮಾತ್ರಗಳೂ, ಅವುಗಳಿಂದ ಭೂತಾಧಿಗಳೂ ಉತ್ಪನ್ನವಾಗುತ್ತವೆ.

೪೬. ತಮೋಗುಣ ಪ್ರಾಚುರ್ಯವುಳ್ಳ ಅಹಂಕಾರ ತತ್ವದಿಂದ ಭೂತತನ್ಮಾತ್ರಾದಿ ಸೃಷ್ಟಿಯೂ, ಅದರಿಂದ ಭೂತಾದಿ ಸೃಷ್ಟಿಯೂ ನಡೆದುವು.

ಆಕಾಶಂ ಸುಷಿರಂ ತಸ್ಮಾದುದ್ರಿಕ್ತಂ ಶಬ್ದಲಕ್ಷಣಂ ।
ಆಕಾಶಂ ಶಬ್ದಮಾತ್ರಂತು ಭೂತಾದಿಶ್ಚಾವೃಣೋತ್ ಪುನಃ ॥ ೪೭ ॥

ಶಬ್ದಮಾತ್ರಂ ತದಾಕಾಶಂ ಸ್ಪರ್ಶಮಾತ್ರಂ ಸಸರ್ಜ ಹ ।
ಭೂತಾದಿಸ್ತು ವಿಕುರ್ವಾಣಃ ಶಬ್ದಮಾತ್ರಂ ಸಸರ್ಜ ಹ ॥ ೪೮ ॥

ಬಲವಾನ್ ಜಾಯತೇ ವಾಯುಃ ಸ ವೈ ಸ್ಪರ್ಶಗುಣೋ ಮತಃ ।
ಆಕಾಶಂ ಶಬ್ದಮಾತ್ರಂತು ಸ್ಪರ್ಶಮಾತ್ರಂ ಸಮಾವೃಣೋತ್ ॥ ೪೯ ॥

ರಸಮಾತ್ರಸ್ತು ತಾ ಹ್ಯಾಪೋ ರೂಪಮಾತ್ರಾಭಿರಾವೃಣೋತ್ ।
ಆಪೋ ರಸಾನ್ ವಿಕುರ್ವಂತ್ಯೋ ಗಂಧಮಾತ್ರಂ ಸಸರ್ಜಿರೇ ॥ ೫೦ ॥

ಸಂಘಾತೋ ಜಾಯತೇ ತಸ್ಮಾತ್ತಸ್ಯ ಗಂಧೋ ಗುಣಃ ಸ್ಮೃತಃ ।
ರಸಮಾತ್ರಂತು ತತ್ತ್ತೋಯಂ ಗಂಧಮಾತ್ರಂ ಸಮಾವೃಣೋತ್ ॥ ೫೧ ॥

---

೪೭. ಶಬ್ದತನ್ಮಾತ್ರದಿಂದ ಕೂಡಿದ ಆಕಾಶದಿಂದ ವಾಯ್ವಾದಿ ಮಿಕ್ಕ ಗುಣಗಳುಳ್ಳ ಭೂತಗಳು ಜನಿಸಿದವು.

೪೮. ಶಬ್ದತನ್ಮಾತ್ರೆಯುಳ್ಳ ಆಕಾಶವು ಸ್ಪರ್ಶಮಾತ್ರೆಯನ್ನುಂಟುಮಾಡಿತು. ಆವೃತವಾದ ಭೂತಾದಿಗಳು ಶಬ್ದಮಾತ್ರೆಯನ್ನುಂಟುಮಾಡಿತು.

೪೯. ಸ್ಪರ್ಶತನ್ಮಾತ್ರೆಯಿಂದ ಸ್ಪರ್ಶಗುಣವುಳ್ಳ ವಾಯುವು ಹುಟ್ಟಿತು. ಆಕಾಶದ ಶಬ್ದತನ್ಮಾತ್ರೆಯು ಸ್ಪರ್ಶತನ್ಮಾತ್ರೆಯನ್ನು ಆವರಿಸಿತು.

೫೦. ರಸತನ್ಮಾತ್ರೆಯಿಂದ ಜಲವೂ, ಆ ತನ್ಮಾತ್ರೆಯಿಂದ ಗಂಧತನ್ಮಾತ್ರೆಯೂ, ಜನಿಸಿದುವು. ರೂಪತನ್ಮಾತ್ರೆಯಿಂದ ಆವೃತವಾದ ಜಲವು ರಸವನ್ನು ವಿಕಾರಮಾಡಿ ಗಂಧತನ್ಮಾತ್ರೆಯನ್ನುಂಟುಮಾಡಿತು.

೫೧. ಅವುಗಳ ಸಮುದಾಯದಿಂದ ಪೃಥಿವಿಯು ಉತ್ಪನ್ನವಾಗುತ್ತದೆ. ಅದರ ಗುಣವು, ಗಂಧವು ಮತ್ತು ರಸಮಾತ್ರವುಳ್ಳ ಜಲವು, ಗಂಧಮಾತ್ರೆಯುಳ್ಳ ಪೃಥಿವಿಯನ್ನು ಆವರಿಸಿತು.

ತಸ್ಮಿಂಸ್ತಸ್ಮಿಂಸ್ತು ತನ್ಮಾತ್ರಾ ತೇನ ತನ್ಮಾತ್ರಕಾ ಸ್ಮೃತಾ ।
ಅವಿಶೇಷವಾಚಕತ್ವಾದವಿಶೇಷಾಸ್ತತಃ ಸ್ಮೃತಾಃ ॥
ಅಶಾಂತಘೋರಮೂಢತ್ವಾದವಿಶೇಷಾಸ್ತತಃ ಪುನಃ ॥ ೫೨ ॥

ಭೂತತನ್ಮಾತ್ರಸರ್ಗೋಽಯಂ ವಿಜ್ಞೇಯಸ್ತು ಪರಸ್ಪರಾತ್ ।
ವೈಕಾರಿಕಾದಹಂಕಾರಾತ್ಸತ್ವೋದ್ರಿಕ್ತಾತ್ತು ಸಾತ್ವಿಕಾತ್ ॥
ವೈಕಾರಿಕಃ ಸ ಸರ್ಗಸ್ತು ಯುಗಪತ್ಸಂಪ್ರವರ್ತತೇ ॥ ೫೩ ॥

ಬುದ್ಧೀಂದ್ರಿಯಾಣಿ ಪಂಚೈವ ಪಂಚ ಕರ್ಮೇಂದ್ರಿಯಾಣ್ಯಪಿ ।
ಸಾಧಕಾನೀಂದ್ರಿಯಾಣಿ ಸ್ಯುರ್ದೇವಾ ವೈಕಾರಿಕಾ ದಶ ॥
ಏಕಾದಶಂ ಮನಸ್ತತ್ರ ದೇವಾ ವೈಕಾರಿಕಾಸ್ಮೃತಾಃ ॥ ೫೪ ॥

ಶ್ರೋತ್ರತ್ವ ಚಕ್ಷುಷೀ ಜಿಹ್ವಾ ನಾಸಿಕಾ ಚೈವ ಪಂಚಮೀ ।
ಶಬ್ದಾದೀನಾಮವಾಪ್ತ್ಯರ್ಥಂ ಬುದ್ಧಿಯುಕ್ತಾನಿ ವಕ್ಷ್ಯತೇ ॥ ೫೫ ॥

---

೫೨. ಆಯಾ ಭೂತಗಳು ಆಯಾ ತನ್ಮಾತ್ರೆಗಳಿಂದ ಹುಟ್ಟುತ್ತವೆ. ಆದರಿಂದ ಅವು ತನ್ಮಾತ್ರೆಯುಳ್ಳವುಗಳೆಂದು ಹೆಸರುವಾಸಿಗಳಾಗುತ್ತವೆ. ವಿಶೇಷವಿಲ್ಲದಿರುವುದರಿಂದ ಆ ತನ್ಮಾತ್ರೆಗಳಿಗೆ ಅವಿಶೇಷಗಳೆಂದು ನಾಮವು ಬಂದಿದೆ.

೫೩. ಶಾಂತಿಯಿಲ್ಲದೆಯೂ, ಘೋರವಾಗಿಯೂ, ಮೂಢವಾಗಿಯೂ ಇರುವುದರಿಂದ ತನ್ಮಾತ್ರೆಗಳಿಗೆ ಅವಿಶೇಷವೆಂಬ ಸಂಜ್ಞೆಯಿದೆ. ಹೀಗೆ ಪರಸ್ಪರ ಸಂಬಂಧದಿಂದ ಭೂತತನ್ಮಾತ್ರೆಗಳ ಸರ್ಗವು ಉಕ್ತವಾಗಿದೆ ಅಹಂಕಾರತತ್ವವು ವೈಕಾರಿಕ, ಆಹಂಕಾರಿಕ, ತಾಮಸವೆಂಬುದಾಗಿ ಮೂರು ವಿಧವಾಗಿದೆ. ಸಾತ್ವಿಕಗುಣೋದ್ರಿಕ್ತವಾದ ಅಹಂಕಾರದಿಂದ ವೈಕಾರಿಕಾಹಂಕಾರ ಸೃಷ್ಟಿಯು ಉಂಟಾಗುತ್ತದೆ.

೫೪. ವೈಕಾರಿಕಾಹಂಕಾರ ತತ್ವದಿಂದ ದಶೇಂದ್ರಿಯಗಳು, ಮನಸ್ಸು ಪಂಚ ಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ಮತ್ತು ಹನ್ನೊಂದನೆಯ ಮನಸ್ಸು ಸಹ ಹುಟ್ಟುತ್ತವೆ. ದೇವತೆಗಳು ವೈಕಾರಿಕರೆಂದು ಪ್ರಸಿದ್ಧಿಯನ್ನು ಹೊಂದಿರುವರು

೫೫. ಕಣ್ಣು, ಮೂಗು, ಕಿವಿ, ನಾಲಿಗೆ ಮತ್ತು ಚರ್ಮವೆಂಬ ಪಂಚ ಜ್ಞಾನೇಂದ್ರಿಗಳು ಜ್ಞಾನಕ್ಕಾಗಿ ಶಬ್ದಾದಿ ವಿಷಯಗಳನ್ನು ಬುದ್ಧಿಯ ಸಂಬಂಧದಿಂದ ತಿಳಿಯುತ್ತವೆ

ಪಾದೌ ಪಾಯುರುಪಸ್ಥಂ ಚ ಹಸ್ತೌ ವಾಗ್ದಶಮೀ ಭವೇತ್ ।
ಗತಿರ್ವಿಸರ್ಗೋ ಹ್ಯಾನಂದಃ ಶಿಲ್ಪಂ ವಾಕ್ಯಂ ಚ ಕರ್ಮ ಚ ॥ ೫೬ ॥

ಆಕಾಶಂ ಶಬ್ದಮಾತ್ರಂ ಚ ಸ್ಪರ್ಶಮಾತ್ರಂ ಸಮಾವಿಶೇತ್ ।
ದ್ವಿಗುಣಸ್ತು ತತೋ ವಾಯುಃ ಶಬ್ದಸ್ಪರ್ಶಾತ್ಮಕೋ ಭವತ್ ॥ ೫೭ ॥

ರೂಪಂತಥೈವ ವಿಶತಃ ಶಬ್ದಸ್ಪರ್ಶಗುಣಾವುಭೌ ।
ತ್ರಿಗುಣಸ್ತು ತತಶ್ಚಾಗ್ನಿಃ ಸ ಶಬ್ದಸ್ಪರ್ಶರೂಪವಾನ್ ॥ ೫೮ ॥

ಸಶಬ್ದ ಸ್ಪರ್ಶರೂಪಂ ಚ ರಸಮಾತ್ರಂ ಸಮಾವಿಶತ್ ।
ತಸ್ಮಾಚ್ಚತುರ್ಗುಣಾ ಹ್ಯಾಪೋ ವಿಜ್ಞೇಯಾಸ್ತು ರಸಾತ್ಮಿಕಾ ॥ ೫೯ ॥

ಸಂಯುಕ್ತಾ ಗಂಧಮಾತ್ರೇಣ ಆಚಿನ್ವಂತಿ ಮಹೀಮಿಮಾಂ ॥
ತಸ್ಮಾತ್ಪಂಚಗುಣಾ ಭೂಮಿಃ ಸ್ಥೂಲಭೂತೇಷು ದೃಶ್ಯತೇ ॥ ೬೦ ॥

---

೫೬. ಕಾಲು, ಕೈ, ವಾಯು, ಉಪಸ್ಥ, ವಾಕ್ ಎಂಬ ಪಂಚಕರ್ಮೇಂದ್ರಿಯಗಳು ನಡೆ, ನುಡಿ, ಆದಾನ, ತ್ಯಾಗ, ಆನಂದ ಇವುಗಳು ಕಾರ್ಯವಾಗಿವೆ.

೫೭. ಶಬ್ದಮಾತ್ರೆಯುಳ್ಳ ಆಕಾಶವು ಸ್ಪರ್ಶಮಾತ್ರೆಯನ್ನು ಸೇರುತ್ತದೆ. ಆದುದರಿಂದ ವಾಯುವಿನಲ್ಲಿ ಶಬ್ದ, ಸ್ಪರ್ಶಗಳೆಂಬ ಎರಡು ಗುಣಗಳು ಉಂಟಾಗುವುವು.

೫೮. ಶಬ್ದ, ಸ್ಪರ್ಶಗಳೆಂಬ ಎರಡು ಗುಣಗಳು ರೂಪಸ್ಪರ್ಶವನ್ನು ಸೇರುತ್ತವೆ. ಇದರಿಂದ ರೂಪ, ರಸ, ಸ್ಪರ್ಶವೆಂಬ ಮೂರು ಗುಣಗಳು ಅಗ್ನಿಯಲ್ಲಿ ಇರುತ್ತವೆ.

೫೯. ಶಬ್ದ, ಸ್ಪರ್ಶರೂಪ ಮಾತ್ರೆಗಳು ರಸತನ್ಮಾತ್ರೆಯನ್ನು ಸೇರಿದುದರಿಂದ ಜಲದಲ್ಲಿ ರೂಪ, ರಸ, ಸ್ಪರ್ಶ, ಶಬ್ದಗಳೆಂಬ ನಾಲ್ಕು ಗುಣಗಳು ಉಂಟಾದುವು.

೬೦. ಗಂಧತನ್ಮಾತ್ರೆಯು ಇತರ ತನ್ಮಾತ್ರೆಗಳೊಡನೆ ಸೇರಿ ಐದು ಗುಣಗಳಿರುವ ಭೂಮಿಯನ್ನು ಸೃಷ್ಟಿಸಿತು. ಇದರಿಂದ ಭೂಮಿಯಲ್ಲಿ ಗಂಧರೂಪ, ರಸ, ಶಬ್ದ ಸ್ಪರ್ಶಗಳೆಂಬ ಐದು ಗುಣಗಳೂ ಇರುತ್ತವೆ. ಪಂಚಭೂತಗಳಲ್ಲಿ ಈ ಐದು ಗುಣಗಳು ಪೃಥವಿಯಲ್ಲಿ ಮಾತ್ರ ಇರುತ್ತವೆ.

ಶಾಂತಾ ಘೋರಾಶ್ಚ ಮೂಢಾಶ್ಚ ವಿಶೇಷಾಸ್ತೇನ ತೇ ಸ್ಮೃತಾಃ ।
ಪರಸ್ಪರಾನುಪ್ರವೇಶಾದ್ಧಾರಯಂತಿ ಪರಸ್ಪರಂ ॥ ೬೧ ॥

ಭೂಮೇರಂತಸ್ತ್ವಿದಂ ಸರ್ವಂ ಲೋಕಾಲೋಕಘನಾವೃತಂ ।
ವಿಶೇಷಾ ಇಂದ್ರಿಯಗ್ರಾಹ್ಯಾ ನಿಯತತ್ವಾಚ್ಚ ತೇ ಸ್ಮೃತಾಃ ॥ ೬೨ ॥

ಗುಣಂ ಪೂರ್ವಸ್ಯ ಪೂರ್ವಸ್ಯ ಪ್ರಾಪ್ನುವಂತ್ಯುತ್ತರೋತ್ತರಂ ।
ತೇಷಾಂ ಯಾವಚ್ಚ ಯದ್ಯಚ್ಚ ತತ್ತತ್ತಾವದ್ಗುಣಂ ಸ್ಮೃತಂ ॥ ೬೩ ॥

ಉಪಲಭ್ಯ ಶುಚೀರ್ಗಂಧಂ ಕೇಚಿದ್ವಾಯೋರನೈಪುಣಾತ್ ।
ಪೃಥಿವ್ಯಾಮೇವ ತದ್ವಿದ್ಯಾದೇಷಾಂ ವಾಯೋಶ್ಚ ಸಂಶ್ರಯಾತ್ ॥ ೬೪ ॥

ಏತೇ ಸಪ್ತ ಮಹಾವೀರ್ಯಾ ನಾನಾಭೂತಾಃ ಪೃಥಕ್ ಪೃಥಕ್ ।
ನಾಶಕ್ನುವರ್ನ ಪ್ರಜಾ ಸ್ರಷ್ಟುಮಸಮಾಗಮ್ಯ ಕೃತ್ಸ್ನಶಃ ॥
ತೇ ಸಮೇತ್ಯ ಮಹಾತ್ಮಾನೋ, ಹ್ಯನ್ಯೋನ್ಯಸ್ಯೈವ ಸಂಶ್ರಯಾತ್ ॥ ೬೫ ॥

---

೬೧. ಈ ಪಂಚ ತನ್ಮಾತ್ರೆಗಳಿಗೆ ಶಾಂತಾ, ಘೋರಾ, ಮೂಢಾ. ವಿಶೇಷ ಎಂಬ ನಾಲ್ಕು ಹೆಸರುಗಳು ಇರುತ್ತವೆ ಇವು ಒಂದಕ್ಕೊಂದು ಸೇರಿ ಸಹಾಯ ಮಾಡುತ್ತವೆ.

೬೨. ಲೋಕಾಲೋಕ ಪರ್ವತದಿಂದ ಕೂಡಿದ ಪೃಥವೀ ಮಧ್ಯದಲ್ಲಿ ಇವೆಲ್ಲವೂ ಇರುತ್ತದೆ. ಇವೆಲ್ಲವೂ ಇಂದ್ರಿಯಗಳಿಂದ ತಿಳಿಯಲು:ಯೋಗ್ಯವಾಗಿದೆ.

೬೩. ಆಕಾಶಾದಿ ಪೂರ್ವಭೂತಗುಣವನ್ನು ಉತ್ತರದಲ್ಲಿ ಜನಿಸಿದ ಭೂತವು ಪಡೆಯುತ್ತದೆ. ಇದರಿಂದ ಆಕಾಶದಲ್ಲಿ ಶಬ್ದಮಾತ್ರ ಗುಣವಿದೆ. ವಾಯುವಿನಲ್ಲಿ ಎರಡು, ಅಗ್ನಿಯಲ್ಲಿ ಮೂರು, ಜಲದಲ್ಲಿ ನಾಲ್ಕು, ಭೂಮಿಯಲ್ಲಿ ಐದು ಗುಣಗಳಿವೆ.

೬೪. ಕೆಲವರು ವಾಯುವಿನಲ್ಲಿ ಸುಗಂಧವನ್ನು ಕಂಡು ಇದು ವಾಯು ಗುಣವೆಂದು ಭಾವಿಸುವರು. ಆದರೆ ಅದು ನಿಜವಾಗಿಯೂ ಪೃಥಿವೀ ಸಂಬಂಧದಿಂದ ವಾಯುವಿನಲ್ಲಿ ತೋರುತ್ತದೆ.

೬೫. ಈ ಏಳು ತತ್ವಗಳು ಪರಸ್ಪರ ಸಂಬಂಧವಿಲ್ಲದೆಯೇ ಪ್ರತ್ಯೇಕವಾಗಿ ಪ್ರಜಾಸೃಷ್ಟಿಯನ್ನು ಮಾಡಲು ಶಕ್ತಿರಹಿತಗಳಾಗಿರುವುದರಿಂದ ಎಲ್ಲವೂ ಸೇರಿಯೇ ಸೃಷ್ಟಿಮಾಡುತ್ತವೆ.

ಪುರುಷಾಧಿಷ್ಠಿತತ್ವಾಚ್ಚ ಅವ್ಯಕ್ತಾನುಗ್ರಹೇಣ ಚ ।
ಮಹದಾದ್ಯಾ ವಿಶೇಷಾಂತಾ ಅಂಡಮುತ್ಪಾದಯಂತಿ ತೇ ॥ ೬೬ ॥

ಏಕಕಾಲಂ ಸಮುತ್ಪನ್ನಂ ಜಲಬುದ್ಬುದವಚ್ಚ ತತ್ ।
ವಿಶೇಷಾಖ್ಯೋಂಡಮಭವದ್ಬೃಹತ್ತದುದಕಂ ಚ ಯತ್ ॥
ತತ್ರಸ್ಮಿನ್ ಕಾರ್ಯಕರಣಂ ಸಂಸಿದ್ಧಂ ಬ್ರಹ್ಮಣಸ್ತದಾ ॥ ೬೭ ॥

ಪ್ರಾಕೃತೇಂಡೇ ವಿಬುದ್ಧೇ ಸ್ ಕ್ಷೇತ್ರಜ್ಞೋ ಬ್ರಹ್ಮಸಂಜ್ಞಿತಃ ।
ಸ ವೈ ಶರೀರೀ ಪ್ರಥಮಃ ಸ ವೈ ಪುರುಷ ಉಚ್ಯತೇ ॥ ೬೮ ॥

ಆದಿಕರ್ತಾ ಚ ಭೂತಾನಾಂ ಬ್ರಹ್ಮಾಗ್ರೇ ಸಮವರ್ತತ ।
ಹಿರಣ್ಯಗರ್ಭಃ ಸೋಗ್ರೇಸ್ಮಿನ್ ಪ್ರಾದುರ್ಭೂತಶ್ಚತುರ್ಮುಖಃ ॥
ಸರ್ಗೇ ಚ ಪ್ರತಿಸರ್ಗೇ ಚ ಕ್ಷೇತ್ರಜ್ಞೋ ಬ್ರಹ್ಮಸಂಜ್ಞಿತಃ ॥ ೬೯ ॥

ಕರಣೈಃ ಸಹ ಸೃಜ್ಯಂತೇ ಪ್ರತ್ಯಾಹಾರೇ ತ್ಯಜಂತಿ ಚ ।
ಭಜಂತೇ ಚ ಪುನರ್ದೇಹಾನಸಮಾಹಾರಸಂಧಿಷು ॥ ೭೦ ॥

---

೬೬. ತನ್ಮಾತ್ರೆಗಳವರೆಗಿರುವ ಎಲ್ಲಾ ಮಹತ್ತತ್ವಾದಿಗಳು ಅವ್ಯಕ್ತತತ್ವದ ಅನುಗ್ರಹದಿಂದಲೂ, ಪುರುಷರ ಆಶ್ರಯದಿಂದಲೂ, ಅಂಡವನ್ನು ಸೃಷ್ಟಿಸಲು ಶಕ್ತವಾಗುತ್ತವೆ.

೬೭. ಆ ವಿಶೇಷಗಳಿಂದ ಮಹಾಜಲದಲ್ಲಿ ಬ್ರಹ್ಮಾಂಡವು ನೀರಿನ ಗುಳ್ಳೆಯಂತೆ ಏಕಕಾಲದಲ್ಲಿ ಉತ್ಪನ್ನವಾಯಿತು. ಅದರಲ್ಲಿ ಬ್ರಹ್ಮನು ಮುಂದಿನ ಸೃಷ್ಟಿಕ್ರಮವನ್ನು ನಡೆಸುವನು.

೬೮. ಪ್ರಕೃತಿಗಳಿಂದ ಜನ್ಯವಾದ ಆ ಅಂಡದಲ್ಲಿ ಕ್ಷೇತ್ರಜ್ಞ ಸಂಜ್ಞೆಯುಳ್ಳ ಬ್ರಹ್ಮನು ಹುಟ್ಟಿದನು. ಅವನೇ ಪ್ರಥಮಶರೀರಿಯೂ, ವಾಚ್ಯನೂ, ಪುರುಷ ಶಬ್ದವುಳ್ಳವನೂ ಆಗಿದ್ದನು.

೬೯. ಅಗ್ರದಲ್ಲಿ ಜನಿಸಿದ ಆ ಬ್ರಹ್ಮನೇ ಮುಂದಿನ ಭೂತಗಳ ಆದಿ ಕರ್ತನೂ, ಹಿರಣ್ಯ ಗರ್ಭನೂ, ಚತುರ್ಮುಖನೂ, ಸ್ವರ್ಗಪ್ರಳಯಗಳಿಗೆ ಕಾರಣನೂ ಆಗಿರುವನು.

೭೦. ಭೂತಗಳು ತಮ್ಮ ತಮ್ಮ ಇಂದ್ರಿಯಗಳೊಡನೆ ಸೃಷ್ಟಿಯನ್ನು ಹೊಂದಿ ಲಯಕಾಲದಲ್ಲಿ ಅವನನ್ನು ತ್ಯಜಿಸುತ್ತವೆ. ಪುನಃ ದೇಹವನ್ನು ಪಡೆಯುತ್ತವೆ. ಸಂಧಿಪ್ರಲಯಕಾಲಗಳಲ್ಲಿ ಶರೀರವಿಲ್ಲವು

ತಸ್ಮಿನ್ನಂಡೇ ತ್ವಿಮೇ ಲೋಕಾ ಅಂತರ್ಭೂತಾಸ್ತು ಸಪ್ತ ವೈ ।
ಸಪ್ತದ್ವೀಪಾ ಚ ಪೃಥ್ವೀಯಂ ಸಮುದ್ರೈಃ ಸಹ ಸಪ್ತಭಿಃ ॥ ೭೧ ॥

ಹಿರಣ್ಮಯಸ್ತು ಯೋ ಮೇರುಸ್ತಸ್ಯೋಲ್ಬಂ ತನ್ಮಹಾತ್ಮನಃ ।
ಗರ್ಭೋದಕಂ ಸಮುದ್ರಾಶ್ಚ ಜರಾಯ್ವಸ್ಥೀನಿ ಪರ್ವತಾಃ ॥ ೭೨ ॥

ಪರ್ವತೈಃ ಸುಮಹದ್ಭಿಶ್ಚ ನದೀಭಿಶ್ಚ ಸಹಸ್ರಶಃ ।
ಅಂತಸ್ತಸ್ಮಿಂಸ್ತ್ವಿಮೇ ಲೋಕಾ ಅಂತರ್ವಿಶ್ವಮಿದಂ ಜಗತ್ ॥ ೭೩ ॥

ಚಂದ್ರಾದಿತ್ಯೌ ಸನಕ್ಷತ್ರೌ ಸಗ್ರಹೌ ಸಹ ವಾಯುನಾ ।
ಲೋಕಾಲೋಕಂ ಚ ಯತ್ ಕಿಂಚಿಚ್ಚಾಂಡೇ ತಸ್ಮಿನ್ ಸಮರ್ಪಿತಂ ॥ ೭೪ ॥

ಅದ್ಭಿರ್ದಶಗುಣಾಭಿಸ್ತು ಬಾಹ್ಯತೋಂಡಂ ಸಮಾವೃತಂ ।
ಆಪೋ ದಶಗುಣಾ ಹ್ಯೇವಂ ತೇಜಸಾ ಬಾಹ್ಯತೋ ವೃತಾಃ ॥ ೭೫ ॥

---

೭೧-೭೨. ಆ ಮಹಾತ್ಮನಾದ ಚತುರ್ಮುಖನ ಗರ್ಭಪಿಂಡವೇ ಸುವರ್ಣಮಯವಾದ ಮೇರುಪರ್ವತವೂ, ಗರ್ಭೋದಕವೇ ಸಮುದ್ರಗಳೂ, ಮೂಳೆಗಳೇ ಪರ್ವತಗಳೂ ಆಗಿವೆ. ಆ ಬ್ರಹ್ಮಾಂಡದಲ್ಲಿ ಈ ಸಪ್ತಲೋಕಗಳೂ, ಸಪ್ತದ್ವೀಪಗಳೂ, ಸಪ್ತಸಮುದ್ರಗಳೂ, ಇವುಗಳಿಂದ ಕೂಡಿದ ಪೃಥಿವಿಯೂ ಸಹ ಇರುತ್ತವೆ.

೭೩. ಈ ಜಗತ್ತಿನಲ್ಲಿ ಈ ಸಪ್ತಲೋಕಗಳೂ, ಅವುಗಳಲ್ಲಿ ಸಾವಿರಾರು ನದಿಗಳೂ, ಮಹತ್ತಾದ ಪರ್ವತಗಳೂ ಸಹ ಇವೆ.

೭೪. ಆ ಬ್ರಹ್ಮಾಂಡದಲ್ಲಿ ಸೂರ್ಯಚಂದ್ರರೂ, ನಕ್ಷತ್ರಗಳೂ, ಗ್ರಹಗಳೂ, ವಾಯುವೂ, ಲೋಕಾಲೋಕ ಪರ್ವತವೂ ಇವೇ ಮೊದಲಾದವುಗಳು ಅಡಗಿವೆ.

೭೫. ಬ್ರಹ್ಮಾಂಡಕ್ಕಿಂತಲೂ ಹತ್ತರಷ್ಟು ಅಧಿಕವಾದ ಜಲದಿಂದ ಬ್ರಹ್ಮಾಂಡವು ಆವೃತವಾಗಿಯೂ, ಆ ಜಲವೂ ಕೂಡ, ಹತ್ತರಷ್ಟು ಅಧಿಕವಾದ ತೇಜಸ್ಸಿನಿಂದ ಹೊರಭಾಗದಲ್ಲಿ ಆವೃತವಾಗಿಯೂ ಇರುತ್ತವೆ.

ತೇಜೋ ದಶಗುಣೇನೈವ ಬಾಹ್ಯತೋ ವಾಯುನಾ ವೃತಂ।
ವಾಯೋರ್ದಶಗುಣೇನೈವ ಬಾಹ್ಯತೋ ನಭಸಾ ವೃತಂ ॥ ೭೬ ॥

ಆಕಾಶೇನ ವೃತೋ ವಾಯುಃ ಖಂ ಚ ಭೂತಾದಿನಾ ವೃತಂ ।
ಭೂತಾದಿರ್ಮಹತಾ ಚಾಪಿ ಅವ್ಯಕ್ತೇನ ವೃತೋ ಮಹಾ‌ನ್ ॥
ಏತೈರಾವರಣೈರಂಡಂ ಸಪ್ತಭಿಃ ಪ್ರಾಕೃತೈರ್ವೃತಂ ॥ ೭೭ ॥

ಏತಾಶ್ಚಾವೃತ್ಯ ಚಾನ್ಯೋನ್ಯಮಷ್ಟೌ ಪ್ರಕೃತಯಃ ಸ್ಥಿತಾಃ ।
ಪ್ರಸರ್ಗಕಾಲೇ ಸ್ಥಿತ್ವಾ ಚ ಗ್ರಸಂತ್ಯೇತಾಃ ಪರಸ್ಪರಂ ॥ ೭೮ ॥

ಏವಂ ಪರಸ್ಪರೋತ್ಪನ್ನಾ ಧಾರಯಂತಿ ಪರಸ್ಪರಂ।
ಆಧಾರಾಧೇಯ ಭಾವೇನ ವಿಕಾರಸ್ಯ ವಿಕಾರಿಷು ॥ ೭೯ ॥

---

೭೬. ಆ ಅಗ್ನಿಯು ದಶಗುಣಾಧಿಕವಾದ ವಾಯುವಿನಿಂದಲೂ, ಆ ವಾಯುವು ಹತ್ತರಷ್ಟು ಅಧಿಕವಾದ ಆಕಾಶದಿಂದಲೂ ಆವೃತಗಳಾಗಿವೆ.

೭೭. ವಾಯುವು ಆಕಾಶದಿಂದಲೂ, ಆಕಾಶವು ಭೂತಾದಿಗಳಿಂದಲೂ, ಆ ಮಹತ್ತತ್ವವು ಅವ್ಯಕ್ತತತ್ವದಿಂದಲೂ ಆವೃತವಾಗಿವೆ.

೭೮. ಈ ಬ್ರಹ್ಮಾಂಡವು ಹೀಗೆ ಸಪ್ತಾವರಣಗಳಿಂದ ಕೂಡಿದೆ. ಅವುಗಳೂ ಸಹ ಪ್ರಕೃತಿಗಳಿಂದ ಆವೃತಗಳಾಗಿವೆ. ಹೀಗೆ ಅಷ್ಟಾವರಣಗಳು ಸೃಷ್ಟಿಕಾಲದಲ್ಲಿರುತ್ತವೆ. ಇದೇ ಕ್ರಮವಾಗಿಯೇ ಪ್ರಳಯಕಾಲದಲ್ಲಿ ಕ್ರಮವಾಗಿ ಒಂದರಲ್ಲೊಂದು ಲೀನವಾಗುತ್ತದೆ.

೭೯. ಹೀಗೆಯೇ ಏತರಿಂದ ಯಾವ ವಸ್ತುಗಳು ಹುಟ್ಟುತ್ತವೆಯೋ ಅದು ಆ ವಸ್ತುವನ್ನೇ ಧರಿಸುತ್ತದೆ. ವಿಕಾರವಾಗುವ ವಿಕಾರಿಯಲ್ಲಿ ಅವು ಆಶ್ರಯಾಶ್ರಯ ಭಾವದಿಂದ ಇರುತ್ತವೆ.

ಅವ್ಯಕ್ತಂ ಕ್ಷೇತ್ರಮುದ್ದಿಷ್ಟಂ ಬ್ರಹ್ಮಾ ಕ್ಷೇತ್ರಜ್ಞ ಉಚ್ಯತೇ ।
ಇತ್ಯೇಷ ಪ್ರಾಕೃತಃ ಸರ್ಗಃ ಕ್ಷೇತ್ರಜ್ಞಾಧಿಷ್ಠಿತಸ್ತು ಸಃ ॥
ಅಬುದ್ಧಿಪೂರ್ವಕಂ ಪ್ರಾಗಾಸೀತ್ ಪ್ರಾದುರ್ಭೂತಾ ತಡಿದ್ಯಥಾ ॥ ೮೦ ॥

ಏತದ್ಧಿರಣ್ಯಗರ್ಭಸ್ಯ ಜನ್ಮ ಯೋ ವೇದ ತತ್ತ್ವತಃ ।
ಆಯುಷ್ಮಾನ್ ಕೀರ್ತಿಮಾನ್ ಧನ್ಯಃ ಪ್ರಜಾವಾಂಶ್ಚ ಭವತ್ಯುತ ॥ ೮೧ ॥

ನಿವೃತ್ತಿಕಾಮೋಽಪಿ ನರಃ ಶುದ್ಧಾತ್ಮಾ ಲಭತೇ ಗತಿಂ ।
ಪುರಾಣಶ್ರವಣಾನ್ನಿತ್ಯಂ ಸುಖಂ ಚ ಕ್ಷೇಮಮಾಪ್ನುಯಾತ್ ॥ ೮೨ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ ಸೃಷ್ಟಿಪ್ರಕರಣಂ
ನಾಮ ಚತುರ್ಥೋಽಧ್ಯಾಯಃ

---

೮೦ ಅವ್ಯಕ್ತ ತತ್ವಕ್ಕೆ ಕ್ಷೇತ್ರವೆಂತಲೂ, ಪುರುಷನಿಗೆ ಕ್ಷೇತ್ರಜ್ಞನೆಂತಲೂ, ಸಂಜ್ಞೆ. ಪುರುಷಾಶ್ರಯವಾದ ಜಗತ್ಸೃಷ್ಟಿಕ್ರಮವು ಪೂರ್ವದಲ್ಲಿ ಬುದ್ಧಿಪೂರ್ವಕವಾಗದೆಯೇ ಇದ್ದಿತು. ಈಗಲಾದರೋ ಆ ಕ್ರಮವು ಆಕಸ್ಮಿಕವಾದ ಮಿಂಚಿನ ಸೃಷ್ಟಿಯಂತೆ ನಡೆಯುತ್ತದೆ.

೮೧. ಯಾವನು ಹಿರಣ್ಯಗರ್ಭನ ಸೃಷ್ಟಿಯನ್ನು ಯಥಾರ್ಥವಾಗಿ ತಿಳಿಯುತ್ತಾನೆಯೋ, ಅವನು ಆಯುಷ್ಮಂತನೂ, ಕೀರ್ತಿವಂತನೂ, ಪುಣ್ಯವಂತನೂ, ಸಂತಾನವುಳ್ಳವನೂ ಆಗುವುದರಲ್ಲಿ ಯಾವ ಸಂದೇಹವೂ ಇಲ್ಲ.

೮೨. ವೈರಾಗ್ಯಶಾಲಿಯಾದ ಪುರುಷನು ಶುದ್ಧಾಂತಕರಣನಾಗಿ ಈ ಪುರಾಣವನ್ನು ಶ್ರವಣಮಾಡುವುದರಿಂದ ಈ ಲೋಕದಲ್ಲಿ ಸಕಲ ಭೋಗಗಳನ್ನೂ, ಪರತ್ರದಲ್ಲಿ ಶಾಶ್ವತವಾದ ಸುಖವನ್ನೂ ಪಡೆಯುವನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ಸೃಷ್ಟಿಪ್ರಕರಣವೆಂಬ
ನಾಲ್ಕನೆಯ ಅಧ್ಯಾಯವು ಸಮಾಪ್ತಿಯಾಯಿತು.

## ನಾಲ್ಕನೆಯ ಅಧ್ಯಾಯದ ಸಾರಾಂಶವು

ಪೂರ್ವದಲ್ಲಿ ಪರಬ್ರಹ್ಮನು ಸೃಷ್ಟಿಮಾಡಬೇಕೆಂಬ ಇಚ್ಛೆಯಿಂದ ಪ್ರಕೃತಿಯನ್ನು ಪ್ರವೇಶಿಸಿ ಗುಣತ್ರಯಗಳ ಮೂಲಕ ಮಹತ್ವತ್ವಾಹಂಕಾರ ತತ್ವಗಳನ್ನೂ, ಅದರಿಂದ ಏಕಾದಶೇಂದ್ರಿಯ ಪಂಚತನ್ಮಾತ್ರೆಗಳನ್ನೂ, ತನ್ಮೂಲಕ ಪಂಚಭೂತ, ಪೃಥಿವ್ಯಾದಿ ಸಪ್ತದ್ವೀಪಗಳನ್ನೂ ಸೃಷ್ಟಿಸಿದನೆಂದು ನಿರೂಪಿತವಾಗಿದೆ. ಹೀಗೆ ಪ್ರಕೃತಿಯ ಮೊದಲುಗೊಂಡು ಸೃಷ್ಟಿಕ್ರಮವನ್ನು ಯಾರು ಕೇಳುವರೋ ಅವರಿಗೆ ಸಕಲ ಪುರುಷಾರ್ಥಗಳೂ ಉಂಟಾಗುತ್ತವೆ. ಎಂಬ ವಿಷಯಗಳು ನಾಲ್ಕನೆಯ ಅಧ್ಯಾಯದಲ್ಲಿ ನಿರೂಪಿತವಾಗಿವೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಪಂಚಮೋಽಧ್ಯಾಯಃ

॥ ಲೋಮಹರ್ಷಣ ಉವಾಚ ॥

**ಯದ್ಧಿ ಸೃಷ್ಟೇಸ್ತು ಸಂಖ್ಯಾತಂ ಮಯಾ ಕಾಲಾಂತರಂ ದ್ವಿಜಾಃ ।**
**ಏತತ್ಕಾಲಾಂತರಂ ಜ್ಞೇಯಮಹರ್ವೈ ಪಾರಮೇಶ್ವರಂ ॥ ೧ ॥**

**ರಾತ್ರಿಸ್ತ್ವೇತಾವತೀ ಜ್ಞೇಯಾ ಪರಮೇಶಸ್ಯ ಕೃತ್ಸ್ನಶಃ ।**
**ಅಹಸ್ತಸ್ಯತು ಯಾ ಸೃಷ್ಟಿಃ ಪ್ರಲಯೋ ರಾತ್ರಿರುಚ್ಯತೇ ॥ ೨ ॥**

---

### ಐದನೆಯ ಅಧ್ಯಾಯವು

೧. ಎಲೈ ಮಹರ್ಷಿಗಳೇ, ನಾನು ಸೃಷ್ಟಿಗೆ ಯಾವ ಕಾಲ ಪರಿಮಾಣವನ್ನು ತಿಳಿಸಿದನೋ, ಅದು ಆ ಭಗವಂತನ ಹಗಲಿನ ಪ್ರಮಾಣವಾಗಿರುವುದು-ರಾತ್ರಿಯಕಾಲವೂ ಕೂಡ ಇಷ್ಟೇ ಪ್ರಮಾಣವುಳ್ಳದ್ದಾಗಿದೆ. ಆ ಬ್ರಹ್ಮನ ಹಗಲಿನಲ್ಲಿ ಸೃಷ್ಟಿಯೂ, ರಾತ್ರಿಯಲ್ಲಿ ಪ್ರಳಯವೂ ಆಗುತ್ತದೆ.

೨. ಬ್ರಹ್ಮನ ಹಗಲಿನಲ್ಲಿ ಹೇಗೆ ಸೃಷ್ಟಿಕ್ರಮಗಳು ನಡೆಯುತ್ತವೆಯೋ, ಹಾಗೆಯೇ ರಾತ್ರಿಯಲ್ಲಿಯೂ ಪ್ರಳಯ ವ್ಯಾಪಾರಗಳು ನಡೆಯುವುದರಿಂದ ಬ್ರಹ್ಮನಿಗೆ ವಿಶ್ರಾಂತಿಯೇ ಇಲ್ಲವು. ಆದರೂ ಪ್ರಜೆಗಳ ಹಿತಾಕಾಂಕ್ಷೆಯಿಂದ ರಾತ್ರಿ ಹಗಲುವೆಂಬ ವ್ಯವಹಾರವು ಸ್ಪಷ್ಟವಾಗುತ್ತದೆ.

ಅಹಶ್ಚ ವಿದ್ಯತೇ ತಸ್ಯ ನ ರಾತ್ರಿರಿತಿ ಧಾರಣಾ ।
ಉಪಚಾರಃ ಪ್ರಕ್ರಿಯತೇ ಲೋಕಾನಾಂ ಹಿತಕಾಮ್ಯಯಾ ॥ ೩ ॥

ಪ್ರಜಾಃ ಪ್ರಜಾನಾಂಪತಯೋ ಋಷಯೋ ಮುನಿಭಿಃ ಸಹ ।
ಋಷೀರ್ ಸನತ್ಕುಮಾರಾಖ್ಯಾನ್ ಬ್ರಹ್ಮಸಾಯುಜ್ಯಗೈಃ ಸಹ ॥ ೪ ॥

ಇಂದ್ರಿಯಾಣೀಂದ್ರಯಾರ್ಥಾಶ್ಚ ಮಹಾಭೂತಾನಿ ಪಂಚ ಚ ।
ತನ್ಮಾತ್ರಾ ಇಂದ್ರಿಯಗಣೋ ಬುದ್ಧಿಶ್ಚ ಮನಸಾ ಸಹ ॥ ೫ ॥

ಅಹಸ್ತಿಷ್ಠಂತಿ ತೇ ಸರ್ವೇ ಪರಮೇಶಸ್ಯ ಧೀಮತಃ ।
ಅಹರಂತೇ ಪ್ರಲೀಯಂತೇ ರಾತ್ರ್ಯಂತೇ ವಿಶ್ವಸಂಭವಃ ॥ ೬ ॥

ಸ್ವಾತ್ಮನ್ಯವಸ್ಥಿತೇ ಸತ್ವೇ ವಿಕಾರೇ ಪ್ರತಿಸಂಹತೇ ।
ಸಾಧರ್ಮ್ಯೇಣಾವ ತಿಷ್ಠೇತೇ ಪ್ರಧಾನಪುರುಷಾವುಭೌ ॥ ೭ ॥

ತಮಃ ಸತ್ಯಗುಣಾವೇತೌ ಸಮತ್ವೇನ ವ್ಯವಸ್ಥಿತೌ ।
ಅತ್ರೋದ್ರಿಕ್ತೌ ಪ್ರಸೂತೌ ಚ ತೌ ತಥಾ ಚ ಪರಸ್ಪರಂ ॥
ಗುಣಸಾಮ್ಯೇ ಲಯೋ ಜ್ಞೇಯೋ ವೈಷಮ್ಯೇ ಸೃಷ್ಟಿರುಚ್ಯತೇ ॥ ೮ ॥

---

೩-೪-೫-೬. ಸರ್ವಜ್ಞನಾದ ಪರಮೇಶ್ವರನ ಹಗಲಿನಲ್ಲಿ ಪ್ರಜೆಗಳು, ಪ್ರಜಾಪತಿಗಳು, ದೇವರ್ಷಿಗಳು, ಬ್ರಹ್ಮರ್ಷಿಗಳು. ಸಾಯುಜ್ಯವನ್ನು ಪಡೆದವರು, ಸನತ್ಕುಮಾರಾದಿ ಮಹರ್ಷಿಗಳು, ಇಂದ್ರಿಯ ತದರ್ಥಗಳು, ಪಂಚಮಹಾ ಭೂತ ಗಳು, ತನ್ಮಾತ್ರೆಗಳು, ಬುದ್ಧಿ, ಮತ್ತು ಮನಸ್ಸು ಇವುಗಳು ತಮ್ಮ ತಮ್ಮ ವ್ಯಾಪಾರ ಗಳನ್ನು ಮಾಡುತ್ತವೆ. ಇವು ರಾತ್ರಿಯಲ್ಲಿ ಲಯವನ್ನು ಹೊಂದುವುವು. ಪುನಃ ರಾತ್ರಿಯಾದ ಮೇಲೆ ವಿಶ್ವ ಸೃಷ್ಟಿಯು ಆಗುವುದು.

೭. ಸತ್ವಗುಣವು ವಿಕಾರವಿಲ್ಲದೆಯೇ ತನ್ನಲ್ಲಿ ತಾನೇ ಶಾಂತವಾಗಿರಲು, ಪ್ರಕೃತಿ ಪುರುಷರಿಬ್ಬರೂ. ಸಮಾನರೂಪರಾಗಿ ಶಾಂತರಾಗಿರುತ್ತಾರೆ.

೮. ಸತ್ವತಮೋಗುಣಗಳು ಸಮನಾಗಿ ಸೌಮ್ಯವಾಗಿದ್ದರೆ, ಸೃಷ್ಟ್ಯಾದಿ ಯಾವ ಕಾರ್ಯಗಳೂ ನಡೆಯುವುದಿಲ್ಲ. ಅವು ಉದ್ರೇಕಗೊಂಡಾಗ ಸೃಷ್ಟ್ಯಾದಿ ಕಾರ್ಯಗಳು ಆಗುತ್ತವೆ. ಗುಣಗಳು ಸಮನಾಗಿದ್ದರೆ ಲಯವೂ, ವಿಷಮವಾಗಿದ್ದರೆ ಸೃಷ್ಟಿಯೂ ಆಗುತ್ತವೆ.

**ತಿಲೇಷು ವಾ ಯಥಾ ತೈಲಂ ಘೃತಂ ಪಯಸಿ ವಾ ಸ್ಥಿತಂ ।**
**ತಥಾ ತಮಸಿ ಸತ್ವೇ ಚ ರಜೋಽವ್ಯಕ್ತಾಶ್ರಿತಂ ಸ್ಥಿತಂ ॥ ೯ ॥**

**ಉಪಾಸ್ಯ ರಜನೀಂ ಕೃತ್ಸ್ನಾಂ ಪರಾಂ ಮಾಹೇಶ್ವರೀಂ ತದಾ ।**
**ಅಹರ್ಮುಖೇ ಪ್ರವೃತ್ತೇ ಚ ಪುನಃ ಪ್ರಕೃತಿಸಂಭವಃ ॥ ೧೦ ॥**

**ಕ್ಷೋಭಯಾಮಾಸ ಯೋಗೇನ ಪರೇಣ ಪರಮೇಶ್ವರಃ ।**
**ಪ್ರಧಾನಂ ಪುರುಷಂ ಚೈವ ಪ್ರವಿಶ್ಯಾಂಡಂ ಮಹೇಶ್ವರಃ ॥ ೧೧ ॥**

**ಪ್ರಧಾನಾತ್ ಕ್ಷೋಭ್ಯಮಾಣಾತ್ತು ರಜೋ ವೈ ಸಮವರ್ತತ ।**
**ರಜಃ ಪ್ರವರ್ತಕಂ ತತ್ರ ಬೀಜೇಷ್ವಪಿ ಯಥಾ ಜಲಂ ॥ ೧೨ ॥**

**ಗುಣವೈಷಮ್ಯಮಾಸಾದ್ಯ ಪ್ರಸೂಯಂತೇ ಹ್ಯಧಿಷ್ಠಿತಾಃ ।**
**ಗುಣೇಭ್ಯಃ ಕ್ಷೋಭ್ಯಮಾಣೇಭ್ಯಸ್ತ್ರಯೋ ದೇವಾ ವಿಜಜ್ಞಿರೇ ॥**
**ಆಶ್ರಿತಾಃ ಪರಮಾಗುಹ್ಯಾಃ ಸರ್ವಾತ್ಮಾನಃ ಶರೀರಿಣಃ ॥ ೧೩ ॥**

---

೯. ಎಳ್ಳಿನಲ್ಲಿ ಎಣ್ಣೆಯೂ, ಹಾಲಿನಲ್ಲಿ ತುಪ್ಪವೂ ಹೇಗೆ ಅಡಗಿರುವುದೋ ಹಾಗೆಯೇ ತಮಸ್ಸತ್ವಗುಣಗಳಲ್ಲಿ ಅವ್ಯಕ್ತಾಶ್ರಿತವಾದ ರಜೋಗುಣವು ಅಡಗಿರುತ್ತದೆ.

೧೦. ಗುಣತ್ರಯಗಳು ರಾತ್ರಿಯೆಲ್ಲಾ ಸಮನಾಗಿದ್ದು ಪ್ರಾತಃಕಾಲದಲ್ಲಿ ಪ್ರಕೃತಿಸಂಭವಗಳಾಗಿ ಸೃಷ್ಟಿಗೆ ಕಾರಣಗಳಾಗುತ್ತವೆ. ಭಗವಂತನು ಹಗಲಿನಲ್ಲಿ ಪ್ರಕೃತಿಯ ಮೂಲಕ ಸೃಷ್ಟಿಯನ್ನು ಮಾಡುವನು.

೧೧. ಮಹದೈಶ್ವರ್ಯವಂತನಾದ ಮಹೇಶ್ವರನು ಉತ್ತಮವಾದ ಯೋಗಾಭ್ಯಾಸದಿಂದ ಪ್ರಕೃತಿ ಪುರುಷನನ್ನ ಪ್ರವೇಶಿಸಿ ಬ್ರಹಾಂಡವನ್ನು ಸೃಷ್ಟಿಸಿದನು.

೧೨. ಈಶ್ವರಪ್ರೇರಿತವಾದ ಪ್ರಧಾನತತ್ವದಿಂದ ರಜೋಗುಣವು ಉತ್ಪನ್ನವಾಗುತ್ತದೆ. ಆ ರಜೋಗುಣವೇ ಬೀಜಾಂಕುರಕ್ಕೆ ಜಲದಂತೆ ಸೃಷ್ಟಿಗೆ ಕಾರಣವಾಗುತ್ತದೆ.

೧೩. ಗುಣವೈಷಮ್ಯವು ಉಂಟಾದರೆ ಅಧಿಷ್ಠಾನದೇವತೆಗಳು ಜನಿಸುವರು. ಹೀಗೆ ಕ್ಷುಬ್ಧಗಳಾದ ಗುಣತ್ರಯಗಳಿಂದ ಉತ್ತಮರೂ, ಗೋಪನಾರ್ಹರೂ, ಸರ್ವಸ್ವರೂಪರೂ, ಆಶ್ರಿತರೂ, ಶರೀರಧಾರಿಗಳೂ ಆದ ಮೂವರು ದೇವತೆಗಳು ಜನಿಸುವರು.

ರಜೋ ಬ್ರಹ್ಮಾ ತಮೋ ಹ್ಯಗ್ನಿಃ ಸತ್ವಂ ವಿಷ್ಣುರಜಾಯತ ।
ರಜಃ ಪ್ರಕಾಶಕೋ ಬ್ರಹ್ಮಾ ಸೃಷ್ಟಿತ್ವೇನ ವ್ಯವಸ್ಥಿತಃ ॥ ೧೪ ॥

ತಮಃ ಪ್ರಕಾಶಕೋಽಗ್ನಿಸ್ತು ಕಾಲತ್ವೇನ ವ್ಯವಸ್ಥಿತಃ ।
ಸತ್ವಪ್ರಕಾಶಕೋ ವಿಷ್ಣುರೌದಾಸೀನ್ಯೇ ವ್ಯವಸ್ಥಿತಃ ॥ ೧೫ ॥

ಏತ ಏವ ತ್ರಯೋ ವೇದಾಃ ಏತ ಏವ ತ್ರಯೋಽಗ್ನಯಃ ।
ಪರಸ್ಪರಾಶ್ರಿತಾ ಹ್ಯೇತೇ ಪರಸ್ಪರಮನುವ್ರತಾಃ ॥ ೧೬ ॥

ಪರಸ್ಪರೇಣ ವರ್ತಂತೇ ಧಾರಯಂತಿ ಪರಸ್ಪರಂ ।
ಅನ್ಯೋನ್ಯಮಿಥುನಾ ಹ್ಯೇತೇ ಹ್ಯನ್ಯೋನ್ಯಮುಪಜೀವಿನಃ ॥
ಕ್ಷಣಂ ವಿಯೋಗೋ ನ ಹ್ಯೇಷಾಂ ನ ತ್ಯಜಂತಿ ಪರಸ್ಪರಂ ॥ ೧೭ ॥

ಈಶ್ವರೋ ಹಿ ಪರೋ ದೇವೋ ವಿಷ್ಣುಸ್ತು ಮಹತಃ ಪರಃ ।
ಬ್ರಹ್ಮಾ ತು ರಜಸೋದ್ರಿಕ್ತಃ ಸರ್ಗಾಯೇಹ ಪ್ರವರ್ತತೇ ॥
ಪರಶ್ಚ ಪುರುಷೋ ಜ್ಞೇಯಃ ಪ್ರಕೃತಿಶ್ಚ ಪರಾ ಸ್ಮೃತಾ ॥ ೧೮ ॥

---

೧೪-೧೫. ರಜೋಗುಣದಿಂದ ಬ್ರಹ್ಮನೂ, ತಮೋಗುಣದಿಂದ ಅಗ್ನಿಯೂ ಸತ್ವಗುಣದಿಂದ ವಿಷ್ಣುವೂ, ಉತ್ಪನ್ನರಾದರು. ರಜೋಗುಣ ಪ್ರಕಾಶಕನಾದ ಬ್ರಹ್ಮನು ಸೃಷ್ಟಿಕರ್ತನೂ, ತಮೋಗುಣ ಪ್ರಕಾಶಕನಾದ ಅಗ್ನಿಯು ಸಂಹಾರ ಕಾರಣನೂ, ಸತ್ವಗುಣ ಪ್ರಕಾಶಕನಾದ ವಿಷ್ಣುವು ಪಾಲನ ಕರ್ತನೂ ಆಗಿ ಪ್ರಖ್ಯಾತರಾಗಿರುವರು.

೧೬-೧೭. ಇವರೇ ಮೂರು ವೇದಗಳಾಗಿಯೂ ಮತ್ತು ಅಗ್ನಿಗಳಾಗಿಯೂ ಇರುವರು. ಇವರು ಪರಸ್ಪರ ಆಶ್ರಿತರಾಗಿ ಒಬ್ಬರನ್ನೊಬ್ಬರು ಆಶ್ರಯಿಸುತ್ತಾರೆ. ಅವರು ಪರಸ್ಪರ ಸಂಬದ್ಧರಾಗಿ ಉಪಜೀವಿಸುವರು. ಇವರಿಗೆ ಸ್ವಲ್ಪಕಾಲವೂ ವಿಯೋಗವಿಲ್ಲ. ಒಬ್ಬರನ್ನೊಬ್ಬರನು ಬಿಡದೇ ನಿತ್ಯಸಂಬದ್ಧರಾಗಿರುವರು.

೧೮. ಈಶ್ವರನು ಉತ್ತಮ ದೇವನಾಗಿರುವನು. ವಿಷ್ಣುವು ಮಹಾತ್ಮನಿಗಿಂತಲೂ ಶ್ರೇಷ್ಠನು. ರಜೋಗಣ ಪ್ರಚುರನಾದ ಬ್ರಹ್ಮನು ಸೃಷ್ಟಿಕರ್ತನಾಗಿರುವನು. ಪುರುಷನು ಸರ್ವೋತ್ತಮನೆಂದೂ, ಪ್ರಕೃತಿಯು ಸರ್ವೋತ್ಕೃಷ್ಟವೆಂದೂ, ಪ್ರಖ್ಯಾತವಾಗಿವೆ.

ಅಧಿಷ್ಠಿತೋಽಸೌ ಹಿ ಮಹೇಶ್ವರೇಣ
ಪ್ರವರ್ತತೇ ಚೋದ್ಯಮಾನಃ ಸಮಂತಾತ್ ।
ಅನುಪ್ರವರ್ತಂತಿ ಮಹಾಂತ ಏವ
ಚಿರಸ್ಥಿತಾಃ ಸ್ವೇ ವಿಷಯೇ ಪ್ರಿಯತ್ವಾತ್ ॥ ೧೯ ॥

ಪ್ರಧಾನಂ ಗುಣವೈಷಮ್ಯಾತ್ ಸರ್ಗಕಾಲೇ ಪ್ರವರ್ತತೇ ।
ಈಶ್ವರಾಧಿಷ್ಠಿತಾತ್ ಪೂರ್ವಂ ತಸ್ಮಾತ್ಸದಸದಾತ್ಮಕಾತ್ ॥
ಬ್ರಹ್ಮಾ ಬುದ್ಧಿಶ್ಚ ಮಿಥುನಂ ಯುಗಪತ್ಸಂಬಭೂವತುಃ ॥ ೨೦ ॥

ತಸ್ಮಾತ್ತಮೋಽವ್ಯಕ್ತಮಯಃ ಕ್ಷೇತ್ರಜ್ಞೋ ಬ್ರಹ್ಮಸಂಜ್ಞಿತಃ ।
ಸಂಸಿದ್ಧಃ ಕಾರ್ಯಕರಣೈರ್ಬ್ರಹ್ಮಾಗ್ರೇ ಸಮವರ್ತತ ॥ ೨೧ ॥

ತೇಜಸಾ ಪ್ರಥಮೋ ಧೀಮಾನವ್ಯಕ್ತಃ ಸಂಪ್ರಕಾಶತೇ ।
ಸ ವೈ ಶರೀರೀ ಪ್ರಥಮಃ ಕಾರಣತ್ವೇ ವ್ಯವಸ್ಥಿತಃ ॥ ೨೨ ॥

---

೧೯. ಈ ಪ್ರಕೃತಿಯು ಪರಮೇಶ್ವರನನ್ನು ಆಶ್ರಯಿಸಿ ಅವನ ಪ್ರೇರಣೆಯಿಂದ ಪ್ರೇರಿತವಾಗಿ ಸ್ವಕಾರ್ಯದಕ್ಷವಾಗಿಯೂ, ಚಿರಸ್ಥಾಯಿಯಾಗಿಯೂ ಇರುವ ಮಹತ್ತತ್ವವನ್ನು ಸೃಷ್ಟಿಗಾಗಿ ಪ್ರೇರಿಸುತ್ತದೆ.

೨೦. ಪ್ರಕೃತಿಯು ಪ್ರಥಮತಃ ಸದಸದ್ರೂಪವೂ, ಈಶ್ವರಾಧಿಷ್ಠಿತವೂ, ಆದ ಗುಣವೈಷಮ್ಯದಿಂದ ಸೃಷ್ಟಿಕಾಲದಲ್ಲಿ ಪ್ರವರ್ತಿಸುತ್ತದೆ. ಬ್ರಹ್ಮನು ಮತ್ತು ಬುದ್ಧಿಯೆಂಬ ಇವೆರಡೂ ಏಕಕಾಲದಲ್ಲಿ ಮಿಥುನ ರೂಪವಾಗಿ ಜನಿಸಿದವು.

೨೧. ಆದುದರಿಂದ ತಮೋಗುಣವು ಅವ್ಯಕ್ತಪ್ರಚುರವಾಗಿರುವುದು. ಅದನ್ನು ಆಶ್ರಯಿಸಿರುವ ಬ್ರಹ್ಮನು ಕ್ಷೇತ್ರಜ್ಞನೂ, ಕಾರ್ಯಕಾರಣಗಳಿಂದ ಪ್ರಸಿದ್ಧನೂ, ಸೃಷ್ಟಿಪೂರ್ವದಲ್ಲಿಯೇ ಪ್ರಖ್ಯಾತನೂ ಆಗಿ ಇರುವನು.

೨೨. ಜ್ಞಾನಿಯೂ, ಅದ್ಯನೂ ಆದ ಪುರುಷನೇ ಮೊದಲು ತೇಜಸ್ಸಿನಿಂದ ಪ್ರಕಾಶವನ್ನು ಹೊಂದುತ್ತಾನೆ. ಅನಂತರ ಶರೀರಧಾರಿಯಾದ ಅವನೇ ಪ್ರಥಮ ಸೃಷ್ಟಿಗೆ ಕಾರಣನಾಗುತ್ತಾನೆಂದು ವ್ಯವಸ್ಥಿತವಾಗಿದೆ.

**ಅಪ್ರತೀಘೇನ ಜ್ಞಾನೇನ ಐಶ್ವರ್ಯೇಣ ಚ ಸೋಽನ್ವಿತಃ ।**
**ಧರ್ಮೇಣ ಚಾ ಪ್ರತೀಘೇನ ವೈರಾಗ್ಯೇಣ ಸಮನ್ವಿತಃ ॥ ೨೩ ॥**

**ತಸ್ಯೇಶ್ವರಸ್ಯಾಪ್ರತಿಘಂ ಜ್ಞಾನಂ ವೈರಾಗ್ಯಲಕ್ಷಣಂ ।**
**ಧರ್ಮೈಶ್ವರ್ಯಕೃತಾಬುದ್ಧಿರ್ಬ್ರಾಹ್ಮೀ ಜಜ್ಞೇಽಭಿಮಾನಿನಃ ॥ ೨೪ ॥**

**ಅವ್ಯಕ್ತಾಜ್ಜಾಯತೇ ಚಾಸ್ಯ ಮನಸಾ ಚ ಯದಿಚ್ಛತಿ ।**
**ವಶೀಕೃತತ್ವಾದ್ವೈಗುಣ್ಯಾತ್ಸುರೇಶತ್ವಾತ್ ಸ್ವಭಾವತಃ ॥ ೨೫ ॥**

**ಚತುರ್ಮುಖಸ್ತು ಬ್ರಹ್ಮತ್ವೇ ಕಾಲತ್ವೇ ಚಾಂತಕೋಽಭವತ್ ।**
**ಸಹಸ್ರಮೂರ್ಧಾ ಪುರುಷಸ್ತಿಸ್ರೋಽವಸ್ಥಾಃ ಸ್ವಯಂಭುವಃ ॥ ೨೬ ॥**

**ಸತ್ವಂ ರಜಶ್ಚ ಬ್ರಹ್ಮತ್ವೇ ಕಾಲತ್ವೇ ಚ ರಜಸ್ತಮಃ ।**
**ಸಾತ್ವಿಕಂ ಪುರುಷತ್ವೇ ಚ ಗುಣವೃತ್ತಿಃ ಸ್ವಯಂಭುವಃ ॥ ೨೭ ॥**

---

೨೩. ಆ ಬ್ರಹ್ಮನು ಅಸದೃಶವೂ, ಪ್ರತಿಬಂಧಕರಹಿತವೂ, ಆದ ಜ್ಞಾನ, ಐಶ್ವರ್ಯ, ಧರ್ಮ ಮತ್ತು ವೈರಾಗ್ಯ ಇವುಗಳಿಂದ ಕೂಡಿ ಪ್ರಕಾಶಿಸುವನು.

೨೪. ಅಭಿಮಾನಿಯಾದ ಬ್ರಹ್ಮನಿಗೆ ವೈರಾಗ್ಯರೂಪವೂ, ಅಸದೃಶವೂ, ಆದ ಜ್ಞಾನ, ಧರ್ಮ, ಐಶ್ವರ್ಯ ಇವುಗಳಿಂದ ಯುಕ್ತವೂ, ಬ್ರಹ್ಮಸಂಬಂಧಿಯೂ ಆದ ಬುದ್ಧಿಯೂ ಜನಿಸಿತು.

೨೫. ಬ್ರಹ್ಮನು ಸ್ವಾಭಾವಿಕವಾಗಿ ಸುರೇಶನಾಗಿಯೂ, ಸ್ವತಂತ್ರನಾಗಿಯೂ, ಪ್ರಾಕೃತಗುಣರಹಿತನಾಗಿಯೂ ಇರುವುದರಿಂದ ಮನಸ್ಸಿನಲ್ಲಿ ಯಾವುದನ್ನು ಯೋಚಿಸಿದರೂ ಅದು ಅವ್ಯಕ್ತತತ್ವದಿಂದ ಸಿದ್ಧವಾಗುವುದು.

೨೬. ಆ ಚತುರ್ಮುಖ ಬ್ರಹ್ಮನು, ಸೃಷ್ಟಿ, ಸ್ಥಿತಿ, ಲಯಗಳೆಂಬ ಮೂರು ಅವಸ್ಥೆಗಳಿಗೆ ಕಾರಣನೂ, ಸಹಸ್ರಶಿರಸ್ಕನೂ, ಪುರುಷಶಬ್ದವಾಚ್ಯನೂ ಆಗಿರುತ್ತಾನೆ.

೨೭. ಬ್ರಹ್ಮದೇವನು ಸತ್ವರಜಸ್ಸುಗಳೆಂಬ ಗುಣಗಳಿಂದ ಸೃಷ್ಟಿಯನ್ನೂ, ರಜಸ್ತಮೋಗುಣಗಳಿಂದ ಲಯವನ್ನೂ ಕೇವಲ ಸತ್ವಗುಣದಿಂದ ರಕ್ಷಣೆಯನ್ನೂ ಮಾಡುತ್ತಾನೆ. ಇವು ಗುಣಸಂಸರ್ಗದಿಂದ ಉಂಟಾಗುವುವು. ಇದರಿಂದ ಇವನಿಗೆ ಬ್ರಹ್ಮ, ಕಾಲ, ಪುರುಷ ಎಂಬ ಮೂರು ನಾಮಗಳು ಉಂಟಾಗಿವೆ.

ಲೋಕಾನ್ ಸೃಜತಿ ಬ್ರಹ್ಮತ್ವೇ ಕಾಲತ್ವೇ ಸಂಕ್ಷಿಪತ್ಯಪಿ ।
ಪುರುಷತ್ವೇಽಪ್ಯುದಾಸೀನಸ್ತಿಸ್ರೋಽವಸ್ಥಾಃ ಪ್ರಜಾಪತೇಃ ॥ ೨೮ ॥

ಬ್ರಹ್ಮಾ ಕಮಲಗರ್ಭಾಭಃ ಕಾಲೋಽಜಾತ್ಯಂಜನಪ್ರಭಃ ।
ಪುರುಷಃ ಪುಂಡರೀಕಾಕ್ಷೋ ರೂಪಂ ತತ್ಪರಮಾತ್ಮನಃ ॥ ೨೯ ॥

ಯೋಗೇಶ್ವರಃ ಶರೀರಾಣಿ ಕರೋತಿ ವಿಕರೋತಿ ಚ ।
ನಾನಾಕೃತಿಕ್ರಿಯಾರೂಪನಾಮವೃತ್ತಿಃ ಸ್ವಲೀಲಯಾ ॥ ೩೦ ॥

ತ್ರಿಧಾ ಯದ್ವರ್ತತೇ ಲೋಕೇ ತಸ್ಮಾತ್ತ್ರಿಗುಣ ಉಚ್ಯತೇ ।
ಚತುರ್ಧಾ ಪ್ರವಿಭಕ್ತತ್ವಾಚ್ಚತುರ್ವ್ಯೂಹಃ ಪ್ರಕೀರ್ತಿತಃ ॥ ೩೧ ॥

ಯದಾಪ್ನೋತಿ ಯದಾದತ್ತೇ ಯಚ್ಚಾಸ್ತಿ ವಿಷಯಂ ಪ್ರತಿ ।
ತಚ್ಚಾಸ್ಯ ಸತತಂ ಭಾವಸ್ತಸ್ಮಾದಾತ್ಮಾ ನಿರುಚ್ಯತೇ ॥ ೩೨ ॥

---

೨೮. ಬ್ರಹ್ಮನು ಬ್ರಹ್ಮತ್ವವನ್ನು ಹೊಂದಿದಾಗ ಲೋಕಗಳ ಸೃಷ್ಟಿಯನ್ನೂ, ಕಾಲತ್ವವನ್ನು ಪಡೆದಾಗ ಲಯವನ್ನೂ, ಪುರುಷತನವನ್ನು ಹೊಂದಿದಾಗ ಉದಾಸೀನತೆಯನ್ನೂ ಹೊಂದಿರುವನು. ಹೀಗೆ ಒಬ್ಬ ಬ್ರಹ್ಮನಿಗೆ ಮೇಲೆ ತಿಳಿಸಿದ ಮೂರು ಅವಸ್ಥೆಗಳು ಉಂಟಾಗಿವೆ.

೨೯. ಬ್ರಹ್ಮನ ರೂಪವು ಕಮಲದ ಮಧ್ಯದಂತೆ ಕೆಂಪಾಗಿಯೂ, ಕಾಲ ಪುರುಷನ ರೂಪವು ಅಂಜನದಂತೆ ಕಪ್ಪಾಗಿಯೂ, ಪುರುಷನ ರೂಪವು ಪುಂಡರೀಕ ದಂತೆ ಶುಭ್ರವಾಗಿಯೂ ಇರುತ್ತವೆ. ಹೀಗೆ ಆ ಪರಮಾತ್ಮನ ರೂಪಗಳು ಮೂರು ತೆರನಾಗಿವೆ.

೩೦. ಯೋಗೀಶ್ವರನಾದ ಭಗವಂತನು ಸ್ವೇಚ್ಛಾನುಸಾರವಾಗಿ ನಾನಾ ವಿಧಗಳಾದ ಆಕಾರ, ಕ್ರಿಯಾ, ರೂಪ, ನಾಮ, ಕಾರ್ಯ, ಇವುಗಳುಳ್ಳವನಾಗಿ ತನಗೆ ಬೇಕಾಗುವ ಶರೀರಗಳನ್ನು ಸೃಷ್ಟಿಸಿ ಲಯಮಾಡುವನು.

೩೧. ಆ ಬ್ರಹ್ಮನು ಈ ಲೋಕದಲ್ಲಿ ಮೂರು ವಿಧಗಳಾದ ವ್ಯಾಪಾರಗಳಿಂದ ತ್ರಿಗುಣನೆಂಬುದಾಗಿಯೂ, ನಾಲ್ಕು ಪ್ರಕಾರವಾಗಿ ವಿಭಕ್ತನಾಗಿರುವುದರಿಂದ ಚತುರ್ವ್ಯೂಹನೆಂಬುದಾಗಿಯೂ ಪ್ರಖ್ಯಾತನಾಗಿರುವನು.

೩೨. ಯಾವುದು ವಿಷಯಗಳನ್ನು ಕುರಿತು ಹೋಗುತ್ತಿದೆಯೋ ಮತ್ತು ವಿಷಯಗಳನ್ನು ಸ್ವೀಕರಿಸುತ್ತದೆಯೋ ಮತ್ತು ವಿಷಯಗಳನ್ನು ಪಡೆಯುತ್ತವೆಯೋ ಅದೇ ಸರ್ವಪ್ರೇರಕವಾಗಿರುವುದರಿಂದ ಆತ್ಮನೆಂಬ ಸಂಜ್ಞೆಯನ್ನು ಹೊಂದಿದೆ.

ಋಷಿಃ ಸರ್ವಗತತ್ವಾಚ್ಚ ಶರೀರಾದ್ಯಾತ್ಸ್ವಯಂಪ್ರಭುಃ ।
ಸ್ವಾಮಿತ್ವಮಸ್ಯ ತತ್ಸರ್ವಂ ವಿಷ್ಣುಃ ಸರ್ವಪ್ರವೇಶನಾತ್ ॥ ೩೩ ॥

ಭಗವಾನ್ ಭಗಸದ್ಭಾವಾದ್ರಾಗೋ ರಾಗಸ್ಯ ಶಾಸನಾತ್ ।
ಪರಶ್ಚ ತು ಪ್ರಕೃತತ್ವಾದವನಾದೋಮಿತಿಃ ಸ್ಮೃತಃ ॥ ೩೪ ॥

ಸರ್ವಜ್ಞಃ ಸರ್ವವಿಜ್ಞಾನಾತ್ ಸರ್ವಃ ಸರ್ವಂ ಯತಸ್ತತಃ ।
ನರಾಣಾಮಯನಂ ಯಸ್ಮಾತ್ ತೇನ ನಾರಾಯಣಸ್ಮೃತಃ ॥ ೩೫ ॥

ತ್ರಿಧಾ ವಿಭಜ್ಯ ಸ್ವಾತ್ಮಾನಂ ತ್ರೈಲೋಕ್ಯಂ ಸಂಪ್ರವರ್ತತೇ ।
ಸೃಜತೇ ಗ್ರಸತೇ ಚೈವ ವಿಕ್ಷತೇ ಚ ತ್ರಿಭಿಸ್ತು ಯತ್ ॥
ಅಗ್ರೇ ಹಿರಣ್ಯಗರ್ಭಃ ಸ ಪ್ರಾದುರ್ಭೂತಶ್ಚತುರ್ಮುಖಃ ॥ ೩೬ ॥

---

೩೩. ಭಗವಂತನು ಸರ್ವತ್ರವ್ಯಾಪಕನಾಗಿರುವುದರಿಂದ ಋಷಿಯೆಂತಲೂ, ಉತ್ಪತ್ತಿರಹಿತನಾದುದರಿಂದ ಸ್ವಯಂಪ್ರಭುವೆಂತಲೂ, ಸರ್ವತ್ರ ಪ್ರವೇಶವಿರುವುದರಿಂದ ವಿಷ್ಣುವೆಂತಲೂ ಪ್ರಖ್ಯಾತನಾಗಿ ಸರ್ವವಸ್ತುಗಳಿಗೂ ಪ್ರೇರಕನಾಗಿರುವನು.

೩೪. ಪರಮಾತ್ಮನು ಸರ್ವಕ್ಕೂ ಮೂಲಕಾರಣನಾದುದರಿಂದ ಪರನೆಂದೂ ಷಡ್ಗುಣೈಶ್ವರ್ಯಸಂಪನ್ನನಾದುದರಿಂದ ಭಗವಂತನೆಂದೂ, ರಾಗನಾಶಕನಾದುದರಿಂದ ರಾಗನೆಂದೂ, ಸರ್ವರನ್ನೂ ರಕ್ಷಣೆಮಾಡುವುದರಿಂದ ಓಂಕಾರ ಶಬ್ದವಾಚ್ಯನೆಂದೂ ಪ್ರಖ್ಯಾತನಾಗಿರುವನು.

೩೫. ಭಗವಂತನು ಸರ್ವವನ್ನೂ ತಿಳಿದಿರುವುದರಿಂದ ಸರ್ವಜ್ಞನೆಂದೂ, ಸರ್ವಕಾರಣನಾದುದರಿಂದ ಸರ್ವನೆಂದೂ, ಮನುಷ್ಯರಿಗೆ ಆಶ್ರಯನಾದುದರಿಂದ ನಾರಾಯಣನೆಂದೂ ಪ್ರಸಿದ್ಧಿಯನ್ನು ಪಡೆದಿರುವನು.

೩೬. ಪರಮಪುರುಷನು ತ್ರಿರೂಪಿಯಾಗಿ ಸರ್ವಲೋಕಗಳ ಸೃಷ್ಟಿ, ಸ್ಥಿತಿ, ಲಯಗಳಿಗೆ ಎಲ್ಲಕ್ಕಿಂತಲೂ ಮೊದಲು ಕಾರಣನಾಗಿರುವನು. ಹಿರಣ್ಯಗರ್ಭನಾದ ಚತುರ್ಮುಖನು ಮೊದಲು ಆವಿರ್ಭೂತನಾದನು.

ಆದಿತ್ವಾಚ್ಚಾದಿದೇವೋಽಸಾವಜಾತತ್ವಾದಜಃ ಸ್ಮೃತಃ ।
ಪಾತಿ ಯಸ್ಮಾತ್ಪ್ರಜಾಃ ಸರ್ವಾಃ ಪ್ರಜಾಪತಿರತಃ ಸ್ಮೃತಃ ॥ ೩೭ ॥

ದೇವೇಷು ಚ ಮಹಾನ್ ದೇವೋ ಮಹಾದೇವಸ್ತತಃ ಸ್ಮೃತಃ ।
ಸರ್ವೇಶತ್ವಾಚ್ಚ ಲೋಕಾನಾಂ ಅವಶ್ಯತ್ವಾತ್ತಥೇಶ್ವರಃ ॥ ೩೮ ॥

ಬೃಹತ್ವಾಚ್ಚ ಸ್ಮೃತೋ ಬ್ರಹ್ಮಾ ಭೂತತ್ವಾದ್ಭೂತ ಉಚ್ಯತೇ ।
ಕ್ಷೇತ್ರಜ್ಞಃ ಕ್ಷೇತ್ರವಿಜ್ಞಾನಾತ್ ವಿಭುಃ ಸರ್ವಗತೋ ಯತಃ ॥ ೩೯ ॥

ಯಸ್ಮಾತ್ ಪುರ್ಯನುಶೇತೇ ಚ ತಸ್ಮಾತ್ ಪುರುಷ ಉಚ್ಯತೇ ।
ನೋತ್ಪಾದಿತತ್ವಾತ್ ಪೂರ್ವತ್ವಾತ್ ಸ್ವಯಂಭೂರಿತಿ ಸ ಸ್ಮೃತಃ ॥ ೪೦ ॥

ಇಜ್ಯತ್ವಾದುಚ್ಯತೇ ಯಜ್ಞಃ ಕವಿರ್ವಿಕ್ರಾಂತದರ್ಶನಾತ್ ।
ಕ್ರಮಣಃ ಕ್ರಮಣೀಯತ್ವಾದ್ವರ್ಣಕಸ್ಯಾಭಿ ಪಾಲನಾತ್ ॥ ೪೧ ॥

---

೩೭. ಈಶ್ವರನು ಎಲ್ಲಕ್ಕಿಂತಲೂ ಆದಿಯಾಗಿರುವುದರಿಂದ ಆದಿದೇವನೆಂತಲೂ, ಉತ್ಪತ್ತಿರಹಿತನಾದುದರಿಂದ ಅಜನೆಂತಲೂ, ಸರ್ವಪ್ರಜೆಗಳನ್ನು ರಕ್ಷಿಸುವುದರಿಂದ ಪ್ರಜಾಪತಿಯೆಂತಲೂ ನಾಮವನ್ನು ಪಡೆದಿರುವನು.

೩೮. ಪರಮ ಪುರುಷನು ದೇವತೆಗಳಲ್ಲಿ ಉತ್ತಮನಾದುದರಿಂದ ಮಹಾದೇವನೆಂತಲೂ, ಎಲ್ಲರಿಗೂ ಈಶನೂ, ಅವಶನೂ ಆದುದರಿಂದ ಸರ್ವೇಶ್ವರನೆಂತಲೂ ಪ್ರಖ್ಯಾತನಾಗಿರುವನು.

೩೯-೪೦. ಆ ಭಗವಂತನು ಅತಿ ದೊಡ್ಡವನಾಗಿರುವುದರಿಂದ ಬ್ರಹ್ಮನೆಂತಲೂ, ಅವತರಿಸುವುದರಿಂದ ಭೂತನೆಂತಲೂ, ಕ್ಷೇತ್ರವನ್ನು ತಿಳಿದಿರುವನಾದ್ದರಿಂದ ಕ್ಷೇತ್ರಜ್ಞನೆಂತಲೂ, ಸರ್ವಗತನಾದಕಾರಣ ವಿಭುವೆಂತಲೂ, ಇತರರಿಂದ ಉತ್ಪನ್ನರಾಗದೆಯೂ, ಪೂರ್ವಿಕನಾಗಿರುವುದರಿಂದಲೂ, ಸ್ವಯಂಭೂ ಎಂತಲೂ ನಾಮುಗಳನ್ನು ಪಡೆದಿರುತ್ತಾನೆ.

೪೧. ಆ ಸ್ವಾಮಿಯು ಪೂಜ್ಯನಾದುದರಿಂದ ಯಜ್ಞನೆಂದೂ, ಜ್ಞಾನಿಯಾದುದರಿಂದ ಕವಿಯೆಂದೂ, ಆಕ್ರಮಿಸುವುದರಿಂದ ಅಕ್ರಮಣನೆಂದೂ ಪಾಲಿಸುವುದರಿಂದ ವರ್ಣಕನೆಂದೂ ಪ್ರಸಿದ್ಧನಾಗಿರುವನು.

ಆದಿತ್ಯಸಂಜ್ಞಃ ಕಪಿಲಸ್ತ್ವಗ್ರಜೋಽಗ್ನಿರಿತಿ ಸ್ಮೃತಃ ।
ಹಿರಣ್ಯಮಸ್ಯ ಗರ್ಭೋಽಭೂದ್ಧಿರಣ್ಯಸ್ಯಾಪಿ ಗರ್ಭಜಃ ॥ ೪೨ ॥

ಸ್ವಯಂಭುವೋ ನಿವೃತ್ತಸ್ಯ ಕಾಲೋ ವರ್ಷಾಗ್ರಜಸ್ತು ಯಃ ।
ನ ಶಕ್ಯಃ ಪರಿಸಂಖ್ಯಾತುಮಪಿ ವರ್ಷಶತೈರಪಿ ॥ ೪೩ ॥

ಕಲ್ಪಸಂಖ್ಯಾನಿವೃತ್ತೇಸ್ತು ಪರಾಖ್ಯೋ ಬ್ರಹ್ಮಣಃ ಸ್ಮೃತಃ ।
ತಾವಚ್ಛೇಷೋಽಸ್ಯ ಕಾಲೋಽನ್ಯಸ್ತಸ್ಯಾಂತೇ ಪ್ರತಿಸೃಜ್ಯತೇ ॥ ೪೪ ॥

ಕೋಟಿಕೋಟಿಸಹಸ್ರಾಣಿ ಅಂತರ್ಭೂತಾನಿ ಯಾನಿ ವೈ ।
ಸಮತೀತಾನಿ ಕಲ್ಪಾನಾಂ ತಾವಚ್ಛೇಷಾಃ ಪರಾಸ್ತು ಯೇ ॥ ೪೫ ॥

ಯಸ್ತ್ವಯಂ ವರ್ತತೇ ಕಲ್ಪೋ ವರಾಹಾಂತಂ ನಿಬೋಧತ ।
ಪ್ರಥಮಃ ಸಾಂಪ್ರತಸ್ತೇಷಾಂ ಕಲ್ಪೋಽಯಂ ವರ್ತತೇ ದ್ವಿಜಾಃ ॥ ೪೬ ॥

---

೪೨. ಆ ಭಗವಂತನಿಗೆ ಆದಿತ್ಯ, ಕಪಿಲ, ಅಗ್ರಜ, ಅಗ್ನಿ, ಹಿರಣ್ಯಗರ್ಭಜ, ಎಂಬ ನಾಮಗಳು ಪುರಾಣಗಳಲ್ಲಿ ಪ್ರಸಿದ್ಧವಾಗಿವೆ.

೪೩. ಮುಕ್ತನಾದ ಬ್ರಹ್ಮನ ಯಾವ ಅತೀತವಾದ ಕಾಲವು ಇದೆಯೋ, ಅಂತಹ ಕಾಲವನ್ನು ನೂರಾರು ವರ್ಷಗಳಿಂದಲೂ ಕೂಡ ಎಣಿಸಲಶಕ್ಯವಾಗಿದೆ.

೪೪-೪೫. ಯಾವ ಬ್ರಹ್ಮನ ಅತೀತವಾದ ಕಲ್ಪಸಂಖ್ಯೆಯು ಎಣಿಸಲಶಕ್ಯವಾಗಿದೆಯೋ, ಆ ಸಂಖ್ಯೆಗೆ ಪರಾ ಎಂಬ ನಾಮವು ಉಕ್ತವಾಗಿದೆ. ಅಷ್ಟು ಕಾಲವು ಕಳೆದ ಮೇಲೆ ಅವಾಂತರಸೃಷ್ಟಿಯು ಆಗುತ್ತದೆ. ಸಹಸ್ರ ಕೋಟಿ ಕೋಟಿ ಸಂಖ್ಯೆಗಳುಳ್ಳ ಕಲ್ಪಗಳು ಅಂತರ್ಭೂತವಾಗಿಯೂ, ಅತೀತವಾಗಿಯೂ ಇವೆಯೋ ಅವಕ್ಕೆ ಪರಾ ಎಂಬ ಸಂಜ್ಞೆಯು ಪ್ರಾಪ್ತವಾಗಿದೆ.

೪೬. ಎಲೈ, ಬ್ರಾಹ್ಮಣರೇ ಈ ಕಲ್ಪವು ವರಾಹಾಂತವಾದ ಕಲ್ಪವಾಗಿದೆ. ಈಗ ಸದ್ಯದಲ್ಲಿ ನಡೆಯತಕ್ಕ ಕಲ್ಪವು ಅವುಗಳಲ್ಲಿ ಮೊದಲನೆಯ ವರಾಹ ಕಲ್ಪವಾಗಿದೆ.

**ತಸ್ಮಿನ್ ಸ್ವಾಯಂಭುವಾದ್ಯಾಸ್ತು ಮನವಃ ಸ್ಯುಶ್ಚತುರ್ದಶ ।**
**ಅತೀತಾ ವರ್ತಮಾನಾಶ್ಚ ಭವಿಷ್ಯಾ ಯೇ ಚ ವೈ ಪುನಃ ॥ ೪೭ ॥**

**ತೈರಿಯಂ ಪೃಥಿವೀ ಸರ್ವಾ ಸಪ್ತದ್ವಿಪಾ ಸಮಂತತಃ ।**
**ಪೂರ್ಣಂ ಸಹ ಸಹಸ್ರಂ ವೈ ಪರಿಪಾಲ್ಯಾ ನರೇಶ್ವರೈಃ ॥**
**ಪ್ರಜಾಭಿಸ್ತಪಸಾ ಚೈವ ತೇಷಾಂ ಶೃಣುತ ವಿಸ್ತರಂ ॥ ೪೮ ॥**

**ಮನ್ವಂತರೇಣ ಚೈಕೇನ ಸರ್ವಾಣ್ಯೇವಾಂತರಾಣಿ ವೈ ।**
**ಭವಿಷ್ಯಾಣಿ ಭವಿಷ್ಯೈಶ್ಚ ಕಲ್ಪಃ ಕಲ್ಪೇನ ಚೈವ ಹ ॥ ೪೯ ॥**

**ಅತೀತಾನಿ ಚ ಕಲ್ಪಾನಿ ಸೋದಕಾನಿ ಸಹಾನ್ವಯೈಃ ।**
**ಅನಾಗತೇಷು ತದ್ವಚ್ಚ ತರ್ಕಃ ಕಾರ್ಯೋ ವಿಜಾನತಾ ॥ ೫೦ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ ಸೃಷ್ಟಿಪ್ರಕರಣಂ ನಾಮ ಪಂಚಮೋಽಧ್ಯಾಯಃ**

---

೪೭. ಅತೀತಾನಾಗತ ವರ್ತಮಾನ ಕಾಲಗಳಲ್ಲಿರುವ ಸ್ವಾಯಂಭುವಾದಿ ಹದಿನಾಲ್ಕು ಜನ ಮನುಗಳೂ, ಆ ವರಾಹ ಕಲ್ಪದಲ್ಲಿ ಪುನಃ ಉತ್ಪನ್ನರಾಗುವರು.

೪೮. ಆ ಸ್ವಾಯಂಭುವಾದಿ ಮನುಗಳು ಸಪ್ತದ್ವೀಪಗಳಿಂದಲೂ, ಪ್ರಜೆಗಳಿಂದಲೂ, ತಪಸ್ಸುಗಳಿಂದಲೂ, ರಾಜರಿಂದಲೂ ಕೂಡಿರುವ ಈ ಸಕಲ ಪೃಥಿವಿಯನ್ನು ಒಂದು ಸಹಸ್ರವರ್ಷಗಳ ವರೆಗೂ ಪೂರ್ತಿಯಾಗಿ ಪಾಲಿಸುವರು. ಈ ಕಲ್ಪಗಳ ವಿಸ್ತಾರವನ್ನು ವಿಶದವಾಗಿ ತಿಳಿಸುವೆನು ಕೇಳಿ.

೪೯-೫೦. ಸರ್ವಕಲ್ಪಗಳೂ ಒಂದೊಂದು ಮನ್ವಂತರದಿಂದ ಕೂಡಿವೆ. ಮುಂದೆ ಬರುವ ಕಲ್ಪಗಳೂ ಸಹ ಮುಂದೆ ಬರುವ ಮನ್ವಂತರಗಳಿಂದಲೂ, ಉದಕದಿಂದಲೂ, ಅತೀತವಾದ ವಂಶಗಳಿಂದಲೂ ಕೂಡಿ ಇರುವುವು. ಅತೀತವಾದ ಕಲ್ಪಗಳಂತೆಯೇ ವರ್ತಮಾನ ಭವಿಷ್ಯತ್ಕಲ್ಪಗಳನ್ನು ಜ್ಞಾನಿಯು ಊಹಿಸಬೇಕು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ಸೃಷ್ಟಿಪ್ರಕರಣವೆಂಬ ಐದನೆಯ ಅಧ್ಯಾಯವು ಮುಗಿದುದು.

## ಐದನೆಯ ಅಧ್ಯಾಯದ ಸಾರಾಂಶವು

ಬ್ರಹ್ಮದೇವನ ಅಹೋರಾತ್ರಿಗಳು ಸಮನಾಗಿವೆ. ಹಗಲಿನಲ್ಲಿ ಸೃಷ್ಟಿಯೂ, ರಾತ್ರಿಯಲ್ಲಿ ಲಯವೂ ಆಗುವುವು. ಸೃಷ್ಟಿಯಲ್ಲಿ ಪ್ರಜೆಗಳು, ರಾಜರು, ಮುನಿಗಳು, ಇಂದ್ರಿಯಗಳು, ತನ್ಮಾತ್ರೆಗಳು, ಬುದ್ಧಿ, ಮನಸ್ಸು, ಇವುಗಳು, ಇರುತ್ತವೆ. ಇವು ರಾತ್ರಿಯಲ್ಲಿ ಲಯವನ್ನು ಹೊಂದುತ್ತವೆ. ಗುಣಸಾಮ್ಯವಿದ್ದರೆ ಲಯವೂ, ವೈಷಮ್ಯವಾದರೆ ಸೃಷ್ಟಿಯೂ ಆಗುವುವು. ಬ್ರಹ್ಮನು ರಜೋಗುಣಮಯನೂ, ಅಗ್ನಿಯು ತಮೋಗುಣಮಯನೂ, ವಿಷ್ಣುವು ಸತ್ವಗುಣಪ್ರಚುರನೂ ಆಗಿರುವರು. ಇವರಿಂದ ಸೃಷ್ಟಿ, ಸ್ಥಿತಿ ಲಯಗಳಾಗುವುವು. ಆ ಭಗವಂತನಿಗೆ ಋಷಿ, ಸ್ವಯಂಭೂ, ನಾರಾಯಣ, ಎಂಬ ಅನೇಕ ನಾಮುಗಳಿವೆ. ಆದಿಯಲ್ಲಿ ಚತುರ್ಮುಖ ಬ್ರಹ್ಮನು ಹುಟ್ಟಿದನು. ಇವನಿಗೆ ಆದಿದೇವ, ಅಜ, ಪ್ರಜಾಪತಿ, ಬ್ರಹ್ಮ, ಕ್ಷೇತ್ರಜ್ಞ ಮೊದಲಾದ ಅನೇಕ ನಾಮುಗಳಿವೆ. · ಅನೇಕ ಕೋಟಿ ಸಂಖ್ಯೆಗೆ ಪರಾ ಎಂಬ ಸಂಜ್ಞೆಯು ಇದೆ. ಅಂತಹ ಸಂಖ್ಯೆಯುಳ್ಳ ಕಲ್ಪಕ್ಕೆ ವರಾಹ ಕಲ್ಪವೆಂದು ಹೆಸರುಂಟಾಗಿದೆ. ಆ ಕಲ್ಪದಲ್ಲಿ ಬ್ರಹ್ಮನೇ ಮೊದಲಾದ ಚತುರ್ದಶಮನುಗಳೂ, ರಾಜರೂ, ಇವರಿಂದ ಸಮಸ್ತಸೃಷ್ಟಿಗಳುಂಟಾಗಿ ಸಾವಿರಾರು ವರ್ಷಗಳ ಕಾಲ ಇರುತ್ತದೆ ಎಂಬ ವಿಷಯವು ನಿರೂಪಿತವಾಗಿದೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಷಷ್ಠೋಽಧ್ಯಾಯಃ

॥ ಸೂತ ಉವಾಚ ॥

**ಆಪೋಽಹ್ಯಗ್ನೇಃ ಸಮುಭವನ್ನಷ್ಟೇಽಗ್ನೌ ಪೃಥಿವೀತಲೇ ।**
**ಸಾಂತರಾಲೈಕಲೀನೇಽಸ್ಮಿನ್ನಷ್ಟೇ ಸ್ಥಾವರಜಂಗಮೇ ॥ ೧ ॥**

**ಏಕಾರ್ಣವೇ ತದಾ ತಸ್ಮಿನ್ ನ ಪ್ರಜ್ಞಾಯತ ಕಿಂಚನ ।**
**ತದಾ ಸ ಭಗವಾನ್ ಬ್ರಹ್ಮಾ ಸಹಸ್ರಾಕ್ಷಃ ಸಹಸ್ರಪಾತ್ ॥ ೨ ॥**

**ಸಹಸ್ರಶೀರ್ಷಾ ಪುರುಷೋ ರುಕ್ಮವರ್ಣೋಽ ಹ್ಯತೀಂದ್ರಿಯಃ ।**
**ಬ್ರಹ್ಮಾ ನಾರಾಯಣಾಖ್ಯಃ ಸ ಸುಷ್ವಾಪ ಸಲಿಲೇ ತದಾ ॥ ೩ ॥**

---

### ಆರನೆಯ ಆಧ್ಯಾಯವು

೧-೩. ಸೂತನು ಹೇಳಿದನು—ಜಲವು ಅಗ್ನಿಯನ್ನು ಸುತ್ತುವರೆಯಲಾಗಿ ಭೂಮಿಯಲ್ಲಿ ಅಗ್ನಿಯು ನಷ್ಟವಾಯಿತು. ಸ್ಥಾವರಜಂಗಮರೂಪವಾದ ಸಕಲ ಜಗತ್ತೂ ಜಲಮಯವಾದ ಪ್ರಳಯೋದಕದಲ್ಲಿ ಮುಳುಗಿ ನಷ್ಟವಾಯಿತು. ಯಾವುದೊಂದು ವಸ್ತುವೂ ಗೋಚರವಾಗಲಿಲ್ಲ. ಆಗ ಸಹಸ್ರಾರು ಶಿರಸ್ಸು ಕಣ್ಣು, ಕಾಲು, ಇವುಗಳುಳ್ಳವನೂ, ಸರ್ವೋತ್ತಮನೂ, ಅತೀಂದ್ರಿಯನೂ, ರುಕ್ಮವರ್ಣನೂ, ನಾರಾಯಣನಾಮಕನೂ ಆದ ಭಗವಂತನು ಆ ಪ್ರಳಯೋದಕದಲ್ಲಿ ಯೋಗನಿದ್ರೆಯನ್ನು ಮಾಡುತ್ತಿದ್ದನು.

**ಸತ್ತ್ವೋದ್ರೇಕಾತ್ಪ್ರಬುದ್ಧಸ್ತು ಶೂನ್ಯಂ ಲೋಕಮುದೀಕ್ಷ್ಯ ಸಃ ।**
**ಇಮಂ ಚೋದಾಹರಂತ್ಯತ್ರ ಶ್ಲೋಕಂ ನಾರಾಯಣಂ ಪ್ರತಿ ॥ ೪ ॥**

**ಆಪೋ ನಾರಾ ವೈ ತನವ ಇತ್ಯಪಾಂ ನಾಮ ಶುಶ್ರುಮಃ ।**
**ಅಪ್ಸು ಶೇತೇ ಚ ಯತ್ತಸ್ಮಾತ್ತೇನ ನಾರಾಯಣಃ ಸ್ಮೃತಃ ॥ ೫ ॥**

**ತುಲ್ಯಂ ಯುಗಸಹಸ್ರಸ್ಯ ನೈಶಂ ಕಾಲಮುಪಾಸ್ಯ ಸಃ ।**
**ಶರ್ವರ್ಯಂತೇ ಪ್ರಕುರುತೇ ಬ್ರಹ್ಮತ್ವಂ ಸರ್ಗಕಾರಣಾತ್ ॥ ೬ ॥**

**ಬ್ರಹ್ಮಾ ತು ಸಲಿಲೇ ತಸ್ಮಿನ್ ವಾಯುರ್ಭೂತ್ವಾ ತದಾಚರತ್ ।**
**ನಿಶಾಯಾಮಿವ ಖದ್ಯೋತಃ ಪ್ರಾವೃಟ್ಕಾಲೇ ತತಸ್ತತಃ ॥ ೭ ॥**

**ತತಸ್ತು ಸಲಿಲೇ ತಸ್ಮಿನ್ ವಿಜ್ಞಾಯಾಂತರ್ಗತಾಂ ಮಹೀಂ ।**
**ಅನುಮಾನಾದಸಂಮೂಢೋ ಭೂಮೇರುದ್ಧರಣಂ ಪ್ರತಿ ॥ ೮ ॥**

---

೪. ಆ ಶ್ರೀಮನ್ನಾರಾಯಣನು ಸತ್ವಗುಣೋದ್ರೇಕದಿಂದ ಎಚ್ಚರಗೊಂಡು ಶೂನ್ಯವಾಗಿರುವ ಲೋಕವನ್ನು ನೋಡುವನು. ಆಗ ನಾರಾಯಣನ ವಿಷಯವಾಗಿ ಜ್ಞಾನಿಗಳು ಈ ಶ್ಲೋಕವನ್ನು ಉದಾಹರಿಸುತ್ತಾರೆ.

೫. ಜಲವು ಬ್ರಹ್ಮನಿಗೆ ನಾರನಾಮಕವಾದ ಶರೀರವಾಗಿದೆ. ಆ ಜಲಕ್ಕೆ ನಾರ ಎಂಬ ನಾಮವು ಪ್ರಖ್ಯಾತವಾಗಿದೆ. ಅಂತಹ ಜಲದಲ್ಲಿ ಮಲಗಿರುವುದರಿಂದ ಬ್ರಹ್ಮನಿಗೆ ನಾರಾಯಣನೆಂಬ ಹೆಸರು ಬಂದಿದೆ.

೬. ನಾರಾಯಣನು ಒಂದು ಸಹಸ್ರಸಂಖ್ಯಾಕಗಳಾದ ರಾತ್ರಿಗಳನ್ನು ನಿದ್ರಾಸುಖದಿಂದ ಕಳೆದನು. ಅನಂತರ ಲೋಕಗಳನ್ನು ಸೃಷ್ಟಿಮಾಡಲಿಚ್ಛೆಯಿಂದ ಬ್ರಹ್ಮತ್ವವನ್ನು ಪಡೆದನು.

೭. ಬ್ರಹ್ಮನು ವಾಯುರೂಪವನ್ನು ಧರಿಸಿ ಆ ಜಲದಲ್ಲಿ ಸಂಚರಿಸಿದನು. ಆಗ ಅವನು ವರ್ಷಾಕಾಲದ ರಾತ್ರಿಯಲ್ಲಿ ಮಿಂಚಿನಹುಳದಂತೆ ಪ್ರಕಾಶಿಸಿದನು.

೮. ಅನಂತರ ಆ ಪ್ರಳಯೋದಕದಲ್ಲಿ ಭೂಮಂಡಲವು ಮುಳುಗಿಹೋಗಿರುವುದನ್ನು ಊಹಿಸಿ, ಜಾಗರೂಕನಾಗಿ ಭೂಮಿಯನ್ನು ಉದ್ಧರಿಸುವ ವಿಷಯದಲ್ಲಿ ಯೋಚಿಸಿದನು.

ಅಕರೋತ್ ಸ ತನುಂ ತ್ವನ್ಯಾಂ ಕಲ್ಪಾದಿಷು ಯಥಾ ಪುರಾ ।
ತತೋ ಮಹಾತ್ಮಾ ಮನಸಾ ದಿವ್ಯಂ ರೂಪಮನುಚಿಂತಯತ್ ॥ ೯ ॥

ಸಲಿಲೇನಾಪ್ಲುತಾಂ ಭೂಮಿಂ ದೃಷ್ಟ್ವಾ ಸ ತು ಸಮಂತತಃ ।
ಕಿನ್ನುರೂಪಂ ಮಹತ್ಕೃತ್ವಾ ಉದ್ಧರೇಯಮಹಂ ಮಹೀಂ ॥ ೧೦ ॥

ಜಲಕ್ರೀಡಾಸು ರುಚಿರಂ ವರಾಹಿಂ ರೂಪಮಸ್ಮರತ್ ।
ಅಧೃಷ್ಯಂ ಸರ್ವಭೂತಾನಾಂ ವಾಙ್ಮಯಂ ಧರ್ಮಸಂಜ್ಞಿತಂ ॥ ೧೧ ॥

ದಶಯೋಜನ ವಿಸ್ತೀರ್ಣಂ ಶತಯೋಜನ ಮುಚ್ಛ್ರಿತಂ ।
ನೀಲಮೇಘ ಪ್ರತೀಕಾಶಂ ಮೇಘಸ್ತನಿತನಿಃಸ್ವನಂ ॥ ೧೨ ॥

ಮಹಾಪರ್ವತವರ್ಷ್ಮಾಣಂ ಶ್ವೇತಂ ತೀಕ್ಷ್ಣೋಗ್ರದಂಷ್ಟ್ರಿಣಂ ।
ವಿದ್ಯುದಗ್ನಿಪ್ರಕಾಶಾಕ್ಷಮಾದಿತ್ಯಸಮತೇಜಸಂ ॥ ೧೩ ॥

---

೯. ಅನಂತರ ಪರಮಾತ್ಮನು ಪೂರ್ವಕಲ್ಪದಲ್ಲಿ ಹೇಗೆ ಅವತರಿಸಿದನೋ ಹಾಗೆಯೇ ದಿವ್ಯರೂಪವನ್ನು ಧರಿಸಲು ಮನಸ್ಸಿನಲ್ಲಿ ಯೋಚಿಸಿದನು.

೧೦. ಆ ಭಗವಂತನು ಭೂಮಿಯು ಸರ್ವತ್ರ ವ್ಯಾಪಿಸಿರುವ ಜಲದಲ್ಲಿ ಮುಳಗಿದೆಯೆಂದು ತಿಳಿದು ಯಾವ ರೂಪವನ್ನು ಧರಿಸಿದರೆ ಈ ಭೂಮಂಡಲವನ್ನು ಉದ್ಧಾರಮಾಡಬಹುದೆಂದು ಯೋಚಿಸಿದನು.

೧೧. ಜಲಕ್ರೀಡೆಯಲ್ಲಿ ಸಮರ್ಥವೂ, ಸರ್ವಭೂತಗಳಿಗೂ ಅಭೀತವೂ, ಜ್ಞಾನಸ್ವರೂಪವೂ, ಧರ್ಮನಾಮಕತವೂ ಆದ ವರಾಹಾವತಾರವನ್ನು ಮಾಡಲು ಆ ಭಗವಂತನು ಅಪೇಕ್ಷಿಸಿದನು.

೧೨-೧೫. ಅನಂತರ ಶ್ರೀಮನ್ನಾರಾಯಣನು ಶತಯೋಜನ ವಿಸ್ತೀರ್ಣವೂ, ಶತಯೋಜನ ಎತ್ತರವೂ, ನೀಲಮೇಘಸದೃಶವೂ, ಮೇಘದಂತೆ ಗರ್ಜನೆಯುಳ್ಳದ್ದೂ, ಮಹಾಪರ್ವತದಂತೆ ಉನ್ನತವೂ, ಶುಭ್ರವೂ, ತೀಕ್ಷ್ಣವೂ ಆದ ಕೋರೆಹಲ್ಲುಗಳಿಂದ ಸಹಿತವೂ, ಮಿಂಚು ಮತ್ತು ಅಗ್ನಿಗೆ ಸಮವಾದ ಕಣ್ಣುಗಳುಳ್ಳದ್ದೂ, ಸೂರ್ಯನಂತೆ ಪ್ರಕಾಶವೂ ಸ್ಥೂಲವೂ, ವರ್ತುಳವೂ ಆದ ಹೆಗಲು

ಪೀನವೃತ್ತಾಯತಸ್ಕಂಧಂ ಸಿಂಹವಿಕ್ರಾಂತಗಾಮಿನಂ ।
ಪೀನೋನ್ನತಕಟೀದೇಶಂ ಸಂಶ್ಲಕ್ಷ್ಣಂ ಶುಭಲಕ್ಷಣಂ ॥ ೧೪ ॥

ರೂಪಮಾಸ್ಥಾಯ ವಿಪುಲಂ ವಾರಾಹಮಮಿತಂ ಹರಿಃ ।
ಪೃಥಿವ್ಯುದ್ಧರಣಾರ್ಥಾಯ ಪ್ರವಿವೇಶ ರಸಾತಲಂ ॥ ೧೫ ॥

ಸ ವೇದವಾದ್ಯುಪದ್ರ್ಯಷ್ಟಾ ಕ್ರತುವಕ್ಷಾಶ್ಚಿತೀಮುಖಃ ।
ಅಗ್ನಿಜಿಹ್ವೋ ದರ್ಭರೋಮಾ ಬ್ರಹ್ಮಶೀರ್ಷೋ ಮಹಾತಪಾಃ ॥ ೧೬ ॥

ಅಹೋರಾತ್ರೇಕ್ಷಣಧರೋ ವೇದಾಂಗಶ್ರುತಿಭೂಷಣಃ ।
ಆಜ್ಯನಾಸಾ ಸ್ರುವತುಂಡಃ ಸಾಮಘೋಷಸ್ವನೋ ಮಹಾನ್ ॥ ೧೭ ॥

ಸತ್ಯಧರ್ಮಮಯಃ ಶ್ರೀಮಾನ್ ಧರ್ಮವಿಕ್ರಮಸಂಸ್ಥಿತಃ ।
ಪ್ರಾಯಶ್ಚಿತ್ತರತೋ ಘೋರಃ ಪಶುಜಾನುರ್ಮಹಾಕೃತಿಃ ॥ ೧೮ ॥

ಊರ್ಧ್ವಗಾತ್ರೋ ಹೇಮಲಿಂಗಃ ಸ್ಥಾನಬೀಜೋ ಮಹೌಷಧಿಃ ।
ವೇದ್ಯಾಂತರಾತ್ಮಾ ಮಂತ್ರಸ್ಫಿಗಾಜ್ಯಸ್ಸೃಕ್ ಸೋಮಶೋಣಿತಃ ॥ ೧೯ ॥

ವೇದಸ್ಕಂಧೋ ಹವಿರ್ಗಂಧೋ ಹವ್ಯಕವ್ಯಾತಿವೇಗವಾನ್ ।
ಪ್ರಾಗ್ವಂಶಕಾಯೋ ದ್ಯುತಿಮಾನ್ ನಾನಾದೀಕ್ಷಾಭಿರನ್ವಿತಃ ॥ ೨೦ ॥

---

ಗಳುಳ್ಳದ್ದೂ, ಸಿಂಹಸಮಾನ ಗತಿಯುಕ್ತವೂ, ಸ್ಥೂಲವೂ, ಉನ್ನತವೂ, ಆದ ಸೊಂಟವುಳ್ಳದ್ದೂ, ಶುಭಲಕ್ಷಣಸಹಿತವೂ, ಅತಿವಿಶಾಲವೂ ಆದ ವರಾಹರೂಪವನ್ನು ಧರಿಸಿ ಪೃಥಿವಿಯನ್ನು ಉದ್ಧರಿಸುವದಕ್ಕೋಸ್ಕರ ಪಾತಾಳವನ್ನು ಪ್ರವೇಶಿಸಿದನು.

೧೫-೨೨. ವರಾಹರೂಪಿಯೂ, ವ್ಯಾಪ್ತನೂ ಆದ ಶ್ರೀಮನ್ನಾರಾಯಣನು ವೇದವಾದಿಯೆಂಬ ಉಪದಷ್ಟನು ಯಾಗವೆಂಬ ಹೃದಯ, ಚಿತಿಯೆಂಬ ಮುಖ, ಅಗ್ನಿಯೆಂಬ ನಾಲಿಗೆ, ದರ್ಭೆಯೆಂಬ ರೋಮ, ಬ್ರಹ್ಮನೆಂಬ ಶಿರಸ್ಸು, ಅಹೋರಾತ್ರಿಗಳೆಂಬ ನೇತ್ರ, ವೇದಾಂಗಗಳೆಂಬ ಕರ್ಣಾಭರಣ, ಅಜ್ಯವೆಂಬ ನಾಸಿಕೆ, ಸ್ರುವವೆಂಬ ಮೂಗು, ಮಹಾಸಾಮಘೋಷವೆಂಬ ಧ್ವನಿ, ಪಶುವೆಂಬ ಮೊಳಕಾಲು, ಉನ್ನತವಾದ ಶರೀರ, ಸುವರ್ಣಮಯವಾದ ಲಿಂಗ, ಸ್ಥಾನವೆಂಬ ಬೀಜ, ಮಂತ್ರಾಜ್ಯಗಳೆಂಬ ಪೃಷ್ಟಭಾಗ, ಸೋಮಲತೆಯೆಂಬ ರಕ್ತ, ವೇದವೆಂಬ ಸ್ಕಂಧ, ದಕ್ಷಿಣೆಯೆಂಬ ಹೃದಯ, ಉಪಾಕರ್ಮವೆಂಬ ಇಷ್ಟಿಕಾಂತಿ, ಪ್ರವರ್ಗ್ಯವೆಂಬ

ದಕ್ಷಿಣಾಹೃದಯೋ ಯೋಗೀ ಮಹಾಸತ್ರಮಯೋ ವಿಭುಃ ।
ಉಪಾಕರ್ಮೇಷ್ಟಿರುಚಿರಃ ಪ್ರವರ್ಗ್ಯಾವರ್ತಭೂಷಣಃ ॥ ೨೦ ॥

ನಾನಾಚ್ಛಂದೋಗತಿಪಥೋ ಗುಹ್ಯೋಪನಿಷದಾಸನಃ ।
ಛಾಯಾಪತ್ನೀಸಹಾಯೋ ವೈ ಮಣಿಶೃಂಗ ಇವೋಚ್ಛ್ರಿತಃ ॥

ಭೂತ್ವಾ ಯಜ್ಞವರಾಹೋ ವೈ ಆಪಃ ಸ ಪ್ರಾವಿಶತ್ ವಿಭುಃ ॥ ೨೨ ॥
ಅದ್ಭಿಃ ಸಂಚ್ಛಾದಿತಾಮುರ್ವೀಂ ಸ ತಾಮರ್ಶ್ಯ ಪ್ರಜಾಪತಿಃ ।

ಉಪಗಮ್ಯೋಜ್ಜಹಾರಾಶು ಅಪಸ್ತಾಶ್ಚ ಸ ವಿನ್ಯಸತ್ ॥ ೨೩ ॥
ಸಾಮುದ್ರೀರ್ವೈ ಸಮುದ್ರೇಷು ನಾದೇಯೀಶ್ಚ ನದೀಷ್ವಥ ।

ರಸಾತಲತಲೇ ಮಗ್ನಾಂ ರಸಾತಲತಲೇ ಗತಾಂ ॥
ಪ್ರಭುರ್ಲೋಕಹಿತಾರ್ಥಾಯ ದಂಷ್ಟ್ರಯಾಭ್ಯುಜ್ಜಹಾರ ಗಾಂ ॥ ೨೪ ॥

ತತಃ ಸ್ವಸ್ಥಾನಮಾನೀಯ ಪೃಥಿವೀಂ ಪೃಥಿವೀಧರಃ ।
ಮುಮೋಚ ಪೂರ್ವಂ ಮನಸಾ ಧಾರಯಿತ್ವಾ ಧರಾಧರಃ ॥ ೨೫ ॥

---

ದ್ರವ್ಯಭೂಷಣ, ಛಾಯೆಯೆಂಬ ಪತ್ನಿ, ನಾನಾ ಛಂದಸ್ಸುಗಳೆಂಬ ಮಾರ್ಗ, ಉಪನಿಷತ್ತುಗಳೆಂಬ ಆಸನ, ಇವುಗಳುಳ್ಳವನೂ, ಸತ್ಯಧರ್ಮರತನೂ, ಶ್ರೀಮಂತನೂ, ಪರಾಕ್ರಮಿಯೂ, ಕಾಂತಿವಂತನೂ, ನಾನಾದೀಕ್ಷಾರತನೂ, ಯೋಗಿಯೂ, ಮಣಿಶೃಂಗದಂತೆ ಉನ್ನತನೂ, ಸಮರ್ಥನೂ ಆಗಿ ಆ ಪ್ರಳಯೋದಕವನ್ನು ಪ್ರವೇಶಿಸಿದನು.

೨೩. ಆ ಪ್ರಜಾಪತಿಯಾದ ಬ್ರಹ್ಮನು ಜಲದಿಂದ ಆಚ್ಛಾದಿತವಾದ ಭೂಮಿಯನ್ನು ಹೊಂದಿ, ಉದ್ಧರಿಸಿದನು. ಅನಂತರ ಆ ಭೂಮಿಯನ್ನು ಜಲದಿಂದ ಪ್ರತ್ಯೇಕಿಸಿದನು.

೨೪. ಸ್ವಾಮಿಯಾದ ಭಗವಂತನು, ಸಮುದ್ರಗಳ ಜಲವನ್ನು ಸಮುದ್ರಗಳಲ್ಲಿಯೂ, ನದೀಜಲವನ್ನು ನದಿಗಳಲ್ಲಿಯೂ ಸ್ಥಾಪಿಸಿ ಪಾತಾಳಲೋಕದಲ್ಲಿ ಮುಳುಗಿರತಕ್ಕ ಭೂಮಿಯನ್ನು ಲೋಕಕಲ್ಯಾಣಕ್ಕಾಗಿ ತನ್ನ ಕೋರೆಹಲ್ಲುಗಳಿಂದ ಎತ್ತಿ ಹಿಡಿದನು.

೨೫. ಭೂಧಾರಕನಾದ ಆ ಭಗವಂತನು ಆ ಪೃಥಿವಿಯನ್ನು ತಂದು ಸ್ವಸ್ಥಾನದಲ್ಲಿಯೇ ಇರಿಸಿದನು.

ತಸ್ಯೋಪರಿ ಜಲೌಘಸ್ಯ ಮಹತೀ ನೌರಿವ ಸ್ಥಿತಾ ।
ಚರಿತತ್ವಾಚ್ಚ ದೇವಸ್ಯ ನ ಮಹೀ ಯಾತಿ ವಿಪ್ಲವಂ ॥ ೨೬ ॥

ತತೋದ್ಧೃತ್ಯ ಕ್ಷಿತಿಂ ದೇವೋ ಜಗತಃ ಸ್ಥಾಪನೇಚ್ಛಯಾ ।
ಪೃಥಿವೀಂ ತು ಸಮೀಕೃತ್ಯ ಪೃಥಿವ್ಯಾಂ ಸೋಚಿನೋದ್ಗಿರೀನ್ ॥ ೨೭ ॥

ಪ್ರಾಕ್ ಸರ್ಗೇ ದಹ್ಯಮಾನಾಸ್ತು ತದಾ ಸಂವರ್ತಕಾಗ್ನಿನಾ ।
ತೇನಾಗ್ನಿನಾ ವಿಶೀರ್ಣಾಸ್ತೇ ಪರ್ವತಾ ಭುವಿ ಸರ್ವಶಃ ॥ ೨೮ ॥

ಶೈತ್ಯಾದೇಕಾರ್ಣವೇ ತಸ್ಮಿನ್ ವಾಯುನಾಪಸ್ತು ಸಂಹೃತಾಃ ।
ನಿಷಿಕ್ತಾ ಯತ್ರ ಯತ್ರಾಸನ್ ತತ್ರತತ್ರಾಚಲೋಭವತ್ ॥ ೨೯ ॥

ಸ್ಕನ್ನಾಚಲತ್ವಾದಚಲಾಃ ಪರ್ವಭಿಃ ಪರ್ವತಾಃ ಸ್ಮೃತಾಃ ।
ಗಿರಯೋಂತರ್ನಿಗೀರ್ಣತ್ವಾತ್ ಚಯನಾಚ್ಚ ಶಿಲೋಚ್ಚಯಾಃ ॥ ೩೦ ॥

---

೨೬. ಭಗವಂತನಾದ ಶ್ರೀಮನ್ನಾರಾಯಣನ ಮಹಿಮೆಯಿಂದ ಆ ಭೂಮಿಯು ಪ್ರಳಯೋದಕದಲ್ಲಿ ದೊಡ್ಡ ಹಡಗಿನಂತೆ ತೇಲಾಡಿತೇ ಹೊರತು ನೀರಿನಲ್ಲಿ ಮುಳುಗಲಿಲ್ಲ.

೨೭. ಕಮಲೇಕ್ಷಣನಾದ ಆ ಭಗವಂತನು ಭೂಮಿಯನ್ನು ಎತ್ತಿಹಿಡಿದು ಅದನ್ನು ಸ್ಥಿರವಾಗಿ ಸ್ಥಾಪಿಸಲೋಸ್ಕರ ಭಾಗಮಾಡಲಿಚ್ಚಿಸಿದನು. ಮತ್ತು ಆ ಭೂಮಿಯನ್ನು ಸಮನಾಗಿ ವಿಭಾಗಿಸಿ ಅದರಲ್ಲಿ ಪರ್ವತಗಳನ್ನು ಹುಟುಕಿದನು.

೨೮-೨೯. ಪೂರ್ವದಲ್ಲಿ ಪ್ರಳಯಾಗ್ನಿಯಿಂದ ಸುಟ್ಟು ಭಸ್ಮವಾಗಿಯೂ, ವಿಶೀರ್ಣವಾಗಿಯೂ ಇರುವ ಪರ್ವತಗಳು ನಾಮಾವಶೇಷಗಳಾದವು. ಆಗ ವಾಯುದೇವನು ಶೀತಲವಾದ ಪ್ರಳಯೋದಕವನ್ನು ಶೋಷಿಸಿ, ಎಲ್ಲೆಲ್ಲಿ ಆ ಶೀರ್ಣವಾದ ಪರ್ವತಗಳನ್ನು ರಾಶಿಹಾಕಿದ್ದನೋ ಅಲ್ಲಲ್ಲಿ ಆ ರಾಶಿಗಳು ಪರ್ವತಾಕಾರಗಳಾಗಿ ನಿಂತವು.

೩೦. ಆ ಪರ್ವತಗಳು ಗಳಿತವಾದ ಭಾಗವುಳ್ಳವುಗಳಾದುದರಿಂದ ಅಚಲವೆಂಬುದಾಗಿಯೂ, ಗಂಟುಗಳಿರುವುದರಿಂದ ಪರ್ವತಗಳೆಂಬುದಾಗಿಯೂ, ಜಲಾಂತರ್ಗತವಾದುದರಿಂದ ಗಿರಿ ಎಂಬುದಾಗಿಯೂ, ಒಟ್ಟುಗೂಡಿರುವುದರಿಂದ ಶಿಲೋಚ್ಚಯವೆಂಬುದಾಗಿಯೂ, ಪ್ರಖ್ಯಾತವಾಗಿವೆ.

ತತಸ್ತೇಷು ವಿಶೀರ್ಣೇಷು ಲೋಕೋದಧಿ ಗಿರಿಷ್ವಥಃ ।
ವಿಶ್ವಕರ್ಮಾ ವಿಭಜತೇ ಕಲ್ಪಾದಿಷು ಪುನಃ ಪುನಃ ॥ ೩೧ ॥

ಸ ಸಮುದ್ರಾಮಿಮಾಂ ಪೃಥ್ವೀಂ ಸಪ್ತದ್ವೀಪಾಂ ಸ ಪರ್ವತಾಂ ।
ಭೂರಾದ್ಯಾಂಶ್ಚತುರೋ ಲೋಕಾನ್ ಪುನಃ ಸೋಥ ಪ್ರಕಲ್ಪಯತ್ ।
ಲೋಕಾನ್ ಪ್ರಕಲ್ಪಯಿತ್ವಾ ಚ ಪ್ರಜಾಸರ್ಗಂ ಸಸರ್ಜ ಹ ॥ ೩೨ ॥

ಬ್ರಹ್ಮಾ ಸ್ವಯಂಭೂರ್ಭಗವಾನ್ ಸಿಸೃಕ್ಷುರ್ವಿವಿಧಾಃ ಪ್ರಜಾಃ ।
ಸಸರ್ಜ ಸೃಷ್ಟಿಂ ತದ್ರೂಪಾಂ ಕಲ್ಪಾದಿಷು ಯಥಾ ಪುರಾ ॥ ೩೩ ॥

ತಸ್ಯಾಭಿಧ್ಯಾಯತಃ ಸರ್ಗಂ ತದಾ ವೈ ಬುದ್ಧಿಪೂರ್ವಕಂ ।
ಪ್ರಧಾನ ಸಮಕಾಲಂ ವೈ ಪ್ರಾದುರ್ಭೂತಸ್ತಮೋ ಮಯಃ ॥ ೩೪ ॥

ತಮೋ ಮೋಹೋ ಮಹಾಮೋಹ ಸ್ತಾಮಿಸ್ರೋ ಹ್ಯಂಧಸಂಜ್ಞಿತಃ ।
ಅವಿದ್ಯಾ ಪಂಚಪರ್ವೈಷಾ ಪ್ರಾದುರ್ಭೂತಾ ಮಹಾತ್ಮನಃ ॥ ೩೫ ॥

---

೩೧. ಅನಂತರ ಆ ಪರ್ವತಗಳು ಹೀಗೆ ಪ್ರಳಯೋದಕದಲ್ಲಿ ವಿಶೀರ್ಣವಾಗಲು, ವಿಶ್ವಕರ್ತನಾದ ಆ ಭಗವಂತನು ಕಲ್ಪಾದಿಯಲ್ಲಿ ಅವನ್ನು ಪುನಃ ಪುನಃ ವಿಭಾಗಿಸುತ್ತಾನೆ.

೩೨. ಆಗ ಆ ಭಗವಂತನು ಸಮುದ್ರಗಳು, ಸಪ್ತದ್ವೀಪಗಳು, ಪರ್ವತಗಳು, ಇವುಗಳಿಂದ ಕೂಡಿದ ಭೂಮಿಯನ್ನೂ, ಭೂರಾದಿ ನಾಲ್ಕು ಲೋಕಗಳನ್ನು ಪುನಃ ಸೃಷ್ಟಿಮಾಡಿದನು. ಹೀಗೆ ಲೋಕಗಳನ್ನು ಸೃಷ್ಟಿಸಿ ಅವುಗಳಲ್ಲಿ ಪ್ರಜಾಸೃಷ್ಟಿಯನ್ನು ಮಾಡಿದನು.

೩೩. ಉತ್ಪತ್ತಿಶೂನ್ಯನೂ, ಪೂರ್ಣನೂ, ಆದ ಭಗವಂತನು ಪ್ರಜೆಗಳನ್ನು ಸೃಷ್ಟಿಸಲಿಚ್ಛೆಯಿಂದ ಆಯಾ ಕಲ್ಪ ಪ್ರಾರಂಭದಲ್ಲಿ ಪೂರ್ವಕಲ್ಪಗಳಂತೆಯೇ ಆಯಾ ವಸ್ತುಗಳನ್ನು ಸೃಷ್ಟಿಸಿರುವನು.

೩೪-೩೫. ಮಹಾತ್ಮನಾದ ಭಗವಂತನು ಮನಃಪೂರ್ವಕವಾಗಿ ಸೃಷ್ಟಿಯನ್ನು ಮಾಡಲು ಯೋಚಿಸಿದನು. ಅದೇ ಸಮಯದಲ್ಲಿಯೇ ಸರಿಯಾಗಿ ತಮಸ್ಸು, ಮೋಹ, ಮಹಾಮೋಹ, ತಾಮಿಸ್ರ, ಮತ್ತು ಅಂಧತಾಮಿಸ್ರವೆಂಬ ಪಂಚಪರ್ವವೆಂದು ಪ್ರಖ್ಯಾತವಾದ ಅವಿದ್ಯೆಯು ಆ ಭಗವಂತನಿಂದ ಸೃಷ್ಟಿಸಪಟ್ಟಿತು.

ಪಂಚಧಾ ಚಾಶ್ರಿತಃ ಸರ್ಗೋ ಧ್ಯಾಯತಃ ಸೋಭಿಮಾನಿನಃ ।
ಸರ್ವತಸ್ತಮಸಾ ಚೈವ ದೀಪಃ ಕುಂಭವದಾವೃತಃ ।
ಬಹಿರಂತಃ ಪ್ರಕಾಶಶ್ಚ ಶುದ್ಧೋ ನಿಃಸಂಜ್ಞ ಏವ ಚ ॥ ೩೬ ॥

ಯಸ್ಮಾತ್ತೈಃ ಸಂವೃತಾ ಬುದ್ಧಿರ್ಮುಖ್ಯಾನಿ ಕರಣಾನಿ ಚ ।
ತಸ್ಮಾತ್ತೇ ಸಂವೃತಾತ್ಮಾನೋ ನಗಾ ಮುಖ್ಯಾಃ ಪ್ರಕೀರ್ತಿತಾಃ ॥ ೩೭ ॥

ಮುಖ್ಯಸರ್ಗೇ ತಥಾಭೂತಂ ಬ್ರಹ್ಮಾ ದೃಷ್ಟ್ವಾ ಹ್ಯಸಾಧಕಂ ।
ಅಪ್ರಸನ್ನಮನಾಃ ಸೋಥ ತತೋ ನ್ಯಾಸೋಭ್ಯಮನ್ಯತ ॥ ೩೮ ॥

ತಸ್ಯಾಭಿಧ್ಯಾಯತಸ್ತತ್ರ ತಿರ್ಯಕ್ ಸ್ರೋತೋಭ್ಯ ವರ್ತತ ।
ಯಸ್ಮಾತ್ತಿರ್ಯಗ್ ವ್ಯವರ್ತೇತ ತಿರ್ಯಕ್ ಸ್ರೋತಸ್ತತಃ ಸ್ಮೃತಃ ॥ ೩೯ ॥

ತಮೋ ಬಹುತ್ವಾತ್ತೇ ಸರ್ವೇ ಹ್ಯಜ್ಞಾನ ಬಹುಲಾ ಸ್ಮೃತಾಃ ।
ಉತ್ಪಥಗ್ರಹಿಣಶ್ಚಾಪಿ ತೇ ಧ್ಯಾನಾಧ್ಯಾನಮಾನಿನಃ ॥ ೪೦ ॥

---

೩೬. ಆ ಭಗವಂತನು ಅಭಿಮಾನಿದೇವತೆಗಳನ್ನು ಯೋಚಿಸಿ ಐದು ವಿಧವಾದ ಸೃಷ್ಟಿಯನ್ನು ಮಾಡಿದನು. ಪಾತ್ರೆಯು ದೀಪದ ಬೆಳಕನ್ನು ಮುಚ್ಚುವಂತೆ, ಅಂಧಕಾರದಿಂದ ಲೋಕಗಳು ಸರ್ವತ್ರ ಆವೃತವಾದುವು. ಭೂಮಂಡಲದ ಹೊರಗೆ ಒಳಗೆ ಎಂಬ ಉಭಯ ಭಾಗಗಳಲ್ಲಿಯೂ ಶುದ್ಧವಾದ ಪ್ರಕಾಶವಿಲ್ಲದೆಯೇ ಅಂಧಕಾರವು ವ್ಯಾಪಿಸಿತು.

೩೭. ಆ ಅಂಧಕಾರಗಳಿಂದ ಬುದ್ಧಿಯೂ, ಮುಖ್ಯವಾದ ಇಂದ್ರಿಯಗಳೂ, ಆವೃತಗಳಾದುದರಿಂದ ಅವು " ನಗಾ " ಎಂಬುದಾಗಿ ಪ್ರಸಿದ್ಧಿಯಾಗಿವೆ.

೩೮. ಆಗ ಬ್ರಹ್ಮನು ಮುಖ್ಯವಾದ ಸೃಷ್ಟಿ ಹೀಗೆ ಆ ಅಂಧಕಾರವು ಅಸಾಧಕವಾಗಿದೆಯೆಂದು ಯೋಚಿಸಿ ಅಸಂತುಷ್ಟಮನಸ್ಕನಾಗಿ ಧ್ಯಾನಮಾಡಿದನು.

೩೯. ಆಗ ಬ್ರಹ್ಮನು ಸರ್ವತ್ರ ಧ್ಯಾನಮಾಡಿದುದರಿಂದ ಎಲ್ಲೆಲ್ಲಿಯೂ ಸೃಷ್ಟಿಯು ಉಂಟಾಯಿತು. ಆ ಸೃಷ್ಟಿಪ್ರವಾಹಕ್ಕೆ ತೀರ್ಯಕ್ ಸ್ತ್ರೋತ್ರವೆಂಬುದಾಗಿ ನಾಮವು ಉಂಟಾಗಿದೆ.

೪೦. ಅವೆಲ್ಲವೂ ಅಜ್ಞಾನಮಯವಾದುದರಿಂದ ಅಜ್ಞಾನಪ್ರಚುರಗಳೆಂದೂ, ಹೆಸರುಗೊಂಡವು. ಅಮಾರ್ಗಗಾಮಿಗಳಾಗಿರುವುದರಿಂದ ಯುಕ್ತಾಯುಕ್ತ ವಿವೇಕ ಶೂನ್ಯವಾಗಿ ಆದವು.

ತಿರ್ಯಕ್‌ಸ್ರೋತಸ್ತು ದೃಷ್ಟ್ವಾ ವೈ ದ್ವಿತೀಯಂ ವಿಶ್ವಮೇಶ್ವರಃ ।
ಅಹಂ ಕೃತಾ ಅಹಂ ಮಾನ ಅಷ್ಟಾವಿಂಶದ್ವಿಧಾತ್ಮಕಾಃ ॥ ೪೧ ॥

ಏಕಾದಶೇಂದ್ರಿಯ ವಿಧಾಃ ನವಧಾ ಚೋಧಯಸ್ತಥಾ ।
ಅಷ್ಟೌ ಚ ತಾರಕಾದ್ಯಾಶ್ಚ ತೇಷಾಂ ಶಕ್ತಿವಿಧಾಃ ಸ್ಮೃತಾಃ ॥ ೪೨ ॥

ಅತಃ ಪ್ರಕಾಶಾಸ್ತೇ ಸರ್ವೇ ಆವೃತಾಶ್ಚ ಬಹಿಃ ಪುನಃ ।
ಯಸ್ಮಾತ್ತಿರ್ಯಕ್ ಪ್ರವರ್ತೇತ ತಿರ್ಯಕ್ ಸ್ರೋತಾಃ ಸ ಉಚ್ಯತೇ ॥ ೪೩ ॥

ತಿರ್ಯಕ್ ಸ್ರೋತಾಶ್ಚ ದೃಷ್ಟ್ವಾ ವೈ ದ್ವಿತೀಯಂ ವಿಶ್ವಮೀಶ್ವರಃ ।
ಅಭಿಪ್ರಾಯ ಮಥೋದ್ಭೂತಂ ದೃಷ್ಟ್ವಾ ಸರ್ವಂ ತಥಾಭಿಧಂ ।
ತಸ್ಯಾಭಿಧ್ಯಾಯತೋ ನಿತ್ಯಂ ಸಾತ್ವಿಕಃ ಸಮವರ್ತತ ॥ ೪೪ ॥

---

೪೧. ಪರಮೇಶ್ವರನು ತ್ರಿಯಾಕ್ ಸ್ರೋತುವೆಂಬ ದ್ವಿತೀಯ ಜಗತ್ ಸೃಷ್ಟಿಯನ್ನು ಮಾಡಿ ಅಹಂಕಾರ ಅಹಂಭಾವಗಳಿಂದ ಯುಕ್ತವಾದ ಇಪ್ಪತ್ತೆಂಟು ವಿಧಗಳಾದ ಪ್ರಜಾಸೃಷ್ಟಿಯನ್ನು ಮಾಡಿದನು.

೪೨. ಅವು ಯಾವುವೆಂದರೆ ಹನ್ನೊಂದು ಇಂದ್ರಿಯಗಳು ನವವಿಧಗಳಾದ ಉದಯಗಳು, ಅಷ್ಟಕಾರಕಗಳು ಇವು ಒಟ್ಟು-ಇಪ್ಪತ್ತೆಂಟು ವಿಧಗಳಾಗಿವೆ. ಅವುಗಳ ಶಕ್ತಿಯು ವಿಚಿತ್ರವಾಗಿದೆ.

೪೩. ಪ್ರಕಾಶಮಾನಗಳಾದ ಅವೆಲ್ಲವೂ, ಹೊರಭಾಗದಲ್ಲಿ ಪುನಃ ಆವೃತ್ತಗಳಾದವು. ಯಾರಿಂದ ಈ ತೀರ್ಯಕ್ ಸ್ರೋತಗಳ ಸೃಷ್ಟಿಯು ಉಂಟಾಯಿತೋ ಆ ಭಗವಂತನಿಗೆ ತೀರ್ಯಕ್‌ಸ್ರೋತವೆಂಬ ನಾಮವು ಉಂಟಾಗಿದೆ.

೪೪. ತ್ರಿಯಕ್‌ಸ್ರೋತನಾದ ಪರಮೇಶ್ವರನು ಆ ದ್ವಿತೀಯ ಸೃಷ್ಟಿಯನ್ನು ನೋಡಿ ಅವುಗಳಿಂದ ಉಂಟಾದ ಅಭಿಪ್ರಾಯವನ್ನೂ ಅವುಗಳ ನಡೆ ನುಡಿಗಳನ್ನು ತಿಳಿದು ಪುನಃ ಧ್ಯಾನಿಸಲು, ಸಾತ್ವಿಕವಾದ ಸೃಷ್ಟಿಯುಂಟಾಯಿತು.

ಊರ್ಧ್ವಸ್ರೋತಾಸ್ತೃತೀಯಸ್ತು ಸ ಚೈವೋರ್ಧ್ವವ್ಯವಸ್ಥಿತಃ ।
ಯಸ್ಮಾದ್ವ್ಯವರ್ತತೋರ್ಧ್ವಂತು ಊರ್ಧ್ವಸ್ರೋತಾಸ್ತತಃ ಸ್ಮೃತಃ ॥ ೪೫ ॥

ತೇ ಸುಖಪ್ರೀತಿಬಹುಲಾ ಬಹಿರಂತಶ್ಚ ಸಂವೃತಾಃ ।
ಪ್ರಕಾಶಾ ಬಹಿರಂತಶ್ಚ ಊರ್ಧ್ವಸ್ರೋತೋದ್ಭವಾಃ ಸ್ಮೃತಾಃ ॥ ೪೬ ॥

ತೇನ ವಾತಾದಯೋಜ್ಞೇಯಾಃ ಸೃಷ್ಟಾತ್ಮಾನೋ ವ್ಯವಸ್ಥಿತಾಃ ।
ಊರ್ಧ್ವಸ್ರೋತಾಸ್ತೃತೀಯೋ ವೈ ತೇನ ಸರ್ಗಸ್ತು ಸ ಸ್ಮೃತಃ ॥ ೪೭ ॥

ಊರ್ಧ್ವಸ್ರೋತಸ್ಸು ಸೃಷ್ಟೇಷು ದೇವೇಷು ಸ ತದಾ ಪ್ರಭುಃ ।
ಪ್ರೀತಿಮಾನಭವದ್ಬ್ರಹ್ಮಾ ತತೋಽನ್ಯಂ ಸೋಭ್ಯಮನ್ಯತ ।
ಸಸರ್ಜ ಸರ್ಗಮನ್ಯಂ ಸ ಸಾಧಕಂ ಪ್ರಭುರೀಶ್ವರಃ ॥ ೪೮ ॥

---

೪೫. ಊರ್ಧ್ವಭಾಗದಲ್ಲಿ ನಡೆದ ಸೃಷ್ಟಿಗೆ ಮೂರನೆಯ ಊರ್ಧ್ವಸ್ರೋತಸ್ಸೆಂದು ಪ್ರಖ್ಯಾತಿಯು ಉಂಟಾಗಿದೆ. ಅದನ್ನು ಮಾಡಿದುದರಿಂದ ಅವನಿಗೂ ಊರ್ಧ್ವಸ್ರೋತವೆಂದು ನಾಮವು ಪ್ರಾಪ್ತವಾಗಿದೆ. ಅಂದರೆ ಊರ್ಧ್ವಲೋಕದಲ್ಲಿರುವ ದೇವತೆಗಳ ಸೃಷ್ಟಿಗೆ ಕಾರಣನಾದುದರಿಂದ ಈಶ್ವರನಿಗೆ ಈ ನಾಮವು ಉಂಟಾಗಿದೆ.

೪೬. ಊರ್ಧ್ವಸ್ರೋತರಾದ ಅವರು ಸುಖಸಂತೋಷವುಳ್ಳವರೂ ಬಹಿರಂತರಗಳಲ್ಲಿ ಜ್ಞಾನಾವರಣಿಗಳೂ, ಪ್ರಕಾಶ ಸ್ವರೂಪರೂ ಆಗಿರುವರು.

೪೭. ಇದರಿಂದ ವಾಯುದೇವನೇ ಮೊದಲಾದವರ ಸೃಷ್ಟಿಯನ್ನು ತಿಳಿವಂತಾಯಿತು. ಆ ದೇವತೆಗಳು ಹೀಗೆ ಸೃಷ್ಟರಾಗಿ ಕ್ಲಿಪ್ತವಾದ ಜಾಗದಲ್ಲಿರುವುದರಿಂದ ಈ ತೃತೀಯ ಸೃಷ್ಟಿಗೆ " ಊರ್ಧ್ವಸ್ರೋತಸ್ಸೆಂದು ಹೆಸರುಂಟಾಗಿದೆ.

೪೮. ಸ್ವಾಮಿಯೂ, ಪ್ರಭುವೂ ಆದ ಈಶ್ವರನು, ಊರ್ಧ್ವಸ್ರೋತರಾದ ದೇವತೆಗಳ ಸೃಷ್ಟಿಯನ್ನು ಮಾಡಿ ಅವರನ್ನು ನೋಡಿ ಸಂತುಷ್ಟನಾಗಿ, ಮತ್ತೊಂದು ಸೃಷ್ಟಿಯಾಗಬೇಕೆಂದು ಯೋಚಿಸಿ ಅತ್ಯುಪಯುಕ್ತವಾದ ಮತ್ತೊಂದು ಸೃಷ್ಟಿಯನ್ನು ಮಾಡಿದನು.

ಅಥಾಭಿಧ್ಯಾಯತಸ್ತಸ್ಯ ಸತ್ಯಾಭಿಧ್ಯಾಯಿನಸ್ತದಾ ।
ಪ್ರಾದುರ್ಬಭೂವ ಚಾವ್ಯಕ್ತಾದರ್ವಾಕ್‌ಸ್ರೋತಸ್ತು ಸಾಧಕಂ ।
ಯಸ್ಮಾದರ್ವಾಕ್ ವ್ಯವರ್ತೇತ ತತೋಽರ್ವಾಕ್ ಸ್ರೋತ ಉಚ್ಯತೇ ॥ ೪೯ ॥

ತೇ ಚ ಪ್ರಕಾಶಬಹುಲಾಸ್ತಮುಸ್ಸತ್ವರಜೋಽಧಿಕಾಃ ।
ತಸ್ಮಾತ್ತೇ ದುಃಖಬಹುಲಾ ಭೂಯೋ ಭೂಯಶ್ಚ ಕಾರಿಣಃ ॥ ೫೦ ॥

ಪ್ರಕಾಶಾ ಬಹಿರಂತಶ್ಚ ಮನುಷ್ಯಾ ಸಾಧಕಾಶ್ಚಯೇ ।
ಲಕ್ಷಣೈಸ್ತಾರಕಾದ್ಯೈಸ್ತೇ ಅಷ್ಟಧಾ ಚ ವ್ಯವಸ್ಥಿತಾಃ ॥ ೫೧ ॥

ಸಿದ್ಧಾತ್ಮಾನೋ ಮನುಷ್ಯಾಸ್ತೇ ಗಂಧರ್ವಸಹಧರ್ಮಿಣಃ ।
ಇತ್ಯೇಷ ತೇಜಸಃ ಸರ್ಗೋ ಹ್ಯರ್ವಾಕ್ ಸ್ರೋತಾಃ ಪ್ರಕೀರ್ತಿತಾಃ ॥ ೫೨ ॥

---

೪೯. ಸಾರ್ಥಕವಾದ ಧ್ಯಾನವುಳ್ಳ ಭಗವಂತನ ಇಚ್ಛಾನುಸಾರವಾಗಿ ಅವ್ಯಕ್ತ ತತ್ವದಿಂದ ಅಧೋಗತವಾದ ಸೃಷ್ಟಿಕ್ರಮವು ಉಂಟಾಯಿತು. ಕೆಳಗಿನ ಲೋಕ ವಲ್ಲಾದುದರಿಂದ ಈ ಸೃಷ್ಟಿಯು ಅರ್ವಾಕ್ ಸೃಷ್ಟಿಯೆಂದು ಪ್ರಖ್ಯಾತವಾಗಿದೆ.

೫೦. ಅತ್ಯಂತ ಪ್ರಕಾಶಮಾನರಾದ ಅವರು ಸತ್ವರಜಸ್ತಮೋ ಗುಣಗಳ ಆಧಿಕ್ಯದಿಂದ ಹೆಚ್ಚು ದುಃಖವುಳ್ಳವರಾಗಿ, ಪುನಃ ಪುನಃ ತಮ್ಮ ತಮ್ಮ ಸೃಷ್ಟಿಗೆ, ತಾವೇ ಮುಖ್ಯ ಕಾರಣರಾದರು.

೫೧. ಆ ಪುರುಷರು ಬಹಿರಂತರಂಗವೆಂಬ ಉಭಯವಿಧ ಪ್ರಕಾಶಶಾಲಿ ಗಳೂ, ಕಾರ್ಯಸಾಧಕರೂ ಆಗಿ ತಾರಕಾದಿ ಲಕ್ಷಣಗಳಿಂದ ಕೂಡಿ ಅಷ್ಟವಿಧರೆಂದು ಪ್ರಖ್ಯಾತರಾದರು.

೫೨. ಅಂಥ ಪುರುಷರು ಸಿದ್ಧಸ್ವರೂಪರಾಗಿಯೂ, ಗಂಧರ್ವರ ಸಮಾನ ಧರ್ಮವುಳ್ಳವರಾಗಿಯೂ ಇರುವರು. ಇದೇ ಸ್ರೋತಸೃಷ್ಟಿಯ ಕ್ರಮವು. ಇದರಿಂದ ಊರ್ಧ್ವ, ಮಧ್ಯಮ, ಅಧೋಲೋಕವಾಸಿಗಳಾದ ದೇವಾದಿಗಳ ಸೃಷ್ಟಿಯು ಉಕ್ತವಾಗಿದೆ.

ಪಂಚಮೋऽನುಗ್ರಹಃ ಸರ್ಗಶ್ಚತುರ್ಧಾ ಸ ವ್ಯವಸ್ಥಿತಃ ।
ವಿಪರ್ಯಯೇಣ ಶಕ್ತ್ಯಾ ಚ ತುಷ್ಟ್ಯಾ ಸಿದ್ಧ್ಯಾ ತಥೈವ ಚ ।
ವಿವೃತ್ತಂ ವರ್ತಮಾನಂ ಚ ತೇऽರ್ಥಂ ಜಾನಂತಿ ತತ್ವತಃ ॥ ೫೩ ॥

ಭೂತಾದಿಕಾನಾಂ ಸತ್ವಾನಾಂ ಷಷ್ಠಃ ಸರ್ಗಃ ಸ ಉಚ್ಯತೇ ।
ವಿಪರ್ಯಯೇಣ ಭೂತಾದಿರಶಕ್ತ್ಯಾ ಚ ವ್ಯವಸ್ಥಿತಃ ॥ ೫೪ ॥

ಪ್ರಥಮೋ ಮಹತಃ ಸರ್ಗೋ ವಿಜ್ಞೇಯೋ ಮಹತಸ್ತು ಸಃ ।
ತನ್ಮಾತ್ರಾಣಾಂ ದ್ವಿತೀಯಸ್ತು ಭೂತಸರ್ಗಃ ಸ ಉಚ್ಯತೇ ॥ ೫೫ ॥

ವೈಕಾರಿಕಸ್ತೃತೀಯಸ್ತು ಸರ್ಗ ಐಂದ್ರಿಯಕಃ ಸ್ಮೃತಃ ।
ಇತ್ಯೇಷಃ ಪ್ರಾಕೃತಃ ಸರ್ಗಃ ಸಂಭೂತೋ ಬುದ್ಧಿಪೂರ್ವಕಃ ॥ ೫೬ ॥

ಮುಖ್ಯಸರ್ಗಚತುರ್ಥಸ್ತು ಮುಖ್ಯಾ ವೈ ಸ್ಥಾವರಾಃ ಸ್ಮೃತಾಃ ।
ತಿರ್ಯಕ್ ಸ್ರೋತ್ರಾಶ್ಚ ಯಃ ಸರ್ಗಸ್ತಿರ್ಯಗ್ಯೋನಿಃ ಸ ಪಂಚಮಃ ॥೫೭॥

---

೫೩. ಅನುಗ್ರಹರೂಪವಾದ ಪಂಚಮಸೃಷ್ಟಿಯು ವಿಪರ್ಯಯ, ಶಕ್ತಿ, ತುಷ್ಟಿ, ಸಿದ್ಧಿ ಎಂಬುದಾಗಿ ನಾಲ್ಕು ವಿಧಗಳಾಗಿವೆ. ಅವರು ಭೂತಭವಿಷ್ಯದ್ವರ್ತಮಾನ ಕಾಲಗಳಲ್ಲಿರುವ ವಿಷಯಗಳೆಲ್ಲವನ್ನೂ, ಯಥಾಸ್ಥಿತವಾಗಿ ತಿಳಿಯುತ್ತಾರೆ.

೫೪. ಪಂಚಭೂತವೇ ಮೊದಲಾದ ಪ್ರಾಣಿಗಳ ಸೃಷ್ಟಿಯು ಆರನೆಯ ಶೃಷ್ಟಿಯಾಗಿದೆ. ಆ ಪಂಚಭೂತಗಳು ವಿಪರ್ಯಯಗಳಾಗಿರುವುದರಿಂದ ಸ್ವಕಾರ್ಯಗಳನ್ನು ಮಾಡುವುದರಲ್ಲಿ ಅಶಕ್ತಗಳಾಗಿವೆ.

೫೫-೫೬. ಉತ್ತಮವಾದ ಮಹತ್ತತ್ವದ ಸರ್ಗವೇ ಮೊದಲನೆಯ ಸೃಷ್ಟಿಯಾಗಿಯೂ, ತನ್ಮಾತ್ರಗಳ ಮೂಲಕ ಆದ ಪಂಚಭೂತಗಳ ಸೃಷ್ಟಿಯೇ ಎರಡನೆಯದಾಗಿಯೂ, ವೈಕಾರಿಕಾಹಂಕಾರ ತತ್ವದಿಂದುಂಟಾದ ಪಂಚಜ್ಞಾನೇಂದ್ರಿಯಗಳ ಸೃಷ್ಟಿಯೇ, ಮೂರನೆಯ ಸೃಷ್ಟಿಯಾಗಿಯೂ ಇವೆ. ಈ ರೀತಿಯಾದ ಪ್ರಾಕೃತಸೃಷ್ಟಿಯನ್ನು, ಭಗವಂತನು ಜ್ಞಾನಪೂರ್ವಕವಾಗಿ ಮಾಡಿರುವನು.

೫೭. ಅತಿಮುಖ್ಯವೂ ಪರ್ವತಾದಿ ಸ್ಥಾವರಗಳೂ ಆದ ಭೂತಸರ್ಗವೇ ನಾಲ್ಕನೆಯ ಸೃಷ್ಟಿಯಾಗಿಯೂ, ತಿರ್ಯಕ್ ಕ್ರಮಣದಿಂದಾದ ತಿರ್ಯಕ್ ಜಂತುಗಳ ಸೃಷ್ಟಿಯೇ ಐದನೆಯ ಸೃಷ್ಟಿಯಾಗಿಯೂ ಇವೆ.

ತಥೋರ್ಧ್ವ ಸ್ರೋತಸಾಂ ಷಷ್ಠೋ ದೇವಸರ್ಗಸ್ತು ಸ ಸ್ಮೃತಃ ।
ತಥಾರ್ವಾಕ್ ಸ್ರೋತಸಾಂ ಸರ್ಗಃ ಸಪ್ತಮಃ ಸ ತು ಮಾನುಷಃ ॥ ೫೮ ॥

ಅಷ್ಟಮೋನುಗ್ರಹಃ ಸರ್ಗಃ ಸಾತ್ವಿಕಃ ಸ್ತಾಮಸಸ್ತು ಸಃ ।
ಪಂಚೈತೇ ವೈಕೃತಾಃ ಸರ್ಗಾಃ ಪ್ರಾಕೃತಾಸ್ತು ತ್ರಯಃ ಸ್ಮೃತಾಃ ॥ ೫೯ ॥

ಪ್ರಾಕೃತೋ ವೈಕೃತಶ್ಚೈವ ಕೌಮಾರೋ ನವಮಃ ಸ್ಮೃತಃ ।
ಪ್ರಾಕೃತಾಸ್ತು ತ್ರಯಃ ಸರ್ಗಾ ಕೃತಾಸ್ತೇ ಬುದ್ಧಿಪೂರ್ವಕಾಃ ॥ ೬೦ ॥

ಬುದ್ಧಿಪೂರ್ವಂ ಪ್ರವರ್ತಂತೇ ಷಟ್‌ಸರ್ಗಾ ಬ್ರಹ್ಮಣಸ್ತು ತೇ ।
ವಿಸ್ತರಾನುಗ್ರಹಂ ಸರ್ಗಂ ಕೀರ್ತ್ಯಮಾನಂ ನಿಬೋಧತ ॥ ೬೧ ॥

ಚತುರ್ಧಾವಸ್ಥಿತಃ ಸೋಥ ಸರ್ವಭೂತೇಷು ಕೃತ್ಸ್ನಶಃ ।
ವಿಪರ್ಯಯೇಣ ಶಕ್ತ್ಯಾ ಚ ತುಷ್ಟ್ಯಾ ಸಿದ್ಧ್ಯಾ ತಥೈವ ಚ ॥ ೬೨ ॥

---

೫೮-೫೯. ಊರ್ಧ್ವಸ್ರೋತಸ್ಸಿನಿಂದ ನಿರ್ಮಿಸಿರುವ ದೇವತೆಗಳ ಸೃಷ್ಟಿಯೇ ಆರನೆಯದೂ, ಅರ್ವಾತ್ ಸ್ರೋತಸ್ಸಿನಿಂದಾದ ಮಾನುಷಸೃಷ್ಟಿಯೇ ಏಳನೆಯದೂ, ಸಾತ್ವಿಕ ತಾಮಸ ಗುಣಗಳಿಂದಾದ ಸರ್ಗವೇ ಎಂಟನೆಯದೂ ಆಗಿವೆ. ಈ ಐದು ಸರ್ಗಗಳೂ, ವೈಕೃತಗಳಾಗಿವೆ. ಇವುಗಳಲ್ಲಿ ಮೂರು ಸರ್ಗಗಳು ಪ್ರಾಕೃತಗಳೆಂದು ತಿಳಿಯಬೇಕು.

೬೦. ಹೀಗೆ ಪ್ರಾಕೃತ ವೈಕೃತ ಸರ್ಗಗಳು ಎಂಟು ವಿಧಗಳಾಗಿಯೂ, ಕೌಮಾರ ಸರ್ಗವು ಒಂಭತ್ತನೆಯದಾಗಿಯೂ ಇವೆ. ಈ ಪ್ರಾಕೃತ ಸೃಷ್ಟಿಯು ಬ್ರಹ್ಮದೇವನ ಮನಃಪೂರ್ವಕವಾಗಿ ಮಾಡಿದ ಕಾರ್ಯವಾಗಿವೆ.

೬೧. ಬ್ರಹ್ಮದೇವನು ಈ ಆರು ವಿಧಗಳಾದ ಸೃಷ್ಟಿಯನ್ನು ಮನಃಪೂರ್ವಕವಾಗಿಯೇ ಮಾಡಿರುತ್ತಾನೆ. ಹೀಗೆ ವಿಸ್ತಾರವಾಗಿಯೂ, ಅನುಗ್ರಹಪೂರ್ವಕವಾಗಿಯೂ, ಮಾಡಿರುವ ಬ್ರಹ್ಮದೇವನ ಸೃಷ್ಟಿಯನ್ನು ಹೇಳುವೆನು, ಕೇಳಿ ಎಂದನು.

೬೨. ಸರ್ವಭೂತಗಳಲ್ಲಿಯೂ ಸಂಪೂರ್ಣವಾಗಿ ನಡೆಯತಕ್ಕ ಈ ಸೃಷ್ಟಿಯು ವಿಪರ್ಯಯ, ಶಕ್ತಿ, ತುಷ್ಟಿ, ಸಿದ್ಧಿ ಎಂಬ ನಾಲ್ಕರಿಂದಲೂ ಉಂಟಾಗಿದೆ.

ಸ್ಥಾವರೇಷು ವಿಪರ್ಯಾಸಃ ತಿರ್ಯಗ್ಯೋನಿಷು ಶಕ್ತಿತಃ ।
ಸಿದ್ಧಾತ್ಮಾನೋ ಮನುಷ್ಯಾಸ್ತು ತುಷ್ಟಿರ್ದೇವೇಷು ಕೃತ್ಸ್ನಶಃ ॥ ೬೩ ॥

ಇತ್ಯೇತೇ ಪ್ರಾಕೃತಾಶ್ಚೈವ ವೈಕೃತಾಶ್ಚ ನವಸ್ಮೃತಾಃ ।
ಸರ್ಗಾಃ ಪರಸ್ಪರಸ್ಯಾಥ ಪ್ರಕಾರಾ ಬಹವಃ ಸ್ಮೃತಾಃ ॥ ೬೪ ॥

ಅಗ್ರೇ ಸಸರ್ಜ ವೈ ಬ್ರಹ್ಮಾ ಮಾನಸಾನಾತ್ಮನಃ ಸಮಾನ್ ।
ಸನಂದನಂ ಚ ಸನಕಂ ವಿದ್ವಾಂಸಂ ಚ ಸನಾತನಂ ॥ ೬೫ ॥

ವಿಜ್ಞಾನೇನ ನಿವೃತ್ತಾಸ್ತೇ ವೈವರ್ತೇನ ಮಹೌಜಸಃ ।
ಸಂಬುದ್ಧಾಶ್ಚೈವ ನಾನಾತ್ವಾ ದಪವಿದ್ಧಾಸ್ತ್ರಯೋಽಪಿ ತೇ ।
ಅಸೃಷ್ಟ್ವೈವ ಪ್ರಜಾಸರ್ಗಂ ಪ್ರತಿಸರ್ಗಂ ಗತಾಃ ಪುನಃ ॥ ೬೬ ॥

---

೬೩. ವಿಪರ್ಯಯದಿಂದ ಸ್ಥಾವರಸೃಷ್ಟಿಯೂ, ಶಕ್ತಿಯಿಂದ ತಿರ್ಯಕ್ ಪ್ರಾಣಿಗಳ ಸರ್ಗವೂ, ಸಿದ್ಧಿಯಿಂದ ಮನುಷ್ಯ ಜನನವೂ, ತುಷ್ಟಿಯಿಂದ ದೇವೋತ್ಪತ್ತಿಯೂ ಸಹ ಆಗಿರುತ್ತವೆ.

೬೪. ಈ ಮೇಲೆ ಹೇಳಿರುವ ಸೃಷ್ಟಿಯೇ ಪ್ರಾಕೃತ ಸೃಷ್ಟಿಯು. ವೈಕೃತ ಸರ್ಗವಾದರೋ ನವವಿಧವಾಗಿದೆ. ಸರ್ಗಗಳು ಪರಸ್ಪರ ಸಂಬಂಧದಿಂದ ಅನೇಕ ಪ್ರಕಾರಗಳಾಗಿವೆ.

೬೫. ಬ್ರಹ್ಮದೇವನು ಸೃಷ್ಟಿಯ ಆದಿಯಲ್ಲಿ ಜ್ಞಾನಿಗಳಾದ ಸನಕ, ಸನಂದನ, ಸನಾತನರೆಂಬ ಮೂವರು ಮಾನಸಪುತ್ರರನ್ನು ಸೃಷ್ಟಿಮಾಡಿದನು.

೬೬. ಮಹಾಜ್ಞಾನಿಗಳಾದ ಸನಕಾದಿಗಳು ನಿವೃತ್ತಿಮಾರ್ಗವನ್ನು ಪಡೆದಿರುವುದರಿಂದ, ಪ್ರವೃತ್ತಿಮಾರ್ಗವನ್ನು ಬಿಟ್ಟು ಪರಸ್ಪರ ಸಂಸರ್ಗದಿಂದ ಪರಿಶುದ್ಧರಾಗಿ, ಪ್ರಜಾಸೃಷ್ಟಿಯನ್ನು ಮಾಡದೆಯೇ, ಅವಾಂತರ ಸೃಷ್ಟಿಯನ್ನು ಮಾಡಿದರು (ಮುಕ್ತರಾದರು).

ತದಾ ತೇಷು ವ್ಯತೀತೇಷು ತದಾನ್ಯಾನ್ ಸಾಧಕಾಂಶ್ಚ ತಾನ್ ।
ಮಾನಸಾನಸೃಜದ್ಬ್ರಹ್ಮಾ ಪುನಃ ಸ್ಥಾನಾಭಿಮಾನಿನಃ ।
ಆಭೂತಸಂಪ್ಲವಾವಸ್ಥಾನ್ ನಾಮತಸ್ತಾನ್ನಿಬೋಧತ ॥ ೬೭ ॥

ಆಪೋಽಗ್ನಿಃ ಪೃಥಿವೀ ವಾಯುರಂತರಿಕ್ಷಂ ದಿಶಸ್ತಥಾ ।
ಸ್ವರ್ಗಂ ದಿವಃ ಸಮುದ್ರಾಂಶ್ಚ ನದೀಃ ಶೈಲಾನ್ ವನಸ್ಪತೀನ್ ॥ ೬೮ ॥

ಓಷಧೀನಾಂ ತಥಾತ್ಮಾನೋ ಆತ್ಮಾನೋ ವೃಕ್ಷವೀರುಧಾಂ ।
ಲವಾಃ ಕಾಷ್ಠಾಃ ಕಲಾಶ್ಚೈವ ಮುಹೂರ್ತಾಃ ಸಂಧಿರಾತ್ರ್ಯಹಾಃ ॥ ೬೯ ॥

ಅರ್ಧಮಾಸಾಶ್ಚ ಮಾಸಾಶ್ಚ ಅಯನಾಬ್ದ ಯುಗಾನಿ ಚ ।
ಸ್ಥಾನಾಭಿಮಾನಿನಃ ಸರ್ವೇ ಸ್ಥಾನಾಖ್ಯಾಶ್ಚೈವ ತೇ ಸ್ಮೃತಾಃ ॥ ೭೦ ॥

ವಕ್ತ್ರಾದಸ್ಯ ಬ್ರಾಹ್ಮಣಾಃ ಸಂಪ್ರಸೂತಾಃ ।
ತದ್ವಕ್ಷಸ್ತಃ ಕ್ಷತ್ರಿಯಾಃ ಪೂರ್ವಭಾಗೇ ॥
ವೈಶ್ಯಾಶ್ಚೋರ್ವೋರ್ಯಸ್ಯ ಪದ್ಭ್ಯಾಂ ಚ ಶೂದ್ರಾಃ ।
ಸರ್ವೇ ವರ್ಣಾ ಗಾತ್ರತಃ ಸಂಪ್ರಸೂತಾಃ ॥ ೭೧ ॥

---

೬೭. ಆಗ ಸನಕಾದಿಗಳು ಮುಕ್ತರಾಗಲು ಬ್ರಹ್ಮದೇವನು ಇತರರಾದ ಮಕ್ಕಳನ್ನು ಸಾಧಕರನ್ನಾಗಿ ಭಾವಿಸಿ ಅಭಿಮಾನಿಗಳಾದ ಬೇರೆ ಮಾನಸ ಪುತ್ರರನ್ನು ಸೃಷ್ಟಿಸಿದನು. ಪ್ರಳಯಕಾಲದ ವರೆಗೂ ಇರತಕ್ಕ ಅವರನ್ನು ನಾಮ ಸಹಿತವಾಗಿ ತಿಳಿಸುವೆನು ಕೇಳಿ ಎಂದನು.

೬೮-೭೦. ಬ್ರಹ್ಮದೇವನು ಜಲ, ಅಗ್ನಿ, ಭೂಮಿ, ವಾಯು, ಅಂತರಿಕ್ಷ, ದಿಕ್ಕು, ಸ್ವರ್ಗ, ಆಕಾಶ, ಸಮುದ್ರ, ನದಿ, ಶೈಲ, ವೃಕ್ಷ, ಮತ್ತು ಓಷಧಿ ಇವುಗಳನ್ನೂ ಇವುಗಳ ಅಭಿಮಾನಿದೇವತೆಗಳನ್ನೂ, ಮತ್ತು ಕಾಲ, ಕಾಷ್ಟ, ಕಲಾ, ಮುಹೂರ್ತ ಸಂಧಿಕಾಲ, ರಾತ್ರಿ, ಅಹಸ್ಸು, ಪಕ್ಷ, ಮಾಸ, ಅಯನ, ವರ್ಷ, ಯುಗ, ಸ್ಥಾನ, ಸ್ಥಾನಾಭಿದೇವತೆ, ಎಂಬ ಇವೇ ಮೊದಲಾದುವನ್ನೂ ಸೃಷ್ಟಿ ಮಾಡಿದನು.

೭೧. ಬ್ರಹ್ಮದೇವನ ಮುಖದಿಂದ ಬ್ರಾಹ್ಮಣರೂ, ಹೃದಯದಿಂದ ಕ್ಷತ್ರಿಯರೂ, ತೊಡೆಯಿಂದ ವೈಶ್ಯರೂ, ಪಾದದಿಂದ ಶೂದ್ರರೂ, ಹೀಗೆ ಎಲ್ಲಾ ವರ್ಣದವರೂ, ಅವನ ಶರೀರದಿಂದಲೇ ಉತ್ಪನ್ನರಾದರು.

**ನಾರಾಯಣಃ ಪರೋಽವ್ಯಕ್ತಾದಂಡಮವ್ಯಕ್ತ ಸಂಭವಂ ।**
**ಅಂಡಾಜ್ಜಜ್ಞೇ ಪುನರ್ಬ್ರಹ್ಮಾ ಲೋಕಾಸ್ತೇನ ಕೃತಾಃ ಸ್ವಯಂ ॥ ೭೨ ॥**

**ಏಷ ವಃ ಕಥಿತಃ ಪಾದಃ ಸಮಾಸಾನ್ನತು ವಿಸ್ತರಾತ್ ।**
**ಅನೇನಾದ್ಯೇನ ಪಾದೇನ ಪುರಾಣಂ ಸಂಪ್ರಕೀರ್ತಿತಂ ॥ ೭೩ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ ಸೃಷ್ಟಿಪ್ರಕರಣಂ ನಾಮ ಷಷ್ಠೋಽಧ್ಯಾಯಃ.**

---

೭೨. ಪರಮಪುರುಷನಾದ ಶ್ರೀಮನ್ನಾರಾಯಣನು ಅವ್ಯಕ್ತ ತತ್ವದ ಮೂಲಕ ಬ್ರಹ್ಮಾಂಡವನ್ನೂ, ಅದರಲ್ಲಿ ಚತುರ್ಮುಖ ಬ್ರಹ್ಮನನ್ನೂ ಸೃಷ್ಟಿಸಿ ಅವನಿಂದ ಚರಾಚರಾತ್ಮಕವಾದ ಈ ಲೋಕಗಳನ್ನು ಸೃಷ್ಟಿಮಾಡಿಸಿದನು.

೭೩. ಈ ವಾಯುಪುರಾಣದ ಪ್ರಥಮ ಪಾದದಲ್ಲಿ ಸೃಷ್ಟಿಕ್ರಮವನ್ನು ನಿಮಗಾಗಿ ವಿಸ್ತಾರಮಾಡದೇ, ಸಂಕ್ಷೇಪವಾಗಿ ನಿರೂಪಿಸಿರುತ್ತೇನೆಂದು ಸೂತನು ಶೌನಕಾದಿ ಋಷಿಗಳಿಗೆ ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ಸೃಷ್ಟಿಪ್ರಕರಣವೆಂಬ ಆರನೆಯ ಅಧ್ಯಾಯವು ಸಮಾಪ್ತವಾದುದು.

## ಆರನೆಯ ಅಧ್ಯಾಯದ ಸಾರಾಂಶವು

ಸಕಲ ಲೋಕಗಳೂ ಲಯವಾಗಲು ಆ ಜಲಮಯವಾದ ಪ್ರಳಯೋದಕದಲ್ಲಿ ಶ್ರೀಮನ್ನಾರಾಯಣನು ಒಂದು ಸಾವಿರ ವರ್ಷಗಳು ಯೋಗನಿದ್ರೆಯಲ್ಲಿದ್ದು, ಸತ್ವಗುಣ ಪ್ರೇರಣೆಯಿಂದ ಎದ್ದು, ಜಗತ್ತು ಶೂನ್ಯವಾಗಿರುವುದನ್ನು ನೋಡಿ ಭೂಮಂಡಲವನ್ನು ಆ ಉದಕದಲ್ಲಿ ಹುಡುಕಿದನು. ಈ ಜಗತ್ತು ಜಲದಲ್ಲಿ ಮುಳುಗಿರುವುದನ್ನರಿತು, ಅತಿ ವಿಶಾಲವೂ, ಘೋರವೂ ಆದ ವರಾಹ ರೂಪವನ್ನು ಹೊಂದಿ ಜಲದಲ್ಲಿ ಮುಳಗಿ ಭೂಮಂಡಲವನ್ನು ಉದ್ಧರಿಸಿದನು. ಪುನಃ ಭುವರಾದಿ ಲೋಕಗಳನ್ನು ಸೃಷ್ಟಿಸಿದನು. ಆಗ ತಮಸ್ಸು, ಮೋಹ, ಮಹಾಮೋಹವೇ ಮೊದಲಾದ ಪಂಚಪರ್ವವು ಜನಿಸಿತು. ಇವುಗಳಿಂದ ಜಗತ್ತು ಆವೃತವಾಗಲು ದೇವಾದಿಗಳನ್ನು ಪುನಃ ಸೃಷ್ಟಿಸಿದನು. ಸನಕ ಸನಂದನಾದಿಗಳು ಆಗಲೇ ಜನಿಸಿದರು. ಅವರಿಂದ ಜಗತ್ತಿಗೆ ಫಲವಾಗದಿರಲು ಪುನಃ ದೇವತೆಗಳು ಸೃಷ್ಟಿಯಾಗಿ ಬ್ರಾಹ್ಮಣಾದಿವರ್ಣಗಳು ಹುಟ್ಟಿದವು. ಈ ಸೃಷ್ಟಿಗೆ " ವರಾಹಕಲ್ಪ "ವೆಂದು ಹೆಸರು ಬಂದಿದೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಸಪ್ತಮೋಽಧ್ಯಾಯಃ

ಇತ್ಯೇಷ ಪ್ರಥಮಃ ಪಾದಃ ಪ್ರಕಿಯಾರ್ಥಃ ಪ್ರಕೀರ್ತಿತಃ ।
ಶ್ರುತ್ವಾ ತು ಸಂಹೃಷ್ಟಮನಾಃ ಕಾಶ್ಯಪೇಯಃ ಸನಾತನಃ ॥ ೧ ॥

ಸಂಬೋಧ್ಯ ಸೂತಂ ವಚಸಾ ಪಪ್ರಚ್ಛಾಥೋತ್ತರಾಂ ಕಥಾಂ ।
ಅತಃ ಪ್ರಭೃತಿ ಕಲ್ಪಜ್ಞ ಪ್ರತಿಸಂಧಿಂ ಪ್ರಚಕ್ಷ್ವ ನಃ ॥ ೨ ॥

ಸಮತೀತಸ್ಯ ಕಲ್ಪಸ್ಯ ವರ್ತಮಾನಸ್ಯ ಚೋಭಯೋಃ ।
ಕಲ್ಪಯೋರಂತರಂ ಯಚ್ಚ ಪ್ರತಿಸಂಧಿರ್ಯತಸ್ತಯೋಃ ।
ಏತದ್ವೇದಿತುಮಿಚ್ಛಾಮಃ ಅತ್ಯಂತಕುಶಲೋ ಹ್ಯಸಿ ॥ ೩ ॥

---

## ಏಳನೆಯ ಅಧ್ಯಾಯವು

೧. ಕಶ್ಯಪರ ಪುತ್ರರಾದ ಋಷಿಗಳು ಸೂತರನ್ನು ಕುರಿತು ಪ್ರಕ್ರಿಯಾಪಾದ ದಲ್ಲಿ ಹೇಳಿದ ವಿಷಯಗಳನ್ನು ಕೇಳಿ ಬಹಳ ಸಂತೋಷವಾಯಿತು. ನೀವು ಕಲ್ಪಗಳ ವಿಷಯಗಳನ್ನು ಸರಿಯಾಗಿ ಅರಿತವರಾದಕಾರಣ ಪ್ರತಿಸಂಧಿಯ ವಿಷಯವನ್ನು ನಮಗಾಗಿ ನಿರೂಪಿಸಿರಿ ಎಂದು ಪ್ರಾರ್ಥಿಸಿದರು.

೨-೩ ಅತೀತ ಮತ್ತು ಈಗ ನಡೆಯುತಕ್ಕ ಎರಡು ಕಲ್ಪಗಳ ಮಧ್ಯಭಾಗಕ್ಕೆ ಪ್ರತಿಸಂಧಿಯೆಂದು ಸಂಜ್ಞೆಯು ಇದೆ. ನೀವು ಅದನ್ನು ತಿಳಿದಿರುತ್ತೀರಿ. ತಿಳಿಯಲ ಪೇಕ್ಷೆಯುಳ್ಳ ನಮಗೆ ದಯವಿಟ್ಟು ತಾವು ಆ ವಿಷಯಗಳನ್ನು ಹೇಳಬೇಕೆಂದು ಪ್ರಾರ್ಥಿಸಿದರು

ಅತ್ರ ವೋಽಹಂ ಪ್ರವಕ್ಷ್ಯಾಮಿ ಪ್ರತಿಸಂಧಿಂಚ ಯಸ್ತಯೋಃ ।
ಸಮತೀತಸ್ಯ ಕಲ್ಪಸ್ಯ ವರ್ತಮಾನಸ್ಯ ಚೋಭಯೋಃ ॥ ೪ ॥

ಮನ್ವಂತರಾಣಿ ಕಲ್ಪೇಷು ಯೇಷು ಯಾನಿ ಚ ಸುವ್ರತಾಃ ।
ಯಶ್ಚಾಯಂ ವರ್ತತೇ ಕಲ್ಪೋ ವಾರಾಹಃ ಸಾಂಪ್ರತಃ ಶುಭಃ ॥ ೫ ॥

ಅಸ್ಮಾತ್ ಕಲ್ಪಾಚ್ಚ ಯಃ ಕಲ್ಪಃ ಪೂರ್ವೋಽತೀತಃ ಸನಾತನಃ ।
ತಸ್ಯ ಚಾಸ್ಯ ಚ ಕಲ್ಪಸ್ಯ ಮಧ್ಯಾವಸ್ಥಾನ್ನಿಬೋಧತ ॥ ೬ ॥

ಪ್ರತ್ಯಾಹೃತೇ ಪೂರ್ವಕಲ್ಪೇ ಪ್ರತಿಸಂಧಿಂ ಚ ತತ್ರ ವೈ ।
ಅನ್ಯಃ ಪ್ರವರ್ತತೇ ಕಲ್ಪೋ ಜನಾಲ್ಲೋಕಾತ್ ಪುನಃ ಪುನಃ ॥ ೭ ॥

ವ್ಯುಚ್ಛಿನ್ನಾತ್ ಪ್ರತಿಸಂಧೇಸ್ತು ಕಲ್ಪಾತ್ ಕಲ್ಪಃ ಪರಸ್ಪರಂ ।
ವ್ಯುಚ್ಛಿದ್ಯಂತೇ ಕ್ರಿಯಾಃ ಸರ್ವಾಃ ಕಲ್ಪಾಂತೇ ಸರ್ವಶಸ್ತದಾ ।
ತಸ್ಮಾತ್ಕಲ್ಪಾತ್ತು ಕಲ್ಪಸ್ಯ ಪ್ರತಿಸಂಧಿ ರ್ನಿಗದ್ಯತೇ ॥ ೮ ॥

---

೪-೫. ಮಹಾತ್ಮರಾದ ಎಲೈ ಋಷಿಗಳಿರಾ, ಅತೀತ ವರ್ತಮಾನಕಾಲಗಳ ಸಂಧಿಕಾಲಕ್ಕೆ ಪ್ರತಿಸಂಧಿಯೆಂದು ಹೆಸರುಂಟಾಗಿದೆ. ಅವುಗಳಲ್ಲಿ ಯಾವ ಯಾವ ಮನ್ವಂತರಗಳು ಇವೆಯೋ, ಅವನ್ನೂ ಮತ್ತು ಆ ಕಲ್ಪಗಳಲ್ಲಿರತಕ್ಕ ಮಹಾತ್ಮರೇ ಮೊದಲಾದವರನ್ನೂ ತಿಳಿಸುವೆನು ಕೇಳಿ. ಈಗ ನಡೆಯುತಕ್ಕ ಪವಿತ್ರವಾದ ಕಲ್ಪಕ್ಕೆ ವರಾಹಕಲ್ಪವೆಂದು ಸಂಜ್ಞೆಯುಂಟಾಗಿದೆ.

೬. ಈ ಕಲ್ಪಕ್ಕಿಂತಲೂ ಪೂರ್ವದಲ್ಲಿ ಯಾವ ಸನಾತನವಾದ ಕಲ್ಪವು ಇತ್ತೋ, ಮತ್ತು ಮುಂದೆ ಯಾವ ಕಲ್ಪವು ಬರುವುದೋ ಅವುಗಳ ಮಧ್ಯಕಾಲವಾದ ಪ್ರತಿಸಂಧಿಯನ್ನು ಹೇಳುವೆನು ಕೇಳಿ ಎಂದನು.

೭. ಪೂರ್ವಕಲ್ಪವು ಕಳೆಯಲು ಬೇರೆ ಕಲ್ಪವು ಪ್ರಾರಂಭವಾಗುವುದು. ಆ ಎರಡು ಕಲ್ಪಗಳ ಸಂಧಿಕಾಲಕ್ಕೆ ಪ್ರತಿಸಂಧಿಯೆಂದು ಹೆಸರು ಬಂದಿದೆ. ಆಗ ಜನಗಳು ಮತ್ತು ಲೋಕಗಳು ಪುನಃ ಪುನಃ ಉತ್ಪನ್ನರಾಗುವವು.

೮. ಆ ಪ್ರತಿಸಂಧಿಯು ನಷ್ಟವಾಗಲು ಅದರ ಸಂಬಂಧಿಯಾದ ಕಲ್ಪವು ಹೋಗಿ ಬೇರೆ ಕಲ್ಪವು ಉಂಟಾಗುವುದು. ಆ ಮಧ್ಯಕಾಲದಲ್ಲಿ ಇದ್ದ ಸರ್ವಕಾರ್ಯಗಳೂ ಸಂಪೂರ್ಣವಾಗಿ ನಷ್ಟವಾಗುವುವು. ಹಿಂದಿನ ಮತ್ತು ವರ್ತಮಾನ ಕಲ್ಪಗಳ ಪ್ರತಿಸಂಧಿಯನ್ನು ಹೇಳುವೆನು ಕೇಳಿ ಎಂದನು.

ಮನ್ವಂತರಯುಗಾಖ್ಯಾನಾಮುಪ್ಯುಚ್ಛಿನ್ನಾಶ್ಚ ಸಂಧಯಃ ।
ಪರಸ್ಪರಾಃ ಪ್ರವರ್ತಂತೇ ಮನ್ವಂತರಯುಗೈಃ ಸಹ ॥೯॥

ಉಕ್ತಾ ಯೇ ಪ್ರಕಿಯಾರ್ಥೇನ ಪೂರ್ವಕಲ್ಪಾಃ ಸಮಾಸತಃ ।
ತೇಷಾಂ ಪರಾರ್ಧಕಲ್ಪಾನಾಂ ಪೂರ್ವೋ ಹ್ಯಸ್ಮಾತ್ತು ಯಃ ಪರಾಃ ।
ಆಸೀತ್ಕಲ್ಪೋ ವ್ಯತೀತೋ ವೈ ಪರಾರ್ಥೇನ ಪರಸ್ತು ಸಃ ॥೧೦॥

ಅನ್ಯೇ ಭವಿಷ್ಯಾ ಯೇ ಕಲ್ಪಾ ಅಪರಾರ್ದ್ಧಾದ್ಗುಣೀಕೃತಾಃ ।
ಪ್ರಥಮಃ ಸಾಂಪ್ರತಸ್ತೇಷಾಂ ಕಲ್ಪೋಽಯಂ ವರ್ತತೇ ದ್ವಿಜಾಃ ॥೧೧॥

ಯಸ್ಮಿನ್ ಪೂರ್ವಃ ಪರಾರ್ದ್ಧೇ ತು ದ್ವಿತೀಯೋ ಪರ ಉಚ್ಯತೇ ।
ವತಾವಾನ್ ಸ್ಥಿತಿಕಾಲಶ್ಚ ಪ್ರತ್ಯಾಹಾರಸ್ತತಃ ಸ್ಮೃತಃ ॥೧೨॥

---

೯. ಹಿಂದಿನ ಮನ್ವಂತರ, ಯುಗ ಮತ್ತು ಸಂಧಿಗಳು ನಷ್ಟವಾದರೆ ಬೇರೆ ಬೇರೆಯಾದ ಮನ್ವಂತರ ಯುಗಸಂಧಿಗಳು ಪುನಃ ಪುನಃ ಪ್ರಾಪ್ತವಾಗುವುವು

೧೦. ಪ್ರಕ್ರಿಯಾಪಾದದಲ್ಲಿ ಪೂರ್ವಕಲ್ಪಗಳು ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆ. ಆ ಪರಾರ್ಧಕಲ್ಪಗಳಿಗೂ, ಈಗ ನಡೆಯತಕ್ಕ ಕಲ್ಪಕ್ಕಿಂತಲೂ ಯಾವ ಪರಕಲ್ಪವು ಅತೀತವಾಯಿತೋ ಅದಕ್ಕೆ ಪರಾರ್ಧಕಲ್ಪವೆಂದು ನಾಮವು ಉಂಟಾಗಿರುತ್ತದೆ.

೧೧. ಎಲೈ ಋಷಿಗಳಿರಾ, ಅಪರಾರ್ಧದಿಂದ ವೃದ್ಧಿಯಾದ ಯಾವ ಭವಿಷ್ಯ ಕಲ್ಪಕಗಳಿವೆಯೋ, ಅವುಗಳಲ್ಲಿ ಈ ಕಲ್ಪವು ಮೊದಲನೆಯ ಕಲ್ಪವಾಗಿರುತ್ತದೆ

೧೨. ಸಂಧಿಯು ಪೂರ್ವಕಲ್ಪದ ಸಂಬಂಧದಿಂದ ಪೂರ್ವಾರ್ದ್ಧವೆಂದೂ, ಪರಕಲ್ಪದ ಸಂಬಂಧದಿಂದ ಪರಾರ್ಧವೆಂದೂ ಹೆಸರುಗೊಂಡಿದೆ. ಸ್ಥಿತಿಕಾಲವೂ ಸಹ ಇಷ್ಟೇ ಆಗಿದೆ. ಅನಂತರ ಪ್ರತ್ಯಾಹಾರವು ಉಂಟಾಗುವುದು.

ಆಸ್ಮಾತ್ಕಲ್ಪಾತ್ತು ಯಃ ಪೂರ್ವಂ ಕಲ್ಪೋಽತೀತಃ ಸನಾತನಃ ।
ಚತುರ್ಯುಗ ಸಹಸ್ರಾಂತೇ ಅಹೋ ಮನ್ವಂತರೈಃ ಪುರಾ ॥ ೧೩ ॥

ಕ್ಷೀಣೇ ಕಲ್ಪೇ ತದಾ ತಸ್ಮಿನ್ ದಾಹಕಾಲೇ ಹ್ಯುಪಸ್ಥಿತೇ ।
ತಸ್ಮಿನ್ ಕಲ್ಪೇ ತದಾ ದೇವಾ ಆಸನ್ ವೈಮಾನಿಕಾಸ್ತು ಯೇ ॥ ೧೪ ॥

ನಕ್ಷತ್ರ ಗ್ರಹತಾರಾಸ್ತು ಚಂದ್ರಸೂರ್ಯಗ್ರಹಾಶ್ಚ ಯೇ ।
ಅಷ್ಟಾವಿಂಶತಿದೇವೈತಾಃ ಕೋಟ್ಯಸ್ತು ಸುಕೃತಾತ್ಮನಾಂ ॥ ೧೫ ॥

ಮನ್ವಂತರೇ ತಥೈಕಸ್ಮಿನ್ ಚತುರ್ದಶಸು ವೈ ತಥಾ ।
ತ್ರೀಣಿ ಕೋಟಿಶತಾನ್ಯಾಸನ್ ಕೋಟ್ಯಾದ್ವಿನವತಿಸ್ತಥಾ ।
ಅಷ್ಟಾಧಿಕಾಃ ಸಪ್ತಶತಾಃ ಸಹಸ್ರಾಣಾಂ ಸ್ಮೃತಾಃ ಪುರಾ ॥ ೧೬ ॥

ವೈಮಾನಿಕಾನಾಂ ದೇವಾನಾಂ ಕಲ್ಪೇಽತೀತೇತ. ಯೇ ಭವನ್ ।
ಏಕೈಕಸ್ಮಿಂಸ್ತು ಕಲ್ಪೇ ವೈ ದೇವಾ ವೈಮಾನಿಕಾಃ ಸ್ಮೃತಾಃ ॥ ೧೭ ॥

---

೧೩-೧೪. ಚತುರ್ಯುಗಸಹಸ್ರಾಂತದಲ್ಲಿ ಮನ್ವಂತರಗಳೊಡನೆ ಸನಾತವಾದ ಯಾವ ಪೂರ್ವಕಲ್ಪವು ಇರುವುದೋ, ಅದು ಅತೀತವಾಗಲು ದಾಹಕಾಲವು ಪ್ರಾಪ್ತವಾಗುವುದು. ಆಗ ಆ ದೇವತೆಗಳು ವಿಮಾನಾರೂಢರಾಗಿ ಸಂಚರಿಸುವರು.

೧೫. ಆ ದೇವತೆಗಳು ಯಾರೆಂದರೆ ನಕ್ಷತ್ರ, ಗ್ರಹ, ತಾರೆಗಳು, ಸೂರ್ಯ, ಚಂದ್ರರು ಇವರೇ ಮೊದಲಾದವರು ಮಹಾತ್ಮರಾದ ಆ ದೇವತೆಗಳ ಒಟ್ಟು ಸಂಖ್ಯೆಯು ಇಪ್ಪತ್ತೆಂಟುಕೋಟಿಯಾಗಿರುತ್ತದೆ.

೧೬. ಒಂದು ಮನ್ವಂತರದಲ್ಲಿ ಎಂತಹ ಕಾರ್ಯಗಳು ಆಗುತ್ತವೆಯೋ, ಅಂತಹ ಕಾರ್ಯಗಳು ಹದಿನಾಲ್ಕು ಮನ್ವಂತರಗಳಲ್ಲಿಯೂ ನಡೆಯುವುವು. ಅವುಗಳಲ್ಲಿ ಮುನ್ನೂರತೊಂಭತ್ತೆರಡುಕೋಟಿ ಏಳನೂರ ಎಂಟು ಸಹಸ್ರ ಸಂಖ್ಯಾತರಾದ ದೇವತೆಗಳು ಆ ಪೂರ್ವಕಲ್ಪದಲ್ಲಿದ್ದರು.

೧೭. ವೈಮಾನಿಕ ದೇವತೆಗಳ ಕಲ್ಪವು ಕಳೆಯಲಾಗಿ ಯಾರು ಉಳಿಯುವರೋ ಅವರನ್ನು ಆಯಾ ಕಲ್ಪಗಳಲ್ಲಿರತಕ್ಕ ವೈಮಾನಿಕ ದೇವತೆಗಳೆಂದು ತಿಳಿಯಬೇಕು.

ಅಥ ಮನ್ವಂತರೇಷ್ವಾಸಂಶ್ಚತುರ್ದಶಸು ವೈ ದಿವಿ ।
ದೇವಾಶ್ಚ ಪಿತರಶ್ಚೈವ ಮುನಯೋ ಮನವಸ್ತಥಾ ॥ ೧೮ ॥

ತೇಷಾಮನುಚರಾ ಯೇ ಚ ಮನುಪುತ್ರಾಸ್ತಥೈವ ಚ ।
ವರ್ಣಾಶ್ರಮಿಭಿರೀಡ್ಯಾಶ ತಸ್ಮಿನ್ ಕಾಲೇ ತು ಯೇ ಸುರಾಃ ॥
ಮನ್ವಂತರೇಷು ಯೇ ಹ್ಯಾಸನ್ ದೇವಲೋಕೇ ದಿವೌಕಸಃ ॥ ೧೯ ॥

ತೇ ತೈಃ ಸಂಯೋಜಕೈಃ ಸಾರ್ಧಂ ಪ್ರಾಪ್ತೇ ಸಂಕಲನೇ ತಥಾ ।
ತುಲ್ಯನಿಷ್ಠಾಸ್ತು ತೇ ಸರ್ವೇ ಪ್ರಾಪ್ತೇ ಹ್ಯಾಭೂತಸಂಪ್ಲವೇ ॥ ೨೦ ॥

ತತಸ್ತೇ ವಶ್ಯಭಾವಿತ್ವಾತ್ ಬುದ್ಧ್ವಾ ಪರ್ಯಾಯಮಾತ್ಮನಃ ।
ತ್ರೈಲೋಕ್ಯವಾಸಿನೋ ದೇವಾಸ್ತಸ್ಮಿನ್ ಪ್ರಾಪ್ತೇ ಹ್ಯುಪಪ್ಲವೇ ॥ ೨೧ ॥

ತೇಽಸೌತ್ಸುಕ್ಯವಿಷಾದೇನ ತ್ಯಕ್ತ್ವಾ ಸ್ಥಾನಾನಿ ಭಾವತಃ ।
ಮಹರ್ಲೋಕಾಯ ಸಂವಿಗ್ನಾಸ್ತತಸ್ತೇ ದಧಿರೇ ಮತಿಂ ॥ ೨೨ ॥

---

೧೮. ವೈಮಾನಿಕದೇವತಗಳ ಕಲ್ಪವು ಕಳೆಯಲಾಗಿ ಚತುರ್ದಶಮನ್ವಂತರ ಗಳಲ್ಲಿಯೂ, ದೇವತೆಗಳು, ಮುನಿಗಳು, ಪಿತೃಗಳು ಇವರು ಸ್ವರ್ಗಲೋಕದಲ್ಲಿ ವಾಸಿಸುವರು.

೧೯-೨೦. ಆ ಕಾಲದಲ್ಲಿ ದೇವಸೇವಕರು, ಮನುಪುತ್ರರು, ವರ್ಣಾಶ್ರಮ ಧರ್ಮಗಳಿಂದ ಪೂಜ್ಯರೂ, ಆ ಮನ್ವಂತರದಲ್ಲಿ ದೇವಲೋಕದಲ್ಲಿದ್ದ ದೇವತೆಗಳು ಇವರೆಲ್ಲರೂ ಸಂಯೋಜಿತರಾದ ಆ ದೇವತೆಗಳೊಡನೆ ಸಾಂಕರ್ಯವನ್ನು ಹೊಂದಿ ಪ್ರಳಯಕಾಲ ಬರುವುದನ್ನರಿತು ಯೋಚಿಸುತ್ತಿದ್ದರು.

೨೧-೨೨. ಆಗ ತ್ರೈಲೋಕ್ಯವಾಸಿಗಳಾದ ದೇವತೆಗಳು ಅವಾಂತರ ಪ್ರಳಯ ಕಾಲವು ಪ್ರಾಪ್ತವಾಗಲು ತಾವು ಸ್ವತಂತ್ರರಾಗಿರುವುದರಿಂದ ತಂತಮ್ಮ ಕಾರ್ಯವನ್ನರಿತು ದುಃಖದಿಂದ ಔತ್ಸುಕ್ಯಶೂನ್ಯರಾಗಿ ತಮ್ಮ ಇಷ್ಟಾನುಸಾರ ಮಹರ್ಲೋಕಕ್ಕೆ ಹೋಗಲು ಯತ್ನಿಸಿದರು.

ತೇ ಯುಕ್ತ್ಯಾ ಉಪಪದ್ಯಂತೇ ಮಹಸಿಸ್ಥೈಃ ಶರೀರಕೈಃ ।
ವಿಶುದ್ಧಿಬಹುಲಾಃ ಸರ್ವೇ ಮಾನಸೀಂ ಸಿದ್ಧಿಮಾಸ್ಥಿತಾಃ ॥ ೨೩ ॥

ತೈಃ ಕಲ್ಪವಾಸಿಭಿಃ ಸಾರ್ಧಂ ಮಹಾನಾಸಾದಿತಸ್ತು ಯೈಃ ।
ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈ ಸ್ತದ್ಭಕ್ತೈಶ್ಚಾಪರೈರ್ಜನೈಃ ॥ ೨೪ ॥

ಮತ್ವಾ ತು ತೇ ಮಹರ್ಲೋಕಂ ದೇವಸಂಘಾಶ್ಚತುರ್ದಶ ।
ತತಸ್ತೇ ಜನಲೋಕಾಯ ಸೋದ್ವೇಗಾ ದಧಿರೇ ಮತಿಂ ॥ ೨೫ ॥

ವಿಶುದ್ಧಿಬಹುಲಾಃಸರ್ವೇ ಮಾನಸೀಂ ಸಿದ್ಧಿಮಾಸ್ಥಿತಾಃ ।
ತೈಃ ಕಲ್ಪವಾಸಿಭಿಃ ಸಾರ್ಧಂ ಮಹಾನ್ನಾಸಾದಿತಸ್ತು ಯೈಃ ॥ ೨೬ ॥

ದಶಕೃತ್ವ ಇವಾವೃತ್ಯಾ ತಸ್ಮಾದ್ಗಚ್ಛಂತಿ ಸ್ವಸ್ತಪಃ ।
ತತ್ರ ಕಲ್ಪಾನ್ ದಶ ಸ್ಥಿತ್ವಾ ಸತ್ಯಂ ಕೆಚ್ಛಂತಿ ವೈ ಪುನಃ ।
ಏತೇನ ಕ್ರಮಯೋಗೇನ ಯಾಂತಿ ಕಲ್ಪನಿವಾಸಿನಃ ॥ ೨೭ ॥

---

೨೩. ಆ ದೇವಾದಿಗಳು ಯುಕ್ತಿಯಿಂದ ತೇಜೋರೂಪವಾದ ಶರೀರವನ್ನು ಹೊಂದಿ ಪರಿಶುದ್ಧರಾಗಿ ಎಲ್ಲರೂ ಮಾನಸಸಿದ್ಧಿಯನ್ನು ಪಡೆದರು. ಅಂದರೆ ಮಹರ್ಲೋಕಕ್ಕೆ ಹೋದರು.

೨೪-೨೫ ಆಗ ದೇವತೆಗಳ ಹದಿನಾಲ್ಕು ಸಂಘಗಳು, ಬ್ರಾಹ್ಮಣ, ಕ್ಷತ್ರಿಯ, ಶೂದ್ರರೂ ಅವರ ಭೃತ್ಯರು ಇವರುಗಳಿಂದ ಕೂಡಿ ಮಹರ್ಲೋಕವು ಲಯವಾಗುವುದೆಂದು ತಿಳಿದು ಆತುರರಾಗಿ ಜನೋಲೋಕಕ್ಕೆ ಹೋಗಲಿಚ್ಛಿಸಿದರು.

೨೬. ಅತ್ಯಂತ ಪರಿಶುದ್ಧರಾದ ಮಹರ್ಲೋಕವಾಸಿಗಳಾದ ಅವರೆಲ್ಲರೂ, ಆ ಕಲ್ಪವಾಸಿಗಳಾದ ದೇವತೆಗಳೊಡನೆ ಮನಸ್ಸಿದ್ಧಿಯನ್ನು ಪಡೆದರು. ಆ ಮಹರ್ಲೋಕವು ನಶ್ವರವೆಂದು ತಿಳಿದು ಅದಕ್ಕಿಂತಲೂ ಉತ್ತಮವಾದ ಲೋಕಕ್ಕೆ ಹೋಗಲು ಬಯಸಿದರು.

೨೭. ಆಗ ಆ ದೇವತೆಗಳು ಅಲ್ಲಿ ಹತ್ತುಕಲ್ಪಗಳವರೆಗೂ ವಾಸಿಸಿ ಅದು ಲಯವಾಗತಕ್ಕದ್ದೆಂದು ತಿಳಿದು ಅಲ್ಲಿಂದ ತಪೋಲೋಕಕ್ಕೆ ಹೊರಟರು. ಅಲ್ಲಿಯೂ ಸಹ ಹತ್ತುಕಲ್ಪಗಳು ವಾಸಿಸಿ ಅಲ್ಲಿಂದ ಸತ್ಯಲೋಕಕ್ಕೆ ಹೋಗಲಪೇಕ್ಷಿಸಿದರು ಹೀಗೆ ಅವರು ಕ್ರಮವಾಗಿ ಒಂದೊಂದು ಲೋಕಗಳನ್ನು ಬಿಟ್ಟು ಕೊನೆಗೆ ಬ್ರಹ್ಮದೇವನ ಸತ್ಯಲೋಕಕ್ಕೆ ಹೋಗಿ ಸೇರಿದರು.

ಏವಂ ದೇವಯುಗಾನಾಂತು ಸಹಸ್ರಾಣಿ ಪರಸ್ಪರಾತ್ ।
ಗತಾನಿ ಬ್ರಹ್ಮಲೋಕೇಂ ವೈ ಅಪರಾವರ್ತಿನೀಂ ಗತಿಂ ॥ ೨೮ ॥

ಆದಿಪತ್ಯಂ ವಿನಾ ತೇ ವೈ ಐಶ್ವರ್ಯೇಣ ತು ತತ್ಸಮಾಃ ।
ಭವಂತಿ ಬ್ರಹ್ಮಣಸ್ತುಲ್ಯಾ ರೂಪೇಣ ವಿಷಯೇಣ ಚ ॥ ೨೯ ॥

ತತ್ರ ತೇ ಹ್ಯವತಿಷ್ಠಂತಿ ಪ್ರೀತಿಯುಕ್ತಾಃ ಪ್ರಸಂಗಮಾತ್ ।
ಆನಂದಂ ಬ್ರಹ್ಮಣಃ ಪ್ರಾಪ್ಯ ಮುಚ್ಯಂತೇ ಬ್ರಹ್ಮಣಾ ಸಹ ॥ ೩೦ ॥

ಅವಶ್ಯಂಭಾವಿನಾರ್ಥೇನ ಪ್ರಾಕೃತೇನೈವ ತೇ ಸ್ವಯಂ ।
ನಾನಾತ್ವೇನಾಭಿ ಸಂಬದ್ಧಾಸ್ತದಾ ತತ್ಕಾಲಭಾವಿನಃ ॥ ೩೧ ॥

ಸ್ವರೂಪತೋ ಬುದ್ಧಿಪೂರ್ವಂ ಯಥಾ ಭವತಿ ಜಾಗ್ರತಃ ।
ತತ್ಕಾಲಭಾವಿ ತೇಷಾಂ ತು ತಥಾ ಜ್ಞಾನಂ ಪ್ರವರ್ತತೇ ॥ ೩೨ ॥

---

೨೮. ಹೀಗೆ ದೇವತೆಗಳು ತಮ್ಮ ಸಹಸ್ರವರ್ಷಗಳವರೆಗೂ ಪುನರಾವರ್ತಿರಹಿತವಾದ ಆ ಬ್ರಹ್ಮಲೋಕದಲ್ಲಿ ವಾಸಿಸಿದರು. ಹೀಗೆ ವಾಸಿಸುವ ಅವರಿಗೆ ಸಾವಿರ ವರ್ಷಗಳು ಕಳೆದವು.

೨೯. ಆ ದೇವತೆಗಳು ಸತ್ಯಲೋಕದಲ್ಲಿ ಸತ್ಯಲೋಕಾಧಿಪತ್ಯವನ್ನು ಬಿಟ್ಟು ಬ್ರಹ್ಮದೇವನಂತೆ ಸೌಂದರ್ಯ, ವಿಷಯಸುಖ ಇವೇ ಮೊದಲಾದ ಕೆಲವು ಯೋಗ್ಯವಾದ ಗುಣವನ್ನು ಪಡೆದು ಸುಖವಾಗಿ ವಾಸಿಸಿದರು.

೩೦. ಸತ್ಯಲೋಕದಲ್ಲಿ ಆ ದೇವತೆಗಳು ಪರಸ್ಪರಸಂಭಾಷಣಾದಿಗಳಿಂದ ಕೂಡಿ ಪ್ರೀತಿಯುಕ್ತರಾಗಿ ಅವರವರಿಗೆ ಅನುಗುಣವಾದ ಬ್ರಹ್ಮದೇವನ ಆನಂದಕ್ಕೆ ಸಮಾನವಾದ ಆನಂದವನ್ನು ಪಡೆದು ಬ್ರಹ್ಮದೇವನ ಸಂಗಡ ಶಾಶ್ವತವಾದ ಮೋಕ್ಷವನ್ನು ಪಡೆಯುವರು.

೩೧-೩೨. ಬ್ರಹ್ಮಲೋಕವಾಸಿಗಳು ತಮಗೆ ಆವಶ್ಯಕವೂ, ಬೇಕಾಗಿಯೂ ಇರುವ ಪ್ರಾಕೃತವಾದ ನಾನಾ ವಿಷಯಸುಖಗಳನ್ನು ಪ್ರತ್ಯೇಕವಾಗಿ ಅನುಭವಿಸುವರು. ಮತ್ತು ಅವರು ಬುದ್ಧಿಪೂರ್ವಕವೂ, ಸ್ವರೂಪಾನುಗುಣವೂ, ತಾತ್ಕಾಲಿಕವೂ ಆದ ಜ್ಞಾನವನ್ನು ಜಾಗರೂಕತೆಯಿಂದ ಪಡೆಯುವರು.

ಪ್ರತ್ಯಾಹಾರೇತು ಭೇದಾನಾಂ ಯೇಷಾಂ ಭಿನ್ನಾಭಿಸೂಕ್ಷ್ಮಣಾಂ ।
ತೈಃ ಸಾರ್ಧಂ ಪ್ರತಿಸೃಜ್ಯಂತೇ ಕಾರ್ಯಾಣಿ ಕರಣಾನಿ ಚ ॥ ೩೩ ॥

ನಾನಾತ್ವದರ್ಶನಾತ್ತೇಷಾಂ ಬ್ರಹ್ಮಲೋಕನಿವಾಸಿನಾಂ ।
ವಿನಷ್ಟಸ್ವಾಧಿಕಾರಾಣಾಂ ಸ್ವೇನ ಧರ್ಮೇಣ ತಿಷ್ಠತಾಂ ॥ ೩೪ ॥

ತೇ ತುಲ್ಯಲಕ್ಷಣಾಃ ಸಿದ್ಧಾಃ ಶುದ್ಧಾತ್ಮಾನೋ ನಿರಂಜನಾಃ ।
ಪ್ರಕೃತೌ ಕಾರಣಾತೀತಾಃ ಸ್ವಾತ್ಮನ್ಯೇವ ವ್ಯವಸ್ಥಿತಾಃ ॥ ೩೫ ॥

ಪ್ರಖ್ಯಾಪಯಿತ್ವಾ ಹ್ಯಾತ್ಮಾನಂ ಪ್ರಕೃತಿಸ್ತೇಷು ಸರ್ವಶಃ ।
ಪುರುಷಾವ್ಯವಹೃತತ್ವೇನ ಪ್ರತೀತಾ ನ ಪ್ರವರ್ತತೇ ॥ ೩೬ ॥

ಪ್ರವರ್ತತೇ ಪುನಃ ಸರ್ಗೇ ತೇಷಾಂ ವಾ ಕಾರಣಂ ಪುನಃ ।
ಸಂಯೋಗೇ ಪ್ರಾಕೃತೇ ತೇಷಾಂ ಯುಕ್ತಾನಾಂ ತತ್ವದರ್ಶಿನಾಂ ॥ ೩೭ ॥

---

೩೩. ಬ್ರಹ್ಮಲೋಕವಾಸಿಗಳಾದ ಸರ್ವರೂ ತಮ್ಮ ಭೇದಭಾವವನ್ನು ಬಿಟ್ಟು ಐಕಮತ್ಯವಾಗಿರುವುದರಿಂದ ಕಾರ್ಯಕಾರಣಗಳು ಅನಾಯಾಸದಿಂದ ಸಾಗುತ್ತಿದ್ದವು.

೩೪. ಬ್ರಹ್ಮಲೋಕವಾಸಿಗಳಾದ ಸರ್ವರೂ ಪ್ರಾಚೀನವಾದ ತಮ್ಮ ಅಧಿಕಾರಿಗಳನ್ನು ಬಿಟ್ಟು ಪ್ರತ್ಯೇಕವಾಗಿ ತಮ್ಮ ತಮ್ಮ ಧರ್ಮಗಳಲ್ಲಿ ನಿರತರೂ, ಸುಖಿಗಳೂ ಆಗಿರುವರು

೩೫. ಅವರು ಪ್ರತ್ಯೇಕ ಪ್ರತ್ಯೇಕವಾಗಿದ್ದರೂ, ಏಕರೂಪವಾದ ಲಕ್ಷಣಗಳುಳ್ಳವರೂ, ಶುದ್ಧಾತ್ಮರೂ, ನಿರ್ದೋಷಿಗಳೂ, ಕಾರಣಾತೀತರೂ ಆಗಿ ಸ್ವಾನುಗುಣವಾಗಿ ತಮ್ಮ ತಮ್ಮ ಸ್ವರೂಪಸುಖಗಳನ್ನು ಪಡೆಯುವರು.

೩೬. ಆಗ ಪ್ರಕೃತಿಯು ಪುರುಷನನ್ನು ಸಿದ್ಧಪಡಿಸಿ ತಾನು ಪ್ರಸಿದ್ಧಿಯನ್ನು ಹೊಂದಿತ್ತು. ಪುರುಷಸಂಬಂಧರಹಿತವಾದಕಾರಣ ಸ್ವತಂತ್ರವಾಗಿ ತಾನೇ ಕಾರ್ಯವನ್ನು ಮಾಡುವುದರಲ್ಲಿ ಅಶಕ್ತವಾಗಿದ್ದಿತು.

೩೭. ತತ್ವಜ್ಞಾನಿಗಳೂ, ಮಹಾತ್ಮರೂ ಆದ ಆ ದೇವತೆಗಳಿಗೆ ಸೃಷ್ಟಿಗೆ ಮೂಲಕಾರಣವಾದ ಪ್ರಕೃತಿಯ ಸಂಬಂಧವಾದರೆ ಪುನಃ ಸೃಷ್ಟಿಯು ಉಪಕ್ರಮವಾಗುವುದು

ಅತ್ರಾಪವರ್ಗಿಣಾಂ ತೇಷಾಮಪುನರ್ಮಾರ್ಗಗಾಮಿನಾಂ ।
ಅಭಾವಃ ಪುನರುತ್ಪತ್ತೌ ಶಾಂತಾನಾಮರ್ಚಿಷಾಮಿವ ॥ ೩೮ ॥

ತತಸ್ತೇಷು ಗತೇಷೂರ್ಧ್ವಂ ತ್ರೈಲೋಕ್ಯಾತ್ಸುಮಹಾತ್ಮಸು ।
ತೈಃ ಸಾರ್ಧಂ ಯೇ ಮಹರ್ಲೋಕಾತ್ ತದಾ ನಾಸಾದಿತಾ ಜನಾಃ ।
ತಚ್ಛಿಷ್ಯಾಶ್ಚೇಹ ತಿಷ್ಠಂತ ಕಲ್ಪಾದ್ದೇಹಮುಪಾಸತೇ ॥ ೩೯ ॥

ಗಂಧರ್ವಾದ್ಯಾಃ ಪಿಶಾಚಾಂತಾಃ ಮಾನುಷಾ ಬ್ರಾಹ್ಮಣಾದಯಃ ।
ಪಶವಃ ಪಕ್ಷಿಣಶ್ಚೈವ ಸ್ಥಾವರಾಃ ಸಸರೀಸೃಪಾಃ ॥ ೪೦ ॥

ತಿಷ್ಠತ್ಸು ತೇಷು ತತ್ಕಾಲಂ ಪೃಥಿವೀತಲವಾಸಿಷು ।
ಸಹಸ್ರಂ ಯತ್ತು ರಶ್ಮೀನಾಂ ಸೂರ್ಯಸ್ಯೇಹ ವಿಭಾಸತೇ ।
ತೇ ಸಪ್ತರಶ್ಮಯೋ ಭೂತ್ವಾ ಹ್ಯೇಕೈಕೋ ಜಾಯತೇ ರವಿಃ ॥ ೪೧ ॥

---

೩೮. ಪುನರಾವರ್ತಿರಹಿತವಾದ ಮೋಕ್ಷವನ್ನು ಪಡೆದ ಮಹಾತ್ಮರಿಗೆ ಪುನರುತ್ಪತ್ತಿಯು ಶಾಂತವಾದ ಅಗ್ನಿಯಂತೆ ಆಗುವುದಿಲ್ಲ.

೩೯. ಆಗ ಮಹಾತ್ಮರು ಮೂರು ಲೋಕಗಳನ್ನು ಅತಿಕ್ರಮಿಸಿ ಸತ್ಯಲೋಕಕ್ಕೆ ಹೋಗಿ ಬ್ರಹ್ಮನೊಡನೆ ಮುಕ್ತರಾಗುವರು. ಅವರ ಸಂಗಡ ಜನೋಲೋಕಕ್ಕೆ ಹೋಗದೆ ಮಹರ್ಲೋಕವನ್ನು ಹೊಂದಿದ ಉಳಿದ ಜನರು ಪುನಃ ಸೃಷ್ಟಿಗೆ ವಿಷಯರಾಗಿ ಭೂಮಿಯಲ್ಲಿ ಪುನಃ ಅವತರಿಸುವರು.

೪೦. ಗಂಧರ್ವಾದಿಯಾಗಿ ಪಿಶಾಚಾಂತಗಳಾದ ಪ್ರಾಣಿಗಳು, ಬ್ರಾಹ್ಮಣಾದಿ ವರ್ಣಗಳು, ಪಶುಗಳು, ಪಕ್ಷಿಗಳು, ಸರ್ಪಗಳು ಇವರೇ ಮೊದಲಾದವರು ಉದ್ಭವಿಸುವರು

೪೧. ಭೂಮಿಯಲ್ಲಿರತಕ್ಕ ಜನರು ವಾಸಮಾಡುತ್ತಿರಲಾಗಿ ಸೂರ್ಯನ ಸಹಸ್ರ ಕಿರಣಗಳು ಏಕಕಾಲದಲ್ಲಿ ಪ್ರಚಂಡವಾಗಿ ಹೊಳೆಯುವುದು. ಅವನ ಸಪ್ತ ಕಿರಣಗಳೂ ಕೂಡ ಪ್ರತ್ಯೇಕ ಪ್ರತ್ಯೇಕವಾಗಿ ಒಂದೊಂದು ಸೂರ್ಯನಂತೆ ಪ್ರಕಾಶಿಸುವುವು.

ಕ್ರಮೇಣೋತ್ತಿಷ್ಠಮಾನಾಸ್ತೇ ತ್ರೀನ್ ಲೋಕಾನ್ ಪ್ರದಹಂತ್ಯುತ ।
ಜಂಗಮಂ ಸ್ಥಾವರಂ ಚೈವ ನದೀಃ ಸರ್ವಾಂಶ್ಚ ಪರ್ವತಾನ್ ।
ಪೂರ್ವೇ ಶುಷ್ಕಾ ಹ್ಯನಾವೃಷ್ಟ್ಯಾ ಸೂರ್ಯೈಸ್ತೈಶ್ಚ ಪ್ರಧೂಪಿತಾಃ ॥ ೪೨ ॥

ತದಾ ತೇ ವಿವಿಶುಃ ಸರ್ವೇ ನಿರ್ದಗ್ಧಾಃ ಸೂರ್ಯರಶ್ಮಿಭಿಃ ।
ಜಂಗಮಾಃ ಸ್ಥಾವರಾಃ ಸರ್ವೇ ಧರ್ಮಾಧರ್ಮಾತ್ಮಕಾಸ್ತು ವೈ ॥ ೪೩ ॥

ದಗ್ಧದೇಹಾಸ್ತತಸ್ತೇ ವೈ ಗತಾಃ ಪಾಪಯುಗಾತ್ಯಯೇ ।
ಯೋನ್ಯಾ ತಯಾ ಹ್ಯನಿರ್ಮುಕ್ತಾಃ ಶುಭಪಾಪಾನುಬಂಧಯಾ ॥ ೪೪ ॥

ತತಸ್ತೇ ಹ್ಯುಪಪದ್ಯಂತೇ ತುಲ್ಯರೂಪಾ ಜನೇ ಜನಾಃ ।
ವಿಶುದ್ಧಿಬಹುಲಾಃ ಸರ್ವೇ ಮಾನಸೀಂ ಸಿದ್ಧಿಮಾಸ್ಥಿತಾಃ ॥ ೪೫ ॥

ಉಷಿತ್ವಾ ರಜನೀಂ ತತ್ರ ಬ್ರಹ್ಮಣೋಽವ್ಯಕ್ತಜನ್ಮನಃ ।
ಪುನಃ ಸರ್ಗೇ ಭವಂತೀಹ ಬ್ರಹ್ಮಣೋ ಮಾನಸೀಃ ಪ್ರಜಾಃ ॥ ೪೬ ॥

---

೪೨. ಆ ಸಪ್ತಸೂರ್ಯರು ಏಕಕಾಲದಲ್ಲಿ ಉದಯಿಸಿ ಮೂರು ಲೋಕಗಳಲ್ಲಿರುವ ಸ್ಥಾವರಜಂಗಮಗಳು, ನದಿಗಳು, ಪರ್ವತಗಳು ಇವೇ ಮೊದಲಾದವುಗಳನ್ನು ಸುಟ್ಟು ಭಸ್ಮಮಾಡಿದರು. ಪೂರ್ವದಲ್ಲಿಯೇ ಅನಾವೃಷ್ಟಿಯಿಂದ ಶುಷ್ಕವಾದ ಜಗತ್ತು ಆ ಸಪ್ತಸೂರ್ಯರ ಕಿರಣಗಳಿಂದ ಸುಟ್ಟು ಭಸ್ಮವಾಗಿ ಸುತರಾಂ ನಿರ್ನಾಮವಾಯಿತು.

೪೩. ಸ್ಥಾವರಜಂಗಮರೂಪವೂ, ಧರ್ಮಾಧರ್ಮಾತ್ಮಕವೂ ಆದ ಸರ್ವ ಜಗತ್ತೂ ಸೂರ್ಯನ ಸಪ್ತಕಿರಣಗಳಿಂದ ಸುಟ್ಟು ಭಸ್ಮವಾಗಿ ನಾಮಾವಶೇಷವಾಯಿತು.

೪೪. ಆ ಪಾಪಯುಗದ ಕೊನೆಯಲ್ಲಿ ದಗ್ಧರಾದ ಸರ್ವ ಪ್ರಜೆಗಳೂ ತಮ್ಮ ತಮ್ಮ ಜಾತಿಯನ್ನು ಬಿಡದೇ ತಮ್ಮ ಪುಣ್ಯಪಾಪಕರ್ಮಗಳಿಗನುಗುಣವಾಗಿ ಭೂಮಿಯಲ್ಲಿ ಜನಿಸುವರು.

೪೫. ಅನಂತರ ಅವರು ಬಹಳ ಪರಿಶುದ್ಧರಾಗಿ ಮನಸ್ಸಿದ್ಧಿಯನ್ನು ಪಡೆದು ಸಮಾನರೂಪಿಗಳಾದ ಜನರಲ್ಲಿ ಉದ್ಭವಿಸುವರು ಮತ್ತು ಸರ್ವರೂ ತಮ್ಮ ಪುಣ್ಯಪಾಪಗಳಿಗೆ ಅನುಗುಣವಾಗಿಯೇ ಹುಟ್ಟುವರು.

೪೬. ಆ ದೇವತೆಗಳು ಅವ್ಯಕ್ತತತ್ವದಿಂದ ಉದ್ಭವಿಸಿದ ಬ್ರಹ್ಮದೇವನ ರಾತ್ರಿಯಲ್ಲಿ ಅಲ್ಲಿಯೇ ವಾಸಮಾಡಿ ಪುನಃ ಸೃಷ್ಟಿಯಕಾಲದಲ್ಲಿ ಆ ಬ್ರಹ್ಮದೇವನ ಮಾನಸಪುತ್ರರಾಗಿ ಹುಟ್ಟುವರು

**ತತಸ್ತೇಷು ಪ್ರವೃತ್ತೇಷು ಜನೇ ತ್ರೈಲೋಕ್ಯವಾಸಿಷು ।**
**ನಿರ್ದಗ್ಧೇಷು ಚ ಲೋಕೇಷು ತೇಷು ಸೂರ್ಯೈಸ್ತು ಸಪ್ತಭಿಃ ।**
**ವೃಷ್ಟ್ಯಾ ಕ್ಷಿತೌ ಪ್ಲಾವಿತಾಯಾಂ ವಿಶೀರ್ಣೇಷ್ವಾಲಯೇಷು ಚ ॥ ೪೭ ॥**

**ಸಮುದ್ರಾಶ್ಚೈವ ಮೇಘಾಶ್ಚ ಆಪಃ ಸರ್ವಾಶ್ಚ ಪ್ರಾರ್ಥಿವಾಃ ।**
**ವ್ರಜಂತ್ಯೇಕಾರ್ಣವತ್ವಂ ಹಿ ಸಲಿಲಾಖ್ಯಾಸ್ತದಾಶ್ರಿತಾಃ ॥ ೪೮ ॥**

**ಆಗತಾಗತಿಕಂ ತದ್ವೈ ಯದಾ ತು ಸಲಿಲಂ ಬಹು ।**
**ಸಂಛಾದ್ಯೇಮಾಂ ಸ್ಥಿತಾಂ ಭೂಮಿಮರ್ಣವಾಖ್ಯಾ ತದಾ ಚ ಸಾ ॥ ೪೯ ॥**

**ಆಭಾತಿ ಯಸ್ಮಾನ್ನಾಭಾಂತಿ ಭಾಸಂತೋ ವ್ಯಾಪ್ತಿದೀಪ್ತಿಷು ।**
**ಸರ್ವತಃ ಸಮನುಪ್ಲಾವ್ಯ ತಾಸಾಂ ಚಾಂಭೋ ವಿಭಾವ್ಯತೇ ॥ ೫೦ ॥**

---

೪೭. ಅನಂತರ ಪುಣ್ಯಾತ್ಮರಾದ ಆ ಜ್ಞಾನಿಗಳು ಜನೋಲೋಕಕ್ಕೆ ಹೋಗಲಾಗಿ ತ್ರೈಲೋಕ್ಯವಾಸಿಗಳಾದ ಜನರೂ ಮತ್ತು ಆ ಲೋಕಗಳೂ, ಸಪ್ತಸೂರ್ಯರಿಂದ ಸುಟ್ಟುಹೋದವು. ಆಗ ಪ್ರಳಯಕಾಲದ ವೃಷ್ಟಿಯಿಂದ ಭೂಮಿಯು ಜಲಮಯವಾಯಿತು. ಆ ಪ್ರಳಯೋದಕದಲ್ಲಿ ಭೂಮಂಡಲವು ತೇಲಿಹೋಯಿತು. ಮನೆಗಳೆಲ್ಲವೂ ಶಿಥಿಲವಾಗಿ ಮುರಿದುಬಿದ್ದವು.

೪೮. ಆಗ ಸಮುದ್ರಗಳು, ಮೇಘಗಳು, ಜಲ, ಪೃಥಿವೀ ತದಾಶ್ರಿತವಾದ ವಸ್ತುಗಳೆಲ್ಲವೂ ಜಲಮಯವಾಗಿ ಏಕರೂಪವಾಯಿತು.

೪೯. ಗಮನಾಗಮನವುಳ್ಳ ಆ ಜಲವು ಸರ್ವತ್ರ ವ್ಯಾಪಿಸಿ ಸಮಸ್ತ ಭೂಮಂಡಲವನ್ನೂ ಮುಚ್ಚಿ, ಪ್ರಳಯಾರ್ಣವವೆಂದು ಪ್ರಖ್ಯಾತಿಗೊಂಡಿತು.

೫೦. ಆಗ ಜಲಮಾತ್ರವೇ ಪ್ರಕಾಶವನ್ನು ಹೊಂದಿತ್ತು. ಪ್ರಕಾಶಮಾನವೂ, ಕಾಂತಿಯುಕ್ತವೂ ಆದ ಮಿಕ್ಕ ಪದಾರ್ಥಗಳು ಕಾಂತಿರಹಿತಗಳಾದುವು. ಎಲ್ಲಿ ನೋಡಿದರೂ, ಸರ್ವವಸ್ತುಗಳು ಜಲದಲ್ಲಿ ತೇಲಿಹೋದವು. ಜಗತ್ತೆಲ್ಲವೂ ಜಲಮಯವಾಗಿ ತೋರಿತು.

**ತದಂಭಸ್ತನುತೇ ಯಸ್ಮಾತ್ ಸರ್ವಾಂ ಪೃಥ್ವೀಂ ಸಮಂತತಃ ।**
**ಧಾತುಸ್ತನೋತಿರ್ವಿಸ್ತಾರೇ ತೇನಾಂಭಸ್ತನವಃ ಸ್ಮೃತಾಃ ॥ ೫೧ ॥**

**ಅರಮಿತ್ಯೇಷು ಶೀಘ್ರಂತು ನಿಪಾತಃ ಕವಿಭಿಃ ಸ್ಮೃತಃ ।**
**ಏಕಾರ್ಣವೇ ಭವತ್ಯಾಪೋ ನ ಶೀಘ್ರಾಸ್ತೇನ ತೇ ನರಾಃ ॥ ೫೨ ॥**

**ತಸ್ಮಿನ್‌ಯುಗ ಸಹಸ್ರಾಂತೇ ಸಂಸ್ಥಿತೇ ಬ್ರಹ್ಮಣೋಽಹನಿ ।**
**ರಜನ್ಯಾಂ ವರ್ತಮಾನಾಯಾಂ ತಾವತ್ತತ್ ಸಲಿಲಾತ್ಮನಾ ॥ ೫೩ ॥**

**ತತಸ್ತು ಸಲಿಲೇ ತಸ್ಮಿನ್ ನಷ್ಟೇಽಗ್ನೌ ಪೃಥಿವೀತಲೇ ।**
**ಪ್ರಶಾಂತವಾತೇಂಧಕಾರೇ ನಿರಾಲೋಕೇ ಸಮಂತತಃ ॥ ೫೪ ॥**

**ಯೋಽನ್ಯೈವಾಧಿಷ್ಠಿತಂ ಹೀದಂ ಬ್ರಹ್ಮಾ ಸ ಪುರುಷಃ ಪ್ರಭುಃ ।**
**ವಿಭಾಗಮಸ್ಯ ಲೋಕಸ್ಯ ಪುನರ್ವೈ ಕರ್ತುಮಿಚ್ಛತಿ ॥ ೫೫ ॥**

---

೫೧. ಆ ಪ್ರಲಯೋದಕವು ಬ್ರಹ್ಮಸೃಷ್ಟವೂ, ವಿಸ್ತಾರವೂ, ಆದ ಮೂರು ಲೋಕಗಳನ್ನು ತನ್ನಲ್ಲಿ ಅಡಗಿಸಿಕೊಂಡು ಬ್ರಹ್ಮಸೃಷ್ಟಿಗೆ ಕಾರಣವಾಗಿರುವುದರಿಂದ ತನುವೆಂದು ಪ್ರಖ್ಯಾತವಾಗಿದೆ.

೫೨. ಕವಿಗಳು ಅರಂ ಎಂಬ ಶಬ್ದವನ್ನು ಶೀಘ್ರಾರ್ಥದಲ್ಲಿ ಉಪಯೋಗಿಸಿರುತ್ತಾರೆ. ಪ್ರಳಯೋದಕವು ಸರ್ವತ್ರ ವ್ಯಾಪ್ತವಾಗಿರುವುದರಿಂದ ಅಲ್ಲಿರುವ ಜನಗಳು ಶೀಘ್ರವಾಗಿ ನಡೆಯುವುದಕ್ಕೆ ಸಾಧ್ಯವಿಲ್ಲ. ಆದುದರಿಂದ ಅವರು ನರಾ ಎಂದು ಪ್ರಖ್ಯಾತರಾಗಿರುವರು.

೫೩. ಹೀಗೆ ಬ್ರಹ್ಮದೇವನ ಒಂದು ಸಹಸ್ರ ವರ್ಷಗಳು ರಾತ್ರಿಯಾಗಿರಲು ಜಗತ್ತು ಜಲಮಯವಾಗಿಯೇ ಇತ್ತು. ಈ ರಾತ್ರಿಯು ಮುಗಿಯಲು ಬ್ರಹ್ಮದೇವನು ಹಗಲಿನಲ್ಲಿ ಸೃಷ್ಟಿಗೆ ಉಪಕ್ರಮವಾಗುವುದು.

೫೪. ಅನಂತರ ಆ ಪ್ರಳಯೋದಕದಿಂದ ಅಗ್ನಿಯು ಶಾಂತವಾಗಲು ಜಗತ್ತಿನಲ್ಲಿ ಗಾಳಿಯೂ ಬೆಳಕೂ ಇಲ್ಲದೇ ವಿಶ್ವವು ಅಂಧಕಾರಮಯವಾಯಿತು.

೫೫. ಯಾವ ಭಗವಂತನು ಈ ಲೋಕಗಳನ್ನು ಆಶ್ರಯಿಸಿಕೊಂಡಿರುವನೋ ಅಂತಹ ಪುರುಷಶಬ್ದವಾಚ್ಯನೂ ಸೃಷ್ಟಿಕರ್ತನೂ ಸ್ವಾಮಿಯೂ ಆದ ಭಗವಂತನು ಪ್ರಜೆಗಳು ಮತ್ತು ಲೋಕಗಳು ಇವನ್ನು ಸೃಷ್ಟಿಸಲಿಚ್ಛಿಸಿದನು.

ಏಕಾರ್ಣವೇ ತದಾ ತಸ್ಮಿನ್ ನಷ್ಟೇ ಸ್ಥಾವರ ಜಂಗಮೇ ।
ತದಾ ಸ ಭವತಿ ಬ್ರಹ್ಮಾ ಸಹಸ್ರಾಕ್ಷಃ ಸಹಸ್ರಪಾತ್ ॥ ೫೬ ॥

ಸಹಸ್ರಶೀರ್ಷಾ ಪುರುಷೋ ರುಕ್ಮವರ್ಣೋ ಹ್ಯತೀಂದ್ರಿಯಃ ।
ಬ್ರಹ್ಮಾ ನಾರಾಯಣಾಖ್ಯಸ್ತು ಸುಷ್ವಾಪ ಸಲಿಲೇ ತದಾ ॥ ೫೭ ॥

ಸತ್ವೋದ್ರೇಕಾತ್ ಪ್ರಬುದ್ಧಸ್ತು ಶೂನ್ಯಂ ಲೋಕಮವೇಕ್ಷ್ಯ ಸಃ ।
ಇಮಂ ಚೋದಾಹರಂತ್ಯತ್ರ ಶ್ಲೋಕಂ ನಾರಾಯಣಂ ಪ್ರತಿ ॥ ೫೮ ॥

ಆಪೋ ನಾರಾಖ್ಯಾಸ್ತನವ ಇತ್ಯಪಾಂ ನಾಮ ಶುಶ್ರುಮಃ ।
ಆಪೂರ್ಯ ನಾಭಿಂ ತತ್ರಾಸ್ತೇ ತೇನ ನಾರಾಯಣಃ ಸ್ಮೃತಃ ॥ ೫೯ ॥

ಸಹಸ್ರಶೀರ್ಷಾ ಸುಮನಾಃ ಸಹಸ್ರಪಾತ್
ಸಹಸ್ರಚಕ್ಷುರ್ವದನಃ ಸಹಸ್ರಭುಕ್ ।
ಸಹಸ್ರಬಾಹುಃ ಪ್ರಥಮಃ ಪ್ರಜಾಪತಿ
ಸ್ತ್ರಯೀಪಥೇ ಯಃ ಪುರುಷೋ ನಿರುಚ್ಯತೇ ॥ ೬೦ ॥

---

೫೬-೫೭. ಚರಾಚರಾತ್ಮಕವಾದ ಸಕಲ ಜಗತ್ತು ನಷ್ಟವಾಗಲು ಜಲಮಯವಾದ ಸಮುದ್ರದಲ್ಲಿ ಸೃಷ್ಟಿಕರ್ತನೂ, ಸಹಸ್ರಾರು ನೇತ್ರ, ಪಾದ, ಶಿರಸ್ಸು, ಇವುಗಳುಳ್ಳವನೂ, ಸುವರ್ಣಮಯನೂ, ಅತೀಂದ್ರಿಯನೂ, ಪುರುಷನಾಮಕನೂ, ಪೂರ್ಣನೂ ಆದ ಶ್ರೀಮನ್ನಾರಾಯಣನು ಯೋಗನಿದ್ರಾರೂಢನಾಗಿ ಮಲಗಿದ್ದನು

೫೮. ಶುದ್ಧಸತ್ವಸ್ವರೂಪನಾದ ಭಗವಂತನು ಸತ್ವಗುಣೋದ್ರೇಕದಿಂದ ಎಚ್ಚರಗೊಂಡು ಜಗತ್ತೆಲ್ಲವೂ ಶೂನ್ಯವಾಗಿದೆಯೆಂದು ಭಾವಿಸಿದನು. ಆಗ ಕವಿಗಳು ನಾರಾಯಣನ ವಿಷಯದಲ್ಲಿ ಹೀಗೆ ವರ್ಣಿಸುತ್ತಾರೆ.

೫೯. ಜಲಕ್ಕೆ ನಾರಾ ಎಂಬ ನಾಮವು ಪ್ರಾಪ್ತವಾಗಿದೆ ಭಗವಂತನು ಈ ಜಗತ್ತನ್ನು ತನ್ನ ನಾಭಿಯಲ್ಲಿ ಅಡಗಿಸಿಕೊಂಡು ಆ ಜಲದಲ್ಲಿ ಶಯನಮಾಡಿರುವುದರಿಂದ ಆ ಸ್ವಾಮಿಗೆ ನಾರಾಯಣನೆಂಬ ನಾಮವು ಪ್ರಾಪ್ತವಾಗಿದೆ.

೬೦. ಋಕ್ಕು, ಯಜಸ್ಸು, ಸಾಮಗಳು ಎಂಬ ಮೂರುವೇದಗಳು ಶ್ರೀಮನ್ನಾರಾಯಣನನ್ನು ಸಹಸ್ರಾರು ಶಿರಸ್ಸು, ಪಾದ, ನೇತ್ರ ಮುಖ ಮತ್ತು ಭುಜ ಇವುಗಳುಳ್ಳವನೆಂದೂ ಸೃಷ್ಟಿಕರ್ತನೆಂದೂ, ಸುಮನಸ್ಕನೆಂದೂ, ಆದಿಪುರುಷನೆಂದೂ, ಸ್ತುತಿಸುತ್ತವೆ.

ಆದಿತ್ಯವರ್ಣೋ ಭುವನಸ್ಯಗೋಪ್ತಾ
ಏಕೋ ಹ್ಯಪೂರ್ವಃ ಪ್ರಥಮಂ ತುರಾಷಾಟ್ ।
ಹಿರಣ್ಯಗರ್ಭಃ ಪುರುಷೋ ಮಹಾತ್ಮಾ
ಸ ಪಠ್ಯತೇವೈ ತಮಸಃ ಪರಸ್ತಾತ್ ॥ ೬೧ ॥

ಕಲ್ಪಾದೌ ರಜಸೋದ್ರಿಕ್ತೋ ಬ್ರಹ್ಮಾ ಭೂತ್ವಾಸೃಜತ್ ಪ್ರಜಾಃ ।
ಕಲ್ಪಾಂತೆ ತಮಸೋದ್ರಿಕ್ತೋ ಕಾಲೋ ಭೂತ್ವಾಗ್ರಸತ್ ಪುನಃ ॥ ೬೨ ॥

ಸ ವೈ ನಾರಾಯಣಾಖ್ಯಸ್ತು ಸತ್ವೋದ್ರಿಕ್ತೋರ್ಣವೇ ಸ್ವಪನ್ ।
ತ್ರಿಧಾ ವಿಭಜ್ಯ ಚಾತ್ಮಾನಂ ತ್ರೈಲೋಕ್ಯೇ ಸಮವರ್ತತ ॥ ೬೩ ॥

ಸೃಜತೇ ಗ್ರಸತೇ ಚೈವ ವೀಕ್ಷತೇ ಚ ತ್ರಿಭಿಸ್ತು ತಾನ್ ।
ಏಕಾರ್ಣವೇ ತದಾಲೋಕೇ ನಷ್ಟೇ ಸ್ಥಾವರಜಂಗಮೇ ॥ ೬೪ ॥

---

೬೧. ಸಮಸ್ತವಾದ ಶ್ರುತಿಗಳು, ಶ್ರೀಮನ್ನಾರಾಯಣನನ್ನು ಸೂರ್ಯನಂತೆ ಕಾಂತಿಯುತನೂ, ಜಗದ್ರಕ್ಷಕನೂ, ಅಸದೃಶನೂ, ಅಪೂರ್ವನೂ ಆದರ್ಶನೂ, ಮಹಾತ್ಮನೂ, ಗುಣಾತೀತನೂ ಆಗಿರುತ್ತಾನೆಂದು ಪ್ರಶಂಸಿಸುತ್ತವೆ.

೬೨ ನಾರಾಯಣನು ಸೃಷ್ಟಿಯ ಆರಂಭದಲ್ಲಿ ರಜೋಗುಣೋದ್ರೇಕದಿಂದ ಬ್ರಹ್ಮನಾಗಿ ಪ್ರಜೆಗಳನ್ನು ಸೃಷ್ಟಿಸಿದನು. ಕಲ್ಪಾಂತರದಲ್ಲಿ ತಮೋಗುಣೋದ್ರೇಕದಿಂದ ಕಾಲರೂಪನಾಗಿ ಆ ಜಗತ್ತನ್ನು ಲಯಮಾಡಿದನು.

೬೩. ಅನಂತರ ಶ್ರೀಮನ್ನಾರಾಯಣನೇ ಸತ್ವಗುಣೋದ್ರೇಕದಿಂದ, ಸಮುದ್ರ ಶಾಯಿಯೂ ಪೂರ್ವೋಕ್ತವಾದ ಮೂರು ರೂಪಗಳುಳ್ಳವನೂ ಆಗಿ ಜಗತ್ರಯ ಗಳಲ್ಲಿಯೂ ವ್ಯಾಪ್ತನಾಗಿರುವನು.

೬೪. ಚರಾಚರಾತ್ಮಕವಾದ ಸಕಲ ಜಗತ್ತೂ ನಾಶವಾಗಲು ಪ್ರಳಯೋದಕ ದಲ್ಲಿ ಮಲಗಿರುವ ಶ್ರೀ ಭಗವಂತನು ಪುನಃ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳನ್ನು ಮೂರು ರೂಪಗಳಿಂದ ಮಾಡುವನು.

ಚತುರ್ಯುಗಸಹಸ್ರಾಂತೇ ಸರ್ವತಃ ಸಲಿಲಾವೃತೇ ।
ಬ್ರಹ್ಮಾನಾರಾಯಣಾಖ್ಯಸ್ತು ಅಪ್ರಕಾಶಾರ್ಣವೇ ಸ್ವಪನ್ ॥ ೬೫ ॥

ಚತುರ್ವಿಧಾಃ ಪ್ರಜಾಗ್ರಸ್ತ್ವಾ ಬ್ರಾಹ್ಮ್ಯಾಂ ರಾತ್ರ್ಯಾಂ ಮಹಾರ್ಣವೇ ।
ಪಶ್ಯಂತಿ ತಂ ಮಹರ್ಲೋಕಾತ್ ಸುಪ್ತಂ ಕಾಲಂ ಮಹರ್ಷಯಃ ॥ ೬೬ ॥

ಭೃಗ್ವಾದಯೋ ಯಥಾ ಸಪ್ತ ಕಲ್ಪೇ ಹ್ಯಸ್ಮಿನ್ ಮಹರ್ಷಯಃ ।
ತತೋ ವಿವರ್ತಮಾನೈಸ್ತೈರ್ಮಹಾನ್ ಪರಿಗತಃ ಪರಃ ॥ ೬೭ ॥

ಗತ್ಯರ್ಥಾದ್ ಋಷತೇರ್ಧಾತೋರ್ನಾಮ ನಿರ್ವೃತ್ತಿರಾದಿತಃ ।
ತಸ್ಮಾದೃಷಿಪರತ್ವೇನ ಮಹಾಂಸ್ತಸ್ಮಾನ್ಮಹರ್ಷಯಃ ॥ ೬೮ ॥

---

೬೫. ಚತುರ್ಯುಗ ಸಹಸ್ರಗಳ ಕೊನೆಯಲ್ಲಿ ಸರ್ವಜಗತ್ತು ಜಲಮಯವಾಗಲು ನಾರಾಯಣನಾಮಕನಾದ ಬ್ರಹ್ಮನು ಅಂಧಕಾರಮಯವಾದ ಪ್ರಳಯೋದಕದಲ್ಲಿ ಮಲಗಿರುವನು.

೬೬. ಮಹರ್ಲೋಕವಾಸಿಗಳಾದ ಜ್ಞಾನಿಗಳು ಬ್ರಹ್ಮದೇವನ ರಾತ್ರಿಯಲ್ಲಿ ಅಂದರೆ ಅವಾಂತರಪ್ರಳಯದಲ್ಲಿ ನಾಲ್ಕು ವಿಧಗಳಾದ ಪ್ರಜೆಗಳನ್ನು ಸಂಹಾರಮಾಡಿ ಪ್ರಳಯೋದಕಶಾಯಿಯೂ ಕಾಲರೂಪಿಯೂ ಆದ ಶ್ರೀ ಹರಿಯನ್ನು ಮಹರ್ಲೋಕದಿಂದಲೇ ನೋಡುತ್ತಾರೆ.

೬೭. ಭೃಗ್ವಾದಿ ಸಪ್ತಮಹರ್ಷಿಗಳು ಆ ಕಲ್ಪದಲ್ಲಿದ್ದರು. ಅನಂತರ ಪರಿಣಾಮವಾಗುವ ಗುಣಾನುಸಾರವಾಗಿ ಮಹತ್ತತ್ವಾದಿಗಳಿಂದ ಆವೃತರಾದರು.

೬೮. ಗಮನಾರ್ಥಕವಾದ ಋಷ್ ಧಾತುವಿನಿಂದ ಋಷಿಯೆಂಬ ಶಬ್ದವು ಉತ್ಪನ್ನವಾಗಿರುತ್ತದೆ. ಇದರಿಂದ ಮುನಿಗಳು ಋಷಿಶಬ್ದವಾಚ್ಯರಾಗಿಯೂ, ಅವರು ಮಹಾತ್ಮರಾದಕಾರಣ ಮಹರ್ಷಿಗಳೆಂದು ಪ್ರಖ್ಯಾತರಾಗಿಯೂ ಇರುವರು.

ಮಹರ್ಲೋಕಸ್ಥಿತೈರ್ದೃಷ್ಟಃ ಕಾಲಃ ಸುಪ್ತಸ್ತದಾ ಚ ತೈಃ ।
ಸತ್ಯಾದ್ಯಾಃ ಸಪ್ತ ಯೇ ಹ್ಯಾರ್ಸ ಕಲ್ಪೇತೀತೇ ಮಹರ್ಷಯಃ ॥ ೬೯ ॥

ಕಲ್ಪಸ್ಯಾದೌತು ಬಹುಶೋ ಯಸ್ಮಾತ್ ಸಂಸ್ಥಾಶ್ಚತುರ್ದಶ ।
ಕಲ್ಪಯಾಮಾಸ ವೈ ಬ್ರಹ್ಮಾ ತಸ್ಮಾತ್ ಕಾಲೋ ನಿರುಚ್ಯತೇ ॥ ೭೦ ॥

ಏವಂ ಬ್ರಾಹ್ಮೀಷು ರಾತ್ರೀಷು ಹ್ಯತೀತಾಸು ಸಹಸ್ರಶಃ ।
ದೃಷ್ಟವಂತಸ್ತಥಾಹ್ಯನ್ಯೇ ಸುಪ್ತಂ ಕಾಲಂ ಮಹರ್ಷಯಃ ॥ ೭೧ ॥

ಸ ಸೃಷ್ಟ್ವಾ ಸರ್ವಭೂತಾನಾಂ ಕಲ್ಪಾದಿಷು ಪುನಃ ಪುನಃ ।
ವ್ಯಕ್ತಾವ್ಯಕ್ತೋ ಮಹಾದೇವಸ್ತಸ್ಯ ಸರ್ವಮಿದಂ ಜಗತ್ ॥ ೭೨ ॥

---

೬೯. ಕಾಲನಾಮಕನೂ, ಸುಪ್ತನೂ ಆದ ಆ ಭಗವಂತನು ಮಹರ್ಲೋಕವಾಸಿಗಳಾದ ಆ ಋಷಿಗಳಿಂದ ಅರಿಯಲ್ಪಡುವನು ಆ ಕಲ್ಪವು ಅತೀತವಾದರೂ ಸತ್ಯಲೋಕವೇ ಮೊದಲಾದ ಸಪ್ತಲೋಕಗಳು ಸ್ಥಾಯಿಯಾಗಿರುವುವು.

೭೦. ಬ್ರಹ್ಮದೇವನು ಕಲ್ಪದ ಆದಿಯಲ್ಲಿ ಹದಿನಾಲ್ಕು ಲೋಕಗಳನ್ನೂ ತನ್ನುದರದಲ್ಲಿ ಅಡಗಿಸಿಕೊಂಡಿದ್ದುದರಿಂದ ಆವನಿಗೆ ಕಾಲನೆಂಬ ನಾಮವು ಪ್ರಸಿದ್ಧವಾಗಿದೆ.

೭೧ ಹೀಗೆ ಬ್ರಹ್ಮದೇವನ ಸಹಸ್ರಾರು ರಾತ್ರಿಗಳು ಕಳೆಯಲು ಮಹರ್ಷಿಗಳೂ, ಇತರ ಜ್ಞಾನಿಗಳೂ ಕೂಡ, ಕ್ಷೀರಾಬ್ಧಿಶಾಯಿಯೂ, ಕಾಲನಾಮಕನೂ ಆದ ಪರಮಾತ್ಮನನ್ನು ನೋಡುವರು

೭೨ ಕಲ್ಪಾದಿಯಲ್ಲಿ ಸಮಸ್ತ ಭೂತಗಳನ್ನೂ ಪದೇ ಪದೇ ಸೃಷ್ಟಿಸುವ ಸ್ವಭಾವವುಳ್ಳ ಪರಮೇಶ್ವರನು ವ್ಯಕ್ತಾವ್ಯಕ್ತಸ್ವರೂಪನಾಗಿರುತ್ತಾನೆ. ಚರಾಚರಾತ್ಮಕವಾದ ಈ ಸಮಸ್ತ ಜಗತ್ತೂ ಅವನ ಅಧೀನದಲ್ಲಿರುತ್ತದೆ.

**ಇತ್ಯೇಷ ಪ್ರತಿಸಂಧಿರ್ವಃ ಕೀರ್ತಿತಃ ಕಲ್ಪಯೋರ್ದ್ವಯೋಃ ।**
**ಸಾಂಪ್ರತಾತೀತಯೋರ್ಮಧ್ಯೇ ಪ್ರಾಗವಸ್ಥಾ ಬಭೂವ ಯಾ ॥ ೭೩ ॥**

**ಕೀರ್ತಿತಾ ತು ಸಮಾಸೇನ ಕಲ್ಪೇ ಕಲ್ಪೇ ಯಥಾ ತಥಾ ।**
**ಸಾಂಪ್ರತಂ ತೇ ಪ್ರವಕ್ಷ್ಯಾಮಿ ಕಲ್ಪಮೇತಂ ನಿಬೋಧತ ॥ ೭೪ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ ಪ್ರತಿಸಂಧಿ ವರ್ಣನಂ ನಾಮ ಸಪ್ತಮೋಽಧ್ಯಾಯಃ**

---

೭೩. ವರ್ತಮಾನ ಅತೀತಗಳಾದ ಈ ಎರಡು ಕಲ್ಪಗಳ ಮಧ್ಯಾವಸ್ಥೆಗೆ ಪ್ರತಿಸಂಧಿಯೆಂದು ನಾಮವು ಪ್ರಾಪ್ತಿಯಾಗಿದೆ. ಇಂತಹ ಪ್ರತಿಸಂಧಿಯನ್ನು ನಿಮಗಾಗಿ ನಾನು ನಿರೂಪಿಸುವೆನು. ಇದು ಅತೀತವರ್ತಮಾನಕಲ್ಪಗಳ ಮಧ್ಯಗತ ವಾದ ಸೃಷ್ಟಿಯ ಪೂರ್ಣಾವಸ್ಥೆಯಾಗಿದೆ.

೭೪. ಎಲೈ ಮಹರ್ಷಿಗಳೇ, ನಿಮಗಾಗಿ ಹಿಂದೆ ನಡೆದ ಪ್ರತಿಕಲ್ಪಗಳ ವಿಷಯ ಗಳನ್ನು ಯಥಾಸ್ಥಿತವಾಗಿಯೂ, ಸಂಕ್ಷೇಪವಾಗಿಯೂ ನಿರೂಪಿಸಿರುವೆನು. ಈಗಿನ ಕಲ್ಪವನ್ನು ನಿಮಗಾಗಿ ತಿಳಿಸುವೆನು ಕೇಳಿ ಎಂದು ಸೂತನು ಮುನಿಗಳಿಗೆ ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ಪ್ರತಿಸಂಧಿವರ್ಣನೆಯೆಂಬ ಏಳನೆಯ ಅಧ್ಯಾಯವು ಸಮಾಪ್ತವಾದ್ದುದು.

## ಏಳನೆಯ ಅಧ್ಯಾಯದ ಸಾರಾಂಶವು

ಅತೀತವರ್ತಮಾನ ಕಲ್ಪಗಳ ಮಧ್ಯಕಾಲಕ್ಕೆ ಪ್ರತಿಸಂಧಿಯೆಂದು ನಾಮವು ಉಂಟಾಗುವುದು. ಆಗ ನಡೆಯತಕ್ಕ ಕಲ್ಪವು ವರಾಹಕಲ್ಪವಾಗುವುದು. ಪೂರ್ವ ಕಲ್ಪವು ಸಹಸ್ರಯುಗಾನಂತರ ಕ್ಷೀಣವಾಗಲು ಪ್ರಳಯಾಗ್ನಿಯಿಂದ ದಗ್ಧರೂ ಅಸಂಖ್ಯಾತರೂ ಆದ ವೈಮಾನಿಕದೇವತೆಗಳು ದೇವಲೋಕದಿಂದ ಮಹರ್ಲೋಕಕ್ಕೂ, ಅಲ್ಲಿಂದ ಜನೋಲೋಕಕ್ಕೂ ಅಲ್ಲಿಂದ ತಪೋಲೋಕಕ್ಕೂ ಅಲ್ಲಿಂದ ನಿರ್ಭಯವಾದ ಬ್ರಹ್ಮದೇವನ ಸತ್ಯಲೋಕಕ್ಕೂ ಹೋಗುವರು.

ಆಗ ಬ್ರಹ್ಮಲೋಕದಲ್ಲಿ ದೇವತೆಗಳು ತಂತಮ್ಮ ಸ್ವರೂಪ ಯೋಗ್ಯವಾದ ಸುಖವನ್ನು ಅನುಭವಿಸಿ ಬ್ರಹ್ಮನ ಕಲ್ಪಾಂತ್ಯದಲ್ಲಿ ಅವನೊಡನೆ ಮುಕ್ತರಾಗುವರು.

ಮಹರ್ಲೋಕದಿಂದ ಮೇಲಿನ ಲೋಕಕ್ಕೆ ಹೋಗದಿರುವ ಪ್ರಜೆಗಳು ಪ್ರಳಯಾಗ್ನಿಯಿಂದ ದಗ್ಧರೂ ಸೂರ್ಯರಶ್ಮಿದ್ವಾರಾ ಬೀಜರೂಪರೂ ಆಗಿ ಲೋಕಾಂತರ ದಲ್ಲಿರುವರು. ಪುನಃ ಸೃಷ್ಟಿಯಾಗಲು ಅವರು ತಮ್ಮ ತಮ್ಮ ಕರ್ಮಾನುಗುಣವಾಗಿ ಉತ್ಪನ್ನರಾಗುವರು. ಆಗ ಭೂರಾದಿ ಲೋಕತ್ರಯಸೃಷ್ಟಿಯು ಆಗುವುದು. ಪೂರ್ವ ದಂತೆಯೇ ಸಹಸ್ರಯುಗಗಳು ಕಳೆಯಲು ಪುನಃ ಪ್ರಳಯವಾಗುವುದು. ಲೋಕ ವೆಲ್ಲವೂ ಜಲಮಯವಾಗಲು ಶ್ರೀಹರಿಯು ಆ ಪ್ರಳಯೋದಕದಲ್ಲಿ ಸುಪ್ತನಾಗುವನು. ಅಂತಹ ದೇವನನ್ನು ಸತ್ಯಾದಿಪುಣ್ಯಲೋಕವಾಸಿಗಳಾದ ಮಹಾತ್ಮರು ನಿರಂತರ ವಾಗಿಯೂ ನೋಡುವರು.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಅಷ್ಟಮೋಽಧ್ಯಾಯಃ

॥ ಸೂತ ಉವಾಚ ॥

ತುಲ್ಯಂ ಯುಗಸಹಸ್ರಸ್ಯ ನೈಶಂ ಕಾಲಮುಪಾಸ್ಯ ಸಃ ।
ಶರ್ವರ್ಯಂತೇ ಪ್ರಕುರುತೇ ಬ್ರಹ್ಮತ್ವಂ ಸೃಷ್ಟಿಕಾರಣಾತ್ ॥ ೧ ॥

ಬ್ರಹ್ಮಾ ತು ಸಲಿಲೇ ತಸ್ಮಿನ್ ವಾಯುರ್ಭೂತ್ವಾ ತದಾಚರತ್ ।
ಅಂಧಕಾರೇ ತದಾ ತಸ್ಮಿನ್ ನಷ್ಟೇ ಸ್ಥಾವರಜಂಗಮೇ ॥ ೨ ॥

ಜಲೇನ ಸಮನುವ್ಯಾಪ್ತೇ ಸರ್ವತಃ ಪೃಥಿವೀತಲೇ ।
ಅವಿಭಾಗೇನ ಭೂತೇಷು ಸಮಂತಾತ್ಸುಸ್ಥಿತೇಷು ಚ ॥ ೩ ॥

---

## ಎಂಟನೆಯ ಅಧ್ಯಾಯವು

೧. ಸೂತನು ಹೇಳಿದನು:—ಆ ಭಗವಂತನು ಹಗಲಿನಂತೆ ಸಹಸ್ರಯುಗಗಳ ಕಾಲವುಳ್ಳ ರಾತ್ರಿಯನ್ನು ಕಳೆದು ಸೃಷ್ಟಿಮಾಡಲಿಚ್ಛೆಯಿಂದ ಬ್ರಹ್ಮತ್ವವನ್ನು ಪಡೆದನು.

೨. ಭಗವಂತನು ಚರಾಚರಾತ್ಮಕವಾದ ಜಗತ್ತು ನಷ್ಟವಾಗಿ ಅಂಧಕಾರ ಮಯವಾದ ಪ್ರಳಯೋದಕದಲ್ಲಿ ಅಡಗಿರಲು ಅದನ್ನು ಹುಡುಕುವುದಕ್ಕಾಗಿ ವಾಯು ರೂಪವನ್ನು ಧರಿಸಿ ಸಂಚರಿಸಿದನು

೩-೪. ಭೂಮಂಡಲವೆಲ್ಲವೂ ಜಲಮಯವಾಗಿ ಅಂಧಕಾರದಲ್ಲಿ ಲೀನವಾಗಿ ರಲು ಸರ್ವಭೂತಗಳೂ ವಿವೇಚನೆಯಿಲ್ಲದೆ ವರ್ಷಾಕಾಲದ ರಾತ್ರಿಯಲ್ಲಿ ಮಿಂಚಿನ

ನಿಶಾಯಾಮಿವ ಖದ್ಯೋತಃ ಪ್ರಾವೃಟ್ಕಾಲೇ ತತಸ್ತತಃ ।
ತದಾಕಾಶೇ ಚರನ್ ಸೋಽಥ ವೀಕ್ಷ್ಯಮಾಣಃ ಸ್ವಯಂಭುವಃ ॥ ೪ ॥

ಪ್ರತಿಷ್ಠಾಯಾಃ ಹ್ಯಪಾಯಂತು ಮಾರ್ಗಮಾಣಸ್ತದಾ ಪ್ರಭುಃ ।
ತತಸ್ತು ಸಲಿಲೇ ತಸ್ಮಿನ್ ಜ್ಞಾತ್ವಾ ಹ್ಯಂತರ್ಗತಾಂ ಮಹೀಂ ॥ ೫ ॥

ಅನುಮಾನಾತ್ತು ಸಂಬುದ್ಧೋ ಭೂಮೇರುದ್ಧರಣಂ ಪ್ರತಿ ।
ಚಕಾರಾನ್ಯಾಂ ತನುಂ ಚೈವ ಪೂರ್ವಕಲ್ಪಾದಿಷು ಸ್ಮೃತಾಂ ॥ ೬ ॥

ಸ ತು ರೂಪಂ ವರಾಹಸ್ಯ ಕೃತ್ವಾಪಃ ಪ್ರಾವಿಶತ್ಪ್ರಭುಃ ।
ಅದ್ಭಿಃ ಸಂಛಾದಿತಾಮುರ್ವೀಂ ಸಮೀಕ್ಷ್ಯಾಥ ಪ್ರಜಾಪತಿಃ ॥ ೭ ॥

ಉದ್ಧೃತ್ಯೋರ್ವೀಮಥಾದ್ಭ್ಯಸ್ತು ಅಪಸ್ತಾಸ್ತು ಸ ವಿನ್ಯಸತ್ ।
ಸಾಮುದ್ರೀಸ್ತು ಸಮುದ್ರೇಷು ನಾದೇಯೀರ್ನಿಮ್ನಗಾಸ್ವಪಿ ।
ಪಾರ್ಥಿವೀಸ್ತು ಸ ವಿನ್ಯಸ್ಯ ಪೃಥಿವ್ಯಾಂ ಸೋಽಚಿನೋದ್ಗಿರೀನ್ ॥ ೮ ॥

---

ಹುಳಗಳಂತೆ ಸೂಕ್ಷ್ಮವಾಗಿ ತೋರುವುವು. ಆಗ ಬ್ರಹ್ಮದೇವನು ಆಕಾಶದಲ್ಲಿ ಸಂಚರಿಸಿ ಭೂಮಿಯನ್ನು ಹುಡುಕಿದನು.

೫-೬. ಆಗ ಭಗವಂತನು ಭೂಮಿಗೆ ಅಪಾಯವು ಸಂಭವಿಸಿದೆಯೆಂದು ತಿಳಿದು ಅದನ್ನು ಹುಡುಕುವುದಕ್ಕೋಸ್ಕರ ಪ್ರಲಯೋದಕದಲ್ಲಿ ಮುಳುಗಿದನು. ಭೂಮಂಡಲವು ಪ್ರಳಯೋದಕದಲ್ಲಿ ಮುಳುಗಿಹೋಗಿತ್ತು. ಅದನ್ನು ಯುಕ್ತಿಯಿಂದ ಉದ್ಧರಿಸಲು ಪ್ರಯತ್ನಿಸಿದನು. ಮತ್ತು ಪೂರ್ವಕಲ್ಪದಲ್ಲಿ ಹೊಂದಿದ್ದ ವರಾಹರೂಪ ವನ್ನು ಧರಿಸಿದನು.

೭. ಅನಂತರ ಸ್ವಾಮಿಯಾದ ಭಗವಂತನು ವರಾಹರೂಪವನ್ನು ಧರಿಸಿ ಜಲವನ್ನು ಪ್ರವೇಶಿಸಿ ಜಲದಿಂದ ಆವೃತವಾದ ಭೂಮಂಡಲವನ್ನು ಕಂಡುಹಿಡಿದನು.

೮. ಆಗ ವರಾಹರೂಪಿಯಾದ ಭಗವಂತನು ಆ ಪೃಥಿವಿಯನ್ನು ಉದ್ಧರಿಸಿ ಸಮುದ್ರಗಳ ಜಲವನ್ನು ಸಮುದ್ರದಲ್ಲಿಯೂ, ನದೀ ಜಲವನ್ನು ನದಿಗಳಲ್ಲಿಯೂ, ಪೃಥಿವೀಗತವಾದ ಜಲವನ್ನು ಪೃಥಿವಿಯಲ್ಲೂ ಸೇರಿಸಿ ಭೂಮಿಯನ್ನು ಸ್ಥಾಪಿಸು ವುದಕ್ಕಾಗಿ ಪರ್ವತಗಳನ್ನು ಕೂಡಿಹಾಕಿದನು.

ಪ್ರಾಕ್ ಸರ್ಗೇ ದಹ್ಯಮಾನೇತು ತದಾ ಸಂವರ್ತಕಾಗ್ನಿನಾ ।
ತೇನಾಗ್ನಿನಾ ಪ್ರಲೀನಾಸ್ತೇ ಪರ್ವತಾ ಭುವಿ ಸರ್ವಶಃ ॥ ೯ ॥

ಶೈತ್ಯಾದೇಕಾರ್ಣವೇ ತಸ್ಮಿನ್ ವಾಯುನಾಪಸ್ತು ಸಂಹೃತಾಃ ।
ನಿಷಕ್ತಾ ಯತ್ರ ಯತ್ರಾಸನ್ ತತ್ರ ತತ್ರಾಚಲೋಽಭವತ್ ॥ ೧೦ ॥

ಸ್ಕನ್ನಾಚಲತ್ವಾದಚಲಾಃ ಪರ್ವಭಿಃ ಪರ್ವತಾಃ ಸ್ಮೃತಾಃ ।
ಗಿರಯೋಽಧ್ಭಿರ್ನಿಗೀರ್ಣತ್ವಾ ಚ್ಚಯನಾಚ್ಚ ಶಿಲೋಚ್ಚಯಾಃ ॥ ೧೧ ॥

ತತಸ್ತು ತಾಂ ಸಮುದ್ಧೃತ್ಯ ಕ್ಷಿತಿಮಂತಜಲಾತ್ಪ್ರಭುಃ ।
ಸ್ವಸ್ಥಾನೇ ಸ್ಥಾಪಯಿತ್ವಾ ಚ ವಿಭಾಗಮಕರೋತ್ ಪುನಃ ॥ ೧೨ ॥

ಸಪ್ತ ಸಪ್ತತು ಪರ್ವಾಣಿ ತಸ್ಯಾದ್ವೀಪೇಷು ಸಪ್ತಸು ।
ವಿಷಮಾಣಿ ಸಮೀಕೃತ್ಯ ಶಿಲಾಭಿರಚಿನೋದ್ಗಿರೀನ್ ॥ ೧೩ ॥

---

೯-೧೦. ಪೂರ್ವದ ಸೃಷ್ಟಿಯಲ್ಲಿ ಪ್ರಲಯಾಗ್ನಿಯಿಂದ ಸುಟ್ಟು ಭಸ್ಮವಾಗಿ ಮುಚ್ಚಿಹೋಗಿದ್ದ ಪರ್ವತಗಳು ಪ್ರಲಯೋದಕದ ಶೈತ್ಯದಿಂದ ಆವೃತವಾಗಿದ್ದವು. ಆಗ ವಾಯುದೇವನು ಆ ಜಲವನ್ನು ಶೋಷಿಸಿ ಶೀರ್ಣವಾದ ಗುಡ್ಡಗಳನ್ನು ಅಲ್ಲಲ್ಲಿ ಕೂಡಿಸಿ ಪರ್ವತಾಕಾರಗಳನ್ನಾಗಿ ಮಾಡಿದನು.

೧೧. ಪರ್ವತಗಳಿಗೆ ಬಂಡೆಗಳು ಜಾರಿಬಿದ್ದಿರುವುದರಿಂದ ಅಚಲವೆಂದೂ, ಗಂಟುಗುಡ್ಡಗಳು ಇರುವುದರಿಂದ ಪರ್ವತವೆಂದೂ, ಜಲದಲ್ಲಿ ಮುಳುಗಿಹೋಗಿರುವುದರಿಂದ ಗಿರಿಯೆಂದೂ ವಾಯುದೇವನು ಕಲ್ಲುಗಳನ್ನು ಒಟ್ಟುಗೂಡಿಸಿರುವುದರಿಂದ ಶಿಲೋಚ್ಚಯವೆಂದೂ ನಾಮಗಳು ಬಂದಿವೆ.

೧೨. ಅನಂತರ ಭಗವಂತನು ಜಲದಲ್ಲಿ ಮುಳುಗಿಹೋಗಿದ್ದ ಆ ಭೂಮಂಡಲವನ್ನು ಮೇಲಕ್ಕೆ ಎತ್ತಿ ಪೂರ್ವದಲ್ಲಿದ್ದ ಸ್ಥಳಗಳಲ್ಲಿಯೇ ಅವುಗಳನ್ನು ಸ್ಥಾಪಿಸಿ ಪುನಃ ವಿಭಾಗವನ್ನು ಮಾಡಿದನು.

೧೩. ಆ ಭಗವಂತನು ಸಪ್ತದ್ವೀಪಗಳಲ್ಲಿಯೂ ಏಳೇಳು ಭಾಗಗಳನ್ನು ಏರ್ಪಡಿಸಿ ಹಳ್ಳದಿಣ್ಣೆಗಳನ್ನು ಸಮಮಾಡಿ ಶಿಲೆಗಳನ್ನು ಕೂಡಿಸಿ ಗಿರಿಗಳನ್ನು ರಚಿಸಿದನು.

ದ್ವೀಪೇಷು ತೇಷು ವರ್ಷಾಣಿ ಚತ್ವಾರಿಂಶತ್ತಥೈವ ಚ ।
ತಾವಂತಃ ಪರ್ವತಾಶ್ಚೈವ ವರ್ಷಾಂತೇ ಸಮವಸ್ಥಿತಾಃ ।
ಸರ್ಗಾದೌ ಸನ್ನಿವಿಷ್ಟಾಸ್ತೇ ಸ್ವಭಾವೇನೈವ ನಾನ್ಯಥಾ ॥ ೧೪ ॥

ಸಪ್ತದ್ವೀಪಾಃ ಸಮುದ್ರಾಶ್ಚ ಅನ್ಯೋನ್ಯಸ್ಯ ತು ಮಂಡಲಂ ।
ಸನ್ನಿಕೃಷ್ಟಾಃ ಸ್ವಭಾವೇನ ಸಮಾವೃತ್ಯ ಪರಸ್ಪರಂ ॥ ೧೫ ॥

ಭೂರಾದ್ಯಾಂಶ್ಚತುರೋ ಲೋಕಾಂಶ್ಚಂದ್ರಾದಿತ್ಯೌ ಗ್ರಹೈಃ ಸಹ ।
ಪೂರ್ವಂತು ನಿರ್ಮಮೇ ಬ್ರಹ್ಮಾ ಸ್ಥಾನಾನೀಮಾನಿ ಸರ್ವಶಃ ॥ ೧೬ ॥

ಕಲ್ಪಸ್ಯ ಚಾಸ್ಯ ಬ್ರಹ್ಮಾ ವೈ ಹ್ಯಸೃಜತ್ ಸ್ಥಾನಿನಃ ಪುರಾ ।
ಆಪೋಗ್ನಿಃ ಪೃಥಿವೀ ವಾಯುರಂತರಿಕ್ಷಂ ದಿವಂ ತಥಾ ॥ ೧೭ ॥

ಸರ್ಗಂ ದಿಶಃ ಸಮುದ್ರಾಶ್ಚ ನದೀಃ ಸರ್ವಾಂಶ್ಚ ಪರ್ವತಾನ್ ।
ಓಷಧೀನಾಂ ತಥಾತ್ಮಾನಮಾತ್ಮಾನಂ ವೃಕ್ಷವೀರುಧಾಂ ॥ ೧೮ ॥

---

೧೪. ಆ ದ್ವೀಪಗಳಲ್ಲಿ ನಲವತ್ತು ಭಾಗಗಳೂ, ನಲವತ್ತು ಪರ್ವತಗಳೂ ಆ ಕಲ್ಪಾಂತರದವರೆಗೂ ಇದ್ದುವು. ಅವು ಸೃಷ್ಟಿಯ ಆದಿಯಲ್ಲಿ ಸ್ವಾಭಾವಿಕಗಳಾಗಿಯೇ ಇದ್ದುವು. ವ್ಯತಿರಿಕ್ತಗಳಾಗಿರಲಿಲ್ಲ.

೧೫. ಸಪ್ತದ್ವೀಪಗಳೂ ಮತ್ತು ಸಪ್ತಸಮುದ್ರಗಳೂ ಕೂಡ ಅನ್ಯೋನ್ಯ ಸಂಬಂಧಿಗಳೂ, ಸಮೀಪಗತಗಳೂ, ಸ್ವಾಭಾವಿಕಗಳೂ ಆದ ಆವರಣಗಳುಳ್ಳವುಗಳೂ, ಆಗಿ ಸೇರಿಕೊಂಡೇ ಇದ್ದುವು

೧೬. ಜಗದೊಡೆಯನಾದ ಬ್ರಹ್ಮನು ಮೊದಲೇ ಭೂರಾದಿಯಾದ ನಾಲ್ಕು ಲೋಕಗಳೂ, ಸೂರ್ಯಚಂದ್ರರೂ, ಗ್ರಹಗಳೂ, ಅವುಗಳ ಸ್ಥಾನಮಾನಗಳೂ ಇವುಗಳನ್ನು ಸಂಪೂರ್ಣವಾಗಿ ಸೃಷ್ಟಿಸಿದನು.

೧೭-೨೦. ಆಗ ಬ್ರಹ್ಮದೇವನು ಸೃಷ್ಟಿಯ ಆದಿಯಲ್ಲಿಯೇ ಜಲ, ಅಗ್ನಿ, ಪೃಥಿವೀ, ವಾಯು, ಅಂತರಿಕ್ಷ, ದಿವ, ಸ್ವರ್ಗದಿಕ್ಕು, ಸಮುದ್ರ, ನದೀ, ಪರ್ವತ, ಓಷಧಿ ಮರ, ಬಳ್ಳಿ, ತದಭಿಮಾನಿಗಳೂ, ಲವ, ಕಾಷ್ಠ, ಕಾಲ, ಮುಹೂರ್ತ, ಸಂಧಿ, ರಾತ್ರಿ,

ಲವಾಃ ಕಾಷ್ಠಾಃ ಕಲಾಶ್ಚೈವ ಮುಹೂರ್ತಂ ಸಂಧಿರಾತ್ರ್ಯಹಂ ।
ಅರ್ಧ ಮಾಸಾಂಶ್ಚ ಮಾಸಾಂಶ್ಚ ಅಯನಾಬ್ದಯುಗಾನಿ ಚ ॥ ೧೯ ॥

ಸ್ಥಾನಾಭಿಮಾನಿನಶ್ಚೈವ ಸ್ಥಾನಾನಿಚ ಪೃಥಕ್ ಪೃಥಕ್ ।
ಸ್ಥಾನಾತ್ಮನಃ ಸ ಸೃಷ್ಟ್ವಾ ವೈ ಯುಗಾವಸ್ಥಾಂ ಸ ನಿರ್ಮಮೇ ॥ ೨೦ ॥

ಕೃತಂ ತ್ರೇತಾ ದ್ವಾಪರಂ ಚ ಕಲಿಂಚೈವ ತಥಾಯುಗಂ ।
ಕಲ್ಪಸ್ಯಾದೌ ಕೃತಯುಗೇ ಪ್ರಥಮೇ ಸೋಽಸೃಜತ್ಪ್ರಜಾಃ ॥ ೨೧ ॥

ಪ್ರಾಗುಕ್ತಾಯಾ ಮಯಾ ತುಭ್ಯಂ ಪೂರ್ವಕಾಲಂ ಪ್ರಜಾಸ್ತು ತಾಃ ।
ತಸ್ಮಿನ್ ಸಂವರ್ತಮಾನೇತು ಕಲ್ಪೇ ದಗ್ಧಾಸ್ತದಾಗ್ನಿನಾ ॥ ೨೨ ॥

ಅಪ್ರಾಪ್ತಾ ಯಾಸ್ತಪೋಲೋಕಂ ಜನಲೋಕಂ ಸಮಾಶ್ರಿತಾಃ ।
ಪ್ರವರ್ತಂತಿ ಪುನಸ್ಸರ್ಗೇ ಬೀಜಾರ್ಥಂ ತಾ ಭವಂತಿ ಹಿ ॥ ೨೩ ॥

ಬೀಜಾರ್ಥೇನ ಸ್ಥಿತಾಸ್ತತ್ರ ಪುನಃ ಸರ್ಗಸ್ಯ ಕಾರಣಾತ್ ।
ತತಸ್ತಾಃ ಸೃಜ್ಯಮಾನಾಸ್ತು ಸಂತಾನಾರ್ಥಂ ಭವಂತಿ ಹಿ ॥ ೨೪ ॥

---

ಹಗಲು, ಪಕ್ಷ, ಮಾಸ, ಅಯನ, ಸಂವತ್ಸರ ಮತ್ತು ಯುಗ ಇವುಗಳ ಪ್ರತ್ಯೇಕಗಳಾದ ಸ್ಥಾನಾಭಿಮಾನಿಗಳೂ ಮತ್ತು ಆತ್ಮ, ಸ್ಥಾನ, ಇವುಗಳನ್ನೂ ಸೃಷ್ಟಿಸಿದನು. ಹೀಗೆ ಸೃಷ್ಟಿಸಿದ ತರುವಾಯ ಯುಗಾವಸ್ಥೆಗಳನ್ನೂ ನಿರ್ಮಿಸಿದನು.

೨೧. ಬ್ರಹ್ಮದೇವನು, ಕೃತ, ತ್ರೇತಾ, ದ್ವಾಪರ ಕಲಿ ಎಂಬ ನಾಲ್ಕು ಯುಗಗಳನ್ನು ಕಲ್ಪಾದಿಯಲ್ಲಿ ಸೃಷ್ಟಿಸಿದನು. ಅವುಗಳಲ್ಲಿ ಮೊದಲನೆಯದಾದ ಕೃತಯುಗದಲ್ಲಿ ಪ್ರಜೆಗಳನ್ನು ಸೃಷ್ಟಿಸಿದನು.

೨೨-೨೩. ನಾನು ನಿಮಗೆ ಯಾವ ಪೂರ್ವಕಾಲವನ್ನು ಮೊದಲು ತಿಳಿಸಿದ್ದನೋ ಆ ಕಾಲದಲ್ಲಿದ್ದ ಪ್ರಜೆಗಳು ಪ್ರಲಯಾಗ್ನಿಯಿಂದ ಆ ಕಲ್ಪವು ದಗ್ಧವಾಗಲು ತಪೋಲೋಕಕ್ಕೆ ಹೋಗದೆಯೇ ಜನೋಲೋಕದಲ್ಲಿಯೇ ಇದ್ದರು. ಅಂತಹವರು ಬೀಜರೂಪರಾಗಿ ಪುನಃ ಸೃಷ್ಟಿಗೆ ಕಾರಣರಾದರು.

೨೪. ಜನೋ ಲೋಕದಲ್ಲಿ ಬೀಜರೂಪವಾಗಿದ್ದ ಪ್ರಜೆಗಳು ಮುಂದಿನ ಸೃಷ್ಟಿಗೆ ಕಾರಣರಾಗಿರುತ್ತಾರೆ. ಅವರಿಂದ ಮುಂದಿನ ಸೃಷ್ಟಿಕ್ರಮವು ಆಗುವುದು.

**ಧರ್ಮಾರ್ಥಕಾಮಮೋಕ್ಷಣಾಮಿಹ ತಾಃ ಸಾಧಕಾಃ ಸ್ಮೃತಾಃ ।**
**ದೇವಾಶ್ಚ ಪಿತರಶ್ಚೈವ ಋಷಯೋ ಮನವಸ್ತಥಾ ॥ ೨೫ ॥**

**ತತಸ್ತೇ ತಪಸಾ ಯುಕ್ತಾ ಸ್ಥಾನಾನ್ಯಾಪೂರಯಂತಿ ಹಿ ।**
**ಬ್ರಹ್ಮಣೋ ಮಾನಸಾಸ್ತೇ ವೈ ಸಿದ್ಧಾತ್ಮಾನೋ ಭವಂತಿ ಹಿ ॥ ೨೬ ॥**

**ಯೇ ಸರ್ಗಾ ದ್ವೇಷಯುಕ್ತೇನ ಕರ್ಮಣಾ ತೇ ದಿವಂಗತಾಃ ।**
**ಆವರ್ತಮಾನಾ ಇಹ ತೇ ಸಂಭವಂತಿ ಯುಗೇ ಯುಗೇ ॥ ೨೭ ॥**

**ಸ್ವಕರ್ಮಫಲಶೇಷೇಣ ಖ್ಯಾತಾಶ್ಚೈವ ತಥಾತ್ಮಕಾಃ ।**
**ಸಂಭವಂತಿ ಜನಾಲ್ಲೋಕಾತ್ ಕರ್ಮಸಂಶಯಬಂಧನಾತ್ ॥ ೨೮ ॥**

**ಆಶಯಃ ಕಾರಣಂ ತತ್ರ ಬೋದ್ಧವ್ಯಂ ಕರ್ಮಣಾಂ ತು ಸಃ ।**
**ತೈಃ ಕರ್ಮಭಿಸ್ತು ಜಾಯಂತೇ ಜನಾಲ್ಲೋಕಾಃ ಶುಭಾತುಭೈಃ ॥ ೨೯ ॥**

---

೨೫ ದೇವತೆಗಳು, ಪಿತೃಗಳು, ಋಷಿಗಳು ಮತ್ತು ಮನುಗಳು ಇವರು ಮುಂದೆ ನಡೆಯಬೇಕಾದ ಧರ್ಮಾರ್ಥಕಾಮಮೋಕ್ಷಗಳಿಗೆ ಕಾರಣರಾಗಿರುವರು

೨೬. ಅನಂತರ ಅವರು ತಪೋಯುಕ್ತರಾಗಿ ಸ್ಥಾನಗಳೆಲ್ಲವನ್ನೂ ಪೂರ್ಣ ಮಾಡುವರು ಮತ್ತು ಬ್ರಹ್ಮದೇವನ ಮಾನಸಪುತ್ರರಾಗಿಯೂ, ಸಿದ್ಧಸ್ವರೂಪ ರಾಗಿಯೂ ಆಗುವರು.

೨೭. ಯಾರು ಸೃಷ್ಟಿಯಲ್ಲಿ ದ್ವೇಷವಿಲ್ಲದೆಯೇ ಶುಭಕರ್ಮಗಳಿಂದ ಸ್ವರ್ಗ ಲೋಕವನ್ನು ಹೊಂದಿರುವರೋ ಅವರು ಆ ಪುಣ್ಯವು ಕ್ಷೀಣವಾಗಲು ಪುನಃ ಪ್ರತಿ ಯುಗಗಳಲ್ಲಿಯೂ ಉತ್ಪನ್ನರಾಗುವರು.

೨೮. ಆ ಪ್ರಜೆಗಳು ತಾವು ಮಾಡಿದ ಕರ್ಮಫಲಶೇಷದಿಂದ ಪ್ರಖ್ಯಾತರೂ ಕರ್ಮಬದ್ಧರೂ ಆಗಿ ಜನೋಲೋಕದಿಂದ ಈ ಲೋಕದಲ್ಲಿ ಪುನಃ ಉದ್ಭವಿಸುವರು.

೨೯. ಪ್ರಜೆಗಳ ಜನನ ಮರಣಾದಿಗಳಿಗೆ ಅವರ ಅಭಿಲಾಷೆಯೂ ಮತ್ತು ಕರ್ಮವೂ ಕೂಡ ಮುಖ್ಯ ಕಾರಣಗಳಾಗಿವೆ. ಅಂಥ ಶುಭಾಶುಭ ಕರ್ಮಗಳಿಂದ ಯುಕ್ತರಾದ ಜನಗಳು ಜನೋಲೋಕದಿಂದ ಈ ಲೋಕದಲ್ಲಿ ಪುನಃ ಪುನಃ ಹುಟ್ಟುವರು.

ಗೃಣ್ಹಂತಿ ತೇ ಶರೀರಾಣಿ ನಾನಾರೂಪಾಣಿ ಯೋನಿಷು ।
ದೇವಾದ್ಯಾಃಸ್ಥಾವರಾಂತೇ ಚ ಉದ್ಭವದ್ಯಂತೇ ಪರಸ್ಪರಂ ॥ ೩೦ ॥

ತೇಷಾಂ ಯೇ ಯಾನಿ ಕರ್ಮಾಣಿ ಪ್ರಾಕ್ ಸೃಷ್ಟೇಃ ಪ್ರತಿಪೇದಿರೇ ।
ತಾನ್ಯೇತೇ ಪ್ರತಿಪದ್ಯಂತೇ ಸೃಜ್ಯಮಾನಾಃ ಪುನಃ ಪುನಃ ॥ ೩೧ ॥

ಹಿಂಸ್ರಾ ಹಿಂಸ್ರೇ ಮೃದುಕ್ರೂರೇ ಧರ್ಮಾಧರ್ಮೇ ಋತಾನೃತೇ ।
ತದ್ಭಾವಿತಾಃ ಪ್ರಪದ್ಯಂತೇ ತಸ್ಮಾತ್ತತ್ತಸ್ಯ ರೋಚತೇ ॥ ೩೨ ॥

ಕಲ್ಪೇಷ್ವಾಸನ್ ವ್ಯತೀತೇಷು ರೂಪನಾಮಾನಿ ಯಾನಿ ಚ ।
ತಾನ್ಯೇವಾನಾಗತೇ ಕಾಲೇ ಪ್ರಾಯಶಃ ಪ್ರತಿಪೇದಿರೇ ॥ ೩೩ ॥

---

೩೦. ದೇವತೆಗಳಾದಿಯಾಗಿ ಜಡಪರ್ಯಂತವಾಗಿರುವ ಪ್ರಜೆಗಳು ತಮ್ಮ ತಮ್ಮ ಕರ್ಮಾನುಸಾರವಾಗಿ ನಾನಾ ಯೋನಿಗಳಲ್ಲಿ ನಾನಾ ರೂಪಗಳನ್ನು ಧರಿಸಿ ಈ ಭೂಮಿಯಲ್ಲಿ ಹುಟ್ಟುವರು.

೩೧ ಅವರು ಹಿಂದಿನ ಜನ್ಮಗಳಲ್ಲಿ ಯಾವ ಯಾವ ಕರ್ಮಗಳನ್ನು ಮಾಡಿರುತ್ತಾರೆಯೋ, ತದನುಗುಣವಾಗಿಯೇ ಫಲವನ್ನು ಹೊಂದಲು ಪುನಃ ಪುನಃ ಈ ಭೂಮಂಡಲದಲ್ಲಿ ಉತ್ಪನ್ನರಾಗುವರು.

೩೨. ಹಿಂಸೆ, ಅಹಿಂಸೆ, ಮೃದು, ಕ್ರೌರ್ಯ, ಧರ್ಮ, ಅಧರ್ಮ, ಸತ್ಯ, ಅನೃತ, ಇವೇ ಮೊದಲಾದ ಗುಣಗಳಿಂದ ಯುಕ್ತರಾದ ಪ್ರಜೆಗಳು, ಅದಕ್ಕನುಸಾರವಾಗಿಯೇ ಮೃದುಕ್ರೌರ್ಯವೇ ಮೊದಲಾದ ಗುಣಗಳಿಂದ ಕೂಡಿ ಉದ್ಭವಿಸುವರು. ಅದೇ ಅವರಿಗೆ ಪ್ರಿಯವಾದ ಕಾರ್ಯವಾಗಿರುತ್ತದೆ.

೩೩. ಹಿಂದಿನ ಕಲ್ಪಗಳಲ್ಲಿ ಯಾರು ಯಾರಿಗೆ ಯಾವ ಯಾವ ಗುಣ, ರೂಪ, ನಾಮ ಇವೇ ಮೊದಲಾದವು ಇರುತ್ತವೆಯೋ, ಮುಂದಿನ ಜನ್ಮಗಳಲ್ಲಿಯೂ ಕೂಡ ಆ ನಾಮರೂಪಾದಿಗಳೇ, ಪ್ರಾಯಶವಾಗಿ ಅವರಿಗೆ ಬಂದೇ ಸೇರುವುವು

**ತಸ್ಮಾತ್ತು ನಾಮರೂಪಾಣಿ ತಾನ್ಯೇವ ಪ್ರತಿಪೇದಿರೇ ।**
**ಪುನಃ ಪುನಸ್ತೇ ಕಲ್ಪೇಷು ಜಾಯಂತೇ ನಾಮರೂಪತಃ ॥ ೩೪ ॥**

**ತತಃ ಸರ್ಗೇ ಹ್ಯವಷ್ಟಬ್ಧೇ ಸಿಸೃಕ್ಷೋರ್ಬ್ರಹ್ಮಣಸ್ತು ವೈ ।**
**ಪ್ರಜಾಸ್ತಾ ಧ್ಯಾಯತಸ್ತಸ್ಯ ಸತ್ಯಾಭಿಧ್ಯಾಯಿನಸ್ತದಾ ॥ ೩೫ ॥**

**ಮಿಥುನಾನಾಂ ಸಹಸ್ರಂತು ಸೋಽಸೃಜದ್ವೈ ಮುಖಾತ್ತದಾ ।**
**ಜನಾಸ್ತೇ ಹ್ಯುಪಪದ್ಯಂತೇ ಸತ್ವೋದ್ರಿಕ್ತಾಃ ಸುಚೇತಸಃ ॥ ೩೬ ॥**

**ಸಹಸ್ರಮನ್ಯದ್ವಕ್ಷಸ್ತೋ ಮಿಥುನಾನಾಂ ಸಸರ್ಜ ಹ ।**
**ತೇ ಸರ್ವೇ ರಜಸೋದ್ರಿಕ್ತಾಃ ಶುಷ್ಮಿಣಶ್ಚಾಪ್ಯಶುಷ್ಮಿಣಃ ॥ ೩೭ ॥**

**ಸೃಷ್ಟ್ವಾ ಸಹಸ್ರಮನ್ಯತ್ತು ದ್ವಂದ್ವಾನಾಮೂರುತಃ ಪುನಃ ।**
**ರಜಸ್ತಮೋಭ್ಯಾಮುದ್ರಿಕ್ತಾ ಈಹಾಶೀಲಾಸ್ತು ತೇ ಸ್ಮೃತಾಃ ॥ ೩೮ ॥**

**ಪದ್ಭ್ಯಾಂ ಸಹಸ್ರಮನ್ಯತ್ತು ಮಿಥುನಾನಾಂ ಸಸರ್ಜ ಹ ।**
**ಉದ್ರಿಕ್ತಾಸ್ತಮಸಾ ಸರ್ವೇ ನಿಶ್ರೀಕಾ ಹ್ಯಲ್ಪತೇಜಸಃ ॥ ೩೯ ॥**

---

೩೪. ಆಯಾ ದೇವಾದಿಗಳಿಗೆ ಹಿಂದಿನ ಕಲ್ಪಗಳಲ್ಲಿ ಇದ್ದಂಥ ನಾಮರೂಪಗಳೇ ಪ್ರಾಯಿಕವಾಗಿ ಮುಂದಿನ ಕಲ್ಪದಲ್ಲಿಯೂ, ಅವರಿಗೆ ಅನುಗುಣವಾಗಿ ಬರುವುವು.

೩೫-೩೬. ಅನಂತರ ಸೃಷ್ಟಿಯು ಉಪಕ್ರಮಿಸಲು ಬ್ರಹ್ಮದೇವನು ಸತ್ವಗುಣ ಪ್ರಾಚುರ್ಯದಿಂದ ಸೃಷ್ಟಿಸಲು ಇಚ್ಛೆಯುಳ್ಳವನಾಗಿ ತನ್ನ ಮುಖದಿಂದ ಸಹಸ್ರಾರು ದ್ವಂದ್ವಗಳ ಸೃಷ್ಟಿಯನ್ನು ಮಾಡಿದನು. ಸತ್ವೋದ್ರೇಕದಿಂದ ಉತ್ತಮವಾದ ಚೇತನ ಸೃಷ್ಟಿಯೂ ಕೂಡ ನಡೆಯಿತು.

೩೭-೩೮. ಆ ಸ್ವಾಮಿಯು ತನ್ನ ಹೃದಯದಿಂದ ಸಾವಿರಾರು ದ್ವಂದ್ವಗಳನ್ನು ಸೃಷ್ಟಿಸಿದನು. ಅವರೆಲ್ಲರೂ ಸತ್ವಗುಣೋದ್ರೇಕದಿಂದ ತೇಜಸ್ವಿಗಳಾಗಿಯೂ, ನಿಸ್ತೇಜಸ್ವಿಗಳಾಗಿಯೂ ಆದರು. ಪುನಃ ತೊಡೆಗಳ ಮೂಲಕ ಬ್ರಹ್ಮನು, ಸಹಸ್ರಾರು ದ್ವಂದ್ವಸೃಷ್ಟಿಯನ್ನು ಮಾಡಿದನು. ಹೀಗೆ ಸೃಷ್ಟಿಸಲ್ಪಟ್ಟ ಅವರೆಲ್ಲರೂ ರಜಸ್ತಮೋಗುಣಗಳ ಆಧಿಕ್ಯದಿಂದ ಅತ್ಯಧಿಕವಾದ ಇಚ್ಛೆಯುಳ್ಳವರಾದರು.

೩೯. ಅನಂತರ ಬ್ರಹ್ಮನು ಪಾದಗಳಿಂದ ಸಹಸ್ರಾರು ಬೇರೆ ಮಿಥುನಗಳನ್ನು ಸೃಷ್ಟಿಸಿದನು. ಅವರೆಲ್ಲರೂ ತಮೋಗುಣೋದ್ರೇಕದಿಂದ ಕಾಂತಿಹೀನರಾಗಿಯೂ, ಅಲ್ಪಶಕ್ತಿಯುಳ್ಳವರಾಗಿಯೂ ಆದರು.

ತತೋ ವೈ ಹರ್ಷಮಾನಾಸ್ತು ದ್ವಂದ್ವೋತ್ಪನ್ನಾಸ್ತು ಪ್ರಾಣಿನಃ ।
ಅನ್ಯೋನ್ಯಾಹೃಚ್ಛಯಾವಿಷ್ಟಾಃ ಮೈಥುನಾಯೋಪಚಕ್ರಮುಃ ॥ ೪೦ ॥

ತತಃ ಪ್ರಭೃತಿ ಕಲ್ಪೇಸ್ಮಿನ್ ಮಿಥುನೋತ್ಪತ್ತಿರುಚ್ಯತೇ ।
ಮಾಸೇ ಮಾಸೇರ್ತವಂ ಯದ್ಯತ್ತದಾಜ್ಞಾಸೀದ್ಧಿ ಯೋಷಿತಾಂ ॥ ೪೧ ॥

ತಸ್ಮಾತ್ತದಾ ನ ಸುಷುವುಃ ಸೇವಿತೈರಪಿ ಮೈಥುನೈಃ ।
ಆಯುಷೋಂತೇ ಪ್ರಸೂಯಂತೇ ಮಿಥುನಾನ್ಯೇವ ತೇ ಸಕೃತ್ ॥ ೪೨ ॥

ಕುಟಿಕಾಃ ಕುವಿಕಾಶ್ಚೈವ ಉತ್ಪದ್ಯಂತೇ ಮುಮೂರ್ಷಿತಾಃ ।
ತತಃ ಪ್ರಭೃತಿ ಕಲ್ಪೇಸ್ಮಿನ್ ಮಿಥುನಾನಾಂ ಹಿ ಸಂಭವಃ ॥ ೪೩ ॥

ಧ್ಯಾತೇ ತು ಮನಸಾ ತಾಸಾಂ ಪ್ರಜಾನಾಂ ಜಾಯತೇ ಸಕೃತ್ ।
ಶಬ್ದಾದಿವಿಷಯಃ ಶುದ್ಧಃ ಪ್ರತ್ಯೇಕಂ ಪಂಚಲಕ್ಷಣಃ ॥ ೪೪ ॥

---

೪೦. ಅನಂತರ ದ್ವಂದ್ವಗಳಾಗಿ ಉತ್ಪನ್ನಗಳಾದ ಆ ಪ್ರಾಣಿಗಳು ಸಂತೋಷ ಯುಕ್ತಗಳೂ, ಪರಸ್ಪರ ಅಭಿಪ್ರಾಯವುಳ್ಳವುಗಳೂ ಅನ್ಯೋನ್ಯವಾಗಿ ಸೇರಲಿಚ್ಛೆ ಯುಳ್ಳವುಗಳೂ, ಆದುವು.

೪೧. ಅಂದಿನಿಂದಲೂ ಈ ಕಲ್ಪದಲ್ಲಿ ಮಿಥುನೋತ್ಪತ್ತಿಯು ಉಪಕ್ರಮ ವಾಯಿತು. ಆಗಲೇ ಆ ಸ್ತ್ರೀಯರು ಋತುಮತಿಯರಾಗಲುಪಕ್ರಮಿಸಿ ಅದರ ವಿಷಯವಾದ ಜ್ಞಾನವನ್ನು ಹೊಂದಿದರು.

೪೨. ಆಗ ಆ ಪ್ರಾಣಿಗಳು ಸ್ವೇಚ್ಛಾವಿಹಾರ ಮಾಡಿದರೂ ಕೂಡ ಸಂತಾ ನೋತ್ಪತ್ತಿಯಾಗಲಿಲ್ಲ. ಪ್ರಾಣಿಗಳ ಆಯುಸ್ಸು ಕಳೆದ ಮೇಲೆ ಪುನಃ ಅವುಗಳ ಜನನವು ಆಗಬೇಕಾಗಿ ಬಂತು. ಆದುದರಿಂದ ಪ್ರಜಾಸೃಷ್ಟಿಯು ಯಥೇಚ್ಛವಾಗಿ ನಡೆಯದೇ ಸಾವಕಾಶವಾಯಿತು.

೪೩. ಆಗ ಕೇವಲ ಮುಮೂರ್ಷುಗಳಾದ ವೃಕ್ಷಲತಾದಿಗಳೂ, ಕ್ರಿಮಿಕೀಟಾದಿ ಗಳೂ ಹುಟ್ಟಿದುವು. ಅಂದಿನಿಂದಲೂ ಆ ಕಲ್ಪದಲ್ಲಿ ಸ್ತ್ರಿ ಪುರುಷರ ಮಿಥುನಗಳಿಂದ ಪ್ರಜೋತ್ಪತ್ತಿಯು ಪ್ರಾರಂಭವಾಯಿತು.

೪೪. ಬ್ರಹ್ಮದೇವನು ಆ ಪ್ರಜೆಗಳಿಗೋಸ್ಕರ ಮನಸ್ಸಿನಲ್ಲಿ ಸ್ವಲ್ಪಕಾಲಧ್ಯಾನ ಮಾಡಲು ಪ್ರತ್ಯೇಕವೂ, ಶುದ್ಧವೂ ಆದ ರೂಪ, ರಸ, ಸ್ಪರ್ಶ, ಗಂಧ ಮತ್ತು ಶಬ್ದ ಗಳೆಂಬ ಪಂಚ ವಿಷಯಗಳು ಉತ್ಪನ್ನವಾದುವು.

ಇತ್ಯೇವಂ ಮನಸಾ ಪೂರ್ವಂ ಪ್ರಾಕ್ ಸೃಷ್ಟಿರ್ಯಾ ಪ್ರಜಾಪತೇಃ ।
ತಸ್ಯಾನ್ವವಾಯೇ ಸಂಭೂತಾ ಯೈರಿದಂ ಪೂರಿತಂ ಜಗತ್ ॥ ೪೫ ॥

ಸರಿತ್ಸರಃ ಸಮುದ್ರಾಶ್ಚ ಸೇವಂತೇ ಪರ್ವತಾನಪಿ ।
ತದಾ ನಾತ್ಯಂಬುಶೀತೋಷ್ಣಾ ಯುಗೇ ತಸ್ಮಿನ್ ಚರಂತಿ ವೈ ॥ ೪೬ ॥

ಪೃಥ್ವೀ ರಸೋದ್ಭವಂ ನಾಮ ಆಹಾರಂ ಹ್ಯಾಹರಂತಿ ವೈ ।
ತಾಃ ಪ್ರಜಾಃ ಕಾಮಚಾರಿಣ್ಯೋ ಮಾನಸೀಂ ಸಿದ್ಧಿಮಾಸ್ಥಿತಾಃ ॥ ೪೭ ॥

ಧರ್ಮಾಧರ್ಮೌ ನ ತಾಸ್ವಾಸ್ತಾಂ ನಿರ್ವಿಶೇಷಾಃ ಪ್ರಜಾಸ್ತುತಾಃ ।
ತುಲ್ಯಮಾಯುಃ ಸುಖಂರೂಪಂ ತಾಸಾಂ ತಸ್ಮಿನ್ ಕೃತೇ ಯುಗೇ ॥ ೪೮ ॥

---

೪೫ ಹೀಗೆ ಬ್ರಹ್ಮದೇವನು ಪೂರ್ವದಲ್ಲಿ ಮನಸ್ಸಿನಿಂದ ಯಾವ ಸೃಷ್ಟಿಯನ್ನು ಮಾಡಿದನೋ ಆ ವಂಶದಲ್ಲಿ ಉತ್ಪನ್ನರಾದವರಿಂದ ಈ ಜಗತ್ತೆಲ್ಲವೂ ಪೂರ್ಣವಾದುವು.

೪೬. ಅತ್ಯಂತ ಶೀತೋಷ್ಣವೂ, ಅತಿಜಲವೂ ರಹಿತವಾದ ಆ ಯುಗದಲ್ಲಿ ಸೃಷ್ಟವಾದ ಪ್ರಾಣಿಗಳು, ನದಿ, ಸರಸ್ಸು, ಸಮುದ್ರ ಮತ್ತು ಪರ್ವತ ಇವುಗಳನ್ನಾಶ್ರಯಿಸಿ ಜೀವಿಸುತ್ತಿದ್ದವು.

೪೭. ಆಗ ಭೂಮಂಡಲವು ಸಕಲ ರಸಗಳಿಂದಲೂ ಪೂರ್ಣವಾಗಿತ್ತು. ಇದರಿಂದ ಪ್ರಜೆಗಳು ತಮ್ಮ ಆಹಾರಗಳನ್ನು ಸುಲಭವಾಗಿ ಪಡೆಯುತ್ತಿದ್ದರು. ಆದುದರಿಂದ ಸ್ವೇಚ್ಛಾಚಾರಿಗಳಾದ ಪ್ರಜೆಗಳು ತಮ್ಮ ತಮ್ಮ ಮನಸ್ಸಿದ್ಧಿಯನ್ನು ಹೊಂದಿದರು.

೪೮ ಆ ಕೃತಯುಗದಲ್ಲಿದ್ದ ಪ್ರಜೆಗಳು ಯೋಗ್ಯರಾದಕಾರಣ ಅಧಿಕವಾದ ದೋಷಶೂನ್ಯರಾಗಿ ಧರ್ಮದಲ್ಲಿಯೇ ಆಸಕ್ತರಾಗಿದ್ದರು. ಅಧರ್ಮವಿಲ್ಲದಕಾರಣ ಪ್ರಜೆಗಳು ಪೂರ್ಣವಾದ ಆಯಸ್ಸು, ರೂಪ, ಸುಖ ಇವುಗಳುಳ್ಳವರಾಗಿ ಜೀವಿಸುತ್ತಿದ್ದರು.

ಧರ್ಮಾಧರ್ಮೌ ನ ತಾಸ್ವಾಸ್ತಾಂ ಕಲ್ಪಾದೌತು ಕೃತೇ ಯುಗೇ ।
ಸ್ವೇನಸ್ವೇನಾಧಿಕಾರೇಣ ಜಜ್ಞಿರೇ ತೇ ಕೃತೇ ಯುಗೇ ॥ ೪೯ ॥

ಚತ್ವಾರಿತು ಸಹಸ್ರಾಣಿ ವರ್ಷಾಣಾಂ ದಿವ್ಯಸಂಖ್ಯಯಾ ।
ಆದ್ಯಂ ಕೃತಯುಗಂ ಪ್ರಾಹುಃ ಸಂಧ್ಯಾನಾಂತು ಚತುಃಶತಂ ॥ ೫೦ ॥

ತತಃ ಸಹಸ್ರಶಸ್ತಾಸು ಪ್ರಜಾಸು ಪ್ರಥಿತಾಸ್ವಪಿ ।
ನ ತಾಸಾಂ ಪ್ರತಿಘಾತೋಽಸ್ತಿ ನ ದ್ವಂದ್ವಾನ್ನಾಪಿ ಚ ಕ್ರಮಃ ॥ ೫೧ ॥

ಪರ್ವತೋದಧಿಸೇವಿನ್ಯೋ ಹ್ಯನಿಕೇತಾಶ್ರಯಾಸ್ತು ತಾಃ ।
ವಿಶೋಕಾಃ ಸತ್ವಬಹುಲಾಃ ಏಕಾಂತಸುಖಿತಪ್ರಜಾಃ ॥ ೫೨ ॥

ತಾ ವೈ ನಿಕಾಮ ಚಾರಿಣ್ಯೋ ನಿತ್ಯಂ ಮುದಿತಮಾನಸಾಃ ।
ಪಶವಃ ಪಕ್ಷಿಣಶ್ಚೈವ ನ ತದಾಸರ್ ಸರೀಸೃಪಾಃ ॥ ೫೩ ॥

---

೪೯. ಕಲ್ಪಾದಿಯಾದ ಕೃತಯುಗದಲ್ಲಿ ಪ್ರಜೆಗಳು ಧರ್ಮವನ್ನೇ ಆಚರಿಸುತ್ತಿದ್ದರು. ಅಧರ್ಮಗಳನ್ನು ಮಾಡುತ್ತಿರಲಿಲ್ಲ. ಇದರಿಂದ ಕೃತಯುಗದಲ್ಲಿ ಪ್ರಜೆಗಳು ತಮ್ಮ ತಮ್ಮ ಅಧಿಕಾರಗಳೊಂದಿಗೆ (ಅಧಿಕಾರಸಹಿತರಾಗಿ) ಉತ್ಪನ್ನರಾಗುವರು

೫೦. ಮೊದಲನೆಯ ಕೃತಯುಗದ ಕಾಲವು ದೇವಮಾನದಲ್ಲಿ ನಾಲ್ಕು ಸಹಸ್ರವರ್ಷಗಳೂ, ಅದರ ಸಂಧಿಕಾಲವು ನಾನ್ನೂರು ವರ್ಷಗಳೂ, ಆಗಿರುತ್ತವೆಯೆಂದು ಜ್ಞಾನಿಗಳು ಹೇಳುವರು.

೫೧. ಆಗ ಸಾವಿರಾರು ಪ್ರಜೆಗಳು ಬಹಳವಾಗಿ ಪ್ರಖ್ಯಾತರಾಗಿದ್ದುದರಿಂದ ಅವರಿಗೆ ಯಾವ ವಿಧವಾದ ತೊಂದರೆಯೂ, ಪರಸ್ಪರದ್ವೇಷಾಸೂಯೆಗಳೂ, ಕ್ರಮಗಳೂ ಸಹ ಸ್ವಲ್ಪವೂ ಇರಲಿಲ್ಲ.

೫೨. ಸತ್ವಗುಣಪ್ರಚುರವಾದ ಆ ಕೃತಯುಗದಲ್ಲಿ ಪ್ರಜೆಗಳು ಶೋಕರಹಿತರೂ, ಅತ್ಯಂತ ಸುಖಿಗಳೂ, ಕೃಪ್ತವಾದ ಗೃಹರಹಿತರೂ, ಪರ್ವತೋದಧಿಸೇವಿಗಳೂ, ಮಾನ್ಯರೂ ಆಗಿದ್ದರು.

೫೩. ಆ ಕಾಲದಲ್ಲಿ ಪ್ರಜೆಗಳು ಸ್ವೇಚ್ಛಾಚಾರಿಗಳೂ, ನಿತ್ಯಸುಖಿಗಳೂ, ಆಗಿದ್ದರು. ಆಗ ಪಾಪಜನ್ಮಿಗಳಾದ ಪಶು, ಪಕ್ಷಿ, ಸರ್ಪ, ಇವೇ ಮೊದಲಾದ ದುಷ್ಟ ಜಂತುಗಳು ವಿಶೇಷವಾಗಿರಲಿಲ್ಲ.

ನೋದ್ಭಿಜ್ಜಾ ನಾರಕಾಶ್ಚೈವ ತೇ ಹ್ಯಧರ್ಮ ಪ್ರಸೂತಯಃ ।
ನ ಮೂಲಫಲಪುಷ್ಪಂ ಚ ನಾರ್ತವಂ ಹ್ಯೃತವೋ ನ ಚ ॥ ೫೪ ॥

ಸರ್ವಕಾಮಸುಖಃ ಕಾಲೋ ನಾತ್ಯರ್ಥಂ ಹ್ಯುಷ್ಣಶೀತತಾ ।
ಮನೋಭಿಲಷಿತಾಃ ಕಾಮಾಸ್ತಾಸಾಂ ಸರ್ವತ್ರ ಸರ್ವದಾ ॥ ೫೫ ॥

ಉತ್ತಿಷ್ಠಂತಿ ಪೃಥಿವ್ಯಾಂ ವೈ ತಾಭಿರ್ಧ್ಯಾತಾ ರಸೋತ್ಥಿತಾಃ ।
ಬಲವರ್ಣಕರೀ ತಾಸಾಂ ಸಿದ್ಧಿಃ ಸಾ ರೋಗನಾಶಿನೀ ॥ ೫೬ ॥

ಅಸಂಸ್ಕಾರ್ಯೈಃ ಶರೀರೈಶ್ಚ ಪ್ರಜಾಸ್ತಾಃ ಸ್ಥಿರಯೌವನಾಃ ।
ತಾಸಾಂ ವಿಶುದ್ಧಾತ್ಸಂಕಲ್ಪಾಜ್ಜಾಯಂತೇ ಮಿಥುನಾಃ ಪ್ರಜಾಃ ॥ ೫೭ ॥

---

೫೪. ಆ ಕೃತಯುಗದಲ್ಲಿ ಉದ್ಭಿಜ್ಜಗಳಾದ ಲತಾದಿಗಳೂ, ಅಧಾರ್ಮಿಕರೂ ಸಹ ಇರಲಿಲ್ಲ. ಏಕೆಂದರೆ ಅವರು ಅಧರ್ಮದಿಂದ ಸೃಜ್ಯರಾಗ.ವರು ಧರ್ಮ ಪೂರ್ಣವಾದ ಕೃತಯುಗದಲ್ಲಿ ಇವುಗಳ ಸಂಬಂಧವೇ ಇಲ್ಲ. ಆಯಾ ಋತುಗಳಲ್ಲಿ ಮಾತ್ರ ಬಿಡುವ ಕಂದಮೂಲಗಳು, ಫಲಪುಷ್ಪಗಳು ಇರಲಿಲ್ಲ. ಅಂದರೆ ಸರ್ವಕಾಲ ದಲ್ಲಿಯೂ ಸಕಲವೂ ಇದ್ದವು.

೫೫. ಆ ಯುಗದಕಾಲವು ಸಕಲೇಷ್ಟಾರ್ಥಪ್ರದವೂ, ಸುಖಮಯವೂ ಆಗಿತ್ತು. ಉಷ್ಣವಾಗಲೀ, ಶೀತವಾಗಲೀ ಅತ್ಯಧಿಕವಾಗಿರಲಿಲ್ಲ. ಸಮಶೀತೋಷ್ಣ ವಾಗಿತ್ತು. ಸರ್ವಕಾಲದಲ್ಲಿಯೂ ಸರ್ವತ್ರವೂ ಚಿಂತಿತವಾದ ಸರ್ವಾರ್ಥಗಳೂ ಸಿದ್ಧಿಸುತ್ತಿದ್ದುವು.

೫೬. ಕೃತಯುಗದ ಪ್ರಜೆಗಳು ಇಚ್ಛಿಸಿದ ಷಡ್ರಸಗಳು ಪೃಥಿವಿಯಲ್ಲಿ ಉದ್ಭವಿಸಿ ಶಕ್ತಿ, ಕಾಂತಿ ಮತ್ತು ಸಿದ್ಧಿ ಇವೆ ಮೊದಲಾದುವುಗಳನ್ನು ಕೊಡುತ್ತಿದ್ದುವು. ಮತ್ತು ಸಕಲರೋಗಗಳನ್ನೂ ನಾಶಮಾಡುತ್ತಿದ್ದುವು.

೫೭. ಆ ಕೃತಯುಗದ ಪ್ರಜೆಗಳು ಆಭರಣಾದಿಗಳಿಲ್ಲದಿದ್ದರೂ, ಸ್ವತಃಸುಂದ ರರೂ, ನಿತ್ಯಯೌವನವಂತರೂ, ಸತ್ಯಸಂಕಲ್ಪರೂ, ಉತ್ತಮವಾದ ಸಂತಾನವುಳ್ಳವರೂ ಆಗಿರುವರು. ಅವರು ಶುದ್ಧಸಂಕಲ್ಪರಾದಕಾರಣ ಸಂತಾನವು ಶುದ್ಧವಾಗಿಯೂ ಇದ್ದಿತು.

ಸಮಂ ಜನ್ಮ ಚ ರೂಪಂ ಚ ಮ್ರಿಯಂತೇ ಚೈವ ತಾಃ ಸಮಂ ।
ತದಾ ಸತ್ಯಮಲೋಭಶ್ಚ ಕ್ಷಮಾ ತುಷ್ಟಿಃ ಸುಖಂ ದಮಃ ॥ ೫೮ ॥

ನಿರ್ವಿಶೇಷಾಃ ಕೃತಾಃ ಸರ್ವಾಃ ರೂಪಾಯುಃ ಶೀಲ ಚೇಷ್ಟಿತೈಃ ।
ಅಬುದ್ಧಿಪೂರ್ವಕಂ ವೃತ್ತಂ ಪ್ರಜಾನಾಂ ಜಾಯತೇ ಸ್ವಯಂ ॥ ೫೯ ॥

ಅಪ್ರವೃತ್ತಿಃ ಕೃತಯುಗೇ ಕರ್ಮಣೋಃ ಶುಭಪಾಪಯೋಃ ।
ವರ್ಣಾಶ್ರಮ ವ್ಯವಸ್ಥಾಶ್ಚ ನ ತದಾಽಸನ್ ನ ಸಂಕರಃ ॥ ೬೦ ॥

ಅನಿಚ್ಛಾದ್ವೇಷಯುಕ್ತಾಸ್ತೇ ವರ್ತಯಂತಿ ಪರಸ್ಪರಂ ।
ತುಲ್ಯರೂಪಾಯುಷಃ ಸರ್ವಾ ಅಧಮೋತ್ತಮವರ್ಜಿತಾಃ ॥ ೬೧ ॥

ಸುಖಪ್ರಾಯಾ ಹ್ಯಶೋಕಾಶ್ಚ ಉತ್ಪದ್ಯಂತೇ ಕೃತೇ ಯುಗೇ ।
ನಿತ್ಯಪ್ರಹೃಷ್ಟ ಮನಸೋ ಮಹಾಸತ್ವಾ ಮಹಾಬಲಾಃ ॥ ೬೨ ॥

---

೫೮. ಆ ಮಕ್ಕಳು ಜನ್ಮ, ರೂಪ, ಆಯುಸ್ಸು, ಶೌರ್ಯ ಇವೇ ಮೊದಲಾದ ತಮ್ಮ ಮಾತಾಪಿತೃಗಳಲ್ಲಿದ್ದ ಆ ಸದ್ಗುಣಗಳನ್ನೇ ಪಡೆಯುತ್ತಿದ್ದರು. ಆಗ ಸತ್ಯ, ಧರ್ಮ, ಅಲೋಭ, ಕ್ಷಮೆ, ಸಂತೋಷ, ಸುಖ ಮತ್ತು ಶಾಂತಿ ಇವು ಮೂರ್ತೀಭವಿಸಿ ಸಂಪೂರ್ಣವಾಗಿದ್ದವು.

೫೯. ಆ ಯುಗದಲ್ಲಿ ಸರ್ವಪ್ರಜೆಗಳೂ, ರೂಪ, ಆಯುಸ್ಸು, ಶೀಲ, ನಡೆನುಡಿಗಳು ಇವುಗಳ ವಿಷಯದಲ್ಲಿ ಯಾವ ವಿಧವಾದ ಭೇದಭಾವವೂ ಇಲ್ಲದೇಯೇ ಸಮರಾಗಿಯೇ ಇದ್ದರು. ಆಗ ಪ್ರಜೆಗಳ ನಡೆನುಡಿಗಳು ಬುದ್ಧಿಪೂರ್ವಕವಾಗದೇ ಆಕಸ್ಮಿಕಗಳಾಗಿದ್ದುವು.

೬೦. ಆ ಕೃತಯುಗದ ಪ್ರಜೆಗಳು ಶುಭಾಶುಭಕಾರ್ಯಗಳಲ್ಲಿ ಬುದ್ಧಿಪೂರ್ವಕವಾಗಿ ಪ್ರವೃತ್ತಿಯನ್ನು ಮಾಡುತ್ತಿರಲಿಲ್ಲ. ವರ್ಣಾಶ್ರಮಗಳ ವ್ಯವಸ್ಥೆಯೂ ಅವುಗಳ ಸಾಂಕರ್ಯವೂ ಕೂಡ ಕೃತಯುಗದಲ್ಲಿ ಇರಲಿಲ್ಲ

೬೧-೬೨. ಕೃತಯುಗದ ಪ್ರಜೆಗಳು ಇಚ್ಛಾದ್ವೇಷರಹಿತರೂ, ಸಮಾನವಾದ ರೂಪ ಮತ್ತು ಇವುಗಳುಳ್ಳವರೂ, ನ್ಯೂನಾಧಿಕವರ್ಜಿತರೂ, ಸುಖಪ್ರಾಯರೂ, ದುಃಖರಹಿತರೂ, ಮಹಾಸತ್ವಬಲಯುತರೂ, ಪರಸ್ಪರಸಹಾಯಕರೂ ಆಗಿರುವರು.

ಲಾಭಾಲಾಭೌ ನತಾಸ್ವಾಸ್ತಾಂ ಮಿತ್ರಾಮಿತ್ರೇ ಪ್ರಿಯಾಪ್ರಿಯೇ ।
ಮನಸಾ ವಿಷಯಾಸ್ತ್ವಾಸಾಂ ನಿರೀಹಾಂಣಾಂ ಪ್ರವರ್ತತೇ ॥ ೬೩ ॥

ಧ್ಯಾನಂ ಪರಂ ಕೃತಯುಗೇ ತ್ರೇತಾಯಾಂ ಜ್ಞಾನಮುಚ್ಯತೇ ।
ಪ್ರವೃತಂ ದ್ವಾಪರೇ ಯಜ್ಞಂ ದಾನಂ ಕಲಿಯುಗೇ ವರಂ ॥ ೬೪ ॥

ಸತ್ವಂ ಕೃತಂ ರಜಸ್ತ್ರೇತಾ ದ್ವಾಪರಂತು ರಜಸ್ತಮಃ ।
ಕಲೌ ತಮಸ್ತು ವಿಜ್ಞೇಯಂ ಯುಗವೃತ್ತವಶೇನ ತು ॥ ೬೫ ॥

ಕಾಲಃ ಕೃತೇಯುಗೇ ತ್ವೇಷ ತಸ್ಯ ಸಂಖ್ಯಾಂನ್ನಿಬೋಧತಾ ।
ಚತ್ವಾರಿ ತು ಸಹಸ್ರಾಣಿ ವರ್ಷಾಣಾಂ ತತ್ಕೃತಂ ಯುಗಂ ॥ ೬೬ ॥

ಸಂಧ್ಯಾಂಶೌ ತಸ್ಯ ದಿವ್ಯಾನಿ ಶತಾನ್ಯಷ್ಟೌ ಚ ಸಂಖ್ಯಯಾ ।
ತದಾ ತಾಸಾಂ ಬಭೂವಾಯುರ್ನ್ನಚಕ್ಲೇಶವಿಪತ್ತಯಃ ॥ ೬೭ ॥

---

೬೩. ಆ ಪ್ರಜೆಗಳಿಗೆ ಲಾಭಾಲಾಭಗಳೂ, ಮಿತ್ರಾಮಿತ್ರರೂ, ಪ್ರಿಯಾಪ್ರಿಯಗಳೂ ಇರಲಿಲ್ಲ. ಅವರು ಆಶಾರಹಿತರೂ, ಇಚ್ಛಾಮಾತ್ರದಿಂದ ಸಕಲವಿಷಯಗಳನ್ನೂ ಪಡೆಯುವವರೂ ಮತ್ತು ಪರಸ್ಪರದ್ವೇಷಶೂನ್ಯರೂ, ಅನುಗ್ರಹ[illegible]ತರೂ ಆಗಿದ್ದರು.

೬೪. ಕೃತಯುಗದಲ್ಲಿ ಯೋಗಾಭ್ಯಾಸವೂ (ಧ್ಯಾನವೂ), ತ್ರೇತಾಯುಗದಲ್ಲಿ ಜ್ಞಾನವೂ, ದ್ವಾಪರಯುಗದಲ್ಲಿ ಯಜ್ಞವೂ, ಕಲಿಯುಗದಲ್ಲಿ ದಾನವೂ ಇವುಗಳು ಸಕಲಫಲದಾಯಕವೂ, ಉತ್ತಮವೂ ಆಗಿರುತ್ತವೆ.

೬೫. ಆಯಾ ಯುಗಗಳ ಕರ್ಮಾನುಸಾರವಾಗಿ ಕೃತಯುಗದಲ್ಲಿ ಸತ್ವಗುಣವೂ, ತ್ರೇತೆಯಲ್ಲಿ ರಜೋಗುಣವೂ, ದ್ವಾಪರದಲ್ಲಿ ರಜಸ್ತಮೋಗುಣಗಳೂ, ಕಲಿಯಲ್ಲಿ ತಮೋಗುಣವೂ ಪ್ರಧಾನಗಳಾಗಿರುತ್ತವೆ.

೬೬. ಈಗ ಕೃತಯುಗದ ಕಾಲ ಮತ್ತು ಸಂಖ್ಯೆ ಇವುಗಳನ್ನು ತಿಳಿಸುವೆನು ಕೇಳಿ. ಕೃತಯುಗದ ಕಾಲವು ನಾಲ್ಕುಸಹಸ್ರ ವರ್ಷಗಳೆಂದು ತಿಳಿಯಬೇಕು.

೬೭. ಕೃತಯುಗದ ಸಂಧ್ಯಾಂಶಕಾಲವು ಎಂಟುನೂರು ವರ್ಷಗಳು ದೇವಮಾನದಲ್ಲಾಗಿವೆ. ಅಲ್ಲಿಯವರೆಗೂ ಆ ಪ್ರಜೆಗಳಿಗೆ ಆಯಸ್ಸು ಇರುವುದು. ಕ್ಲೇಶವೂ ಮತ್ತು ವಿಪತ್ತೂ ಅವರಿಗೆ ಇಲ್ಲ

ತತಃ ಕೃತಯುಗೇ ತಸ್ಮಿನ್ ಸಂಧ್ಯಾಂಶೇ ಹಿ ಗತೇತು ವೈ ।
ಪಾದಾವಶಿಷ್ಟೋ ಭವತಿ ಯುಗಧರ್ಮಸ್ತು ಸರ್ವಶಃ ॥ ೬೮ ॥

ಸಂಧ್ಯಾಯಾಮಪ್ಯತೀತಾಯಾಮಂತಃಕಾಲೇ ಯುಗಸ್ಯ ತು ।
ಪಾದತಶ್ಚಾವತಿಷ್ಠೇತ್ತು ಸಂಧ್ಯಾಧರ್ಮೋ ಯುಗಸ್ಯ ತು ।
ಏವಂ ಕೃತೇತು ನಿಃಶೇಷೇ ಸಿದ್ಧಿಸ್ತ್ವಂತರ್ದಧೇ ತದಾ ॥ ೬೯ ॥

ತಸ್ಯಾಂ ಚ ಸಿದ್ಧೌ ಭ್ರಷ್ಟಾಯಾಂ ಮಾನಸ್ಯಾಮಭವತ್ತತಃ ।
ಸಿದ್ಧಿರನ್ಯಾ ಯುಗೇ ತಸ್ಮಿಂ ತ್ರೇತಾಯಾಮಂತರೇ ಕೃತಾಃ ॥ ೭೦ ॥

ಸರ್ಗಾದೌ ಯಾ ಮಯಾಷ್ಟೌ ತು ಮಾನಸ್ಯೋ ವೈ ಪ್ರಕೀರ್ತಿತಾಃ ।
ಅಷ್ಟೌ ತಾಃ ಕ್ರಮಯೋಗೇನ ಸಿದ್ಧಯೋ ಯಾಂತಿ ಸಂಕ್ಷಯಂ ॥ ೭೧ ॥

---

೬೮. ಅನಂತರ ಕೃತಯುಗವು ಕಳೆಯಲಾಗಿ ಸಂಧಿಕಾಲದಲ್ಲಿಯೂ ಕೂಡ ಒಂದು ಭಾಗದಷ್ಟು ಮಾತ್ರ ಧರ್ಮವು ಉಳಿಯುವುದು. ಮಿಕ್ಕ ಮೂರುಪಾದದಷ್ಟು ಧರ್ಮಗಳು ಸಂಪೂರ್ಣವಾಗಿ ನಷ್ಟವಾಗುವುವು.

೬೯. ಆ ಸಂಧಿಯು ಕಳೆದು ಆ ಯುಗವು ಸಂಪೂರ್ಣವಾಗಿ ಹೋಗಲಾಗಿ ಸಂಧ್ಯಾಧರ್ಮವು ಒಂದುಭಾಗ ಮಾತ್ರವೇ ಉಳಿಯುವುದು. ಹೀಗೆ ಕೃತಯುಗವು ಪೂರ್ತಿಯಾಗಿ ನಿಶ್ಶೇಷವಾಗಲು ಸಿದ್ಧಿಗಳೆಲ್ಲವೂ ಮಾಯವಾಗುವುವು.

೭೦. ತ್ರೇತಾಯುಗದಲ್ಲಿ ಆ ಸಿದ್ಧಿಯು ನಷ್ಟವಾಗಲು ಆ ಕೃತಯುಗದ ಸಂಸ್ಕಾರವು ಮನಸ್ಸಿನಲ್ಲಿ ಸೂಕ್ಷ್ಮವಾಗಿರುವುದು. ಆಗ ತ್ರೇತಾಯುಗವು ಬರಲು ಅದರಿಂದ (ಆ ಸಂಸ್ಕಾರದಿಂದ) ಬೇರೆ ಸಿದ್ಧಿಯು ಉತ್ಪನ್ನವಾಗುವುದು.

೭೧. ಕೃತಯುಗದ ಸೃಷ್ಟಿಯ ಆದಿಯಲ್ಲಿ ನಾನು ನಿಮಗಾಗಿ ಯಾವ ಅಷ್ಟ ವಿಧಗಳಾದ ಮಾನಸಸಿದ್ಧಿಗಳನ್ನು ತಿಳಿಸಿದ್ದೆನೋ ಆ ಸಿದ್ಧಿಗಳೆಲ್ಲವೂ ತ್ರೇತಾಯುಗದಲ್ಲಿ ಕ್ರಮವಾಗಿ ನಾಶವಾಗುವುವು.

ಕಲ್ಪಾದೌ ಮಾನಸೀ ಹ್ಯೇಷಾ ಸಿದ್ಧಿರ್ಭವತಿ ಸಾ ಕೃತೇ ।
ಮನ್ವಂತರೇಷು ಸರ್ವೇಷು ಚತುರ್ಯುಗವಿಭಾಗಶಃ ।
ವರ್ಣಾಶ್ರಮಾಚಾರಕೃತಃ ಕರ್ಮಸಿದ್ಧೋದ್ಭವಃ ಸ್ಮೃತಃ ॥ ೭೨ ॥

ಸಂಧ್ಯಾ ಕೃತಸ್ಯ ಪಾದೇನ ಸಂಧ್ಯಾ ಪಾದೇನ ಚಾಂಶತಃ ।
ಕೃತಸಂಧ್ಯಾಂಶಕಾಹ್ಯೇತೇ ತ್ರೀಂಸ್ತ್ರೀನ್ ಪಾದಾನ್ ಪರಸ್ಪರಾನ್ ।
ಹಸಂತಿ ಯುಗಧರ್ಮೈಸ್ತೇ ತಪಃ ಶ್ರುತಬಲಾಯುಷೈಃ ॥ ೭೩ ॥

ತತಃ ಕೃತಾಂಶೇ ಕ್ಷೀಣೇ ತು ಭಬೂವ ತದನಂತರಂ ।
ತ್ರೇತಾಯಾಂ ಯುಗಮನ್ಯಂ ತು ಕೃತಾಂಶಮೃಷಿಸತ್ತಮಾಃ ॥ ೭೪ ॥

ತಸ್ಮಿನ್ ಕ್ಷೀಣೇ ಕೃತಾಂಶೇ ತು ತಚ್ಛಿಷ್ಟಾಸು ಪ್ರಜಾಸ್ವಿಹ ।
ಕಲ್ಪಾದೌ ಸಂಪ್ರವೃತ್ತಾಯಾಸ್ತ್ರೇತಾಯಾಃ ಪ್ರಮುಖೇ ತದಾ ॥ ೭೫ ॥

---

೭೨. ಕಲ್ಪಾದಿಯಲ್ಲಿ ಯಾವ ಮಾನಸಿಕಸಿದ್ಧಿಯು ಇರುತ್ತದೆಯೋ ಅದೇ ಕೃತಯುಗದಲ್ಲಿಯೂ ಸಹ ಇರುತ್ತಿದ್ದಿತು. ಚತುರ್ದಶಮನ್ವಂತರಗಳಲ್ಲಿಯೂ ನಾಲ್ಕು ಯುಗಗಳ ವಿಭಾಗಾನುಸಾರವಾಗಿ ವರ್ಣಾಶ್ರಮಧರ್ಮಗಳೂ, ಆಚಾರಗಳೂ ಮತ್ತು ಕರ್ಮಗಳು ಇವುಗಳಿಂದ ಜನ್ಯವಾದ ಸಿದ್ಧಿಯೇ ಸ್ಥಿರವಾಗಿ ನಿಲ್ಲುವುದು.

೭೩. ಕೃತಯುಗದ ಪ್ರಜೆಗಳು ಯುಗಾಂಶ, ಸಂಧ್ಯಂಶ, ಸಂಧ್ಯಾಂಶ ಇವುಗಳ ಮೂರುಪಾದಗಳಿಂದ ಜನ್ಯವಾದ ತಪಸ್ಸು, ಜ್ಞಾನ, ಶಕ್ತಿ, ಆಯಸ್ಸು ಇವುಗಳಿಂದ ತ್ರೇತಾಯುಗದ ಪ್ರಜೆಗಳನ್ನು ಹಾಸ್ಯಮಾಡುವರು.

೭೪. ಎಲೈ ಮಹರ್ಷಿಗಳಿರಾ, ಕೃತಯುಗದ ಅಂಶವು ಕ್ಷೀಣವಾಗಲು ತ್ರೇತಾಯುಗದಲ್ಲಿ ಕೃತಯುಗದ ಅಂಶಕ್ಕಿಂತಲೂ ಭಿನ್ನವಾದ ಅಂಶವು ಉತ್ಪನ್ನವಾಗುವುದು.

೭೫. ತ್ರೇತಾಯುಗದ ಆದಿಯಲ್ಲಿ ಕೃತಯುಗದ ಅಂಶವು ನಷ್ಟವಾಗಲು ಕಾಲವಶದಿಂದ ಆ ಸಿದ್ಧಿಯು ಆ ಪ್ರಜೆಗಳಲ್ಲಿ ನಷ್ಟವಾಗುವುದು. ತ್ರೇತಾಯುಗವು ಆರಂಭವಾಗಲು ಆದಿಯಲ್ಲಿ ಬೇರೊಂದು ಸಿದ್ಧಿಯು ಉಂಟಾಗುವುದು.

ಪ್ರಣಶ್ಯತಿ ತದಾ ಸಿದ್ಧಿಃ ಕಾಲಯೋಗೇನ ನಾನ್ಯಥಾ ।
ತಸ್ಯಾಂ ಸಿದ್ಧೌ ಪ್ರಣಷ್ಟಾಯಾಮನ್ಯಾ ಸಿದ್ಧಿರವರ್ತತ ॥ ೭೬ ॥

ಅಪಾಂ ಸೌಕ್ಷ್ಮ್ಯೇ ಪ್ರತಿಗತೇ ತದಾ ಮೇಘಾತ್ಮನಾ ತು ತಾ ।
ಮೇಘೇಭ್ಯಸ್ತನಯಿತ್ನುಭ್ಯಃ ಪ್ರವೃತ್ತಂ ವೃಷ್ಟಿಸರ್ಜನಂ ॥ ೭೭ ॥

ಸಕೃದೇವ ತಯಾ ವೃಷ್ಟ್ಯಾ ಸಂಯುಕ್ತೇ ಪೃಥಿವೀ ತಲೇ ।
ಪ್ರಾದುರಾಸಂಸ್ತದಾ ತಾಸಾಂ ವೃಕ್ಷಾಸ್ತು ಗೃಹಸಂಸ್ಥಿತಾಃ ॥ ೭೮ ॥

ಸರ್ವಪ್ರತ್ಯುಪಭೋಗಸ್ತು ತಾಸಾಂ ತೇಭ್ಯಃ ಪ್ರಜಾಯತೇ ।
ವರ್ತಯಂತಿ ಹಿತೇಭ್ಯಸ್ತಾ ಸ್ತ್ರೇತಾಯುಗಮುಖೇ ಪ್ರಜಾಃ ॥ ೭೯ ॥

ತತಃ ಕಾಲೇನ ಮಹತಾ ತಾಸಾಮೇವ ವಿಪರ್ಯಯಾತ್ ।
ರಾಗ ಲೋಭಾತ್ಮಕೋ ಭಾವಸ್ತದಾ ಹ್ಯಾಕಸ್ಮಿಕೋಭವತ್ ॥ ೮೦ ॥

---

೭೬. ಆ ತ್ರೇತಾಯುಗದಲ್ಲಿ ಕಾಲವಶದಿಂದ ಆ ಸಿದ್ಧಿಯು ನಷ್ಟವಾಯಿತು. ಹೀಗೆ ಆ ಸಿದ್ಧಿಯು ನಷ್ಟವಾಗಲು ಮತ್ತೊಂದು ಸಿದ್ಧಿಯು ಉಂಟಾಯಿತು.

೭೭. ಆ ಜಲದ ಸೂಕ್ಷ್ಮಾಂಶವು ಹಬೆಯಾಗಿ ಮೇಲಕ್ಕೆ ಆಕಾಶದಲ್ಲಿ ಹರಡಲು ಅದು ಮೇಘರೂಪವಾಗಿ ಪರಿಣಮಿಸಿತು. ಆಗ ಗುಡುಗು ಮಿಂಚುಗಳಿಂದ ಕೂಡಿದ ಆ ಮೇಘಗಳಿಂದ ವೃಷ್ಟಿಯು ಪ್ರಾರಂಭವಾಯಿತು.

೭೮. ಆ ಮೇಘಗಳು ಪೃಥಿವಿಯಲ್ಲಿ ಒಂದು ಸಲ ವೃಷ್ಟಿಯನ್ನು ಸುರಿಸಲು ಅದರಿಂದ ಆ ಪ್ರಜೆಗಳ ಗೃಹಾಂಗಣಗಳಲ್ಲಿ ಆ ಕಲ್ಪವೃಕ್ಷಗಳು ಪುನಃ ಉದ್ಭವಿಸುವುವು.

೭೯. ಪ್ರಜೆಗಳಿಗೆ ಸಮಸ್ತ ಸೌಖ್ಯಗಳೂ ಆ ವೃಕ್ಷಗಳಿಂದ ಉಂಟಾದುವು. ಹೀಗೆ ತ್ರೇತಾಯುಗಾರಂಭದಲ್ಲಿ ಪ್ರಜೆಗಳು ಆ ಕಲ್ಪವೃಕ್ಷಗಳಿಂದಲೇ ಸಕಲ ಸಿದ್ಧಿಗಳನ್ನೂ ಪಡೆಯುತ್ತಿದ್ದರು

೮೦. ಅನಂತರ ಹೀಗೆ ಕೆಲವು ಕಾಲವು ಕಳೆಯಲು ಆ ಪ್ರಜೆಗಳ ವರ್ತನೆಯು ಕಾಲವಶದಿಂದ ಬದಲಾಯಿಸಿತು. ಆಗ ರಾಗ, ದ್ವೇಷ, ಲೋಭ, ಕ್ರೋಧಾದಿಗಳಿಂದ ಆಕಸ್ಮಿಕವಾದ ಬೇರೊಂದು ಅಭಿಪ್ರಾಯವು ಪ್ರಜೆಗಳಲ್ಲಿ ಉದ್ಭವಿಸಿತು.

ಯತ್ತದ್ಭವತಿ ನಾರೀಣಾಂ ಜೀವಿತಾಂತೇ ತದಾರ್ತವಂ ।
ತದಾ ತದ್ವೈ ನ ಭವತಿ ಪುನರ್ಯುಗ ಬಲೇನ ತು ॥ ೮೧ ॥

ತಾಸಾಂ ಪುನಃ ಪ್ರವೃತ್ತಂ ತು ಮಾಸೇ ಮಾಸೇ ತದಾರ್ತವಂ ।
ತತಸ್ತೇನೈವ ಯೋಗೇನ ವರ್ತತಾಂ ಮಿಥುನೇ ತದಾ ॥ ೮೨ ॥

ತಾಸಾಂ ತತ್ಕಾಲಭಾವಿತ್ವಾತ್ ಮಾಸಿ ಮಾಸ್ಯುಪಗಚ್ಛತಾಂ ।
ಅಕಾಲೇ ಹ್ಯಾರ್ತವೋತ್ಪತ್ತಿರ್ಗರ್ಭೋತ್ಪತ್ತಿರಜಾಯತ ॥ ೮೩ ॥

ವಿಪರ್ಯಯೇಣ ತಾಸಾಂತು ತೇನ ಕಾಲೇನ ಭಾವಿನಾ ।
ಪ್ರಣಶ್ಯಂತಿ ತತಃ ಸರ್ವೇ ವೃಕ್ಷಾಸ್ತೇ ಗೃಹಸಂಸ್ಥಿತಾಃ ॥ ೮೪ ॥

ತತಸ್ತೇಷು ಪ್ರಣಷ್ಟೇಷು ವಿಭ್ರಾಂತಾ ವ್ಯಾಕುಲೇಂದ್ರಿಯಾಃ ।
ಅಭಿಧ್ಯಾಯಂತಿ ತಾಂಸಿದ್ಧಿಂ ಸತ್ಯಾಭಿಧ್ಯಾಯಿನಸ್ತದಾ ॥ ೮೫ ॥

---

೮೧. ಆ ಕೃತಯುಗದಲ್ಲಿ ಸ್ತ್ರೀಯರ ಪ್ರತಿಮಾಸದಲ್ಲಿಯೂ ಆಗುತ್ತಿದ್ದ ಋತುಮತೀತನವು ಆ ಯುಗದ ಸಾಮರ್ಥ್ಯದಿಂದ ನಿಂತುಹೋಯಿತು. ಅಂದರೆ ಸ್ತ್ರೀಯರು ತಮ್ಮ ಜೀವಮಾನದ ಪ್ರತಿಮಾಸದಲ್ಲಿಯೂ ಋತುಮತಿಯಾಗುತ್ತಿದ್ದರು. ತ್ರೇತಾಯುಗದಲ್ಲಿ ಮಾತ್ರ ಅದು ನಿಂತುಹೋಯಿತು.

೮೨. ತ್ರೇತಾಯುಗದಲ್ಲಿ ಸ್ತ್ರೀಯರಿಗೆ ಪ್ರತಿಮಾಸದಲ್ಲಿಯೂ ಋತುಮತಿಯಾಗುವ ಸ್ವಭಾವವು ಪುನಃ ಉತ್ಪನ್ನವಾಯಿತು. ಅದರಿಂದ ಅವರಿಗೆ ಪುರುಷರ ಸಂಬಂಧೇಚ್ಛೆಯೂ ಉಂಟಾಯಿತು.

೮೩. ಆ ಸ್ತ್ರೀಯರ ನಡೆನುಡಿಗಳಿಂದ ಸಕಾಲದಲ್ಲಾಗುವ ಋತುಮತೀಭಾವವು ತಪ್ಪಿಹೋಗಿ ಅಕಾಲದಲ್ಲಿ ಉಂಟಾಗುತ್ತಿತ್ತು. ಅದರಿಂದ ಕ್ರಮವಾಗಿ ಗರ್ಭೋತ್ಪತ್ತಿಯು ಉಂಟಾಯಿತು.

೮೪. ಆಗ ಆ ಸ್ತ್ರೀಯರ ಋತುವಾಗುವ ಕಾಲವ್ಯತ್ಯಾಸದೋಷದಿಂದ ಅವರ ಮನೆಗಳಲ್ಲಿದ್ದ ಕಲ್ಪವೃಕ್ಷಗಳೆಲ್ಲವೂ ನಷ್ಟವಾಗಿ ತೊಂದರೆಗಳು ಸಂಭವಿಸಿದುವು.

೮೫. ಹೀಗೆ ಆ ಕಲ್ಪವೃಕ್ಷಗಳು ನಷ್ಟವಾಗಲು ಭ್ರಾಂತರೂ, ವ್ಯಾಕುಲೇಂದ್ರಿಯರೂ, ಸತ್ಯಧ್ಯಾನಿಗಳೂ ಆದ ಆ ಪ್ರಜೆಗಳು ತಮ್ಮ ವರ್ತನೆಗಳಿಂದ ಪೂರ್ವದ ಸಿದ್ಧಿಯನ್ನೇ ಧ್ಯಾನಿಸಿದರು.

ಪ್ರಾದುರ್ಬಭೂವುಸ್ತಾಸಾಂ ಚ ವೃಕ್ಷಾಸ್ತೇ ಗೃಹಸಂಸ್ಥಿತಾಃ ।
ವಸ್ತ್ರಾಣಿ ಚ ಪ್ರಸೂಯಂತೇ ಫಲಾನ್ಯಾಭರಣಾನಿ ಚ ॥ ೮೬ ॥

ತೇಷ್ವೇವ ಜಾಯತೇ ತಾಸಾಂ ಗಂಧವರ್ಣರಸಾನ್ವಿತಂ ।
ಅಮಾಕ್ಷಿಕಂ ಮಹಾವೀರ್ಯಂ ಪುಟಕೇ ಪುಟಕೇ ಮಧು ॥ ೮೭ ॥

ತೇನ ತಾ ವರ್ತಯಂತಿಸ್ಮ ಮುಖೇ ತ್ರೇತಾಯುಗಸ್ಯ ಚ ।
ಹೃಷ್ಟತುಷ್ಟಾಸ್ತಯಾ ಸಿದ್ಧ್ಯಾ ಪ್ರಜಾ ವೈ ವಿಗತಜ್ವರಾಃ ॥ ೮೮ ॥

ಪುನಃ ಕಾಲಾಂತರೇಣೈವ ಪುನರ್ಲೋಭಾವೃತಾಸ್ತು ತಾಃ ।
ವೃಕ್ಷಾಂಸ್ತಾನ್ ಪರ್ಯಗೃಹ್ಣಂತ ಮಧು ವಾಮಾಕ್ಷಿಕಂ ಬಲಾತ್ ॥ ೮೯ ॥

ತಾಸಾಂ ತೇನಾಪಚಾರೇಣ ಪುನರ್ಲೋಭಕೃತೇನ ವೈ ।
ಪ್ರಣಷ್ಟಾ ಮಧುನಾ ಸಾರ್ಧಂ ಕಲ್ಪವೃಕ್ಷಾಃ ಕ್ವಚಿತ್ ಕ್ವಚಿತ್ ॥ ೯೦ ॥

---

೮೬. ಹೀಗೆ ಪ್ರಜೆಗಳು ಧ್ಯಾನಿಸಲು ಅವರ ಮನೆಗಳ ಅಂಗಳದಲ್ಲಿದ್ದ ಕಲ್ಪವೃಕ್ಷಗಳು ಪೂರ್ವದಂತೆಯೇ ಉದ್ಭವಿಸಿ ಪ್ರಜೆಗಳು ಬಯಸಿದ ವಸ್ತ್ರ, ಫಲ, ಆಭರಣ ಇವೇ ಮೊದಲಾದ ಸಕಲಸಿದ್ಧಿಗಳನ್ನೂ ಕೊಡುತ್ತಿದ್ದುವು.

೮೭. ಆ ವೃಕ್ಷಗಳ ಪ್ರತಿಯೊಂದು ಎಲೆಗಳಲ್ಲಿಯೂ ಗಂಧ, ವರ್ಣ, ರಸ ಇವುಗಳಿಂದ ಕೂಡಿಯೂ ನಿರ್ಮಕ್ಷಿಕವೂ (ಜೇನುಹುಳುಗಳಿಂದ ಅನಿರ್ಮಿತವೂ) ವೀರ್ಯದಾಯಕವೂ ಆದ ಜೇನುತುಪ್ಪವು ಪೂರ್ಣವಾಗಿತ್ತು.

೮೮. ಆಗ ಆ ಪ್ರಜೆಗಳು ತ್ರೇತಾಯುಗದ ಆದಿಯಲ್ಲಿ ಕಲ್ಪವೃಕ್ಷಗಳಿಂದುಂಟಾದ ಅಮೃತವನ್ನು ಸೇವಿಸಿ ಹೃಷ್ಟಪುಷ್ಟಾಂಗರೂ, ನೀರೋಗಗಳೂ, ಸುಖಿಗಳೂ ಆಗಿದ್ದರು.

೮೯. ಹೀಗೆ ಕೆಲವು ಕಾಲವು ಕಳೆಯಲು ತರುವಾಯ ತ್ರೇತಾಯುಗದ ಪ್ರಜೆಗಳು ಲೋಭಾಕೃಷ್ಟಮನಸ್ಕರಾಗಿ ಬಲಾತ್ಕಾರವಾಗಿ ಆ ವೃಕ್ಷಗಳಿಂದ ಮಕ್ಷಿಕ ಕಲ್ಪಿತವಲ್ಲದ ಮಕರಂದವನ್ನು ತೆಗೆಯಲು ಉಪಕ್ರಮಿಸಿದರು.

೯೦. ಪ್ರಜೆಗಳು ಮಾಡಿದ ಅಪಚಾರದಿಂದಲೂ, ಕಾಲಗತಿಯಿಂದಲೂ, ಆ ಕಲ್ಪವೃಕ್ಷಗಳು ಮಕರಂದಸಹಿತವಾಗಿ ಅಲ್ಲಲ್ಲಿ ನಷ್ಟವಾಗಲು ಉಪಕ್ರಮಿಸಿದುವು.

ತಸ್ಯಾಮೇವಾಲ್ಪಶಿಷ್ಟಾಯಾಂ ಸಂಧ್ಯಾಕಾಲವಶಾತ್ತದಾ।
ಪ್ರಾವರ್ತಂತ ತದಾ ತಾಸಾಂ ದ್ವಂದ್ವಾನ್ಯಭ್ಯುತ್ಥಿತಾನಿ ತು ॥ ೯೧ ॥

ಶೀತವಾತಾತಪೈಸ್ತೀವ್ರೈ ಸ್ತತಸ್ತಾ ದುಃಖಿತಾ ಭೃಶಂ ।
ದ್ವಂದ್ವೈಸ್ತಾಃ ಪೀಡ್ಯಮಾನಾಸ್ತು ಚಕ್ರುರಾವರಣಾನಿ ಚ ॥ ೯೨ ॥

ಕೃತ್ವಾ ದ್ವಂದ್ವಪ್ರತೀಕಾರಂ ನಿಕೇತಾನಿ ಹಿ ಭೇಜಿರೇ ।
ಪೂರ್ವ್ವಂ ನಿಕಾಮಚಾರಾಸ್ತೇ ಅನಿಕೇತಾಶ್ರಯಾ ಭೃಶಂ ॥ ೯೩ ॥

ಯಥಾಯೋಗ್ಯಂ ಯಥಾಪ್ರೀತಿ ನಿಕೇತೇಷ್ವವಸರ್ನ ಪುನಃ ।
ಮರುಧನ್ವಸು ನಿಮ್ನೇಷು ಪರ್ವತೇಷು ನದೀಷು ಚ ।
ಸಂಶ್ರಯಂತಿ ಚ ದುರ್ಗಾಣಿ ಧನ್ವಾನಂ ಶಾಶ್ವತೋದಕಂ ॥ ೯೪ ॥

---

೯೧. ಅಲ್ಪಾವಶಿಷ್ಟವಾದ ತ್ರೇತಾಯುಗದ ಸಂಧ್ಯಾಕಾಲದಲ್ಲಿ ಶೀತೋಷ್ಣಾದಿ ದ್ವಂದ್ವಗಳು ಉತ್ಪನ್ನವಾದುವು. ಆದರಿಂದ ಪ್ರಜೆಗಳಿಗೆ ಬಾಧೆಯು ಬಹಳವಾಗಿ ಸಂಭವಿಸಿತು.

೯೨. ಆಗ ಅತ್ಯಂತವಾದ ಶೀತವಾತಾತಪಾದಿದ್ವಂದ್ವಗಳಿಂದ ಬಹಳವಾಗಿ ಪೀಡಿತರಾದ ಪ್ರಜೆಗಳು ಅತ್ಯಂತ ಖಿನ್ನರಾಗಿ ಆ ಶೀತವಾತಾತಪಾದಿದ್ವಂದ್ವಗಳನ್ನು ತಡೆಯಲೋಸ್ಕರ ಆವರಣಗಳನ್ನು ಮಾಡಿಕೊಂಡರು.

೯೩. ಪೂರ್ವದಲ್ಲಿ ಮನೆಮಠಗಳಿಲ್ಲದೆಯೇ ಸ್ವೇಚ್ಛಾಚಾರಿಗಳೂ, ಆಶ್ರಯ ರಹಿತರೂ ಆದ ಪ್ರಜೆಗಳು ಶೀತೋಷ್ಣಾದಿದ್ವಂದ್ವಗಳ ಪ್ರತೀಕಾರಕ್ಕಾಗಿ ಮನೆಮಠ ಗಳನ್ನು ಏರ್ಪಡಿಸಿಕೊಂಡು ಸುಖವಾಗಿದ್ದರು.

೯೪. ಆಗ ಪ್ರಜೆಗಳು ತಮ್ಮ ಯೋಗ್ಯತಾನುಸಾರವಾಗಿ ಆಯಾ ಮನೆಗಳಲ್ಲಿ ತಮ್ಮಿಷ್ಟಾನುಸಾರವಾಗಿ ವಾಸಿಸುತ್ತಿದ್ದರು. ಮತ್ತೆ ಕೆಲವರು ನದಿ, ಪರ್ವತ, ಹಳ್ಳ, ದಿಣ್ಣೆ, ದುರ್ಗ, ಇವೇ ಮೊದಲಾದ ಶಾಶ್ವತವಾದ ಜಲವುಳ ಸ್ಥಾನಪನ್ನಾಶ್ರಯಿಸಿ ಸುಖವಾಗಿದ್ದರು.

ಯಥಾಯೋಗಂ ಯಥಾಕಾಮಂ ಸಮೇಷು ವಿಷಮೇಷು ಚ ।
ಆರಬ್ಧಾಸ್ತೇ ನಿಕೇತಾ ವೈ ಕರ್ತುಂ ಶೀತೋಷ್ಣವಾರಣಂ ॥ ೯೫ ॥

ತತಃ ಸಂಸ್ಥಾಪಯಾಮಾಸ ಖೇಟಾನಿ ಚ ಪುರಾಣಿ ಚ ।
ಗ್ರಾಮಾಂಶ್ಚೈವ ಯಥಾಭಾಗಂ ತಥೈವಾಂತಃಪುರಾಣಿ ಚ ॥ ೯೬ ॥

ತಾಸಾಮಾಯಾಮ ವಿಷ್ಕಂಭಾನ್ ಸನ್ನಿವೇಶಾಂತರಾಣಿ ಚ ।
ಚಕ್ರುಸ್ತದಾ ಯಥಾ ಪ್ರಜ್ಞಂ ಪ್ರದೇಶಃ ಸಂಜ್ಞಿತಸ್ತು ತೈಃ ॥ ೯೭ ॥

ಅಂಗುಷ್ಠಸ್ಯ ಪ್ರದೇಶಿನ್ಯಾ ವ್ಯಾಸಃ ಪ್ರಾದೇಶ ಉಚ್ಯತೇ ।
ತಾಲಃ ಸ್ಮೃತೋ ಮಧ್ಯಮಯಾ ಗೋಕರ್ಣಶ್ಚಾಪ್ಯನಾಮಯಾ ॥ ೯೮ ॥

ಕನಿಷ್ಠಯಾ ವಿತಸ್ತಿಸ್ತು ದ್ವಾದಶಾಂಗುಲ ಉಚ್ಯತೇ ।
ರತ್ನಿರಂಗುಲ ಪರ್ವಾಣಿ ಸಂಖ್ಯಯಾತ್ವೇಕವಿಂಶತಿಃ ॥ ೯೯ ॥

---

೯೫ ಅವರು ಕಾಲಾನುಗುಣವಾಗಿ ತಂತಮ್ಮ ಇಚ್ಛಾನುಸಾರ ಸಮವಿಷಮವೇ ಮೊದಲಾದ ಪ್ರದೇಶಗಳಲ್ಲಿ ಶೀತೋಷ್ಣಾದಿ ದ್ವಂದ್ವಗಳನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಯಥಾಯೋಗ್ಯವಾದ ಮನೆಮಠಗಳನ್ನು ಕಟ್ಟಿಕೊಂಡರು.

೯೬. ಅನಂತರ ಪ್ರಜೆಗಳು ನಗರ, ಪುರ, ಗ್ರಾಮ, ಇವುಗಳನ್ನು ಯೋಗ್ಯತಾನುಸಾರವಾಗಿ ಏರ್ಪಡಿಸಿಕೊಂಡು, ಅವುಗಳಲ್ಲಿ ಮನೆಮಠಗಳನ್ನು ಕಟ್ಟಿಕೊಂಡರು.

೯೭ ಅನಂತರ ಪ್ರಜೆಗಳು ತಮ್ಮ ಬುದ್ಧಿಗನುಗುಣವಾಗಿ ಗ್ರಾಮ ನಗರಾದಿಗಳು ಮತ್ತು ಮನೆ, ಮಠಗಳು, ಇವುಗಳ ಆಯಾಮ ವಿಸ್ತಾರಗಳು ಇವನ್ನು (ಸ್ಥಾನಮಾನಗಳನ್ನು) ಏರ್ಪಡಿಸಿಕೊಂಡರು, ಅನಂತರ ಅವುಗಳಿಗೆ ಪ್ರದೇಶವೆಂದು ಸಂಜ್ಞೆಯು ಉಂಟಾಯಿತು.

೯೮-೧೦೦. ಈಗ ಮಾನದ ಸ್ವರೂಪವನ್ನು ತಿಳಿಸುವೆನು ಕೇಳಿ ಅಂಗುಷ್ಠ, ಮತ್ತು ತರ್ಜನಿ, ಬೆರಳುಗಳ ಅಳತೆಗೆ " ಚೋಟು " ಅಥವಾ " ಪ್ರಾದೇಶ "ವೆಂದು ಹೆಸರು. ಮಧ್ಯಮ ಅಳತೆಗೆ " ಕಾಲ "ವೆಂದೂ, ಅನಾಮಯ ಬೆರಳಿನ ಅಳತೆಗೆ " ಗೋಕರ್ಣ "ವೆಂದೂ, ಕಿರುಬೆರಳಿನ ಅಳತೆಗೆ, " ವಿತಸ್ತಿ " ಅಂದರೆ " ಗೇಣು "ವೆಂದೂ, ನಾಮಗಳು ಪ್ರಾಪ್ತವಾಗಿವೆ. ಈ ಗೇಣಿನ ಉದ್ದವು ಹನ್ನೆರಡು ಅಂಗುಲಗಳಿರುವುದು.

ಚತುರ್ವಿಂಶತಿಭಿಶ್ಚೈವ ಹಸ್ತಸ್ಸ್ಯಾದಂಗುಲಾನಿ ತು ।
ಕಿಷ್ಕುಃ ಸ್ಮೃತೋ ದ್ವಿರತ್ನಿಸ್ತು ದ್ವಿಚತ್ವಾರಿಂಶದಂಗುಲಂ ॥ ೧೦೦ ॥

ಚತುರ್ಹಸ್ತಂ ಧನುರ್ದಂಡೋ ನಾಲಿಕಾ ಯುಗಮೇವ ಚ ।
ಧನುಃಸಹಸ್ರೇ ದ್ವೇ ತತ್ರ ಗವ್ಯೂತಿಸ್ತೈರ್ವಿಭಾವ್ಯತೇ ॥ ೧೦೧ ॥

ಅಷ್ಟೌ ಧನುಃ ಸಹಸ್ರಾಣಿ ಯೋಜನಂ ತೈರ್ನಿರುಚ್ಯತೇ ।
ಏತೇನ ಯೋಜನೇನೈವ ಸನ್ನಿವೇಶಸ್ತತಃ ಕೃತಃ ॥ ೧೦೨ ॥

ಚತುರ್ಣಾಮೇವ ದುರ್ಗಾಣಾಂ ಸ್ವಸಮುತ್ಥಾನಿ ತ್ರೀಣಿ ತು ।
ಚತುರ್ಥಂ ಕೃತ್ರಿಮಂ ದುರ್ಗಂ ತಸ್ಯ ವಕ್ಷ್ಯಾಮ್ಯಹಂ ವಿಧಿಂ ॥ ೧೦೩ ॥

ಸೌಧೋಚ್ಚ ವಪ್ರಪ್ರಾಕಾರಂ ಸರ್ವತಶ್ಖಾತಕಾವೃತಂ ।
ತದೇಕಂ ಸ್ವಸ್ತಿಕದ್ವಾರಂ ಕುಮಾರೀ ಪುರಮೇವ ಚ ॥ ೧೦೪ ॥

---

ಇಪ್ಪತ್ತೊಂದು ಅಂಗುಲಗಳಿಗೆ "ರತ್ನಿ"ಯೆಂದು ನಾಮವೂ, ಇಪ್ಪತ್ತನಾಲ್ಕು ಅಂಗುಲಕ್ಕೆ "ಮೊಳ" ಅಥವಾ "ಹಸ್ತ"ವೆಂದು, ಹೆಸರು ಬಂದಿದೆ. ಎರಡು ರತ್ನಿಗಳು, ಆದರೆ ನಲವತ್ತೆರಡು (೪೨) ಅಂಗುಲಕ್ಕೆ "ಕಿಷ್ಕು"ವೆಂದೂ ಹೆಸರು ಬಂದಿದೆ.

೧೦೧ ನಾಲ್ಕು ಹಸ್ತ ಅಥವಾ ಮೊಳಕ್ಕೆ ಒಂದು "ಧನುರ್ದಂಡ"ವೆಂದೂ, ಮತ್ತು "ನಾಲಿಕಾಯುಗ್ಮ"ವೆಂದೂ, ಎರಡು ಸಾವಿರ ಧನುಸ್ಸಿನ ಪ್ರಮಾಣಕ್ಕೆ "ಗವ್ಯೂತಿ"ಯೆಂದೂ ನಾಮವು ಪ್ರಾಪ್ತವಾಗಿದೆಯೆಂದು ಜ್ಞಾನಿಗಳು ಹೇಳುವರು.

೧೦೨. ಎಂಟು ಸಾವಿರ ಧನುಸ್ಸುಗಳ ಪ್ರಮಾಣಕ್ಕೆ ಒಂದು "ಯೋಜನವೆಂದು" ನಾಮವು ಬಂದಿದೆ. ಈ ಯೋಜನಗಳ ಪ್ರಮಾಣಗಳಿಂದಲೇ ಗ್ರಾಮ ನಗರಾದಿಗಳ ಸನ್ನಿವೇಶವನ್ನು ರಚಿಸುತ್ತಾರೆ

೧೦೩. ನಾಲ್ಕುವಿಧ ದುರ್ಗಗಳಲ್ಲಿ ಮೂರು ದುರ್ಗಗಳು ಸಹಜ ಸಿದ್ಧವಾಗಿವೆ. ಅವುಗಳಲ್ಲಿ ನಾಲ್ಕನೆಯ ದುರ್ಗವು ಕೃತಕವಾಗಿದೆ. ಅದನ್ನು ರಚಿಸಿರುವ ವಿಧಾನ ವನ್ನು ಹೇಳುವೆನು ಕೇಳಿ ಎಂದನು.

೧೦೪. ಉಪ್ಪರಿಗೆ ಮನೆಗಳು, ಉನ್ನತವಾದ ಕೋಟೆಯ ಗೋಡೆಗಳು ಮಂಗಳವಾದ್ಯ-ಗೃಹಗಳು, ಮಂಗಳಕರಗಳಾದ ದ್ವಾರಗಳು, ಮತ್ತು ಕುಮಾರೀ ಪುರ ಇವುಗಳಿಂದ ಕೂಡಿರುವ ನಗರಾದಿಗಳನ್ನು ನಿರ್ಮಿಸಬೇಕು.

ಶ್ರೋತಸೀಸಹತ ದ್ವಾರಂ ನಿಖಾತಂ ಪುನರೇವ ಚ ।
ಪಸ್ತ್ವಾಷ್ಟೌ ಚ ದಶಶ್ರೇಷ್ಠಾ ನವಾಷ್ಟೌ ವಾಪರೇ ಮತಾಃ ॥ ೧೦೫ ॥

ಖೇಟಾನಾಂ ನಗರಾಣಾಂ ಚ ಗ್ರಾಮಾಣಾಂ ಚೈವ ಸರ್ವಶಃ ।
ತ್ರಿವಿಧಾನಾಂ ಚ ದುರ್ಗಾಣಾಂ ಪರ್ವತೋದಕ ಬಂಧನಂ ॥ ೧೦೬ ॥

ತ್ರಿವಿಧಾನಾಂ ಚ ದುರ್ಗಾಣಾಂ ವಿಷ್ಕಂಭಾಯಾಮಮೇವ ಚ ।
ಯೋಜನಾನಾಂ ಚ ವಿಷ್ಕಂಭಮಷ್ಟಭಾಗಾರ್ಧಮಾಯತಂ ॥ ೧೦೭ ॥

ಪರಮರ್ಧಾರ್ಧಮಾಯಾಮಂ ಪ್ರಾಗುದಕ್ಪ್ರವರಂ ಪುರಂ ।
ಛಿನ್ನಕರ್ಣಂ ವಿಕರ್ಣಂ ತು ವ್ಯಂಜನಂ ಕೃಶಸಂಸ್ಥಿತಂ ॥ ೧೦೮ ॥

---

೧೦೫. ಆ ನಗರಾದಿಗಳಲ್ಲಿ ನೀರಿನ ಪ್ರವಾಹವನ್ನು ತಡೆಯತಕ್ಕ ದ್ವಾರ ದೇಶಗಳು ಇರಬೇಕು. ಮತ್ತು ಕೋಟೆಯ ಸುತ್ತಲೂ ಅಗಳಿರಬೇಕು. ಅದು ಎಂಟು, ಹತ್ತು ಅಥವಾ ಹದಿನೇಳು ಮೊಳ ಅಗಲವಿರಬೇಕೆಂದು ಪ್ರಮಾಣಜ್ಞರು ಹೇಳುವರು.

೧೦೬. ನಗರ, ಹೋಬಳಿ, ಗ್ರಾಮ, ಇವುಗಳನ್ನು ಪರ್ವತ, ನದಿ, ಕೋಟೆ, ಈ ಮೂರು ವಿಧಗಳಾದ ದುರ್ಗಗಳಿಂದ ಶತ್ರುಗಳಿಗೆ ಅಗಮ್ಯವಾಗಿರುವಂತೆ ಏರ್ಪಡಿಸಬೇಕೆಂದು ಹೇಳುವರು.

೧೦೭. ಮೂರು ವಿಧಗಳಾದ ದುರ್ಗಗಳ ಸುತ್ತಳತೆ ಮತ್ತು ಆಯಾಮವನ್ನು ತಿಳಿಸುವೆನು ನಗರಾದಿಗಳು ಎಂಟು ಯೋಜನ ಸುತ್ತಳತೆಯಾಗಿದ್ದರೆ ಉದ್ದವು ನಾಲ್ಕು ಯೋಜನ ವಿಸ್ತಾರವಾಗಿರಬೇಕು.

೧೦೮ ನಗರವು ನಾಲ್ಕು ಯೋಜನ ಉದ್ದವಿದ್ದರೆ ಅಗಲವು ಎರಡು ಯೋಜನ ವಷ್ಟು ವಿಸ್ತಾರವಾದರೂ ಇದ್ದು, ಪೂರ್ವೋತ್ತರ ವಿಸ್ತಾರವಾಗಿಯೂ ಇರಬೇಕು. ಅದು ತ್ರಿಕೋಣಾಕಾರವಾಗಿಯೂ, ವಿಕರ್ಣವಾಗಿಯೂ, ಶಿಥಿಲವಾಗಿಯೂ, ಕೃಶ ವಾಗಿಯೂ ಇರಕೂಡದು. ಹಾಗೆ ಇದ್ದರೆ ಪ್ರಶಸ್ತವಲ್ಲ.

ವೃತ್ತಂ ಹೀನಂ ಚ ದೀರ್ಘಂ ಚ ನಗರಂ ನ ಪ್ರಶಸ್ಯತೇ ।
ಚತುರಸ್ರಾರ್ಜವಂ ದಿಕ್‌ಸ್ಥಂ ಪ್ರಶಸ್ತಂ ವೈ ಪುರಂ ಪರಂ ॥ ೧೦೯ ॥

ಚತುರ್ವಿಂಶತಿರಾದ್ಯಂತು ಹಸ್ತಾನಷ್ಟಶತಂ ಪರಂ ।
ಅತ್ರ ಮಧ್ಯಂ ಪ್ರಶಂಸಂತಿ ಹ್ರಸ್ವೋತ್ಕೃಷ್ಟ ವಿವರ್ಜಿತಂ ॥ ೧೧೦ ॥

ಅಥ ಕಿಷ್ಕುಶತಾನ್ಯಷ್ಟೌ ಪ್ರಾಹುರ್ಮುಖ್ಯ ನಿವೇಶನಂ ।
ನಗರಾದರ್ಧವಿಷ್ಕಂಭಂ ಖೇಟಂ ಗ್ರಾಮಂ ತತೋ ಬಹಿಃ ॥ ೧೧೧ ॥

ನಗರಾದ್ಯೋಜನಂ ಖೇಟಂ ಖೇಟಾದ್ಗ್ರಾಮೋರ್ಧಯೋಜನಂ ।
ದ್ವಿಕ್ರೋಶಂ ಪರಮಾ ಸೀಮಾ ಕ್ಷೇತ್ರಸೀಮಾ ಚತುರ್ಧನುಃ ॥ ೧೧೨ ॥

---

೧೦೯. ನಗರವು ಗುಂಡಾಗಿಯೂ, ಹೀನವಾಗಿಯೂ, ಅತಿ ದೀರ್ಘವಾಗಿಯೂ ಇರಕೂಡದು. ಹಾಗೆ ಇದ್ದರೆ ಉತ್ತಮವಲ್ಲ. ಅದು ಚೌಕವಾಗಿಯೂ, ಸಮವಾಗಿಯೂ ಇದ್ದರೆ ಉತ್ತಮವಾಗುವುದು.

೧೧೦. ಇಪ್ಪತ್ತನಾಲ್ಕು ಹಸ್ತಗಳಿಂದ (೧೨ ಗಜಗಳಿಂದ ನೂರೆಂಟು ಮೊಳಗಳ ವರೆಗೂ ೫೪ ಗಜಗಳ ವರೆಗೂ) ಇರುವ ನಿವೇಶನವು ಮನೆಯನ್ನು ಕಟ್ಟುವುದಕ್ಕೆ ಅರ್ಹವಾಗಿದೆ. ಮಧ್ಯಮ ಪರಿಣಾಮವಿರುವ ಪ್ರದೇಶವು ಗೃಹ ನಿರ್ಮಾಣಕ್ಕೆ ಉತ್ತಮವಾದುದು. ಆ ಪ್ರದೇಶವು ಅತಿ ಹ್ರಸ್ವವಾಗಿಯೂ, ಅತಿ ದೀರ್ಘವಾಗಿಯೂ ಇದ್ದರೆ ಪ್ರಶಸ್ತವಾಗುವುದಿಲ್ಲ.

೧೧೧. ಒಂದು ಮುಖ್ಯ ನಿವೇಶನಕ್ಕೆ ನೂರೆಂಟು ಕಿಷ್ಕು ಪ್ರಮಾಣವಿರಬೇಕು. ನಗರದ ಅರ್ಧಯೋಜನ ದೂರದಲ್ಲಿ ಹೋಬಳಿಯೂ, ಅದಕ್ಕೆ ಹೊರಭಾಗವಲ್ಲಿ ಗ್ರಾಮವೂ ಇರಬೇಕು.

೧೧೨. ನಗರಕ್ಕೆ ಒಂದು ಯೋಜನ ದೂರದಲ್ಲಿ ಹೋಬಳಿಯೂ ಅದಕ್ಕೆ ಅರ್ಧ ಯೋಜನದಷ್ಟು ದೂರದಲ್ಲಿ ಗ್ರಾಮವೂ ಇರಬೇಕು. ಅವುಗಳ ಮುಖ್ಯ ಎಲ್ಲೆಯು ಎರಡು ಕ್ರೋಶದಷ್ಟು ವಿಶಾಲವಿರಬೇಕು ಕ್ಷೇತ್ರದ ಸೀಮವಾದರೋ ನಾಲ್ಕು ಧನುಸ್ಸಿನಷ್ಟು ವಿಶಾಲವಾಗಿರಬೇಕು.

ವಿಂಶದ್ಧನೂಂಷಿ ವಿಸ್ತೀರ್ಣೋ ದಿಶಾಂ ಮಾರ್ಗಸ್ತು ತೈಃ ಕೃತಃ ।
ವಿಂಶದ್ಧನುರ್ಗ್ರಾಮ ಮಾರ್ಗಃ ಸೀಮಾ ಮಾರ್ಗೋ ದಶೈವತು ॥ ೧೧೩ ॥

ಧನೂಂಷಿ ದಶವಿಸ್ತೀರ್ಣಃ ಶ್ರೀಮಾರ್ಗ ರಾಜಪಥಃ ಸ್ಮೃತಃ ।
ನೃವಾಜಿರಥನಾಗಾನಾಮಸಂಬಾದಃ ಸುಸಂಚರಃ ॥ ೧೧೪ ॥

ಧನೂಂಷಿ ಚೈವ ಚತ್ವಾರಿ ಶಾಖಾರಥ್ಯಾಸ್ತು ತೈಃ ಕೃತಾಃ ।
ಗೃಹ ರಥ್ಯೋಪರಥ್ಯಾಶ್ಚ ದ್ವಿಕಾಶ್ಚಾಪ್ಯುಪರಥ್ಯಕಾಃ ॥ ೧೧೫ ॥

ಘಂಟಾಪಥಶ್ಚತುಷ್ಪಾದ ಸ್ತ್ರಿಪದಂ ಚ ಗೃಹಾಂತರಂ ।
ವೃತ್ತಿಮಾರ್ಗ ಸ್ತ್ವರ್ಧಪದಂ ಪ್ರಾಗ್ವಂಶಃ ಪದಿಕಃ ಸ್ಮೃತಃ ॥ ೧೧೬ ॥

---

೧೧೩. ದಿಕ್ಕುಗಳ ಮಾರ್ಗವು ಇಪ್ಪತ್ತು ಧನುಸ್ಸಿನಷ್ಟು, ಅಂದರೆ ಸುಮಾರು ೧೨೦ ಅಡಿ ವಿಸ್ತೀರ್ಣವೂ, ಗ್ರಾಮಮಾರ್ಗವೂ ಸಹ ಅಷ್ಟೇ ವಿಸ್ತೀರ್ಣವೂ ಇರಬೇಕು. ಸೀಮಾಮಾರ್ಗವು ಹತ್ತು ಧನಸ್ಸಿನಷ್ಟು, ಅಂದರೆ ೬೦ ಅಡಿ ವಿಶಾಲವೂ ಆಗಿರಬೇಕು.

೧೧೪. ರಾಜಮಾರ್ಗವು ಸುಮಾರು ಹತ್ತು ಧನುಸ್ಸಿನಷ್ಟು ವಿಸ್ತೀರ್ಣವೂ ಅಂದರೆ 60 ಅಡಿ ವಿಸ್ತೀರ್ಣವೂ, ಕಾಂತಿಯುತವೂ, ಸಂಚರಿಸಲು ಯೋಗ್ಯವೂ, ಶುದ್ಧವೂ ಆಗಿ ಆನೆ, ಕುದುರೆ, ರಥ, ಪದಾತಿ ಇವುಗಳ ಸಂಚಾರಕ್ಕೆ ಯೋಗ್ಯವಾಗಿಯೂ, ಅಬಾಧಕವಾಗಿಯೂ ಇರಬೇಕು.

೧೧೫. ಸಾಮಾನ್ಯ ಬೀದಿಗಳು ನಾಲ್ಕು ಧನುಸ್ಸಿನಷ್ಟು ಅಂದರೆ 24 ಅಡಿ ವಿಸ್ತೀರ್ಣವೂ, ಗೃಹಮಾರ್ಗವು ಮತ್ತು ಅಲ್ಪರಥ್ಯಗಳೂ ಕೂಡ ಎರಡು ಧನುಸ್ಸಿನಷ್ಟು 12 ಅಡಿ ಅಗಲವಾಗಿಯೂ ಇರಬೇಕು.

೧೧೬. ಸಾಮಾನ್ಯಮಾರ್ಗವು ನಾಲ್ಕಡಿ ಅಗಲವೂ ಪ್ರತಿಗೃಹಗಳಿಗೆ ಅಂತರವು ಮೂರಡಿ ವಿಶಾಲವೂ, ಕೆಲಸಕ್ಕೆ ಹೋಗುವ ಮಾರ್ಗವು (ಕಾಲುದಾರಿಯು) ಅರ್ಧಡಿ ಅಗಲವೂ, ಯಜಮಾನನ ಗೃಹಮಾರ್ಗವು ಒಂದಡಿ ವಿಸ್ತೀರ್ಣವೂ ಆಗಿರಬೇಕು.

**ಅವಸ್ಕರಂ ಪರೀವಾಹಂ ಪದಮಾತ್ರಂ ಸಮಂತತಃ ।**
**ಕೃತೇಷು ತೇಷು ಸ್ಥಾನೇಷು ಪುನಶ್ಚಕ್ರುರ್ಗೃಹಾಣಿ ವೈ ॥ ೧೧೭ ॥**

**ಯಥಾ ತೇ ಪೂರ್ವಮಾಸನ್ ವೈ ವೃಕ್ಷಾಸ್ತು ಗೃಹ ಸಂಸ್ಥಿತಾಃ ।**
**ತಥಾ ಕರ್ತುಂ ಸಮಾರಬ್ಧಾಶ್ಚಿಂತಯಿತ್ವಾ ಪುನಃ ಪುನಃ ॥ ೧೧೮ ॥**

**ವೃಕ್ಷಾಶ್ಚೈವ ಗತಾಃ ಶಾಖಾ ನ ತಾಶ್ಚೈವ ಪರಾಗತಾಃ ।**
**ಅತ ಊರ್ಧ್ವಂ ಗತಾಶ್ಚಾನ್ಯಾ ಏವಂ ತಿರ್ಯಗ್ಗತಾಃ ಪುರಾ ॥ ೧೧೯ ॥**

**ಬುಧ್ವಾನ್ವಿಷ್ಯಸ್ತಥಾ ನ್ಯಾಯೋ ವೃಕ್ಷಶಾಖಾ ಯಥಾ ಗತಾಃ ।**
**ತಥಾ ಕೃತಾಸ್ತು ತೈಃ ಶಾಖಾಸ್ತಸ್ಮಾಚ್ಛಾಲಾಸ್ತು ತಾಃ ಸ್ಮೃತಾಃ ॥ ೧೨೦ ॥**

**ಏವಂ ಪ್ರಸಿದ್ಧಾಃ ಶಾಖಾಭ್ಯಃ ಶಾಲಾಶ್ಚೈವ ಗೃಹಾಣಿ ಚ ।**
**ತಸ್ಮಾತ್ತಾ ವೈ ಸ್ಮೃತಾಃ ಶಾಲಾಃ ಶಾಲಾತ್ವಂ ಚೈವ ತಾಸು ತತ್ ॥ ೧೨೧ ॥**

---

೧೧೭. ಮನೆಯ ಸುತ್ತಲೂ ಕೊಳೆಯ ನೀರು ಹೋಗಲು ಒಂದಡಿ ಅಗಲವಾದ ಚರಂಡಿಯು ಇರಬೇಕು. ಹೀಗೆ ಮನೆಗಳನ್ನು ಕಟ್ಟುವ ಪ್ರದೇಶಗಳನ್ನು ಸಿದ್ಧಿಮಾಡಿಕೊಂಡು ಗೃಹಗಳನ್ನು ಕಟ್ಟಿದರು

೧೧೮. ಪೂರ್ವದಲ್ಲಿ ಸಕಲ ಇಷ್ಟಾರ್ಥಗಳನ್ನು ಕೊಡುವ ಕಲ್ಪವೃಕ್ಷಗಳು ಮನೆಗಳಲ್ಲಿ ಹೇಗೆ ಇದ್ದುವೋ ಹಾಗೆಯೇ ಅವುಗಳನ್ನು ಇರಿಸಬೇಕೆಂದು ಯೋಚಿಸಿ ಕಾರ್ಯವನ್ನು ಪ್ರಾರಂಭಿಸಿದರು.

೧೧೯. ಪೂರ್ವದಲ್ಲಿ ಆ ಕಲ್ಪವೃಕ್ಷಗಳು ನಷ್ಟವಾದವು. ಅವುಗಳ ರೆಂಬೆಗಳು ಕೆಲವು ಕಾಲವಿದ್ದು ಅವೂ ಸಹ ನಾಶವನ್ನು ಹೊಂದಿದುವು. ಪುನಃ ಅವು ಹಿಂತಿರುಗಿ ಬರಲಿಲ್ಲ.

೧೨೦. ಆ ಕಲ್ಪವೃಕ್ಷದ ಶಾಖೆಗಳು ಹೇಗೆ ನಷ್ಟವಾದವೋ ಹಾಗೆಯೇ ಪುನಃ ಬರಬೇಕೆಂದು ತಿಳಿದು ಪ್ರಯತ್ನಮಾಡಿದರು. ಆದುದರಿಂದ ಆ ಶಾಖೆಗಳಿಗೆ ಶಾಲಾ ಎಂಬುದಾಗಿ ನಾಮವು ಪ್ರಾಪ್ತವಾಗಿದೆ.

೧೨೧. ಹೀಗೆ ಧ್ಯಾನಮಾಡಲ್ಪಟ್ಟ ಪ್ರಸಿದ್ಧವಾದ ಶಾಖೆಗಳಿಂದ ಮನೆಮಠಗಳು ನಿರ್ಮಿಸಲ್ಪಟ್ಟವು ಆದುದರಿಂದ ಅವುಗಳಿಗೆ "ಶಾಲಾ" ಎಂಬ ನಾಮವೂ, ಶಾಲಾತ್ವವೂ ಕೂಡ ಸಿದ್ಧವಾದುವು.

ಪ್ರಸೀದತಿ ಮನಸ್ತಾಸು ಮನಃ ಪ್ರಾಸಾದಯಂತಿ ತಾಃ ।
ತಸ್ಮಾದ್ಗೃಹಾಣಿ ಶಾಲಾಶ್ಚ ಪ್ರಾಸಾದಾಶ್ಚೈವ ಸಂಜ್ಞಿತಾಃ ॥ ೧೨೨ ॥

ಕೃತ್ವಾ ದ್ವಂದ್ವೋಪಘಾತಾಂಸ್ತಾನ್ ವಾರ್ತೋಪಾಯಮಚಿಂತಯನ್ ।
ನಷ್ಟೇಷು ಮಧುನಾ ಸಾರ್ಧಂ ಕಲ್ಪವೃಕ್ಷೇಷು ವೈ ತದಾ ॥
ವಿಷಾದವ್ಯಾಕುಲಾಸ್ತಾ ವೈ ಪ್ರಜಾಸ್ತೃಷ್ಣಾ ಕ್ಷುಧಾತ್ಮಿಕಾಃ ॥ ೧೨೩ ॥

ತತಃ ಪ್ರಾದುರ್ಬಭೌ ತಾಸಾಂ ಸಿದ್ಧಿಸ್ತ್ರೇತಾಯುಗೇ ಪುನಃ ।
ವಾರ್ತಾರ್ಥಸಾಧಿಕಾಪ್ಯನ್ಯಾ ವೃತ್ತಿಸ್ತಾಸಾಂ ಹಿ ಕಾಮತಃ ॥ ೧೨೪ ॥

ತಾಸಾಂ ವೃಷ್ಟ್ಯುದಕಾನೀಹ ಯಾನಿ ನಿಮ್ನೈರ್ಗತಾನಿ ತು ।
ವೃಷ್ಟ್ಯಾ ತದಭವತ್ಸ್ರೋತಃ ಖಾತಾನಿ ನಿಮ್ನಗಾಃ ಸ್ಮೃತಾಃ ॥ ೧೨೫ ॥

---

೧೨೨. ಆ ಮನೆಮಠಗಳಲ್ಲಿ ಮನಸ್ಸು ನಿರ್ಮಲವಾಗುವುದು. ಅವು, ಅವುಗಳಲ್ಲಿರುವ ಪ್ರಜೆಗಳ ಮನಸ್ಸನ್ನು ನಿರ್ಮಲವನ್ನಾಗಿ ಮಾಡುವುದು. ಆದುದರಿಂದ ಮನೆಮಠಗಳಿಗೆ ಪ್ರಾಸಾದವೆಂಬ ಸಂಜ್ಞೆಯೂ ಪ್ರಾಪ್ತವಾಗಿದೆ.

೧೨೩. ಆ ಕಲ್ಪವೃಕ್ಷಗಳು ಮಕರಂದದೊಡನೆ ನಷ್ಟವಾಗಲು ಪ್ರಜೆಗಳು ಕ್ಷುತ್ಪಿಪಾಸೆಗಳಿಂದ ಪೀಡಿತರೂ, ವ್ಯಾಕುಲಗೊಂಡವರೂ ಆಗಿ ಶೀತೋಷ್ಣಾದಿ ಪರಿಹಾರಕ್ಕಾಗಿ ವಾಸಸ್ಥಾನಗಳನ್ನು, (ಗೃಹಗಳನ್ನೂ) ಏರ್ಪಡಿಸಿಕೊಂಡು ಜೀವನೋಪಾಯವನ್ನು ಯೋಚಿಸಿದರು.

೧೨೪ ಅನಂತರ ತ್ರೇತಾಯುಗದಲ್ಲಿ ಆ ಪ್ರಜೆಗಳ ಜೀವನೋಪಾಯಕ್ಕೆ ಬೇರೊಂದು ಸಿದ್ಧಿಯು ಪುನಃ ಉಂಟಾಯಿತು. ಅವರಿಗೆ ತಮ್ಮ ಇಷ್ಟಾನುಸಾರವಾಗಿ ಜೀವನೋಪಾಯದ ಸಿಧ್ಯಂತರವು ಆವಿರ್ಭವಿಸಿತು.

೧೨೫. ಆ ಪ್ರಜೆಗಳು ವೃಷ್ಟಿಯನ್ನು ಪಡೆಯಲಾಗಿ ಆ ಮಳೆಯ ನೀರು ಹಳ್ಳಗಳಲ್ಲಿ ಹರಿದು ಹೋದುದರಿಂದ "ಸ್ರೋತಸ್ಸುಗಳೆಂದೂ", ತಗ್ಗಿನಲ್ಲಿ ಹರಿಯುವುದರಿಂದ "ನಿಮ್ನ"ಗಳೆಂದೂ, ಅವು ಪ್ರಖ್ಯಾತಿಗೊಂಡಿವೆ.

ಏವಂ ನದ್ಯಃ ಪ್ರವೃತ್ತಾಸ್ತು ದ್ವಿತೀಯೇ ವೃಷ್ಟಿ ಸರ್ಜನೇ ।
ಯೇ ಪರಸ್ತಾದಪಾಂ ಸ್ತೋಕಾ ಆಪನ್ನಾಃ ಪೃಥಿವೀತಲೇ ॥ ೧೨೬ ॥

ಅಪಾಂ ಭೂಮೇಶ್ಚ ಸಂಯೋಗಾದೋಷಧ್ಯಸ್ತಾಸು ಚಾಭವನ್ ।
ಪುಷ್ಪಮೂಲಫಲಿನ್ಯಸ್ತು ಓಷಧ್ಯಸ್ತಾಃ ಪ್ರಜಜ್ಞಿರೇ ॥ ೧೨೭ ॥

ಅಫಾಲಕೃಷ್ಟಾಶ್ಚಾನುಪ್ತಾ ಗ್ರಾಮ್ಯಾರಣ್ಯಾಶ್ಚತುರ್ದಶ ।
ಋತುಪುಷ್ಪಫಲಾಶ್ಚೈವ ವೃಕ್ಷಾ ಗುಲ್ಮಾಶ್ಚ ಜಜ್ಞಿರೇ ॥ ೧೨೮ ॥

ಪ್ರಾದುರ್ಭಾವಶ್ಚ ತ್ರೇತಾಯಾಂ ವಾರ್ತಾಯಾಮೌಷಧಸ್ಯ ತು ।
ತೇನೌಷಧೇನ ವರ್ತಂತೇ ಪ್ರಜಾಸ್ತ್ರೇತಾಯುಗೇ ತದಾ ॥ ೧೨೯ ॥

ತತಃ ಪುನರಭೂತ್ತಾಸಾಂ ರಾಗೋ ಲೋಭಶ್ಚ ಸರ್ವಶಃ ।
ಅವಶ್ಯಂ ಭಾವಿನಾರ್ಥೇನ ತ್ರೇತಾಯುಗ ವಶೇನತು ॥ ೧೩೦ ॥

---

೧೨೬. ಹೀಗೆ ಎರಡನೆಯ ವೃಷ್ಟಿಯ ಸರ್ಗವು ಉಂಟಾಗಲು ಭೂತಲದಲ್ಲಿ ನದಿಗಳು ಜಲಾಶಯಗಳು ವಿಶೇಷವಾಗಿ ಸಿದ್ಧವಾದುವು.

೧೨೭. ಭೂಮಿ ಮತ್ತು ಜಲದ ಸಂಬಂಧದಿಂದ ಪುಷ್ಪಮೂಲ ಫಲಾದಿಗಳನ್ನು ಬಿಡುವ ಓಷಧಿಗಳೂ ಗಿಡ, ಮರ, ಬಳ್ಳಿಗಳೂ ಭೂಮಿಯಲ್ಲಿ ವಿಶೇಷವಾಗಿ ಉತ್ಪನ್ನ ಗಳಾದುವು.

೧೨೮ (ವ್ಯವಸಾಯವಿಲ್ಲದೆ) ಉತ್ತು ಬೀಜಾವಾಪಮಾಡದೆಯೆ (ತಮ್ಮಷ್ಟಕ್ಕೆ) ತಾವೇ ಅರಣ್ಯ ಮತ್ತು ಗ್ರಾಮಗಳಲ್ಲಿ ಸ್ವತಃ ಬೆಳೆಯತಕ್ಕ, ಕಂದಮೂಲ ಫಲಪುಷ್ಪಾದಿಗಳನ್ನು ಬಿಡುವ ಮರ, ಗಿಡ, ಬಳ್ಳಿ, ಗುಲ್ಮ ಇವೇ ಮೊದಲಾದುವು ಉದ್ಭವಿಸಿದುವು.

೧೨೯. ತ್ರೇತಾಯುಗದಲ್ಲಿ ಪ್ರಜೆಗಳ ಜೀವನಕ್ಕಾಗಿ ನಾನಾವಿಧಗಳಾದ ಔಷಧಗಳು ಉತ್ಪನ್ನವಾದುವು. ಆ ಯುಗದಲ್ಲಿ ಪ್ರಜೆಗಳು ಅವುಗಳಿಂದ ಜೀವಿಸು ತ್ತಿದ್ದರು.

೧೩೦. ಅನಂತರ ತ್ರೇತಾಯುಗದಲ್ಲಿಆವಶ್ಯಕವಾಗಿ ಉಂಟಾಗತಕ್ಕ ವಿಷಯಾನು ಭವಗಳಿಂದ ಕಾಮಕ್ರೋಧ ಲೋಭಾದಿಗಳು ಪುನಃ ಹುಟ್ಟಿದವು

ತತಸ್ತಾಃ ಪರ್ಯಗೃಹ್ಣಂತ ನದೀಕ್ಷೇತ್ರಾಣಿ ಪರ್ವತಾನ್ ।
ವೃಕ್ಷಾನ್ ಗುಲ್ಮೌಷಧೀಶ್ಚೈವ ಪ್ರಸಹ್ಯಂತು ಯಥಾಬಲಂ ॥ ೧೩೧ ॥

ಸಿದ್ಧಾತ್ಮಾನಸ್ತು ಯೇ ಪೂರ್ವಂ ವ್ಯಾಖ್ಯಾತಾಃ ಪ್ರಾಕೃತೇ ಮಯಾ ।
ಬ್ರಹ್ಮಣಾ ಮಾನವಾಸ್ತೇ ವೈ ಉತ್ಪನ್ನಾ ಯೋಜನಾದಿಹ ॥ ೧೩೨ ॥

ಶಾಂತಾಶ್ಚ ಶುಷ್ಮಿಣಶ್ಚೈವ ಕರ್ಮಿಣೋದುಃಖಿನಸ್ತದಾ ।
ತತಃ ಪ್ರವರ್ತಮಾನಾಸ್ತೇ ತ್ರೇತಾಯಾಂ ಜಜ್ಞಿರೇ ಪುನಃ ॥ ೧೩೩ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ದ್ರೋಹಿಜನಾಸ್ತಥಾ ।
ಭಾವಿತಾಃ ಪೂರ್ವಜಾತೇಷು ಕರ್ಮಭಿಶ್ಚ ಶುಭಾಶುಭೈಃ ॥ ೧೩೪ ॥

ಇತಃ ಸ್ತೇಭ್ಯೋ ಬಲಾಯೇ ತು ಸತ್ಯಶೀಲಾಃ ಹ್ಯಹಿಂಸಕಾಃ ।
ವೀತಲೋಭಾ ಜಿತಾತ್ಮಾನೋ ನಿವಸಂತಿಸ್ಮ ತೇಷು ವೈ ॥ ೧೩೫ ॥

---

೧೩೧. ಆಗ ಅವರು ಶಕ್ತ್ಯನುಗುಣವಾಗಿ ನದೀ, ಕ್ಷೇತ್ರ, ಪರ್ವತ, ವೃಕ್ಷ, ಲತೆ, ಗುಲ್ಮ, ಔಷಧಿ ಮೊದಲಾದುವನ್ನು ಸ್ವೀಕರಿಸಿ ಜೀವಿಸುತ್ತಿದ್ದರು.

೧೩೨. ನಾನು ಪೂರ್ವದ ಕೃತಯುಗದಲ್ಲಿ ಯಾವ ಮಹಾತ್ಮರ ವಿಷಯ ಗಳನ್ನು ನಿಮಗೆ ತಿಳಿಸಿದ್ದೆನೋ ಅಂತಹ ಬ್ರಾಹ್ಮಣಾದಿ ಮನುಸ್ಯರು ತ್ರೇತಾ ಯುಗದಲ್ಲಿ ಪುನಃ ಹುಟ್ಟಿದರು.

೧೩೩. ತ್ರೇತಾಯುಗದ ಆದಿಯಲ್ಲಿ, ಶಾಂತರೂ, ತೇಜಸ್ವಿಗಳೂ, ಕರ್ಮಠರೂ, ದುಃಖಿಗಳೂ, ಇವರೇ ಮೊದಲಾದ ಯಾವ ಮಹಾತ್ಮರು ಇದ್ದರೋ ಅವರೆಲ್ಲರೂ ಅದೇ ತ್ರೇತಾಯುಗದಲ್ಲಿ ಪುನಃ ಉದ್ಭವಿಸಿದರು.

೧೩೪. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ. ದ್ರೋಹಿ, ಇವರೇ ಮೊದ ಲಾದವರು ತಮ್ಮ ತಮ್ಮ ಪುಣ್ಯಪಾಪಕರ್ಮಾನುಗುಣವಾಗಿ ತಂತಮ್ಮ ಜಾತಿಗಳಲ್ಲಿಯೇ ಪುನಃ ಜನಿಸಿದರು

೧೩೫. ಮೇಲೆ ನಿರೂಪಿಸಿದ ಪುರುಷರಿಗಿಂತಲೂ ಭಿನ್ನರೂ, ಸತ್ಯಶೀಲರೂ, ಅಹಿಂಸಕರೂ, ಲೋಭರಹಿತರೂ, ಜಿತೇಂದ್ರಿಯರೂ ಆದ ಮಹಾತ್ಮರು ಯಾರು ಯಾರು ಇರುವರೋ ಅಂತಹವರು ಜನಿಸಿ ಅವರ ಸಂಗಡ, ವಾಸಮಾಡುತ್ತಿದ್ದರು.

ಪ್ರತಿ ಗೃಹ್ಣಂತಿ ಕುರ್ವಂತಿ ತೇಭ್ಯಶ್ಚಾನ್ಯೇಽಲ್ಪತೇಜಸಃ ।
ಏವಂ ವಿಪ್ರತಿಪನ್ನೇಷು ಪ್ರಪನ್ನೇಷು ಪರಸ್ಪರಂ ॥ ೧೩೬ ॥

ತೇನ ದೋಷೇಣ ತೇಷಾಂ ತಾ ಓಷಧ್ಯೋ ಮಿಷತಾಂ ತದಾ ।
ಪ್ರಣಷ್ಟಾ ಹ್ರಿಯಮಾಣಾ ವೈ ಮುಷ್ಟಿಭ್ಯಾಂ ಸಿಕತಾ ಯಥಾ ॥ ೧೩೭ ॥

ಅಗ್ರಸದ್ಭೂಯುರ್ಯುಗಬಲಾತ್‌ಗ್ರಾಮ್ಯಾರಣ್ಯಾಶ್ಚತುರ್ದಶ ।
ಫಲಂ ಗೃಹ್ಣಂತಿ ಪುಷ್ಪೈಶ್ಚ ಪುಷ್ಪಂ ಪತ್ರೈಶ್ಚ ಯಾಃ ಪುನಃ ॥ ೧೩೮ ॥

ತತಸ್ತಾಸು ಪ್ರಣಷ್ಟಾಸು ವಿಭ್ರಾಂತಾಸ್ತಾಃ ಪ್ರಜಾಸ್ತದಾ ।
ಸ್ವಯಂಭುವಂ ಪ್ರಭುಂ ಜಗ್ಮುಃ ಕ್ಷುಧಾವಿಷ್ಟಾಃ ಪ್ರಜಾಪತಿಂ ॥ ೧೩೯ ॥

ವೃತ್ತ್ಯರ್ಥಮಭಿಲಿಪ್ಸಂತ ಆದೌ ತ್ರೇತಾಯುಗಸ್ಯ ತು ।
ಬ್ರಹ್ಮಾ ಸ್ವಯಂಭೂರ್ಭಗವಾನ್ ಜ್ಞಾತ್ವಾ ತಾಸಾಂ ಮನೀಷಿತಂ ॥ ೧೪೦ ॥

---

೧೩೬. ಆಗ ಬಲಿಷ್ಟರು ಬಲಹೀನರ, ಬುದ್ಧಿವಂತರು ಅಜ್ಞರ, ಧನಿಕರು ದೀನರ, ಧನಕನಕಾದಿ ಸರ್ವಸ್ವವನ್ನೂ ಅಪಹರಿಸಿ ಹಿಂಸೆಮಾಡುತ್ತಿದ್ದರು.

೧೩೭. ಹೀಗೆ ಅಧರ್ಮವು ಅಧಿಕವಾಗಲು ತ್ರೇತಾಯುಗದಲ್ಲಿ ಪ್ರಜೆಗಳ ದೋಷಗಳಿಂದ ಔಷಧಿಯೇ ಮೊದಲಾದ ಸರ್ವಸಿದ್ಧಿಗಳೂ, ಮುಷ್ಟಿಗಳಿಂದ ಅಪಹರಿಸಿದ ಮರಳುರಾಶಿಯಂತೆ, ನಷ್ಟವಾದುವು.

೧೩೮. ಆ ತ್ರೇತಾಯುಗದ ಶಕ್ತಿಯಿಂದ ಭೂಮಿಯೇ ಗ್ರಾಮ್ಯಾರಣ್ಯಗಳಲ್ಲಿರುವ ವೃಕ್ಷಗಳ ಹದಿನಾಲ್ಕು ವಿಧಗಳಾದ ಫಲಗಳನ್ನು ಪುಷ್ಪಗಳಿಂದಲೂ, ಆ ಪುಷ್ಪಗಳನ್ನು ಎಲೆಗಳಿಂದಲೂ ಗ್ರಾಸಮಾಡಿತು (ನುಂಗಿತು). ಅಂದರೆ ಆ ಮರಗಳೆಲ್ಲವೂ ನಷ್ಟವಾದುವು.

೧೩೯. ಅನಂತರ ಆ ಕಲ್ಪವೃಕ್ಷಗಳು ನಷ್ಟವಾಗಲು ಪ್ರಜೆಗಳು ಹಸಿವು ಬಾಯಾರಿಕೆಗಳಿಂದ ಪೀಡಿತರೂ, ಭ್ರಾಂತರೂ ಆಗಿ, ಸ್ವಯಂಭುವನಾದ ಬ್ರಹ್ಮದೇವನನ್ನು ಮೊರೆ ಹೊಕ್ಕರು.

೧೪೦. ಪೂಜ್ಯನೂ, ಸ್ವಯಂಭುವನೂ ಆದ ಬ್ರಹ್ಮದೇವನು ತ್ರೇತಾಯುಗದ ಆದಿಯಲ್ಲಿ ಆಹಾರವಿಲ್ಲದೆ ಪೀಡಿತರಾದ ಪ್ರಜೆಗಳ ಜೀವನದ ಬಯಕೆಯನ್ನರಿತು ಅವರನ್ನು ಅನುಗ್ರಹಿಸಲು ಇಚ್ಛೆಸಿದನು.

ಯುಕ್ತಂ ಪ್ರತ್ಯಕ್ಷ ದೃಷ್ಟೇನ ದರ್ಶನೇನ ವಿಚಾರ್ಯ ಚ ।
ಗ್ರಸ್ತಾಃ ಪೃಥಿವ್ಯಾ ಓಷಧ್ಯೋ ಜ್ಞಾತ್ವಾ ಪ್ರತ್ಯುದಹತ್ಪುನಃ ॥ ೧೪೧ ॥

ಕೃತ್ವಾ ವತ್ಸಂ ಸುಮೇರುಂ ತು ದುದೋಹ ಪೃಥಿವೀಮಿಮಾಂ ।
ದುಗ್ಧೇಯಂ ಗೌಸ್ತದಾ ತೇನ ಬೀಜಾನಿ ಪೃಥಿವೀತಲೇ ॥ ೧೪೨ ॥

ಜಜ್ಞಿರೇ ತಾನಿ ಬೀಜಾನಿ ಗ್ರಾಮ್ಯಾರಣ್ಯಾಸ್ತು ತಾಃ ಪುನಃ ।
ಓಷಧ್ಯಃ ಫಲಪಾಕಾಂತಾಃ ಸಪ್ತ ಸಪ್ತದಶಾಸ್ತುತಾಃ ॥ ೧೪೩ ॥

ವ್ರೀಹಯಶ್ಚ ಯವಾಶ್ಚೈವ ಗೋಧೂಮಾ ಅಣವಸ್ತಿಲಾಃ ।
ಪ್ರಿಯಂಗವೋ ಹ್ಯುದಾರಾಶ್ಚ ಕಾರೂಷಾಶ್ಚ ಸತೀನಕಾಃ ॥ ೧೪೪ ॥

ಮಾಷಾ ಮುದ್ಗಾ ಮಸೂರಾಶ್ಚ ನಿಷ್ಪಾವಾಃ ಸುಕಲಸ್ಥಕಾಃ ।
ಆಢಕ್ಯಶ್ಚಣಕಾಶ್ಚೈವ ಸಪ್ತಸಪ್ತ ದಶಾಃ ಸ್ಮೃತಾಃ ॥ ೧೪೫ ॥

---

೧೪೧. ಆಗ ಬ್ರಹ್ಮದೇವನು ಅವರ ಪ್ರಾರ್ಥನೆಯನ್ನು ಕೇಳಿ ಪ್ರತ್ಯಕ್ಷ ಪರೋಕ್ಷಗಳಿಂದಲೂ, ಯುಕ್ತಿಗಳಿಂದಲೂ, ಭೂಮಿಯು ಓಷಧಿಯೇ ಮೊದಲಾದ ಫಲವೃಕ್ಷಗಳನ್ನು ಗ್ರಾಸಮಾಡಿದೆಯೆಂದು ಅರಿತು, ಪುನಃ ಅವುಗಳನ್ನು ಸೃಷ್ಟಿಸಿದನು.

೧೪೨. ಆಗ ಬ್ರಹ್ಮದೇವನು ಮೇರುಪರ್ವತವನ್ನು ಕರುವನ್ನಾಗಿಯೂ, ಭೂಮಿಯನ್ನು ಧೇನುವನ್ನಾಗಿಯೂ, ಮಾಡಿಕೊಂಡು ಕ್ಷೀರವನ್ನು ಕರೆಯಲಾಗಿ ಆ ಭೂಮಾತೆಯಿಂದ ನಾನಾವಿಧಗಳಾದ ಕ್ಷೀರರೂಪವಾದ ಅನೇಕ ಧಾನ್ಯಗಳು ಉತ್ಪನ್ನ ವಾದುವು.

೧೪೩. ಗ್ರಾಮ ಮತ್ತು ಅರಣ್ಯಗಳಲ್ಲಿ ಬೆಳೆಯಲು ಯೋಗ್ಯವೂ ಫಲೋತ್ಪತ್ತಿಯೇ ಕೊನೆಯಾಗಿ ಉಳ್ಳವುಗಳೂ ಪ್ರಜೆಗಳ ಜೀವನೋಪಯುಕ್ತಗಳೂ, ಸಪ್ತದಶ ವಿಧಗಳೂ, ಆದ ಧಾನ್ಯಗಳು ಓಷಧಿಗಳಿಂದ ಉಂಟಾದುವು.

೧೪೪-೧೪೫. ಆ ಧಾನ್ಯಗಳು ಯಾವುವೆಂದರೆ ಬತ್ತ, ಯವ, ಗೋಧಿ, ಜೀರಿಗೆ, ಎಳ್ಳು, ನವಣೆ, ಕಾರೂಷಧಾನ್ಯ (ಬೆಟ್ಟದ ಕಡಲೆ), ಜೋಳ, ಉದ್ದು, ಹೆಸರು, ಕಾಡು ಕಡಲೆ, ಅವರೆ, ಹುರುಳಿ, ತೊಗರಿ ಇವು ಹದಿನಾಲ್ಕೂ ಚತುರ್ದಶ ಧಾನ್ಯಗಳಾಗಿವೆ.

ಇತ್ಯೇತಾ ಓಷಧೀನಾಂ ತು ಗ್ರಾಮ್ಯಾಣಾಂ ಜಾತಯಃ ಸ್ಮೃತಾಃ ।
ಓಷಧ್ಯೋ ಯಜ್ಞಿಯಾಶ್ಚೈವ ಗ್ರಾಮ್ಯಾರಣ್ಯಾಶ್ಚತುರ್ದಶ ॥ ೧೪೬ ॥

ವ್ರೀಹಯಃ ಸಯವಾ ಮಾಷಾ ಗೋಧೂಮಾ ಅಣವಸ್ತಿಲಾಃ ।
ಪ್ರಿಯಂಗುಸಪ್ತಮಾ ಹ್ಯೇತೇ ಅಷ್ಟಮೀ ತು ಕುಲತ್ಥಿಕಾ ॥ ೧೪೭ ॥

ಶ್ಯಾಮಕಾಸ್ತ್ವಥ ನೀವಾರಾ ಜರ್ತಿಲಾಃ ಸಗವೇಧುಕಾಃ ।
ಕುರುವಿಂದಾ ವೇಣುಯವಾಸ್ತಥಾ ಮರ್ಕಟಕಾಶ್ಚ ಯೇ ॥ ೧೪೮ ॥

ಗ್ರಾಮ್ಯಾರಣ್ಯಾಃ ಸ್ಮೃತಾ ಹ್ಯೇತಾ ಓಷಧ್ಯಸ್ತು ಚತುರ್ದಶ ।
ಉತ್ಪನ್ನಾಃ ಪ್ರಥಮಾಃಹ್ಯೇತಾ ಆದೌ ತ್ರೇತಾಯುಗಸ್ಯ ತು ॥ ೧೪೯ ॥

ಅಫಾಲಕೃಷ್ಟಾ ಓಷಧ್ಯೋ ಗ್ರಾಮ್ಯಾರಣ್ಯಾಸ್ತು ಸರ್ವಶಃ ।
ವೃಕ್ಷಾ ಗುಲ್ಮಾ ಲತಾವಲ್ಲೀ ವೀರುಧಸ್ತೃಣ ಜಾತಯಃ ॥ ೧೫೦ ॥

ಮೂಲೈಃ ಫಲೈಶ್ಚ ರೋಹಿಣ್ಯೋ ಗೃಹ್ಣ್ ಪುಷ್ಪೈಶ್ಚ ಜಾಯತೇ ।
ಪೃಥ್ವೀ ದುಗ್ಧಾ ತು ಬೀಜಾನಿ ಯಾನಿ ಪೂರ್ವಂ ಸ್ವಯಂಭುವಾ ॥ ೧೫೧ ॥

---

೧೪೬. ಮೇಲೆ ಹೇಳಿದ ಧಾನ್ಯಗಳು ಗ್ರಾಮದ ಜನರಿಗೆ ಬೇಕಾಗುವ, ಹಳ್ಳಿಯಲ್ಲಿ ಬೆಳೆಯತಕ್ಕ ಧಾನ್ಯಗಳಾಗಿವೆ. ಓಷಧಿಗಳ ಸಂಬಂಧಿಯೂ, ಗ್ರಾಮ್ಯಾರಣ್ಯಗಳಲ್ಲಿ ಬೆಳೆಯುವುವು, ಯಾಗೋಪಯುಕ್ತಗಳೂ ಆದ ಧಾನ್ಯಗಳು ಯಾವುವೆಂದರೆ,

೧೪೭-೧೪೮. ಬತ್ತ, ಯವ, ಉದ್ದು, ಗೋಧಿ, ಜೀರಿಗೆ, ಎಳ್ಳು, ನವಣೆ, ಹುರಳಿ, ಸಾವೆ, ಕಾಡುಬತ್ತ, ಕಾಡುಎಳ್ಳು, ಕಾಡುಗೋಧಿ, ಕೊನ್ನಾರಿಬೀಜ, ಬಿದರುಬೀಜ, ಜೋಳ, ಇವು ಯಜ್ಞೋಪಯುಕ್ತಗಳಾದ ಧಾನ್ಯಗಳಾಗಿವೆ.

೧೪೯. ತ್ರೇತಾಯುಗದ ಆದಿಭಾಗದಲ್ಲಿ ಮೇಲೆ ಹೇಳಿದ ಹದಿನಾಲ್ಕು ಧಾನ್ಯಗಳು, ಗ್ರಾಮ ಮತ್ತು ಅರಣ್ಯಗಳಲ್ಲಿ ಹುಟ್ಟಿ ಜೀವನಕ್ಕೆ ಉಪಯುಕ್ತಗಳಾದುವು.

೧೫೦. ವ್ಯವಸಾಯವಿಲ್ಲದೆಯೇ ಸ್ವತಃ ಬೆಳೆಯುವ ಮರ, ಗಿಡ, ಬಳ್ಳಿ, ಲತೆ, ಓಷಧಿ ಇವೇ ಮೊದಲಾದವು ಗ್ರಾಮ್ಯಾರಣ್ಯಗಳಲ್ಲಿ ಜನಿಸುವ ತೃಣಜಾತಿಗೆ ಸೇರಿವೆ

೧೫೧. ಬ್ರಹ್ಮದೇವನು ಪೂರ್ವದಲ್ಲಿ ಫಲ, ಮೂಲ, ಪುಷ್ಪ ಇವುಗಳಿಂದ ಬೆಳೆಯುವ ಬೀಜಾದಿಗಳನ್ನು ಹೇಗೆ ಸೃಷ್ಟಿಸಿದನೋ ಹಾಗೆಯೇ ಈಗಲೂ ಸಹ ಭೂಮಿಯಲ್ಲಿ ಅವೆಲ್ಲವನ್ನೂ ಸೃಷ್ಟಿಸಿದನು.

ಋತು ಪುಷ್ಪ ಫಲಾಸ್ತಾ ವೈ ಓಷಧ್ಯೋ ಜಜ್ಞಿರೇ ತ್ವಿಹ ।
ಯದಾ ಪ್ರಸೃಷ್ಟಾ ಓಷಧ್ಯೋ ನ ಪ್ರರೋಹಂತಿ ತಾಃ ಪುನಃ ॥ ೧೫೨ ॥

ತತಸ ತಾಸಾಂ ವೃತ್ತ್ಯರ್ಥಂ ವಾರ್ತೋಪಾಯಂ ಚಕಾರ ಹ ।
ಬ್ರಹ್ಮಾ ಸ್ವಯಂಭೂರ್ಭಗವಾನ್ ದೃಷ್ಟ್ವಾ ಸಿದ್ಧಿಂತು ಕರ್ಮಜಾಂ ॥ ೧೫೩ ॥

ತತಃ ಪ್ರಭೃತ್ಯಥೌಷಧ್ಯಃ ಕೃಷ್ಟಪಚ್ಯಾ ಜಜ್ಞಿರೇ ।
ಸಂಸಿದ್ಧಾಯಾಂ ತು ವಾರ್ತಾಯಾಂ ತತಸ್ತಾಸಾಂ ಸ್ವಯಂಭುವಃ ॥ ೧೫೪ ॥

ಯೇ ವೈ ಪರಿಗೃಹೀತಾರ ಸ್ತಾಸಾಮಾಸನ್ ವಿಧಾತ್ಮಕಾಃ ।
ಇತರೇಷಾಂ ಕೃತತ್ರಾಣಾಃ ಸ್ಥಾಪಯಾಮಾಸ ಕ್ಷತ್ರಿಯಾನ್ ॥ ೧೫೫ ॥

ಉಪತಿಷ್ಠಂತಿ ಯೇತಾನ್ ವೈ ಯಾವಂತೋ ನಿರ್ಭಯಾಸ್ತಥಾ ।
ಸತ್ಯಂ ಬ್ರಹ್ಮ ಯಥಾ ಭೂತಂ ಬ್ರುವಂತೋ ಬ್ರಾಹ್ಮಣಾಶ್ಚತೇ ॥ ೧೫೬ ॥

---

೧೫೨. ಆಯಾ ಋತುಗಳಲ್ಲಿ ಫಲಪುಷ್ಪಗಳನ್ನು ಬಿಡುವ ಓಷಧಿಯೇ ಮೊದಲಾದವುಗಳು ಬೆಳೆದವು. ಪ್ರಥಮತಃ ಬೆಳೆದು ಮುದಿಯಾದ ಲತಾದಿಗಳು ಪುನಃ ಬೆಳೆಯದೆಯೇ ಹೋದವು.

೧೫೩. ಅನಂತರ ಸ್ವಯಂಭುವನೂ, ಪೂಜ್ಯನೂ ಆದ ಬ್ರಹ್ಮನು ಕರ್ಮದಿಂದುಂಟಾದ ಸಿದ್ಧಿಯನ್ನರಿತು ಪ್ರಜೆಗಳ ಜೀವನಕ್ಕಾಗಿ ವೃತ್ತಿಯನ್ನು ಕಲ್ಪಿಸಿದನು.

೧೫೪. ಅಂದಿನಿಂದ ಓಷಧಿಗಳು ವ್ಯವಸಾಯದಿಂದ ಬೆಳೆಯಲು ಯೋಗ್ಯಗಳಾದವು. ಹೀಗೆ ಜೀವನೋಪಾಯಕ್ಕಾಗಿ ಸಿದ್ಧಿಯನ್ನು ಪಡೆಯಲು ಪರಸ್ಪರ ಪ್ರಯತ್ನಗಳನ್ನು ಏರ್ಪಡಿಸಿದನು.

೧೫೫. ಬ್ರಹ್ಮನು ಯಾರು ಪ್ರಜೆಗಳನ್ನು ಸ್ವೀಕರಿಸಿ ಅವರಿಗೆ ಸಹಾಯವನ್ನು ಮಾಡುವರೋ ಅಂತಹ ಕ್ಷತ್ರಿಯರನ್ನು ಪ್ರಜಾರಕ್ಷಣೆಗಾಗಿ ಸ್ಥಾಪಿಸಿದನು.

೧೫೬. ಯಾರು ನಿರ್ಭಯರಾಗಿ ರಾಜರುಗಳಿಗೆ ನಿಜವಾದ ವಿಷಯವನ್ನು ಸತ್ಯನೂ, ಯಥಾಸ್ಥಿತನೂ ಆದ ಬ್ರಹ್ಮನನ್ನು ಸಹ ಉಪದೇಶಿಸಲು ಎದ್ದು ನಿಲ್ಲುವರೋ ಅಂತಹ ಬ್ರಾಹ್ಮಣರನ್ನು ಉಪದೇಶಕ್ಕಾಗಿ ಸೃಷ್ಟಿಸಿದನು

ಯೇ ಚಾನ್ಯೇಪ್ಯಬಲಾಸ್ತೇಷಾಂ ವೈಶ್ಯ ಸಂಕರ್ಮ ಸಂಸ್ಥಿತಾಃ ।
ಕೀನಾಶಾ ನಾಶಯಂತಿ ಸ್ಮ ಪೃಥಿವ್ಯಾಂ ಪ್ರಾಗತಂದ್ರಿತಾಃ ॥
ವೈಶ್ಯಾನೇವ ತು ತಾನಾಹುಃ ಕೀನಾಶಾನ್ ವೃತ್ತಿಸಾಧಕಾನ್ ॥ ೧೫೭ ॥

ಶೋಚಂತಶ್ಚ ದ್ರವಂತಶ್ಚ ಪರಿಚರ್ಯಾಸು ಯೇ ರತಾಃ ।
ನಿಸ್ತೇಜಸೋಲ್ಪವೀರ್ಯಾಶ್ಚ ಶೂದ್ರಾಸ್ತಾನಬ್ರವೀತ್ತು ಸಃ ॥ ೧೫೮ ॥

ತೇಷಾಂ ಕರ್ಮಾಣಿ ಧರ್ಮಾಂಶ್ಚ ಬ್ರಹ್ಮಾತು ವ್ಯದಧಾತ್ಪ್ರಭುಃ ।
ಸಂಸ್ಥಿತೌ ಪ್ರಾಕೃತಾಯಾಂತು ಚಾತುರ್ವರ್ಣ್ಯಸ್ಯ ಸರ್ವಶಃ ॥ ೧೫೯ ॥

ಪುನಃ ಪ್ರಜಾಸ್ತು ತಾ ಮೋಹಾತ್ ತಾನ್ ಧರ್ಮಾಂಸ್ತಾನಪಾಲಯನ್ ।
ವರ್ಣಧರ್ಮೈರಜೀವಂತ್ಯೋ ವ್ಯರುಧ್ಯಂತ ಪರಸ್ಪರಂ ॥ ೧೬೦ ॥

---

೧೫೭. ವೈಶ್ಯಕರ್ಮದಲ್ಲಿ ನಿರತರೂ, ಅಬಲರೂ ಆದ ಯಾವ ಜನರು ಪೂರ್ವದಲ್ಲಿ ಅಲಸರಾಗಿ ಪರರನ್ನು ನಿಶಾಚರರಂತೆ ಹಿಂಸಿಸುತ್ತಿದ್ದರೋ ಅಂತಹ ಕೀನಾಶ ನಾಮಕರೂ, ವೃತ್ತಿಸಾಧಕರೂ ಆದ ಅವರನ್ನು ವೈಶ್ಯರೆಂದು ಕರೆಯುತ್ತಾರೆ.

೧೫೮. ಯಾರು ದುಃಖಿಗಳೂ, ಆತುರವುಳ್ಳವರೂ, ಪರಸೇವಾನಿರತರೂ, ಅಶಕ್ತರೂ, ಕಾಂತಿಹೀನರೂ ಆಗಿರುವರೋ ಅಂತಹವರನ್ನು ಶೂದ್ರರೆಂದು ಕರೆಯುತ್ತಾರೆ.

೧೫೯. ಪ್ರಭುವಾದ ಬ್ರಹ್ಮದೇವನು ಪೂರ್ವೋಕ್ತರಾದ ಪ್ರಜೆಗಳಿಗೆ ಪ್ರತ್ಯೇಕ ಪ್ರತ್ಯೇಕಗಳಾದ ಧರ್ಮಕರ್ಮಗಳನ್ನು ಏರ್ಪಡಿಸಿ ಪ್ರಕೃತಿಗನುಗುಣವಾಗಿ ಆ ಚಾತುರ್ವರ್ಣ್ಯದವರಿಗೂ ಜೀವನವನ್ನು ಸೃಷ್ಟಿಸಿದನು

೧೬೦. ಆಗ ಆ ಪ್ರಜೆಗಳು ಅಜ್ಞಾನದಿಂದ ತಮ್ಮ ತಮ್ಮ ಧರ್ಮಗಳನ್ನು ಪಾಲಿಸದೆ, ಅವರವರ ಜಾತಿಯ ಕರ್ಮಗಳನ್ನು ಮಾಡದೆಯೇ, ಜೀವನೋಪಾಯವನ್ನು ಹೊಂದದೆಯೇ ಪರಸ್ಪರ ದ್ವೇಷಾಸೂಯೆಗಳನ್ನು ಮಾಡುತ್ತಿದ್ದರು.

ಬ್ರಹ್ಮಾ ತಮರ್ಥಂ ಬುಧ್ವಾ ತು ಯಾಥಾತಥ್ಯೇನ ವೈ ಪ್ರಭುಃ ।
ಕ್ಷತ್ರಿಯಾಣಾಂ ಬಲಂ ದಂಡಂ ಯುದ್ಧಮಾಜೀವಮಾದಿಶತ್ ॥ ೧೬೧ ॥

ಯಾಜನಾಧ್ಯಾಪನಂ ಚೈವ ತೃತೀಯಂ ಚ ಪರಿಗ್ರಹಂ ।
ಬ್ರಾಹ್ಮಣಾನಾಂ ಪ್ರಭುಸ್ತೇಷಾಂ ಕರ್ಮಾಣ್ಯೇತಾನ್ಯಥಾದಿಶತ್ ॥ ೧೬೨ ॥

ಪಶುಪಾಲ್ಯಂ ಚ ವಾಣಿಜ್ಯಂ ಕೃಷಿಂ ಚೈವ ವಿಶಾಂ ದದೌ ।
ಶಿಲ್ಪಾಜೀವಂ ಭೃತಿಂಚೈವ ಶೂದ್ರಾಣಾಂ ವ್ಯದಧಾತ್ ಪ್ರಭುಃ ॥ ೧೬೩ ॥

ಸಾಮಾನ್ಯಾನಿ ತು ಕರ್ಮಾಣಿ ಬ್ರಹ್ಮಕ್ಷತ್ರ ವಿಶಾಂ ಪುನಃ ।
ಯಜನಾಧ್ಯಯನಂ ಧ್ಯಾನಂ ಸಾಮಾನ್ಯಾನಿ ತು ತೇಷು ಚ ॥ ೧೬೪ ॥

ಕರ್ಮಾಜೀವಂ ತತೋ ದತ್ವಾ ತೇಭ್ಯಶ್ಚೈವ ಪರಸ್ಪರಂ ।
ಲೋಕಾಂತರೇಷು ಸ್ಥಾನಾನಿ ತೇಷಾಂ ಸಿದ್ಧ್ಯಾದದತ್ ಪ್ರಭುಃ ॥ ೧೬೫ ॥

---

೧೬೧. ಬ್ರಹ್ಮದೇವನು ಈ ವಿಷಯವನ್ನು ಯಥಾರ್ಥವಾಗಿ ಅರಿತು ಸರಿಯಾವ ಧರ್ಮಗಳನ್ನು ಸ್ಥಾಪನೆಮಾಡುವುದಕ್ಕಾಗಿ ಕ್ಷತ್ರಿಯರಿಗೆ ಜೀವಿತಕಾಲದವರೆಗೂ ಶಕ್ತಿ, ಶಿಕ್ಷೆ, ಯುದ್ಧ ಇವನ್ನು ಸಂಪೂರ್ಣವಾಗಿ ಏರ್ಪಡಿಸಿದನು.

೧೬೨. ಭಗವಂತನು ಬ್ರಾಹ್ಮಣರಿಗೆ ಯಜನ, ಅಧ್ಯಾಪನ ದಾನ ಈ ಮೂರು ಕರ್ಮಗಳನ್ನು ಏರ್ಪಡಿಸಿದನು.

೧೬೩. ಪ್ರಭುವಾದ ಬ್ರಹ್ಮನು ವೈಶ್ಯರಿಗೆ ಪಶುಪಾಲನೆ, ವ್ಯಾಪಾರ ಮತ್ತು ಕೃಷಿ ಈ ಮೂರನ್ನೂ ಜೀವನಕ್ಕಾಗಿ ಏರ್ಪಡಿಸಿದನು. ಮತ್ತು ಶಿಲ್ಪಜೀವನ, ವೃತ್ತಿ (ವೇತನ) ಇವುಗಳನ್ನು ಶೂದ್ರರಿಗೆ ಜೀವನಕ್ಕಾಗಿ ನಿಯಮಿಸಿದನು.

೧೬೪. ಬ್ರಹ್ಮನು ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರು ಇವರಿಗೆ ಯಜನ, ಅಧ್ಯಯನ, ದಾನ ಇವು ಮೂರೂ ಸಾಮಾನ್ಯಧರ್ಮಗಳಾಗಿಯೂ, ಮೇಲೆ ಹೇಳಿದ ಇತರ ವಿಶೇಷಧರ್ಮಗಳು ಜೀವನಕ್ಕಾಗಿಯೂ ನಿಯಮಿಸಿದನು.

೧೬೫. ಸ್ವಾಮಿಯಾದ ಭಗವಂತನು ಈ ನಾಲ್ಕುವರ್ಣದವರಿಗೂ ಜೀವನಕ್ಕಾಗಿ ಕರ್ಮಗಳನ್ನು ಗೊತ್ತುಮಾಡಿ ಸ್ವಧರ್ಮನಿರತರಾದವರಿಗೆ ಲೋಕಾಂತರಗಳಲ್ಲಿ ಸ್ಥಾನಗಳನ್ನು ಏರ್ಪಡಿಸಿದನು.

ಪ್ರಾಜಾಪತ್ಯಂ ಬ್ರಾಹ್ಮಣಾನಾಂ ಸ್ಮೃತಂ ಸ್ಥಾನಂ ಕ್ರಿಯಾವತಾಂ ।
ಸ್ಥಾನಮೈಂದ್ರಂ ಕ್ಷತ್ರಿಯಾಣಾಂ ಸಂಗ್ರಾಮೇಷ್ವಪಲಾಯಿನಾಂ ॥ ೧೬೬ ॥

ವೈಶ್ಯಾನಾಂ ಮಾರುತಂ ಸ್ಥಾನಂ ಸ್ವಧರ್ಮಮುಪಜೀವಿನಾಂ ।
ಗಾಂಧರ್ವಂ ಶೂದ್ರಜಾತೀನಾಂ ಪ್ರತಿಚಾರೇಣ ತಿಷ್ಠತಾಂ ॥ ೧೬೭ ॥

ಸ್ಥಾನಾನ್ಯೇತಾನಿ ವರ್ಣಾನಾಂ ವ್ಯತ್ಯಾಚಾರವತಾಂ ಸ್ವಯಂ ।
ತತಃ ಸ್ಥಾನೇಷು ವರ್ಣೇಷು ಸ್ಥಾಪಯಾಮಾಸ ಚಾಶ್ರಮಾರ್ ॥ ೧೬೮ ॥

ಗೃಹಸ್ಥೋ ಬ್ರಹ್ಮಚಾರಿತ್ವಂ ವಾನಪ್ರಸ್ಥಂ ಸಭಿಕ್ಷುಕಂ ।
ಆಶ್ರಮಾಂಶ್ಚತುರೋ ಹ್ಯೇತಾರ್ ಪೂರ್ವಮಾಸ್ಥಾಪಯುತ್ ಪ್ರಭುಃ ॥ ೧೬೯ ॥

ವರ್ಣಕರ್ಮಾಣಿ ಯೇ ಕೇಚಿತ್ತೇಷಾಮಿಹ ನ ಕುರ್ವತೇ ।
ಕುತಃ ಕರ್ಮಕ್ಷಿತಿಂ ಪ್ರಾಹುರಾಶ್ರಮಸ್ಥಾನವಾಸಿನಃ ॥ ೧೭೦ ॥

---

೧೬೬ ಭಗವಂತನು ಸದಾಚಾರವಂತರೂ, ಸ್ವಧರ್ಮನಿರತರೂ ಆದ ಬ್ರಾಹ್ಮಣರಿಗೆ ಬ್ರಹ್ಮಲೋಕವನ್ನೂ, ಯುದ್ಧದಲ್ಲಿ ಭಯದಿಂದ ಪಲಾಯನಮಾಡದೆ ಹೋರಾಡುವ ವೀರಕ್ಷತ್ರಿಯರಿಗೆ ಸ್ವರ್ಗಲೋಕವನ್ನೂ ಕೊಡುವನು.

೧೬೭. ಮತ್ತು ಸ್ವಧರ್ಮದಿಂದ ಜೀವಿಸುವ ವೈಶ್ಯರಿಗೆ ವಾಯುಲೋಕವನ್ನೂ, ಸೇವಾಸಕ್ತರೂ, ದ್ವೇಷಶೂನ್ಯರೂ ಆದ ಶೂದ್ರರಿಗೆ ಗಂಧರ್ವಲೋಕವನ್ನೂ ಏರ್ಪಡಿಸಿದನು.

೧೬೮. ಹೀಗೆ ಬ್ರಹ್ಮನು ಆಯಾ ವರ್ಣಾನುಸಾರವಾಗಿ ಸ್ವಧರ್ಮಗಳನ್ನು ಆಚರಿಸುವ ಪ್ರಜೆಗಳಿಗೆ ಅಲ್ಲಲ್ಲಿ ಸ್ಥಾನಗಳನ್ನು ಏರ್ಪಡಿಸಿ ಆಶ್ರಮಗಳನ್ನೂ ಕೂಡ ಸ್ಥಾಪಿಸಿದನು.

೧೬೯. ಸ್ವಾಮಿಯಾದ ಬ್ರಹ್ಮನು ಪೂರ್ವದಲ್ಲಿ ಗೃಹಸ್ಥ, ಬ್ರಹ್ಮಚಾರಿ, ವಾನಪ್ರಸ್ಥ, ಸನ್ಯಾಸಿ ಎಂಬ ನಾಲ್ಕು ಆಶ್ರಮಗಳನ್ನೂ ಕೂಡ ಸ್ಥಾಪಿಸಿದನು.

೧೭೦. ಈ ಲೋಕದಲ್ಲಿ ಯಾರು ತಮ್ಮತಮ್ಮ ವರ್ಣಾಶ್ರಮಧರ್ಮಗಳನ್ನು ಮಾಡುವುದಿಲ್ಲವೋ ಅಂತಹವರನ್ನು ಕರ್ಮಭ್ರಷ್ಟರೆಂದೂ, ಕರ್ಮವಿರೋಧಿಗಳೆಂದೂ ಸಜ್ಜನರು ಹೇಳುವರು.

ಬ್ರಹ್ಮಾ ತಾನ್ ಸ್ಥಾಪಯಾಮಾಸ ಆಶ್ರಮಾನ್ನಾಮ ನಾಮತಃ ।
ನಿರ್ದೇಶಾರ್ಥಂ ತತಸ್ತೇಷಾಂ ಬ್ರಹ್ಮಾಧರ್ಮಾನ್ ಪ್ರಭಾಷತ ।
ಪ್ರಸ್ಥಾನಾನಿ ಚ ತೇಷಾಂ ವೈ ಯಮಾಂಶ್ಚ ನಿಯಮಾಂಶ್ಚ ಹ ॥ ೧೭೧ ॥

ಚಾತುರ್ವರ್ಣಾತ್ಮಕಃ ಪೂರ್ವಂ ಗೃಹಸ್ಥಾಶ್ಚಾಶ್ರಮಃ ಸ್ಮೃತಃ ।
ತ್ರಯಾಣಾಮಾಶ್ರಮಾಣಾಂ ಚ ಪ್ರತಿಷ್ಠಾಯೋನಿರೇವ ಚ ।
ಯಥಾಕ್ರಮಂ ಪ್ರವಕ್ಷ್ಯಾಮಿ ಯಮ್ಯೈಶ್ಚ ನಿಯಮ್ಯೈಶ್ಚ ತೇ ॥ ೧೭೨ ॥

ದಾರಾಗ್ನಯೋಽಥಾತಿಥೇಯ ಇಜ್ಯಾಶ್ರಾದ್ಧ ಕ್ರಿಯಾಃ ಪ್ರಜಾಃ ।
ಇತ್ಯೇಷ ವೈ ಗೃಹಸ್ಥಸ್ಯ ಸಮಾಸಾದ್ಧರ್ಮಸಂಗ್ರಹಃ ॥ ೧೭೩ ॥

ದಂಡೀ ಚ ಮೇಖಲೀ ಚೈವ ಹ್ಯಧಃಶ್ಯಾಯೀ ತಥಾ ಜಟೀ ।
ಗುರುಶುಶ್ರೂಷಣಂ ಭೈಕ್ಷ್ಯಂ ವಿದ್ಯಾದ್ವೈ ಬ್ರಹ್ಮಚಾರಿಣಃ ॥ ೧೭೪ ॥

---

೧೭೧. ಬ್ರಹ್ಮದೇವನು ಪ್ರಥಮತಃ ನಾಲ್ಕು ಆಶ್ರಮಗಳನ್ನೂ ಸ್ಥಾಪಿಸಿ ಅವುಗಳನ್ನು ತಿಳಿಯುವುದಕ್ಕಾಗಿ ಪ್ರತ್ಯೇಕವಾದ ಧರ್ಮಗಳನ್ನೂ ಅವರಿಗೆ ಗೊತ್ತುಮಾಡಿ ಸ್ಥಾನಮಾನಾದಿಗಳನ್ನೂ, ಯಮನಿಯಮಾದಿಗಳನ್ನೂ, ಸ್ಥಾಪಿಸಿದನು.

೧೭೨ ಎಲೈ ಬ್ರಾಹ್ಮಣರೇ, ಬ್ರಹ್ಮನು ಪೂರ್ವದಲ್ಲಿ ಗೃಹಸ್ಥಾಶ್ರಮವು ಮಿಕ್ಕ ಮೂರು ಆಶ್ರಮಗಳಿಗೂ ಕಾರಣವೂ, ಸಾಧಕವೂ, ಆಗಿರುವುದರಿಂದ ಆ ಮೂರು ಆಶ್ರಮಗಳನ್ನೂ ಯಮನಿಯಮಗಳೊಂದಿಗೆ ನಿರೂಪಿಸುವೆನು ಕೇಳಿ.

೧೭೩. ಗೃಹಸ್ಥನಿಗೆ ವಿವಾಹ, ಅಗ್ನಿಹೋತ್ರ, ಅತಿಥಿಸತ್ಕಾರ, ಯಾಗ, ಶ್ರಾದ್ಧ, ಪ್ರಜೋತ್ಪತ್ತಿ ಇವು ಸಾಮಾನ್ಯ ಧರ್ಮಗಳೆಂದು ತಿಳಿಯಬೇಕು. ಇವನ್ನು ಸಂಕ್ಷೇಪವಾಗಿ ನಿರೂಪಿಸುವೆನು.

೧೭೪. ಬ್ರಹ್ಮಚಾರಿಗೆ ದಂಡಕಾಷ್ಟ, ಮೇಖಲ, ಭೂಶಯನ, ಜಟೆ, ಗುರುಸೇವೆ ಭಿಕ್ಷಾಟನ, ವೇದಾಧ್ಯಯನ ಇವು ಮುಖ್ಯವಾದ ಧರ್ಮಗಳೆಂದು ತಿಳಿಯಬೇಕು.

ಚೀರಪತ್ರಾಜಿನಾನಿ ಸ್ಯುರ್ಧಾನ್ಯಮೂಲಫಲೌಷಧಂ ।
ಉಭೇ ಸಂಧ್ಯೇವಗಾಹಶ್ಚ ಹೋಮಶ್ಚಾರಣ್ಯವಾಸಿನಾಂ ॥ ೧೭೫ ॥

ಆಸನ್ನಮುಸಲೇ ಭೈಕ್ಷಮಸ್ತೇಯಂ ಶೌಚಮೇವ ಚ ।
ಅಪ್ರಮಾದೋ ವ್ಯವಾಯಶ್ಚ ದಯಾ ಭೂತೇಷು ಚ ಕ್ಷಮಾ ॥ ೧೭೬ ॥

ಅಕ್ರೋಧೋ ಗುರುಶುಶ್ರೂಷಾ ಸತ್ಯಂ ಚ ದಶಮಂ ಸ್ಮೃತಂ ।
ದಶಲಕ್ಷಣಿಕೋ ಹ್ಯೇಷ ಧರ್ಮಃ ಪ್ರೋಕ್ತಃ ಸ್ವಯಂಭುವಾ ॥ ೧೭೭ ॥

ಭಿಕ್ಷೋರ್ವ್ರತಾನಿ ಪಂಚಾತ್ರ ಪಂಚೈವೋಪವ್ರತಾನಿ ಚ ।
ಆಚಾರಶುದ್ಧಿರ್ನಿಯಮಃ ಶೌಚಂ ಚ ಪ್ರತಿಕರ್ಮ ಚ ।
ಸಮ್ಯಗ್ದರ್ಶನಮಿತ್ಯೇವಂ ಪಂಚೈವೋಪವ್ರತಾನಿ ಚ ॥ ೧೭೮ ॥

---

೧೭೫. ಅರಣ್ಯವಾಸಿಗಳಾದ ವಾನಪ್ರಸ್ಥರಿಗೆ ಚೀರವಸ್ತ್ರ, ಕೃಷ್ಣಾಜಿನ, ಇವುಗಳ ಧಾರಣಫಲ, ಮೂಲ, ಔಷಧ, ಧಾನ್ಯ ಇವುಗಳ ಅಶನ, ಸ್ನಾನ, ಸಂಧ್ಯಾ, ಜಪತಪ ಹೋಮ ಇವುಗಳು ಮುಖ್ಯವಾದ ಧರ್ಮಗಳಾಗಿವೆ.

೧೭೬-೧೭೭. ಬ್ರಹ್ಮದೇವನು ಸಮೀಪದಲ್ಲಿದ್ದ ಗೃಹಸ್ಥರಲ್ಲಿ ಭಿಕ್ಷೆ, ಅಸ್ತೇಯ, ಶೌಚ, ಅಪ್ರಮಾದ, ಸ್ತ್ರೀ ಸಂಗತ್ಯಾಗ, ದಯಾ, ಕ್ಷಮಾ, ಅಕ್ರೋಧ, ಗುರುಸೇವೆ, ಸತ್ಯ ಮತ್ತು ಧರ್ಮ, ಇವು ಹತ್ತು ಧರ್ಮಗಳು, ಯತಿಯಲ್ಲಿರಬೇಕಾದ ಮುಖ್ಯ ಧರ್ಮಗಳೆಂದು ಕ್ಲಿಪ್ತಮಾಡಿರುವನು.

೧೭೮. ಸನ್ಯಾಸಿಗಳಿಗೆ ಮುಖ್ಯವ್ರತಗಳು ಐದೂ, ಉಪವ್ರತಗಳು ಐದೂ, ಇವೆಯೆಂದು ಹೇಳುವರು. ಅವುಗಳಲ್ಲಿ ಪರಿಶುದ್ಧವಾದ ಆಚಾರ, ನಿಯಮ, ಶೌಚ, ಪ್ರತಿಕರ್ಮ ಮತ್ತು (ದೇವರ ಅಲಂಕಾರ), ಸಮ್ಯಗ್ದರ್ಶನ, ಇವು ಐದೂ ಉಪವ್ರತ ಗಳಾಗಿವೆ.

ಧ್ಯಾನಂ ಸಮಾಧಿರ್ಮನಸೇಂದ್ರಿಯಾಣಾಂ
ಸಸಾಗರೈರ್ಭೈಕ್ಷಮಥೋಪಗಮ್ಯ ॥
ಮೌನಂ ಪವಿತ್ರೋಪಚಿತೈರ್ವಿಮುಕ್ತಿಃ
ಪರಿವ್ರಜೋ ಧರ್ಮಮಿಮಂ ವದಂತಿ ॥ ೧೭೯ ॥

ಸರ್ವೇ ತೇ ಶ್ರೇಯಸೇ ಪ್ರೋಕ್ತಾ ಆಶ್ರಮಾ ಬ್ರಹ್ಮಣಾ ಸ್ವಯಂ ।
ಸತ್ಯಾರ್ಜವಂ ತಪಃ ಕ್ಷಾಂತಿರ್ಯೋಗೇಜ್ಯಾ ದಮಪೂರ್ವಿಕಾ ॥ ೧೮೦ ॥

ವೇದಾಃ ಸಾಂಗಾಶ್ಚ ಯಜ್ಞಾಶ್ಚ ವ್ರತಾನಿ ನಿಯಮಾಶ್ಚ ಯೇ ।
ನ ಸಿಧ್ಯಂತಿ ಪ್ರದುಷ್ಟಸ್ಯ ಭಾವದೋಷ ಉಪಾಗತೇ ॥ ೧೮೧ ॥

ಬಹಿಃ ಕರ್ಮಾಣಿ ಸರ್ವಾಣಿ ಪ್ರಸಿದ್ಧ್ಯಂತಿ ಕದಾಚನ ।
ಅಂತರ್ಭಾವ ಪ್ರದುಷ್ಟಸ್ಯ ಕುರ್ವತೋಽಪಿ ಪರಾಕ್ರಮಾ ॥ ೧೮೨ ॥

ಸರ್ವಸ್ವಮಪಿ ಯೋ ದದ್ಯಾತ್ ಕಲುಷೇಣಾಂತರಾತ್ಮನಾ ।
ನ ತೇನ ಧರ್ಮಭಾಕ್ ಸ ಸ್ಯಾದ್ಭಾವ ಏವಾತ್ರ ಕಾರಣಂ ॥ ೧೮೩ ॥

---

೧೭೯. ಸನ್ಯಾಸಿಗಳಿಗೆ ಧ್ಯಾನ, ಇಂದ್ರಿಯನಿಗ್ರಹ, ಸಮುದ್ರದವರೆಗೂ ಭಿಕ್ಷಾಟನ, ಮೌನ, ಪವಿತ್ರವ್ರತ, ಅಚಾಂಚಲ್ಯ, ಇವುಗಳು ಮುಖ್ಯ ವ್ರತಗಳಾಗಿವೆ.

೧೮೦-೧೮೧. ಬ್ರಹ್ಮದೇವನು ಆ ನಾಲ್ಕು ಆಶ್ರಮಗಳನ್ನು ಪ್ರಜೆಗಳ ಶ್ರೇಯಸ್ಸಿಗಾಗಿ ಸೃಷ್ಟಿಸಿರುವನು. ಯಾವನು ದುಷ್ಟನೂ, ದುರಭಿಪ್ರಾಯವುಳ್ಳವನೂ, ಆಗಿರುವನೋ ಅಂತಹವನಿಗೆ ಸತ್ಯ, ಋಜುತ್ವ. ತಪಸ್ಸೆ, ಕ್ಷಾಂತಿ, ಯೋಗ, ಯಾಗ, ಶಮಾ, ದಮ, ವೇದ, ವೇದಾಂಗ, ಯಜ್ಞ, ವ್ರತ, ನಿಯಮ, ಇವುಗಳು ಎಂದಿಗೂ ಸಿದ್ಧಿಯಾಗುವುದಿಲ್ಲ. ಇವುಗಳೆಲ್ಲವೂ ವ್ಯರ್ಥಗಳೇ ಆಗುವುವು.

೧೮೨. ಮನುಷ್ಯನು ಮನಃಶುದ್ಧಿಯಿಲ್ಲದೇ ಶೌರ್ಯದಿಂದ ಎಷ್ಟೇ ಪ್ರಯತ್ನ ಮಾಡಿದರೂ ಲೌಕಿಕ ವ್ಯಾಪಾರಗಳು ಒಂದು ವೇಳೆ ಕೈಗೂಡಿದರೂ ಪಾರಮಾರ್ಥಿಕಗಳಾದ ಸತ್ಯಧರ್ಮಾದಿಗಳು ಅವನಿಗೆ ಎಂದಿಗೂ ಕೈಗೂಡಲಾರವು.

೧೮೩. ಯಾವನು ಮನಶ್ಶುದ್ಧಿಯಿಲ್ಲದೇ ಸರ್ವಸ್ವವನ್ನು ದಾನಮಾಡುವನೋ ಅವನು ಎಂದಿಗೂ ಧರ್ಮಕ್ಕೆ ಪಾತ್ರನಾಗಲಾರನು. ಏಕೆಂದರೆ ಸರ್ವಕ್ಕೂ ಮನಶ್ಶುದ್ಧಿಯೇ ಮುಖ್ಯ ಕಾರಣವಾಗಿದೆ. ಇದರಿಂದ ಅವನಿಗೆ ಧರ್ಮಗಳು ಎಂದಿಗೂ ಸಿದ್ಧಿಸಲಾರವು.

ಏವಂ ದೇವಾಃ ಸಪಿತರಃ ಋಷಯೋ ಮನವಸ್ತಥಾ ।
ತೇಷಾಂ ಸ್ಥಾನಮಮುಷ್ಮಿಂಸ್ತು ಸಂಸ್ಥಿತಾನಾಂ ಪ್ರಚಕ್ಷತೇ ॥ ೧೮೪ ॥

ಅಷ್ಟಾಶೀತಿಸಹಸ್ರಾಣಿ ಋಷೀಣಾಮೂರ್ಧ್ವರೇತಸಾಂ ।
ಸ್ಮೃತಂ ತು ತೇಷಾಂ ತತ್ಸ್ಥಾನಂ ತದೇವ ಗುರುವಾಸಿನಂ ॥ ೧೮೫ ॥

ಸಪ್ತರ್ಷೀಣಾಂ ತು ಯತ್ ಸ್ಥಾನಂ ಸ್ಮೃತಂ ತದ್ವೈ ದಿವೌಕಸಾಂ ।
ಪ್ರಾಜಾಪತ್ಯಂ ಗೃಹಸ್ಥಾನಾಂ ನ್ಯಾಸಿನಾಂ ಬ್ರಹ್ಮಣಃ ಕ್ಷಯಃ ।
ಯೋಗಿನಾಮಮೃತಂ ಸ್ಥಾನಂ ನಾನಾಥೀನಾಂ ನ ವಿದ್ಯತೇ ॥ ೧೮೬ ॥

ಸ್ಥಾನಾನ್ಯಾಶ್ರಮಿಣಾಂ ತಾನಿ ಯೇ ಸ್ವಧರ್ಮೇ ವ್ಯವಸ್ಥಿತಾಃ ।
ಚತ್ವಾರ ಏತೇ ಪಂಥಾನೋ ದೇವಯಾನಾ ವಿನಿರ್ಮಿತಾಃ ॥ ೧೮೭ ॥

---

೧೮೪. ಹೀಗೆಯೇ ದೇವತೆಗಳು, ಪಿತೃಗಳೂ, ಋಷಿಗಳೂ, ಮನುಗಳೂ, ಇವರುಗಳಿಗೂ ಮೇಲಿನ ಧರ್ಮಗಳು ಸಿದ್ಧವಾಗಿವೆ. ಇವರಿಗೆ ಈ ಲೋಕದಲ್ಲಿ ಸ್ಥಾನ ಮಾನಗಳನ್ನು ತಿಳಿಸುವೆನು ಕೇಳಿ ಎಂದನು.

೧೮೫. ಊರ್ಧ್ವರೇತಸ್ಕರೂ, (ಜಿತೇಂದ್ರಿಯರೂ), ಎಂಬತ್ತೆಂಟು ಸಹಸ್ರ ಸಂಖ್ಯಾಕರೂ, ಆದ ಮಹರ್ಷಿಗಳಿಗೆ ಗುರುವಾದ ಬ್ರಹ್ಮದೇವನ ಸತ್ಯಲೋಕವೇ ಸಿದ್ಧವಾದ ಸ್ಥಾನವಾಗಿದೆ.

೧೮೬. ಸಪ್ತರ್ಷಿಗಳಿಗೂ ದೇವತೆಗಳಿಗೂ ಸ್ವರ್ಗಲೋಕವೂ, ಗೃಹಸ್ಥರಿಗೂ ಸನ್ಯಾಸಿಗಳಿಗೂ ಬ್ರಹ್ಮನ ಸತ್ಯಲೋಕವೂ, ಯೋಗಿಗಳಿಗೆ ಮೋಕ್ಷವೂ, ಮುಖ್ಯ ಸ್ಥಾನವಾಗಿವೆ. ಯಾವನು ತನ್ನಿಷ್ಟಾನುಸಾರವಾದ ಧರ್ಮಗಳನ್ನು ಆಶ್ರಯಿಸುವನೋ ಅವನಿಗೆ ಯಾವ ಲೋಕವೂ ಇಲ್ಲ.

೧೮೭. ಯಾವ ಪ್ರಜೆಗಳು ಸ್ವಧರ್ಮಗಳಲ್ಲಿ ನಿರತರಾಗಿರುವರೋ ಅಂತಹವರ ನಾಲ್ಕು ವಿಧವಾದ ಆಶ್ರಮಗಳು ನಿರೂಪಿತವಾಗಿವೆ. ಈಗ ನಾಲ್ಕು ವಿಧಗಳಾದ ದೇವ ಯಾನಗಳು ನಿರ್ಮಿಸಲ್ಪಟ್ಟಿವೆಯೆಂದು ಹೇಳುವೆನು.

ಬ್ರಹ್ಮಣಾ ಲೋಕತಂತ್ರೇಣ ಆದ್ಯೇ ಮನ್ವಂತರೇ ಭುವಿ ।
ಪಂಥಾನೋ ದೇವಯಾನಾಯ ತೇಷಾಂ ದ್ವಾರಂ ರವಿಃ ಸ್ಮೃತಃ ॥ ೧೮೮ ॥

ತಥೈವ ಪಿತೃಯಾಣಾನಾಂ ಚಂದ್ರಮಾ ದ್ವಾರಮುಚ್ಯತೇ ।
ಏವಂ ವರ್ಣಾಶ್ರಮಾಣಾಂ ವೈ ಪ್ರವಿಭಾಗೇ ಕೃತೇ ತದಾ ।
ಯದಾಸ್ಯ ನ ವ್ಯವರ್ತಂತ ಪ್ರಜಾ ವರ್ಣಾಶ್ರಮಾತ್ಮಿಕಾಃ ॥ ೧೮೯ ॥

ತತೋನ್ಯಾ ಮಾನಸೀಃ ಸೋಥ ತ್ರೇತಾಮಧ್ಯೇಽಸೃಜತ್ ಪ್ರಜಾಃ ।
ಆತ್ಮನಃ ಸ್ವಶರೀರಾಚ್ಚ ತುಲ್ಯಾಶ್ಚೈವಾತ್ಮನಾ ತು ವೈ ॥ ೧೯೦ ॥

ತಸ್ಮಿಂಸ್ತ್ರೇತಾಯುಗೇ ತ್ವಾದ್ಯೇ ಮಧ್ಯಂ ಪ್ರಾಪ್ತೇ ಕ್ರಮೇಣ ತು ।
ತತೋನ್ಯಾ ಮಾನಸೀಃ ತತ್ರ ಪ್ರಜಾಃ ಸ್ರಷ್ಟುಂ ಪ್ರಚಕ್ರಮೇ ॥ ೧೯೧ ॥

---

೧೮೮. ಲೋಕಕರ್ತನಾದ ಬ್ರಹ್ಮದೇವನು ಪ್ರಥಮ ಮನ್ವಂತರದಲ್ಲಿ ಭೂಮಿಯಿಂದ ದೇವಲೋಕಗಳಿಗೆ ಹೋಗಲು ನಾಲ್ಕು ವಿಧಗಳಾದ ಮಾರ್ಗಗಳನ್ನು ಸೃಷ್ಟಿಸಿದನು. ಅವುಗಳಲ್ಲಿ ಸೂರ್ಯನು ದೇವಯಾನಕ್ಕೆ ಒಂದು ಮಾರ್ಗವಾಗಿ ಇರುವನು.

೧೮೯. ಪಿತೃಲೋಕಕ್ಕೆ ಹೋಗಲು ಚಂದ್ರನು ದ್ವಾರವಾಗಿರುವನು. ಹೀಗೆ ಆಗ ವರ್ಣಾಶ್ರಮಧರ್ಮಗಳು ಏರ್ಪಡಲಾಗಿ ಆ ಪ್ರಜೆಗಳು ವರ್ಣಾಶ್ರಮಧರ್ಮಗಳನ್ನು ಮೀರಿ ಸ್ವೇಚ್ಛೆಯಾಗಿ ನಡೆಯುತ್ತಿದ್ದರು.

೧೯೦. ಅನಂತರ ಬ್ರಹ್ಮದೇವನು ತ್ರೇತಾಯುಗದ ಮಧ್ಯಭಾಗದಲ್ಲಿ ತನ್ನ ಶರೀರದಿಂದಲೂ, ಮನಸ್ಸಿನಿಂದಲೂ, ತನಗೆ ಸಮರಾದ ಮಾನಸಿಕ ಮತ್ತು ದೈಹಿಕ ಪ್ರಜೆಗಳನ್ನು ಸೃಷ್ಟಿಮಾಡಿದನು.

೧೯೧. ಆ ಮೊದಲನೆಯ ತ್ರೇತಾಯುಗದ ಮಧ್ಯಭಾಗವು ಕ್ರಮವಾಗಿ ಪ್ರಾಪ್ತವಾಗಲು ಬ್ರಹ್ಮದೇವನು ಬೇರೆಯಾದ ಮಾನಸಿಕ ಪ್ರಜೆಗಳನ್ನು ಸೃಷ್ಟಿಸಲು ಉಪಕ್ರಮಿಸಿದನು.

ತತಃ ಸತ್ವರಜೋದ್ರಿಕ್ತಾಃ ಪ್ರಜಾಃ ಸೋಽಥಾಸೃಜತ್ಪ್ರಭುಃ ।
ಧರ್ಮಾರ್ಥಕಾಮಮೋಕ್ಷಾಣಾಂ ವಾರ್ತಾಯಾಶ್ಚೈವ ಸಾಧಿಕಾಃ ॥ ೧೯೨ ॥

ದೇವಾಶ್ಚ ಪಿತರಶ್ಚೈವ ಋಷಯೋ ಮನವಸ್ತಥಾ ।
ಯುಗಾನುರೂಪಾ ಧರ್ಮೇಣ ಯೈರಿಮಾ ವಿಚಿತಾಃ ಪ್ರಜಾಃ ॥ ೧೯೩ ॥

ಉಪಸ್ಥಿತೇ ತದಾ ತಸ್ಮಿನ್ ಪ್ರಜಾಧರ್ಮೇ ಸ್ವಯಂಭುವಃ ।
ಅಭಿದಧ್ಯೌ ಪ್ರಜಾಃ ಸರ್ವಾಃ ನಾನಾರೂಪಾಸ್ತು ಮಾನಸೀಃ ॥ ೧೯೪ ॥

ಪೂರ್ವೋಕ್ತಾ ಯಾ ಮಯಾ ತುಭ್ಯಂ ಜನಲೋಕಂ ಸಮಾಶ್ರಿತಾಃ ।
ಕಲ್ಪೇಽತೀತೇ ತು ತೇ ಹ್ಯಾಸನ್ ದೇವಾದ್ಯಾಸ್ತು ಪ್ರಜಾ ಇಹ ॥ ೧೯೫ ॥

ಧ್ಯಾಯತಸ್ತಸ್ಯ ತಾಃ ಸರ್ವಾಃ ಸಂಭೂತ್ಯರ್ಥಮುಪಸ್ಥಿತಾಃ ।
ಮನ್ವಂತರಕ್ರಮೇಣೇಹ ಕನಿಷ್ಠೇ ಪ್ರಥಮೇ ಮತಾಃ ॥ ೧೯೬ ॥

---

೧೯೨ ತರುವಾಯ ಬ್ರಹ್ಮದೇವನು ಸತ್ವರಜೋಗುಣಗಳ ಉದ್ರೇಕದಿಂದ ಪುನಃ ಧರ್ಮಾರ್ಥಕಾಮಮೋಕ್ಷಗಳಿಗೆ ಸಾಧಕರೂ, ಜೀವನಕ್ಕೆ ಸಹಾಯಕರೂ, ಆಗಿರುವ, ಪ್ರಜೆಗಳನ್ನು ಸೃಷ್ಟಿಸಿದನು.

೧೯೩. ಬ್ರಹ್ಮನು ಯುಗಾನುಗುಣರೂ, ಧರ್ಮಗಳಿಂದ ಪ್ರಖ್ಯಾತರೂ, ಆದ ದೇವತೆಗಳು, ಪಿತೃಗಳು, ಋಷಿಗಳು, ಮನುಗಳು ಇವರುಗಳನ್ನು ಸೃಷ್ಟಿಸಿದನು. ಇವರಿಂದ ಜಗತ್ತೆಲ್ಲವೂ ಪೂರ್ಣವಾದವು.

೧೯೪. ಆಗ ಸ್ವಾಮಿಯಾದ ಬ್ರಹ್ಮನು ಪ್ರಜಾಧರ್ಮಗಳು ಉಪಕ್ರಮವಾಗಲು ನಾನಾರೂಪಿಗಳೂ ಮಾನಸಿಕರೂ ಆದ ಸರ್ವಪ್ರಜೆಗಳನ್ನು ಸೃಷ್ಟಿಸಲು ಧ್ಯಾನಪರನಾದನು.

೧೯೫. ಮೊದಲು, ಯಾವ ಪ್ರಜೆಗಳು ಜನೋಲೋಕವನ್ನು ಆಶ್ರಯಿಸಿ ಇದ್ದರೋ ಅವರ ವಿಚಾರವನ್ನು ನಿಮಗೆ ಮೊದಲೇ ನಿರೂಪಿಸಿರುವೆನು. ಈ ಕಲ್ಪವು ಕಳೆಯಲಾಗಿ ಆ ದೇವಾದಿಗಳೇ ಪುನಃ ಸೃಷ್ಟಿಗೆ ವಿಷಯರಾದ ಪ್ರಜೆಗಳಾಗಿರುವರು.

೧೯೬. ತ್ರೇತಾಯುಗದ ಮೊದಲನೆಯ ಮತ್ತು ಅಂತ್ಯದ ಮನ್ವಂತರದಲ್ಲಿ ಯಾವ ಸೃಷ್ಟಿಯು ಕ್ರಮವಾಗಿ ಆಗಬೇಕೋ ಹಾಗೆಯೇ ಬ್ರಹ್ಮನು ಧ್ಯಾನಮಾಡಲು ಪ್ರಜೆಗಳ ಏಳಿಗೆಗಾಗಿ ಸರ್ವವೂ ಸಿದ್ಧವಾದುವು.

ಖ್ಯಾತ್ಯಾನುಬಂಧೈಸ್ತ್ರೈಸ್ತ್ರೈಸ್ತು ಸರ್ವಾರ್ಥೈರಿಹ ಭಾವಿತಾಃ ।
ಕುಶಲಾಕುಶಲಪ್ರಾಯೈಃ ಕರ್ಮಭಿಸ್ತೈಃ ಸದಾ ಪ್ರಜಾಃ ।
ತತ್ಕರ್ಮಫಲಶೇಷೇಣ ಉಪಷ್ಟಬ್ಧಾಃ ಪ್ರಜಜ್ಞಿರೇ ॥ ೧೯೭ ॥

ದೇವಾಸುರಪಿತೃತ್ವೈಶ್ಚ ಪಶುಪಕ್ಷಿಸರೀಸೃಪೈಃ ।
ವೃಕ್ಷನಾರಕಿಕೀಟತ್ವೈಸ್ತೈಸ್ತೈರ್ಭಾವೈರುಪಸ್ಥಿತಾಃ ।
ಆಧೀನಾರ್ಥಂ ಪ್ರಜಾನಾಂ ಚ ಆತ್ಮನೋ ವೈ ವಿನಿರ್ಮಮೇ ॥ ೧೯೮ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ ಚತುರಾಶ್ರಮ
ವಿಭಾಗೋ ನಾಮ ಅಷ್ಟಮೋಽಧ್ಯಾಯಃ

---

೧೯೭. ಪ್ರಖ್ಯಾತಿಯೇ ಮೊದಲಾದ ಸರ್ವಧರ್ಮಗಳಿಂದ ಕೂಡಿದ ಶಕ್ತಾಶಕ್ತರೂ, ಕರ್ಮಬದ್ಧರೂ ಆದ ಪ್ರಜೆಗಳು ಪೂರ್ವಜನ್ಮದ ಕರ್ಮಫಲಾನುಗುಣವಾಗಿ ಜನಿಸಿದರು.

೧೯೮. ಅನಂತರ ಬ್ರಹ್ಮದೇವನು ದೇವತೆಗಳು, ಅಸುರರು, ಪಿತೃಗಳು, ಪಶುಗಳು, ಪಕ್ಷಿ, ಸರ್ಪ, ಮರ, ಗಿಡ, ಬಳ್ಳಿ, ಕೀಟ ಇವೇ ಮೊದಲಾದ ಸರ್ವಭೂತಗಳನ್ನೂ ಅವರವರ ಭಾವಾನುಗುಣವಾಗಿ ಪುನಃ ಸೃಷ್ಟಿಸಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ಚತುರಾಶ್ರಮವಿಭಾಗ
ನಿರೂಪಣೆಯೆಂಬ ಎಂಟನೆಯ ಅಧ್ಯಾಯವು ಸಮಾಪ್ತವಾದುದು.

## ಎಂಟನೆಯ ಅಧ್ಯಾಯದ ಸಾರಾಂಶವು

ಶ್ರೀಮನ್ನಾರಾಯಣನು ಬ್ರಹ್ಮದೇವನ ದ್ವಿತೀಯ ಪರಾರ್ಧದ ಆದಿಭಾಗದಲ್ಲಿ ಯುಗಸಹಸ್ರವರ್ಷಕಾಲಗಳವರೆಗೂ ನಿದ್ರಾಸುಖದಲ್ಲಿ ರಾತ್ರಿಯನ್ನು ಕಳೆದು ನಂತರ ಸೃಷ್ಟಿಮಾಡಲಿಚ್ಛಿಸಿ ಪ್ರಲಯೋದಕದಲ್ಲಿ ಶಯನಮಾಡಿದನು. ಆಗ ಭೂಮಂಡಲವು ಆ ಜಲದಲ್ಲಿ ಮುಳುಗಿ ಕಾಣದೆಯೇ ಹೋಗಲು ಅದನ್ನು ಹುಡುಕುವುದಕ್ಕೋಸ್ಕರ ವಾಯುರೂಪವನ್ನು ಧರಿಸಿ ಆ ಜಲದಲ್ಲಿ ಹುಡುಕಿದನು. ಆ ಭೂಮಂಡಲವು ಅಲ್ಲಿ ಮುಳುಗಿರುವುದನ್ನು ಕಂಡು ಎತ್ತಲು ಶ್ವೇತವರಾಹರೂಪವನ್ನು ಧರಿಸಿ ಭೂಮಂಡಲವನ್ನು ಉದ್ಧರಿಸಿದನು. ಪುನಃ ಅದು ಜಲದಲ್ಲಿ ಮುಳುಗದೇ ಇರುವುದಕ್ಕಾಗಿ ರಾಶಿಯಾಗಿ ಬಿದ್ದಿದ್ದ ಪರ್ವತಗಳನ್ನು ಪುನಃ ಸ್ಥಾಪನೆಮಾಡಿದನು ನಂತರ ಭೂಮ್ಯಾದಿ ಅನೇಕ ಲೋಕಗಳನ್ನು ಸೃಷ್ಟಿಸಿದನು

ಹೀಗೆ ಕೃತಯುಗದ ಅಂತ್ಯದಲ್ಲಿ ಸತ್ಯಲೋಕಕ್ಕೆ ಹೋಗದಯೇ ಜನೋಲೋಕದಲ್ಲಿದ್ದ ಪ್ರಜೆಗಳೇ ಮುಂದಿನ ಸೃಷ್ಟಿಗೆ ಬೀಜಭೂತರಾಗಿರುವರು. ಆ ಭಗವಂತನ ಇಚ್ಛೆಯಿಂದ ಜನೋಲೋಕದಲ್ಲಿದ್ದ ಪ್ರಜೆಗಳು ಸತ್ವಗುಣೋದ್ರೇಕದಿಂದ ಭೂಮಿಯಲ್ಲಿ ನಾನಾರೂಪಗಳಾಗಿ ಜನಿಸಿದರು. ಆಗ ಅನೇಕ ಮಾನಸಸೃಷ್ಟಿಯೂ ಆಯಿತು. ಹೀಗೆ ಕೃತಯುಗವು ಕಳೆಯಲು ತ್ರೇತಾಯುಗದ ಆದಿಯಲ್ಲಿ ಜನಿಸಿದ ಪ್ರಜೆಗಳು ತೇಜಸ್ಸು, ಶಕ್ತಿ, ಸಾಮರ್ಥ್ಯ ಇವುಗಳುಳ್ಳವರಾಗಿಯೂ, ಪೂರ್ಣಕಾಮುಕರಾಗಿಯೂ ಇದ್ದರು. ಕೃತಯುಗದಲ್ಲಿ ಧ್ಯಾನವೂ, ತ್ರೇತಾಯುಗದಲ್ಲಿ ಜ್ಞಾನವೂ, ದ್ವಾಪರಯುಗದಲ್ಲಿ ಯಜ್ಞವೂ, ಕಲಿಯುಗದಲ್ಲಿ ದಾನವೂ ಪೂರ್ಣಫಲಗಳನ್ನು ಕೊಡುವುದಾಗಿದೆ.

ಕೃತಯುಗದಲ್ಲಿ ಧ್ಯಾನದಿಂದ ಸಕಲಾಭೀಷ್ಟಗಳೂ ಆಗುವುದು. ತ್ರೇತಾಯುಗದಲ್ಲಿ ಆ ಸಿದ್ಧಿಯು ಮಾಯವಾಗಲು ಭಗವದಿಚ್ಛೆಯಂತೆ ಕಲ್ಪವೃಕ್ಷಗಳು ಸಕಲ ಫಲಗಳನ್ನು ಕೊಡುತ್ತಿದ್ದವು. ಕೊನೆಗೆ ಆ ವೃಕ್ಷಗಳು ಅಪಚಾರದಿಂದ ನಷ್ಟವಾಗಲು ಶೀತವಾತಾತಪಾದಿಗಳಿಂದ ಪೀಡಿತರಾದ ಪ್ರಜೆಗಳಿಗೆ ಪರಿಹಾರಕ್ಕಾಗಿ ಗ್ರಾಮ, ನಗರ, ಮನೆ, ಮಠಾದಿಗಳನ್ನು ನಿರ್ಮಿಸಿಕೊಂಡು ಕ್ಷುತ್ಪಿಪಾಸಾಪರಿಹಾರಕ್ಕಾಗಿ ಬತ್ತ, ರಾಗಿ

ಮೊದಲಾದ ದವಸಧಾನ್ಯಗಳನ್ನೂ, ವಾಪೀ, ಕೂಪ, ತಟಾಕಾದಿ ಜಲಾಶಯಗಳನ್ನೂ ಸೃಷ್ಟಿಸಿದನು. ಕಾಲವಶದಿಂದ ಭೂಮಿಯೇ ಅವನ್ನು ಭಕ್ಷಿಸಲಾಗಿ ಭಗವಂತನು ಮೇರುವನ್ನು ಕರುವನ್ನಾಗಿಯೂ, ಭೂಮಿಯನ್ನು ಧೇನುವನ್ನಾಗಿಯೂ, ಮಾಡಿಕೊಂಡು ಕ್ಷೀರವನ್ನು ಕರೆದನು. ಆಗ ಸಕಲ ಧಾನ್ಯಗಳೂ, ನದ್ಯಾದಿತೀರ್ಥಗಳೂ, ಬ್ರಾಹ್ಮಣಾದಿ ವರ್ಣಗಳೂ, ಆಶ್ರಮಗಳೂ, ಧರ್ಮಗಳೂ ಉತ್ಪನ್ನವಾದುವು. ದೇವಯಾನ ಪಿತೃಯಾನಗಳೂ ಏರ್ಪಟ್ಟವು. ತ್ರೇತಾಯುಗದ ಮಧ್ಯಕಾಲವು ಪ್ರಾಪ್ತವಾಗಲು ಪುನಃ ಬ್ರಹ್ಮದೇವನ ಮಾನಸಸೃಷ್ಟಿಯು, ದೇವಾಸುರಾದಿ ಸಕಲ ಪ್ರಜಾಸೃಷ್ಟಿಯೂ ಆದುವು. ಎಂದು ವರ್ಣಿಸಲ್ಪಟ್ಟಿವೆ.

—|| ಹರಿಃ ಓಮ್ ||—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ನವಮೋಽಧ್ಯಾಯಃ

|| ಸೂತ ಉವಾಚ ||

ತತೋಽಭಿಧ್ಯಾಯತಸ್ತಸ್ಯ ಜಜ್ಞಿರೇ ಮಾನಸೀ ಪ್ರಜಾಃ ।
ತಚ್ಛರೀರಸಮುತ್ಪನ್ನೈಃ ಕಾರ್ಯೈಸ್ತೈಃ ಕಾರಣೈಃ ಸಹ ।
ಕ್ಷೇತ್ರಜ್ಞಾಃ ಸಮವರ್ತಂತ ಗಾತ್ರೇಭ್ಯಸ್ತಸ್ಯ ಧೀಮತಃ || ೧ ||

ತತೋ ದೇವಾಸುರಪಿತೄನ್ ಮಾನವಂಚ ಚತುಷ್ಟಯಂ ।
ಸಿಸೃಕ್ಷುರಂಭಾಂಸ್ಯೇತಾಂಶ್ಚ ಸ್ವಾತ್ಮನಾ ಸಮಯೂಯುಜತ್ || ೨ ||

ಯುಕ್ತಾತ್ಮನಸ್ತತಸ್ತಸ್ಯ ತತೋ ಮಾತ್ರಾ ಸ್ವಯಂಭುವಃ ।
ತಮಭಿಧ್ಯಾಯತಃ ಸರ್ಗಂ ಪ್ರಯತ್ನೋಽಭೂತ್ ಪ್ರಜಾಪತೇಃ || ೩ ||

---

## ಒಂಭತ್ತನೆಯ ಅಧ್ಯಾಯವು

೧. ಸೂತನು ಹೇಳಿದನು—ಅನಂತರ ಸರ್ವಜ್ಞನಾದ ಭಗವಂತನು ಧ್ಯಾನ ಮಾಡಲಾಗಿ ಮಾನಸೀ ಪ್ರಜೆಗಳೂ ಕಾರ್ಯಕಾರಣ ಭಾವದಿಂದ ಕೂಡಿದ ಶಾರೀರಕ ಪ್ರಜೆಗಳೂ ಸಹ ಭಗವಂತನ ಅಂಗಗಳಿಂದ ಜನಿಸಿದರು.

೨. ಭಗವಂತನು ದೇವತೆಗಳು, ಅಸುರರು, ಪಿತೃಗಳು, ಮಾನವರು, ಎಂಬ ನಾಲ್ವರನ್ನು ಸೃಷ್ಟಿಮಾಡಲಿಚ್ಛೆಯುಳ್ಳವನಾಗಿ ಸ್ವರೂಪದಿಂದಲೇ ಅವರನ್ನೂ ಜಲವನ್ನೂ ಸೃಷ್ಟಿಸಿದನು.

೩. ಅನಂತರ ಭಗವಂತನು ಆಲೋಚಿಸಿ ನೋಡಿ ಪಂಚತನ್ಮಾತ್ರೆಗಳನ್ನು ಸ್ಮರಿಸಿ ಅವುಗಳ ಮೂಲಕ ಜಗತ್ತನ್ನು ಸೃಷ್ಟಿಸಲಿಚ್ಛಿಸಿದನು.

ತತೋಽಸ್ಯ ಜಘನಾತ್ಪೂರ್ವಂ ಅಸುರಾ ಜಜ್ಞಿರೇ ಸುತಾಃ ।
ಅಸುಃ ಪ್ರಾಣಃ ಸ್ಮೃತೋ ವಿಪ್ರಾಸ್ತಜ್ಜನ್ಮಾನಸ್ತತೋಽಸುರಾಃ ॥ ೪ ॥

ಯಯಾ ಸೃಷ್ಟಾಃ ಸುರಾಃ ತನ್ವಾ ತಾಂ ತನುಂ ಸ ವ್ಯಪೋಹತ ।
ಸಾಪವಿದ್ಧಾ ತನುಸ್ತೇನ ಸದ್ಯೋ ರಾತ್ರಿರಜಾಯತ ॥ ೫ ॥

ಸಾ ತಮೋ ಬಹುಳಾ ಯಸ್ಮಾತ್ತತ್ತೋ ರಾತ್ರಿಸ್ತ್ರಿಯಾಮಿಕಾ ।
ಆವೃತಾಸ್ತಮಸಾ ರಾತ್ರೌ ಪ್ರಜಾಸ್ತಸ್ಮಾತ್ ಸ್ವಯಂಭುವಃ ॥ ೬ ॥

ದೃಷ್ಟ್ವಾ ಸುರಾಂಸ್ತುದೇವೇಶಸ್ತನುಮನ್ಯಾಮುಪದ್ಯತ ।
ಅವ್ಯಕ್ತಾಂ ಸತ್ವಬಹುಳಾಂ ತತಸ್ತಾಂ ಸೋಽಭ್ಯಯೂಯುಜತ್ ।
ತತಸ್ತಾಂ ಯುಂಜತಸ್ತಸ್ಯ ಪ್ರಿಯಮಾಸೀತ್ ಪ್ರಭೋಃ ಕಿಲ ॥ ೭ ॥

ತತೋ ಮುಖೇ ಸಮುತ್ಪನ್ನಾ ದೀವ್ಯತಸ್ತಸ್ಯ ದೇವತಾಃ ।
ಯತೋಽಸ್ಯ ದೀವ್ಯತೋ ಜಾತಾಸ್ತೇನ ದೇವಾಃ ಪ್ರಕೀರ್ತಿತಾಃ ॥ ೮ ॥

---

೪. ತರುವಾಯ ಬ್ರಹ್ಮನ ಪೃಷ್ಠಭಾಗದಿಂದ ಅಸುರರು ಜನಿಸಿದರು. ಎಲೈ ಋಷಿಗಳೇ ಅಸುವಿಗೆ ಪ್ರಾಣವೆಂತಲೂ ಆದರಿಂದ ಜನಿಸಿದವರಿಗೆ ಅಸುರರೆಂತಲೂ ಸಂಜ್ಞೆಯುಂಟಾಗಿದೆ.

೫. ಶ್ರೀ ಭಗವಂತನು ಯಾವ ಶರೀರದಿಂದ ದೇವತೆಗಳನ್ನು ಸೃಷ್ಟಿಸಿದನೋ ಅಂತಹ ಶರೀರವನ್ನು ಮಾಯಮಾಡಿದನು. ಅದರಿಂದ ಕೂಡಲೇ ರಾತ್ರಿಯಾಯಿತು.

೬. ಅದು ಅಂಧಕಾರ ಪ್ರಚುರವಾದ್ದರಿಂದ ರಾತ್ರಿಯೆಂದು ಪ್ರಖ್ಯಾತವಾಯಿತು. ಆ ರಾತ್ರಿಯ ಕಾಲದಲ್ಲಿ ಪ್ರಜೆಗಳು ಅಂಧಕಾರದಿಂದ ಮುಚ್ಚಲ್ಪಟ್ಟರು.

೭. ಸ್ವಾಮಿಯಾದ ಭಗವಂತನು ಹಾಗೆ ತಮೋವ್ಯಾಪ್ತರಾದ ದೇವಾದಿಗಳನ್ನು ನೋಡಿ ಸತ್ವಗುಣ ಪ್ರಚುರವೂ ಅವ್ಯಕ್ತವೂ ಆದ ಮತ್ತೊಂದು ಶರೀರವನ್ನು ಉಪಯೋಗಿಸಿಕೊಂಡನು ಹಾಗೆ ಬೇರೆ ಶರೀರವನ್ನು ನೇಮಿಸಿದ ಆ ಭಗವಂತನಿಗೆ ಪ್ರಿಯವಾದ ಸೃಷ್ಟಿಯಾಯಿತಲ್ಲವೇ ?

೮. ಅನಂತರ ಭಗವಂತನು ಆ ಶರೀರದಿಂದ ಕ್ರೀಡಿಸುತ್ತಿರಲಾಗಿ ದೇವತೆಗಳು ಜನಿಸಿದರು. ಭಗವಂತನ ದೇವನದಿಂದ ಅಂದರೆ ಕ್ರೀಡೆಯಿಂದ ಹುಟ್ಟಿದ ಕಾರಣ ದೇವತೆಗಳೆಂದು ಅವರಿಗೆ ಹೆಸರು ಬಂದಿದೆ.

ಧಾತುರ್ದಿವೀತಿ ಯಃ ಪ್ರೋಕ್ತಃ ಕ್ರೀಡಾಯಾಂ ಸವಿಭಾವ್ಯತೆ ।
ತಸ್ಯಾಂ ತನ್ವಾಂತು ದಿವ್ಯಾಯಾಂ ಜಜ್ಞಿರೇ ತೇನ ದೇವತಾಃ ॥ ೯ ॥

ದೇವಾನ್ ಸೃಷ್ಟ್ವಾಥ ದೇವೇಶಸ್ತನುಮನ್ಯಾಮುಪದ್ಯತ ।
ಸತ್ವಮಾತ್ರಾತ್ಮಿಕಾಂ ದೇವಸ್ತತೋನ್ಯಾಂ ಸೋಭ್ಯಪದ್ಯತ ॥ ೧೦ ॥

ಪಿತೃವನ್ಮನ್ಯಮಾನಸ್ತಾನ್ ಪುತ್ರಾನ್ ಪ್ರಾಧ್ಯಾಯತ ಪ್ರಭುಃ ।
ಪಿತರೋಹ್ಯುಪಪಕ್ಷಾಭ್ಯಾಂ ರಾತ್ರ್ಯಹ್ನೋರಂತರಾ ಸೃಜತ್ ।
ತಸ್ಮಾತ್ತೇ ಪಿತರೋ ದೇವಾಃ ಪುತ್ರತ್ವಂ ತೇನ ತೇಷು ತತ್ ॥ ೧೧ ॥

ಯಯಾ ಸೃಷ್ಟಾಸ್ತು ಪಿತರಸ್ತಾಂ ತನುಂ ಸವ್ಯಪೋಹತ ।
ಸಾಪವಿದ್ಧಾತನುಸ್ತೇನ ಸದ್ಯಃ ಸಂಧ್ಯಾ ಪ್ರಜಾಯತ ॥ ೧೨ ॥

---

೯. ಬ್ರಹ್ಮನ ಹಗಲೆಂದು ಯಾವುದನ್ನು ಹೇಳಿದೆಯೋ ಅದು ಅವನ ಲೀಲಾ ರೂಪವೆಂದು ತಿಳಿಯಬೇಕು. ಅಂತಹ ಪ್ರಿಯವಾದ ಶರೀರದಿಂದ ಹುಟ್ಟಿರುವುದರಿಂದ ಅವರಿಗೆ ದೇವತೆಗಳೆಂದು ಪ್ರಸಿದ್ಧಿ ಬಂದಿದೆ.

೧೦. ಬ್ರಹ್ಮನು ದೇವತೆಗಳನ್ನು ಸೃಷ್ಟಿಸಿದನಂತರ ಬೇರೆ ಶರೀರವನ್ನು ಹೊಂದಬೇಕೆಂದು ಯೋಚಿಸಿ ಕೇವಲ ಸತ್ವಮಯವಾದ ಮತ್ತೊಂದು ಶರೀರವನ್ನು ಹೊಂದಿದನು.

೧೧. ಭಗವಂತನು ಪಿತೃಗಳಿಗೆ ಸಮರೂ ಮರ್ಯಾದೆಗೆ ಯೋಗ್ಯರೂ ಆದ ಬೇರೆ ಮಕ್ಕಳನ್ನು ಸೃಷ್ಟಿಸಬೇಕೆಂದು ಯೋಚನೆಮಾಡಿದನು. ಆಗ ಪಿತೃದೇವತೆಗಳು ಕೃಷ್ಣಪಕ್ಷದ ಹಗಲುರಾತ್ರಿಯ ಮಧ್ಯದಲ್ಲಿ ಅಂದರೆ ಸಂಜೆಯಲ್ಲಿ ಹುಟ್ಟಿದರು ಅಂತಹ ಮರ್ಯಾದಾರ್ಹರಾದ ದೇವತೆಗಳೂ ಕೂಡ ಬ್ರಹ್ಮದೇವನಲ್ಲಿ ಸಂಪೂರ್ಣ ಪಿತೃಭಕ್ತಿಯಿಂದ ಕೂಡಿ ವರ್ತಿಸಬೇಕಾಯಿತು.

೧೨. ಯಾವ ಶರೀರದಿಂದ ದೇವತೆಗಳನ್ನು ಸೃಷ್ಟಿಸಿದನೋ ಆ ಶರೀರವನ್ನು ಭಗವಂತನು ಕಳೆದುಕೊಂಡು ಮರೆಮಾಚಿದನು. ಆದರಿಂದ ಸಂಧ್ಯಾಕಾಲವಾಯಿತು.

ತಸ್ಮಾದಹಸ್ತು ದೇವಾನಾಂ ರಾತ್ರಿರ್ಯಾ ಸಾಸುರೀ ಸ್ಮೃತಾ ।
ತಯೋರ್ಮಧ್ಯೇತು ವೈ ಪೈತ್ರೀ ಯಾ ತನುಃ ಸಾ ಗರೀಯಸೀ ॥ ೧೩ ॥

ತಸ್ಮಾದ್ದೇವಾಸುರಾಃ ಸರ್ವೇ ಋಷಯೋ ಮನವಸ್ತಥಾ ।
ತೇಯುಕ್ತಾ ಸ್ತಾಮುಪಾಸಂತೆ ಬ್ರಹ್ಮಣೋ ಮಧ್ಯಮಾಂ ತನುಂ ॥ ೧೪ ॥

ತತೋನ್ಯಾಂ ಸ ಪುನರ್ಬ್ರಹ್ಮಾ ತನುಂ ವೈ ಪ್ರತ್ಯಪದ್ಯತ ।
ರಜೋ ಮಾತ್ರಾತ್ಮಿಕಾಯಾಂ ತು ಮನಸಾ ಸೋ ಸೃಜತ್ ಪ್ರಭುಃ ॥ ೧೫ ॥

ರಜಃ ಪ್ರಾಯ್ರಾ ತತಃ ಸೋಥ ಮಾನಸಾನ ಸೃಜತ್ಸುತಾ ।
ಮನಸಸ್ತು ತತಸ್ತಸ್ಯ ಮನಸಾ ಜಜ್ಞಿರೇ ಪ್ರಜಾಃ ॥ ೧೬ ॥

---

೧೩. ಬ್ರಹ್ಮದೇವನ ಹಗಲಲ್ಲಿ ಹುಟ್ಟಿದ್ದರಿಂದ ದೇವತೆಗಳಿಗೆ ಹಗಲಲ್ಲಿ ಪ್ರೀತಿಯೂ, ರಾತ್ರಿಜನ್ಯರಾದ ಕಾರಣ ಅಸುರರಿಗೆ ರಾತ್ರಿಯಲ್ಲಿ ಪ್ರೀತಿಯೂ, ಇರುತ್ತದೆ ಇವುಗಳ ಮಧ್ಯಕಾಲದಲ್ಲಿ ಜನಿಸಿದ ಕಾರಣ ಪಿತೃಗಳಿಗೆ ಸಾಯಂಕಾಲ ದಲ್ಲಿಯೇ ಪ್ರೀತಿಯುಂಟಾಗಿದೆ. ಅಂತಹ ಸಾಯಂಕಾಲವು ಬಹಳ ಉತ್ತಮ ವಾಗಿದೆ

೧೪. ಆದುದರಿಂದ ದೇವತೆಗಳು ಅಸುರರು, ಋಷಿಗಳು ಮನುಗಳು ಇವ ರೆಲ್ಲರೂ, ಒಟ್ಟುಗೂಡಿ ಆ ಬ್ರಹ್ಮದೇವನ ಸಂಧ್ಯಾಕಾಲದಲ್ಲಿದ್ದ ಪಿತೃಶರೀರವನ್ನು ಪೂಜ್ಯವಾದುದೆಂದು ಭಾವಿಸಿ ಸೇವಿಸಿದರು.

೧೫. ಅನಂತರ ಬ್ರಹ್ಮದೇವನು ಮತ್ತೆ ರಜೋಗುಣಪ್ರಚುರವಾದ ಬೇರೆ ಶರೀರವನ್ನು ಪಡೆಯಲಿಚ್ಛಿಸಿ ಆ ರಜೋಮಯವಾದ ಶರೀರವನ್ನು ಹೊಂದಿ ಅದ ರಿಂದಲೂ ಬೇರೊಂದು ಸೃಷ್ಟಿಯನ್ನು ಮಾಡಿದನು.

೧೬. ತರುವಾಯ ಬ್ರಹ್ಮನು ರಜೋಗುಣಪ್ರಾಚುರ್ಯವುಳ್ಳ ಮಕ್ಕಳನ್ನು ಮನಸ್ಸಿಂದಲೇ ಸೃಷ್ಟಿಸಿದನು. ಅವರು ಬ್ರಹ್ಮದೇವನ ಮನಸ್ಸಿನಿಂದ ಜನ್ಯರಾದ ಕಾರಣ ಮಾನಸಪುತ್ರರೆಂದು ಪ್ರಖ್ಯಾತರಾದರು.

ದೃಷ್ಟ್ವಾ ಪುನಃ ಪ್ರಜಾಶ್ಚಾಪಿ ಸ್ವಾಂತನುಂ ತಾಮುಪ್ರೋಹತ ।
ಸಾಪವಿದ್ಧಾಸ್ತನುಸ್ತೇನ ಜ್ಯೋತ್ಸ್ನಾ ಸದ್ಯಸ್ತ್ವಜಾಯತ ॥ ೧೭ ॥

ತಸ್ಮಾದ್ಭವಂತಿ ಸಂಹೃಷ್ಟಾ ಜ್ಯೋತ್ಸ್ನಾಯಾ ಉದ್ಭವೇ ಪ್ರಜಾಃ ।
ಇತ್ಯೇತಾಸ್ತನವಸ್ತೇನ ವ್ಯಪವಿದ್ಧಾ ಮಹಾತ್ಮನಾ ॥ ೧೮ ॥

ಸದ್ಯೋ ರಾತ್ರ್ಯಹನೀ ಚೈವ ಸಂಧ್ಯಾ ಜ್ಯೋತ್ಸ್ನಾ ಚ ಜಜ್ಞಿರೇ ।
ಜ್ಯೋತ್ಸ್ನಾ ಸಂಧ್ಯಾ ತಥಾಹಶ್ಚ ಸತ್ವಮಾತ್ರಾತ್ಮಕಂ ಸ್ವಯಂ ।
ತಮೋ ಮಾತ್ರಾತ್ಮಿಕಾ ರಾತ್ರಿಃ ಸಾ ವೈ ತಸ್ಮಾತ್ ತ್ರಿಯಾಮಿಕಾ ॥ ೧೯ ॥

ತಸ್ಮಾದ್ದೇವಾ ದಿವ್ಯತತ್ತ್ವಾ ಹೃಷ್ಟಾಃ ಸೃಷ್ಟಾ ಮುಖಾತ್ತು ವೈ ।
ಯಸ್ಮಾದೇಷಾಂ ದಿವಾ ಜನ್ಮ ಬಲಿನಸ್ತೇನ ತೇ ದಿವಾ ॥ ೨೦ ॥

ತನ್ವಾ ಯದಸುರಾನ್ ರಾತ್ರೌ ಜಘನಾದಸೃಜತ್ ಪ್ರಭುಃ ।
ಪ್ರಾಣೇಭ್ಯೋ ರಾತ್ರಿ ಜನ್ಮಾನೋ ಹ್ಯಸಹ್ಯಾನಿಶಿ ತೇನ ತೇ ॥ ೨೧ ॥

---

೧೭. ಪುನಃ ಪ್ರಜೆಗಳನ್ನು ನೋಡಿ ಸಂತೋಷಗೊಂಡು ಆ ದೇಹವನ್ನು ಮಾಯಮಾಡಿದನು. ಕೂಡಲೆ ಜ್ಯೋತ್ಸ್ನಾಮಯವಾದ ಶರೀರವುಂಟಾಯಿತು.

೧೮. ಆ ಶರೀರದಿಂದಲೂ ಪ್ರಜೋತ್ಪತಿಮಾಡಬಹುದೆಂದು ಯೋಚಿಸಿ ಬಹಳವಾಗಿ ಸಂತುಷ್ಟನಾದ ಭಗವಂತನು ಎಲ್ಲಾ ಶರೀರಗಳನ್ನೂ ಸೃಷ್ಟಿಸಲಿಚ್ಛಿಸಿದನು.

೧೯. ಪುನಃ ಧ್ಯಾನಮಾಡಲು ರಾತ್ರಿ, ಹಗಲು, ಸಂಧ್ಯೆ, ಜ್ಯೋತ್ಸ್ನೆಗಳೆಂಬ ಶರೀರಗಳು ಸಿದ್ಧವಾದುವು. ಇವುಗಳಲ್ಲಿ ರಾತ್ರಿರೂಪ ಶರೀರವನ್ನು ಬಿಟ್ಟು ಮೂರು ದೇಹಗಳು ಸತ್ವಗುಣಪ್ರಚುರಗಳಾದುವು. ರಾತ್ರಿರೂಪ-ಶರೀರವು ಮಾತ್ರ ತಮೋ ಗುಣ ಪ್ರಚುರವಾದುದು. ಅದಕ್ಕೆ ತ್ರಿಯಾಮವೆಂದು ಹೆಸರು ಬಂದಿದೆ.

೨೦. ಭಗವಂತನು ದಿವ್ಯತತ್ವಜ್ಞಾನಿಗಳಾದ ದೇವತೆಗಳನ್ನು ಹಗಲಲ್ಲಿ ತನ್ನ ಮುಖದಿಂದ ಸೃಷ್ಟಿಸಿದನು. ಆದುದರಿಂದ ಸಂತುಷ್ಟರಾದ ಪ್ರಜೆಗಳು ಬಲಿಷ್ಠರಾಗಿರು ವುದನ್ನು ನೋಡಿ ತೃಪ್ತನಾದನು.

೨೧. ಬ್ರಹ್ಮನು ರಾತ್ರಿಯಲ್ಲಿ ಪೃಷ್ಠದಿಂದ ಅಸುರರನ್ನು ಸೃಷ್ಟಿಸಿದಕಾರಣ ಪ್ರಾಣಗಳಿಂದ ಸೃಷ್ಟರಾದ ದೇವತೆಗಳಿಗಿಂತಲೂ ರಾತ್ರಿ ಜನ್ಯರಾದ ಅಸುರರು ಅಸಹ್ಯರಾದರು. ಅಂದರೆ ಅಧಮರಾದರು.

ಏತಾನ್ಯೇವ ಭವಿಷ್ಯಾಣಾಂ ದೇವಾನಾಮಸುರೈಃ ಸಹ ।
ಪಿತೄಣಾಂ ಮಾನವಾನಾಂ ಚ ಅತೀತಾನಾಗತೇಷು ವೈ ।
ಮನ್ವಂತರೇಷು ಸರ್ವೇಷಾಂ ನಿಮಿತ್ತಾನಿ ಭವಂತಿ ಹಿ ॥ ೨೨ ॥

ಜ್ಯೋತ್ಸ್ನಾ ರಾತ್ರ್ಯಹನೀ ಸಂಧ್ಯಾ ಚತ್ವಾರ್ಯೇತಾನಿ ಭಾಸಿತಾನಿವೈ ।
ಭಾಂತಿ ಯಸ್ಮಾತ್ತತೋ ಭಾಸಿ ಭಾಶಬ್ದೋಯಂ ಮನೀಷಿಭಿಃ ।
ವ್ಯಾಪ್ತಿ ದೀಪ್ತ್ಯಾಂ ನಿಗದಿತಃ ಪುನಶ್ಚಾಹ ಪ್ರಜಾಪತಿಃ ॥ ೨೩ ॥

ಸೋಂಭಾಂ ಸ್ಯೇತಾನಿ ದೃಷ್ಟ್ವಾ ತು ದೇವದಾನವ ಮಾನವಾನ್ ।
ಪಿತೄಂಶ್ಚೈ ವಾ ಸೃಜತ್ಸೋನ್ಯಾ ನಾತ್ಮನೋ ವಿಬುಧಾನ್ ಪುನಃ ॥ ೨೪ ॥

ತಾಮುತ್ಸೃತ್ಯ ತನುಂ ಕೃತ್ಸ್ನಾಂ ತತೋನ್ಯಾಮಸಜತ್ಪ್ರಭುಃ ।
ಮೂರ್ತಿಂ ರಜಸ್ತಮಸ್ಪ್ರಾಯಾಂ ಪುನರೇವಾಭ್ಯಯೂಯುಜಿತ್ ॥ ೨೫ ॥

---

೨೨. ಈ ಮೇಲೆ ನಿರೂಪಿಸಿರುವ ಪ್ರಜೆಗಳೇ ಮುಂದೆ ಬರತಕ್ಕ ಮನ್ವಂತರಗಳಲ್ಲಿ ಜನಿಸುವ ಪಿತೃಗಳು, ಮನುಷ್ಯರು, ದೇವತೆಗಳು ಇವರೇ ಮೊದಲಾದ ಪ್ರಜೆಗಳಿಗೆ ಬೀಜರೂಪರಾಗಿ ಕಾರಣರಾಗುವರು ಹಿಂದಿನ ಮನ್ವಂತರಗಳಲ್ಲಿ ಹುಟ್ಟಿದ್ದ ಪ್ರಜೆಗಳಿಗೂ ಕೂಡ ಇವರೇ ಕಾರಣರಾಗಿದ್ದರು.

೨೩. ಹಗಲು, ರಾತ್ರಿ, ಸಂಧ್ಯಾ, ಬೆಳದಿಂಗಳು ಇವುಗಳು ಯಾರಿಂದ ಕಾಂತಿಯನ್ನು ಪಡೆದಿರುತ್ತವೆಯೋ, ಯಾರಿಂದ ಪ್ರಕಾಶಿಸುತ್ತವೆಯೋ ಅಂತಹ ಭಗವಂತನಿಗೆ "ಭಾಃ" ಎಂಬ ನಾಮವನ್ನು ಜ್ಞಾನಿಗಳು ಹೇಳುತ್ತಾರೆ. ಮತ್ತು ವ್ಯಾಪ್ತಿ ಪ್ರಕಾಶದಾಯಕನಾದುದರಿಂದಲೂ ಭಗವಂತನಿಗೆ ಭಾಯೆಂಬ ನಾಮವು ಪ್ರಾಪ್ತಿಯಾಗಿದೆಯೆಂದೂ ಜ್ಞಾನಿಗಳು ಹೇಳುತ್ತಾರೆ.

೨೪. ಬ್ರಹ್ಮನು ಜಲ, ದೇವ, ದಾನವ, ಮಾನವ, ಪಿತೃ ಇವರನ್ನು ನೋಡಿ ಪುನಃ ದೇವಾದಿಗಳನ್ನು ಸೃಷ್ಟಿಮಾಡಲಿಚ್ಛಿಸಿ ಅವರನ್ನು ಸೃಷ್ಟಿಮಾಡಿದನು.

೨೫. ಸ್ವಾಮಿಯು ಆ ದೇಹವನ್ನು ಸಂಪೂರ್ಣವಾಗಿ ಹೋಗಲಾಡಿಸಿ ರಜಸ್ತಮಸ್ಸೇಪ್ರಾಯಕವಾದ ಬೇರೊಂದು ಮೂರ್ತಿಯನ್ನು ಧ್ಯಾನಿಸಿ ಅದನ್ನು ಸೃಷ್ಟಿಸುವಂತೆ ಪ್ರೇರಿಸಿದನು

ಅಂಧಕಾರೇ ಕ್ಷುಧಾವಿಷ್ಟಃ ಸ್ತತೋಽನ್ಯಾಂ ಸೃಜತೇ ಪುನಃ ।
ತೇನ ಸೃಷ್ಟಾಃ ಕ್ಷುಧಾತ್ಮಾನಸ್ತೇಽಂಭಾಂಸ್ಯಾದಾತುಮುದ್ಯತಾಃ ॥ ೨೬ ॥

ಅಂಭಾಂಸ್ಯೇತಾನಿ ರಕ್ಷಾಮ ಉಕ್ತವಂತಶ್ಚ ತೇಷು ಚ ।
ರಾಕ್ಷಸಾಸ್ತೇ ಸ್ಮೃತಾ ಲೋಕೇ ಕ್ರೋಧಾತ್ಮಾನೋ ನಿಶಾಚರಾಃ ॥ ೨೭ ॥

ಯೇಽಬ್ರುವನ್ ಕ್ಷಿಣುಮೋಽಂಭಾಸಿ ತೇಷಾಂ ಹೃಷ್ಟಾಃ ಪರಸ್ಪರಂ ।
ತೇನ ತೇ ಕರ್ಮಣಾ ಯಕ್ಷಾ ಗುಹ್ಯಕಾಃ ಕ್ರೂರಕರ್ಮಿಣಃ ॥ ೨೮ ॥

ರಕ್ಷಣೇ ಪಾಲನೇ ಚಾಪಿ ಧಾತುರೇಷ ವಿಭಾವ್ಯತೇ ।
ಯ ಏಷ ಕ್ಷಿತಿಧಾತುರ್ವೈ ಕ್ಷಯಣೇ ಸನ್ನಿರುಚ್ಯತೇ ॥ ೨೯ ॥

ತಾನ್ ದೃಷ್ಟ್ವಾ ಹ್ಯಪ್ರಿಯೇಣಾಸ್ಯ ಕೇಶಾಃ ಶೀರ್ಯಂತ ಧೀಮತಃ ।
ಶೀತೋಷ್ಣಾಚ್ಚೋಚ್ಛ್ರಿತಾಹ್ಯೂರ್ಧ್ವಂ ತದಾ ರೋಹಂತ ತಂ ಪ್ರಭುಂ॥೩೦॥

---

೨೬. ಅಂಧಕಾರದಲ್ಲಿ ಹಸಿವಿನಿಂದಕೂಡಿ ಬೇರೊಂದು ಸೃಷ್ಟಿಯನ್ನು ಮಾಡಿದನು. ಹೀಗೆ ಸೃಷ್ಟರಾದವರು ಕ್ಷುದ್ಬಾಧೆಯಿಂದ ಕೂಡಿ ಜಲವನ್ನು ತೆಗೆದುಕೊಳ್ಳಲು ಯತ್ನಿಸಿದರು.

೨೭. ಆಗ ಕೋಪಾವಿಷ್ಟರಾದ ನಿಶಾಚರರು ಉದಕವನ್ನು ರಕ್ಷಿಸುತ್ತೇವೆಂದು ಹೇಳಿದ್ದರಿಂದ ರಾಕ್ಷಸರೆಂದು ಪ್ರಖ್ಯಾತರಾದರು.

೨೮. ಯಾರು ನೀರನ್ನು ಹಿಂಸೆಮಾಡಿದರೋ ಅವರಿಗೆ ಯಕ್ಷರೆಂದೂ ಅದರಿಂದ ಯಾರು ಹೃಷ್ಟರಾದರೋ ಅಂತಹ ಕ್ರೂರಕರ್ಮಿಗಳಿಗೆ ಗುಹ್ಯಕರೆಂದೂ ನಾಮವು ಪ್ರಾಪ್ತಿಯಾಗಿದೆ

೨೯. ರಕ್ಷಣ ಪಾಲನವೆಂಬ ಅರ್ಥದಲ್ಲಿ ಈ ಕ್ಷಿಧಾತುವು ಉಕ್ತವಾಗಿದೆ. ಕ್ಷೀ ಧಾತುವು ಕ್ಷಯಾರ್ಥಕವಾಗಿರುವುದರಿಂದ ಕ್ಷಯಣ ಎಂಬ ರೂಪವಾಗಿದೆ.

೩೦. ಅದನ್ನು ನೋಡಿ ಭಗವಂತನ ಕೇಶಗಳು ಕೋಪದಿಂದ ಶೀರ್ಣವಾದುವು. ಮತ್ತು ಶಿತೋಷ್ಣಗಳಿಂದ ಕೇಶಗಳು ಊರ್ಧ್ವವಾಗಿಯೂ ಬೆಳೆದವು.

ಹೀನಾಮುಚ್ಛಿರಸೋ ವ್ಯಾಲಾ ಯಸ್ಮಾಚ್ಚೈವಾಪ ಸರ್ಪಿತಾಃ ।
ವ್ಯಾಲಾತ್ಮಾನಃ ಸ್ಮೃತಾ ವ್ಯಾಲಾದೀನತ್ವಾದಹಯಃ ಸ್ಮೃತಾಃ ॥ ೩೦ ॥

ಪನ್ನತ್ವಾತ್ಪನ್ನಗಾಶ್ಚೈವ ಸರ್ಪಾಶ್ಚೈವಾಪ ಸರ್ಪಿಣಃ ।
ತೇಷಾಂ ಪೃಥಿವ್ಯಾಂ ನಿಲಯಃ ಸೂರ್ಯಾಚಂದ್ರಮಸೋರಧಃ ॥ ೩೨ ॥

ತಸ್ಯ ಕ್ರೋಧೋದ್ಭವೋ ಯೋಽಸಾವಗ್ನಿಗರ್ಭಃ ಸುದಾರುಣಃ ।
ಸತು ಸರ್ಪ ಸಹೋತ್ಪನ್ನಾನ್ನಾವಿವೇಶ ವಿಷಾತ್ಮಿಕಾನ್ ॥ ೩೩ ॥

ಸರ್ಪಾನ್ ದೃಷ್ಟ್ವಾ ತತಃ ಕ್ರೋಧಾತ್ ಕ್ರೋಧಾತ್ಮಾನೋ ವಿನಿರ್ಮಮೇ ।
ವರ್ಣೇನ ಕಪಿಶಿನೋಗ್ರಾಸ್ತೇ ಭೂತಾಃ ಪಿಶಿತಾಶನಾಃ ॥ ೩೪ ॥

ಭೂತತ್ವಾತ್ತೇ ಸ್ಮೃತಾ ಭೂತಾಃ ಪಿಶಾಚಾಃ ಪಿಶಿತಾಶನಾತ್ ।
ವಯತೋಗಾಸ್ತತಸ್ತಸ್ಯ ಗಂಧರ್ವಾ ಜಜ್ಞಿರೇ ತದಾ ॥ ೩೫ ॥

---

೩೧ ಸರ್ಪಗಳು ಶಿರಸ್ಸಿಗಿಂತಲೂ ಹೀನವಾದ್ದರಿಂದ ಅಹಿ ಎಂಬುದಾಗಿಯೂ ಸರಿಯುವುದರಿಂದ ಸರ್ಪವೆಂಬುದಾಗಿಯೂ, ದುಷ್ಟಸ್ವಭಾವವುಳ್ಳದ್ದರಿಂದ ವ್ಯಾಲ ವೆಂಬುದಾಗಿಯೂ ಹೆಸರುಗಳನ್ನು ಹೊಂದಿವೆ.

೩೨. ಉರಗಗಳು ಸರಿಯುವುದರಿಂದ (ತೆವಳುವುದರಿಂದ) ಪನ್ನಗನೆಂದೂ, ಮುಂದಕ್ಕೆ ಹೋಗುವುದರಿಂದ ಸರ್ಪವೆಂದೂ ಹೆಸರನ್ನು ಹೊಂದಿವೆ. ಅವುಗಳಿಗೆ ಸ್ಥಾನವು ಸೂರ್ಯಚಂದ್ರರು ಸಂಚಾರಮಾಡದ ಭೂಮಿಯ ಕೆಳಭಾಗವು ಅಂದರೆ ಪಾತಾಳಲೋಕವೆಂದು ಕ್ಲಿಪ್ತವಾಗಿರುವುದು.

೩೩. ಅವನ ಕೋಪದಿಂದ ಅತ್ಯಂತ ಕಠಿಣಹೃದಯನಾದ ಅಗ್ನಿಗರ್ಭನು ಹುಟ್ಟಿದನು. ಅವನು ಸರ್ಪಗಳ ಜೊತೆಯಲ್ಲಿ ಹುಟ್ಟಿದ್ದರಿಂದ ವಿಷಮಯವಾದ ಲೋಕಗಳಿಗೆ ಹೋಗಲಿಲ್ಲ.

೩೪. ಅನಂತರ ಬ್ರಹ್ಮನು ಈ ಸರ್ಪಗಳನ್ನು ನೋಡಿ ಕೋಪಗೊಂಡು ಕ್ರೋಧ ರೂಪರೂ, ಬಣ್ಣದಿಂದ ಕಪಿಶರೂ ಆದ ಭೂತಪ್ರೇತಪಿಶಾಚಗಳನ್ನು ನಿರ್ಮಿಸಿದನು.

೩೫. ಅವರು ಭೂಮಿಯಲ್ಲಿ ಜನಿಸಿದ್ದರಿಂದ ಭೂತರೆಂದೂ, ಮಾಂಸಭಕ್ಷಕರಾದ ಕಾರಣ ಪಿಶಿತಾಶನರೆಂದೂ, ಆಕಾಶದಲ್ಲಿ ಸಂಚರಿಸುವುದರಿಂದ ಗಂಧರ್ವರೆಂದೂ ಪ್ರಸಿದ್ಧರಾದರು.

ಧ್ಯಾಯತೀತ್ಯೇಷ ಧಾತುರ್ವೈ ಯಾತ್ರಾರ್ಥೇ ಪರಿಪಠ್ಯತೇ ।
ಪಿಬತೋ ಜಜ್ಞಿರೆ ಗಾಸ್ತು ಗಂಧರ್ವಾಸ್ತೇನ ತೇ ಸ್ಮೃತಾಃ ॥ ೩೬ ॥

ಅಷ್ಟಾಸ್ವೇತಾಸು ಸೃಷ್ಟಾಸು ದೇವಯೋನಿಷು ಸ ಪ್ರಭುಃ ।
ತತಃ ಸ್ವಚ್ಛಂದತೋಽನ್ಯಾನಿ ವಯಾಂಸಿ ಮನಸೋಽಸೃಜತ್ ॥ ೩೭ ॥

ಛಾದ್ಯತಸ್ತಾನಿ ಛಂದಾಂಸಿ ವಯಸೋಪಿ ವಯಾಂಸ್ಯಪಿ ।
ಶೂನ್ಯಾನ್ ದೃಷ್ಟ್ವಾ ತು ದೇವೋ ವೈ ಸೃಜತ್ ಪಕ್ಷಿಗಣಾನಪಿ ॥ ೩೮ ॥

ಮುಖತೋಽಜಾನ್ ಸ ಸಜಾರ್ಥ ವಕ್ಷಸಶ್ಚ ವಯೋಽಸೃಜತ್ ।
ಗಾಶ್ಚೈವಾಥೋದರಾದ್ಬ್ರಹ್ಮಾ ಪಾರ್ಶ್ವಾಭ್ಯಾಂ ಚ ವಿನಿರ್ಮಮೇ ॥ ೩೯ ॥

ಪದ್ಭ್ಯಾಂ ಚಾಶ್ವಾನ್ ಸಮಾತಂಗಾನ್ ಶರಭಾನ್ ಗವಯಾನ್ ಮೃಗಾನ್ ।
ಉಷ್ಟ್ರಾನಶ್ವತರಾಂಶ್ಚೈವ ತಾಶ್ಚಾನ್ಯಾಶ್ಚೈವ ಜಾತಯಃ ॥ ೪೦ ॥

---

೩೬. ಸೃಷ್ಟಿಕರ್ತನನ್ನು ಧ್ಯಾನಮಾಡುವುದರಿಂದಲೂ, ಯಾತ್ರಾರೂಪವಾದ ಅರ್ಥದಲ್ಲಿ ಹೇಳಿರುವುದರಿಂದಲೂ, ಭೂಮಿಯ ಲಯಕ್ಕೆ ಕಾರಣನಾದ ಭಗವಂತನಿಂದ ಹುಟ್ಟಿರುವುದರಿಂದಲೂ ಗಂಧರ್ವರೆಂದು ಹೇಳಲ್ಪಟ್ಟಿರುತ್ತಾರೆ.

೩೭. ಆ ಭಗವಂತನು ಈ ಎಂಟು ಜನ ದೇವಯೋನಿಗಳನ್ನು ಸೃಷ್ಟಿಮಾಡಿದ ಮೇಲೆಯೂ ಸ್ವೇಚ್ಛೆಯಾಗಿ ಮನಸ್ಸಿನಿಂದ ಇತರ ಪಕ್ಷಿಗಳನ್ನೂ ನಿರ್ಮಿಸಿದನು.

೩೮. ವೇದಗಳನ್ನು ಆಚ್ಛಾದಿಸುವ ಛಂದಸ್ಸು, ಪಕ್ಷಿಗಳು, ವಯಸ್ಸು, ಶೂನ್ಯವಾದ ವಯಸ್ಸು ಇವುಗಳು ಇಲ್ಲದಿರುವುದನ್ನು ತಿಳಿದು ಭಗವಂತನು ಪಕ್ಷಿಗಣಗಳನ್ನು ಸೃಷ್ಟಿಸಿದನು.

೩೯. ಬ್ರಹ್ಮನು ಮುಖದಿಂದ ಆಡುಗಳನ್ನೂ, ಹೃದಯದಿಂದ ಪಕ್ಷಿಗಳನ್ನೂ, ಉದರದಿಂದ ಗೋವುಗಳನ್ನೂ, ಪಾರ್ಶ್ವಗಳಿಂದ ಇತರ ಪ್ರಾಣಿಗಳನ್ನೂ ಸೃಷ್ಟಿಸಿದನು

೪೦-೪೧. ಬ್ರಹ್ಮದೇವನು ಕಾಲುಗಳಿಂದ ಕುದುರೆ, ಆನೆ, ಶರಭ, ಕಾಡು ಪಸು. ಮೃಗ, ಒಂಟೆ, ಹೇಸರಕತ್ತೆ ಮತ್ತು ಇತರ ಪ್ರಾಣಿವರ್ಗಗಳನ್ನೂ, ರೋಮ

ಓಷಧ್ಯಃ ಫಲಮೂಲಾನಿ ರೋಮತಸ್ತಸ್ಯ ಜಜ್ಞಿರೇ ।
ಏವಂ ಪಶ್ವೌಷಧೀಃ ಸೃಷ್ಟ್ವಾ ನ್ಯಯುಂಜತ್ಸೋಽಧ್ವರೇ ಪ್ರಭುಃ ॥ ೪೧ ॥

ತಸ್ಮಾದಾದೌ ತು ಕಲ್ಪಸ್ಯ ತ್ರೇತಾಯುಗಮುಖೇ ತದಾ ।
ಗೌರಜಃ ಪುರುಷೋ ಮೇಷೋ ಹ್ಯಶ್ವೋಽಶ್ವತರಗರ್ದಭೌ ।
ಏತಾನ್ ಗ್ರಾಮ್ಯಾನ್ ಪಶೂನಾಹುರಾರಣ್ಯಾಂಶ್ಚ ನಿಬೋಧತ ॥ ೪೨ ॥

ಶ್ವಾಪದಾದ್ವಿಖುರೋ ಹಸ್ತೀ ವಾನರಃ ಪಕ್ಷಿಪಂಚಮಾಃ ।
ಉಂದಕಾಃ ಪಶವಃ ಸೃಷ್ಟಾಃ ಸಪ್ತಮಾಸ್ತು ಸರೀಸೃಪಾಃ ॥ ೪೩ ॥

ಗಾಯತ್ರಂ ವರುಣಂ ಚೈವ ತ್ರಿವೃತ್ಸೌಮ್ಯಂ ರಥಂತರಂ ।
ಅಗ್ನಿಷ್ಟೋಮಂ ಚ ಯಜ್ಞಾನಾಂ ನಿರ್ಮಮೇ ಪ್ರಥಮಾನ್ ಮುಖಾತ್॥೪೪ ॥

ಛಂದಾಂಸಿ ತ್ರೈಷ್ಟುಭಂಕರ್ಮ ಸ್ತೋಮಂ ಪಂಚದಶಂ ತಥಾ ।
ಬೃಹತ್ಸಾಮಮಥೋಕ್ಥಂ ಚ ದಕ್ಷಿಣಾತ್ಸೋಽಸೃಜನ್ಮುಖಾತ್ ॥ ೪೫ ॥

---

ಗಳಿಂದ ಓಷಧಿ, ಫಲಮೂಲಾದಿಗಳನ್ನೂ ಸೃಷ್ಟಿಸಿ ಯಾಗಗಳಿಗೆ ಉಪಯೋಗವಾಗುವಂತೆ ಮಾಡಿದನು

೪೨ ಭಗವಂತನು ಕಲ್ಪದ ಆದಿಯಾದ ತ್ರೇತಾಯುಗಪ್ರಾರಂಭದಲ್ಲಿ ಗೋವು, ಆಡು, ಪುರುಷ, ಮೇಕೆ, ಕುದುರೆ, ಕತ್ತೆ, ಹೇಸರಕತ್ತೆ ಇವೇ ಮೊದಲಾದ ಗ್ರಾಮ್ಯ ಪಶುಗಳನ್ನು ಸೃಷ್ಟಿಸಿದನು. ತರುವಾಯ ಅರಣ್ಯಪಶುಗಳ ವಿಚಾರವನ್ನು ತಿಳಿಸುವೆನು ಕೇಳಿ ಎಂದನು.

೪೩. ಎರಡು ಗೊರಸುಗಳಿರುವ ಮೃಗ, ವ್ಯಾಘ್ರಾದಿ ದುಷ್ಟಮೃಗ, ಆನೆ, ಕಪಿ, ಪಕ್ಷಿ, ಇಲಿ, ಪಶು, ಸರ್ಪ ಇವೇ ಮೊದಲಾದ ಪ್ರಾಣಿಗಳನ್ನೂ ಸೃಷ್ಟಿಸಿದನು.

೪೪. ಭಗವಂತನು ಮೊದಲು ಯಾಗೋಪಯುಕ್ತವಾದ ಗಾಯತ್ರಿ, ವರುಣ ತ್ರಿವೃತ್ ಸೌಮ್ಯ, ರಥಂತರ, ಅಗ್ನಿಷ್ಟೋಮ ಇವುಗಳನ್ನು, ಮುಖದಿಂದ ಸೃಜಿಸಿದನು.

೪೫. ಭಗವಂತನು ದಕ್ಷಿಣಮುಖದಿಂದ ಛಂದಸ್ಸು, ತ್ರೈಷ್ಟುಭಕರ್ಮ, ಹದಿನೈದುಸ್ತೋಮ, ಬೃಹತ್ಸಾಮ, ಉಕ್ಥ ಇವುಗಳನ್ನು ಸೃಷ್ಟಿಸಿದನು.

ಸಾಮಾನಿ ಜಗತೀಛಂದಸ್ತೋಮಂ ಪಂಚದಶಂ ತಥಾ ।
ವೈರೂಪ್ಯಮತಿಮಾತ್ರಂ ಚ ಪಶ್ಚಿಮಾದಸೃಜನ್ಮುಖಾತ್ ॥ ೪೬ ॥

ಏಕವಿಂಶಮಥರ್ವಾಣಮಾಪ್ತೋರ್ಯಾಮಾಣಮೇವ ಚ ।
ಅನುಷ್ಟುಭಂ ಸವೈರಾಜಮುತ್ತರಾದಸೃಜನ್ಮುಖಾತ್ ॥ ೪೭ ॥

ವಿದ್ಯುತೋಽಶನಿ ಮೇಘಾಂಶ್ಚ ರೋಹಿತೇಂದ್ರಧನೂಂಷಿ ಚ ।
ವಯಾಂಸಿ ಚ ಸಸಾರ್ಜಾದೌ ಕಲ್ಪಸ್ಯ ಭಗವಾನ್ ಪ್ರಭುಃ ॥ ೪೮ ॥

ಉಚ್ಚಾವಚಾನಿ ಭೂತಾನಿ ಗಾತ್ರೇಭ್ಯಸ್ತಸ್ಯ ಜಜ್ಞಿರೇ ।
ಬ್ರಹ್ಮಣಸ್ತು ಪ್ರಜಾಸರ್ಗಂ ಸೃಜತೋ ಹಿ ಪ್ರಜಾಪತೇಃ ॥ ೪೯ ॥

ಸೃಷ್ಟ್ವಾ ಚತುಷ್ಟಯಂ ಪೂರ್ವಂ ದೇವಾಸುರ ಪಿತೃನ್ ಪ್ರಜಾಃ ।
ತತಃ ಸೃಜತಿ ಭೂತಾನಿ ಸ್ಥಾವರಾಣಿ ಚರಾಣಿ ಚ ॥ ೫೦ ॥

---

೪೬. ಬ್ರಹ್ಮನು ಪಶ್ಚಿಮಭಾಗದಿಂದ ಸಾಮ, ಜಗತೀಛಂದಸ್ಸು, ಸ್ತೋಮ, ವೈರೂಪ್ಯ, ಅತಿಮಾತ್ರ ಎಂಬ ಯಾಗೋಪಯುಕ್ತವಾದ ವಿಷಯಗಳನ್ನು ಸೃಷ್ಟಿಸಿದನು.

೪೭. ಬ್ರಹ್ಮನು ಇಪ್ಪತ್ತೊಂದು ಅಥರ್ವಾಣವನ್ನೂ ಉತ್ತಮವಾದ ಅರ್ಯಮಾಣವನ್ನೂ, ಅನುಷ್ಟುಭನ್ನೂ ಉತ್ತರಮುಖದಿಂದ ಸೃಷ್ಟಿಮಾಡಿದನು.

೪೮. ಪೂಜ್ಯನಾದ ಭಗವಂತನು ಸರ್ಗಾದಿಯಲ್ಲಿ ಮಿಂಚು, ಗುಡುಗು, ಮೇಘ, ಕೆಂಪಾದ ಇಂದ್ರಧನುಸ್ಸು, ಪಕ್ಷಿ, ಇವೇ ಮೊದಲಾದವುಗಳನ್ನು ಸೃಷ್ಟಿ ಮಾಡಿದನು.

೪೯. ಪ್ರಜೆಗಳಿಗೆ ಪತಿಯೂ, ಸೃಷ್ಟಿಕರ್ತನೂ ಆದ ಬ್ರಹ್ಮನ ಅವಯವಗಳಿಂದ ಉಚ್ಚನೀಚಗಳಾದ ನಾನಾವಿಧಪ್ರಾಣಿಗಳು ಸೃಷ್ಟವಾದುವು.

೫೦. ಮೊದಲು ದೇವಾಸುರ, ಪಿತೃ, ಪ್ರಜೆಗಳು ಇವರನ್ನು ಸೃಷ್ಟಿಸಿ ಅನಂತರ ಚರಾಚರಾತ್ಮಕವಾದ ಸರ್ವಪ್ರಾಣಿಗಳನ್ನೂ ಸೃಷ್ಟಿಮಾಡಿದನು.

ಯಕ್ಷಾನ್ ಪಿಶಾಚಾನ್ ಗಂಧರ್ವಾನ್ ತಥೈವಾಪ್ಸರಸಾಂ ಗಣಾನ್ ।
ನರಕಿನ್ನರರಕ್ಷಾಂಸಿ ವಯಃ ಪಶುಮೃಗೋರಗಾನ್ ॥ ೫೧ ॥

ಅವ್ಯಯಂ ಚ ವ್ಯಯಂ ಚೈವ ಯದಿದಂ ಸ್ಥಾಣು ಜಂಗಮಂ ।
ತೇಷಾಂ ಯೇ ಯಾನಿ ಕರ್ಮಾಣಿ ಪ್ರಾಕ್ ಸೃಷ್ಟ್ಯಾಂ ಪ್ರತಿಪೇದಿರೇ ॥
ತಾನ್ಯೇವ ಪ್ರತಿಪದ್ಯಂತೇ ಸೃಜ್ಯಮಾನಾಃ ಪುನಃ ಪುನಃ ॥ ೫೨ ॥

ಹಿಂಸ್ರಾ ಹಿಂಸ್ರೇ ಮೃದುಕ್ರೂರೇ ಧರ್ಮಾಧರ್ಮಾ ವೃತಾನೃತೇ ॥
ತದ್ಭಾವಿತಾಃ ಪ್ರಪದ್ಯಂತೇ ತಸ್ಮಾತ್ತತ್ತಸ್ಯ ರೋಚತೇ ॥ ೫೩ ॥

ಮಹಾಭೂತೇಷು ನಾನಾತ್ವಮಿಂದ್ರಿಯಾರ್ಥೇಷು ಮೂರ್ತಿಷು ।
ವಿನಿಯೋಗಂ ಚ ಭೂತಾನಾಂ ಧಾತೈವವ್ಯದಧಾತ್ಸ್ವಯಂ ॥ ೫೪ ॥

ಕೇಚಿತ್ಪುರುಷಕಾರಂ ತು ಪ್ರಾಹುಃ ಕರ್ಮ ಚ ಮಾನವಾಃ ।
ದೈವಮಿತ್ಯಪರೇ ವಿಪ್ರಾಃ ಸ್ವಭಾವಂ ದೈವಚಿಂತಕಾಃ ॥ ೫೫ ॥

---

೫೧. ಯಕ್ಷರು, ಪಿಶಾಚಗಳು, ಗಂಧರ್ವರು, ನರರು, ಕಿನ್ನರರು, ರಾಕ್ಷಸ ಗಣ, ಪಶು, ಪಕ್ಷಿ, ಮೃಗ, ಸರ್ಪ ಇವೇ ಮೊದಲಾದುವನ್ನು ಸೃಷ್ಟಿಸಿದನು.

೫೨. ಪೂರ್ವ ಸೃಷ್ಟಿಯಲ್ಲಿ ನಿತ್ಯಾನಿತ್ಯಗಳೂ, ಸ್ಥಾವರಜಂಗಮಗಳೂ ಆದ ಯಾವ ವಸ್ತುಗಳಿಗೆ ಯಾವ ಯಾವ ಕರ್ಮಗಳೂ ಇದ್ದುವೋ ಅವೇ ಸ್ವಕರ್ಮಸಹಿತ ವಾಗಿ ಪುನಃ ಪುನಃ ಸೃಷ್ಟಿಯನ್ನು ಹೊಂದುತ್ತವೆ.

೫೩. ದುಷ್ಟಾದುಷ್ಟ, ಮೃದುಕ್ರೂರ, ಧರ್ಮಾಧರ್ಮ, ಸತ್ಯಾನೃತ ಇವುಗಳಿಂದ ಕೂಡಿ ಯಾವ ಪ್ರಾಣಿಗಳು ಸೃಷ್ಟವಾಗಿವೆಯೋ, ಆ ಗುಣಗಳೇ ಆಯಾ ಪ್ರಾಣಿಗಳಿಗೆ ಸಹಜಧರ್ಮಗಳಾಗಿವೆ

೫೪. ಬ್ರಹ್ಮದೇವನು, ಮಹಾಭೂತಗಳು, ಅವುಗಳಿಂದ ಜನಿಸಿದ ಇಂದ್ರಿಯಾರ್ಥಗಳು, ವಿವಿಧಾಕಾರವುಳ್ಳ ಪ್ರಾಣಿಗಳು, ಅವುಗಳ ವಿನಿಯೋಗಗಳು ಇವೇ ಮೊದಲಾದುವುಗಳನ್ನು ತಾನೇ ಸೃಷ್ಟಿಮಾಡಿದನು.

೫೫. ಕೆಲವು ಪುರುಷರು ಪುರುಷ ಪ್ರಯತ್ನವೇ ಶ್ರೇಷ್ಠವೆಂದೂ, ಕೆಲವರು ದೈವವೇ ಉತ್ತಮವೆಂದೂ, ದೈವಚಿಂತಕರು ಸ್ವಭಾವವೇ ಶ್ರೇಷ್ಠವೆಂದೂ ಹೇಳುವರು.

ಪೌರುಷಂ ಕರ್ಮ ದೈವಂ ಚ ಫಲವೃತ್ತಿ ಸ್ವಭಾವತಃ ।
ನ ಚೈಕಂ ನ ಪೃಥಗ್ಭಾವಮಧಿಕಂ ನ ತಯೋರ್ವಿದುಃ ॥
ಏತದೇವಂ ಚ ನೈಕಂ ಚ ನಚೋಭೇನ ಚ ನಾಪ್ಯುಭೇ ॥ ೫೬ ॥

ಕರ್ಮಸ್ಥಾ ವಿಷಯಾ ಬ್ರೂಯುಃ ಸತ್ವಸ್ಥಾಃ ಸಮದರ್ಶಿನಃ ।
ನಾಮ ರೂಪಂ ಚ ಭೂತಾನಾಂ ಕೃತಾನಾಂ ಚ ಪ್ರಪಂಚನಂ ॥
ವೇದ ಶಬ್ದೇಭ್ಯ ಏವಾದೌ ನಿರ್ಮಮೇ ಸ ಮಹೇಶ್ವರಃ ॥ ೫೭ ॥

ಋಷೀಣಾಂ ನಾಮಧೇಯಾನಿ ಯಾಶ್ಚ ದೇವೇಷು ದೃಷ್ಟಯಃ ।
ಶರ್ವರ್ಯಂತೇ ಪ್ರಸೂತಾನಾಂ ತಾನ್ಯೇವಾಸ್ಯ ದಧಾತಿ ಸಃ ॥ ೫೮ ॥

ಯಥರ್ತಾವೃತು ಲಿಂಗಾನಿ ನಾನಾರೂಪಾಣಿ ಪರ್ಯಯೇ ।
ದೃಶ್ಯಂತೇ ತಾನಿ ತಾನ್ಯೇವ ತಥಾ ಭಾವಾ ಯುಗಾದಿಷು ॥ ೫೯ ॥

---

೫೬ ಪುರುಷ ಪ್ರಯತ್ನ ಮತ್ತು ದೈವಪ್ರಯತ್ನ ಇವೆರಡೂ ಫಲಾನುಗುಣವಾಗಿ ಸಾಧಕಗಳಾಗುತ್ತವೆ. ಇವು ಒಂದನ್ನೊಂದು ಬಿಟ್ಟು ಫಲಕಾರಿಯಲ್ಲ. ಆದುದರಿಂದ ಅವೆರಡರಲ್ಲಿ ಉತ್ತಮಾಧಮಭಾವವಿಲ್ಲ. ಒಂದೊಂದೂ ಪ್ರತ್ಯೇಕವಾಗಿ ಫಲಜನಕವಲ್ಲ ಒಟ್ಟುಗೂಡಿದರೂ ಫಲಕಾರಿಯಲ್ಲ ಈಶ್ವರಾನುಗ್ರಹವೇ ಮುಖ್ಯ ಫಲಕಾರಿಯಾಗಿದೆ.

೫೭. ಜ್ಞಾನಿಗಳು ಕರ್ಮಾನುಗುಣವಾಗಿ ಫಲವು ಉಂಟಾಗುವುದು ಎನ್ನುವರು. ಆ ಪರಮೇಶ್ವರನು ಸರ್ವಭೂತಗಳ ನಿರ್ವಚನವನ್ನು ವೇದದಿಂದಲೇ ವಿವೇಚಿಸಿರುವನು.

೫೮. ಪೂರ್ವಕಲ್ಪಗಳಲ್ಲಿ ದೇವತೆಗಳಿಗೂ, ಋಷಿಗಳಿಗೂ ಯಾವ ಯಾವ ನಾಮಧೇಯಗಳಿದ್ದವೋ ಅವನ್ನೇ ಈ ಕಲ್ಪದಲ್ಲಿಯೂ ಸಹ ಈಶ್ವರನು ಕೊಡುತ್ತಾನೆ.

೫೯ ಯಾವ ಯಾವ ಋತುಗಳಲ್ಲಿ ಯಾವ ಯಾವ ಚಿಹ್ನೆಗಳಿರುತ್ತವೆಯೋ ಪ್ರಸಃ ಅವು ಬಂದಾಗ ಆಯಾ ಲಕ್ಷಣಗಳೇ ಇರುತ್ತವೆ. ಹಾಗೆಯೇ ಪ್ರತಿ ಯುಗಗಳಲ್ಲಿಯೂ ಪೂರ್ವಕಲ್ಪಾನುಗುಣವಾಗಿಯೇ ಆಗುತ್ತವೆ.

ಏವಂ ವಿಧಾಸು ಸೃಷ್ಟಾಸು ಬ್ರಹ್ಮಣಾವ್ಯಕ್ತಜನ್ಮನಾ ।
ಶರ್ವರ್ಯಂತೇ ಪ್ರದೃಶ್ಯಂತೇ ಸಿದ್ಧಿಮಾಶ್ರಿತ್ಯ ಮಾನಸೀಂ ॥ ೬೦ ॥

ಏವಂ ಭೂತಾನಿ ಸೃಷ್ಟಾನಿ ಚರಾಣಿ ಸ್ಥಾವರಾಣಿ ಚ ।
ಯದಾಸ್ಯತಾಃ ಪ್ರಜಾಃ ಸೃಷ್ಟಾ ನವ್ಯವರ್ಧಂತ ಧೀಮತಃ ॥ ೬೧ ॥

ಅಥಾನ್ಯಾನ್ ಮಾನಸಾನ್ ಪುತ್ರಾನ್ ಸದೃಶಾನಾತ್ಮನೋ ಸೃಜತ್ ।
ಭೃಗುಂ ಪುಲಸ್ತ್ಯಂ ಪುಲಹಂ ಕ್ರತುಮಾಂಗಿರಸಂ ತಥಾ ॥ ೬೨ ॥

ಮರೀಚಿಂ ದಕ್ಷಮತ್ರಿಂ ಚ ವಸಿಷ್ಠಂ ಚೈವ ಮಾನಸಂ ।
ನವ ಬ್ರಹ್ಮಾಣ ಇತ್ಯೇತೇ ಪುರಾಣೇ ನಿಶ್ಚಯಂ ಗತಾಃ ।
ತೇಷಾಂ ಬ್ರಹ್ಮಾತ್ಮಕಾನಾಂ ವೈ ಸರ್ವೇಷಾಂ ಬ್ರಹ್ಮವಾದಿನಾಂ ॥ ೬೩ ॥

ತತೋಽಸೃಜತ್ ಪುನರ್ಬ್ರಹ್ಮಾ ರುದ್ರಂ ರೋಷಾತ್ಮಸಂಭವಂ ।
ಸಂಕಲ್ಪಂ ಚೈವ ಧರ್ಮಂ ಚ ಪೂರ್ವೇಷಾಮಪಿ ಪೂರ್ವಜಃ । ॥ ೬೪ ॥

---

೬೦. ಅವ್ಯಕ್ತಜನ್ಯನಾದ ಬ್ರಹ್ಮದೇವನ ಮಾನಸಿಕವಾದ ಸಿದ್ಧಿಯು ಪ್ರಲಯಾನಂತರದಲ್ಲಿ ಸೃಷ್ಟವಾದ ಪ್ರಜೆಗಳಲ್ಲಿ ದೃಷ್ಟವಾಗುತ್ತದೆ

೬೧. ಹೀಗೆ ಬ್ರಹ್ಮನು ಚರಾಚರಾತ್ಮಕವಾದ ಸರ್ವಭೂತಗಳನ್ನೂ ಸೃಷ್ಟಿಸಿದನು ಜ್ಞಾನಿಯಾದ ಭಗವಂತನಿಂದ ಸೃಷ್ಟವಾದ ಪ್ರಜೆಗಳಿಗೆ ಯಾವ ವಿಧವಾದ ತೊಂದರೆಯೂ ಆಗಲಿಲ್ಲ.

೬೨-೬೩ ಅನಂತರ ಬ್ರಹ್ಮದೇವನು ಭೃಗು, ಪುಲಸ್ತ್ಯ, ಪುಲಹ, ಕ್ರತು, ಅಂಗಿರಸ, ದಕ್ಷ, ಅತ್ರಿ, ವಸಿಷ್ಠ ಇವರೇ ಮೊದಲಾದ ಆತ್ಮಸಮಾನರಾದ ಪುತ್ರರನ್ನು ಸೃಷ್ಟಿಮಾಡಿದನು. ಬ್ರಹ್ಮಜ್ಞಾನಿಗಳೂ, ಬ್ರಹ್ಮಪುತ್ರರೂ ಆದ ಮಹಾತ್ಮರು ನವ ಸಂಖ್ಯಾಕರೆಂದು ಪುರಾಣದಲ್ಲಿ ಪ್ರಸಿದ್ಧರಾಗಿರುವರು.

೬೪. ಅನಂತರ ಪೂರ್ವಿಕರಿಗಿಂತಲೂ ಪುರಾತನನಾದ ಬ್ರಹ್ಮದೇವನು ಕ್ರೋಧಸ್ವರೂಪನಾದ ರುದ್ರದೇವನನ್ನೂ, ಸಂಕಲ್ಪವನ್ನೂ ಮತ್ತು ಧರ್ಮವನ್ನೂ ಸೃಷ್ಟಿಸಿದನು.

ಅಗ್ರೇ ಸಸರ್ಜ ವೈ ಬ್ರಹ್ಮಾ ಮಾನಸಾನಾತ್ಮನಃ ಸಮಾನ್ ।
ಸನಂದನಂ ಸಸನಕಂ ವಿದ್ವಾಂಸಂ ಚ ಸನಾತನಂ ॥ ೬೫ ॥

ಸನತ್ಕುಮಾರಂ ಚ ವಿಭುಂ ಸನಕಂ ಚ ಸನಂದನಂ ।
ನ ತೇ ಲೋಕೇಷು ಸಜ್ಜಂತೇ ನಿರಪೇಕ್ಷಾಃ ಸನಾತನಾಃ ॥ ೬೬ ॥

ಸರ್ವೇ ತೇ ಹ್ಯಾಗತಜ್ಞಾನಾ ವೀತರಾಗಾ ವಿಮತ್ಸರಾಃ ।
ತೇಷ್ವೇವಂ ನಿರಪೇಕ್ಷ್ಯೇಷು ಲೋಕವೃತ್ತಾನುಕಾರಣಾತ್ ॥ ೬೭ ॥

ಹಿರಣ್ಯಗರ್ಭೋ ಭಗವಾನ್ ಪರಮೇಷ್ಠೀ ಹ್ಯಚಿಂತಯತ್ ।
ತಸ್ಯ ರೋಷಾತ್ಸಮುತ್ಪನ್ನಃ ಪುರುಷೋಽರ್ಕ ಸಮದ್ಯುತಿಃ ॥ ೬೮ ॥

ಸರ್ವಂ ತೇಜೋಮಯಂ ಜಾತಮಾದಿತ್ಯಸಮತೇಜಸಂ ।
ವಿಭಜಾತ್ಮಾನಮಿತ್ಯುಕ್ತ್ವಾ ತತ್ರೈವಾಂತರಧೀಯತ ॥ ೬೯ ॥

---

೬೫. ಬ್ರಹ್ಮನು ಪೂರ್ವದಲ್ಲಿಯೇ ತನಗೆ ಸಮಾನರೂ, ಜ್ಞಾನಿಗಳೂ ಆದ ಸನಕ, ಸನಂದನ, ಸನಾತರೆಂಬ ಜ್ಞಾನಿಗಳಾದ ಮೂವರು ಮಾನಸಪುತ್ರರನ್ನು ಸೃಷ್ಟಿಸಿದನು.

೬೬-೬೭. ನಿರಪೇಕ್ಷರೂ ಪುರಾಣಪುರುಷರೂ ಜ್ಞಾನಿಗಳೂ ಆದ ಸನಕ, ಸನಂದನ, ಸನತ್ಕುಮಾರರು ಎಂಬ ಇವರು ಲೋಕಸೃಷ್ಟಿಯಲ್ಲಿ ವಿರಕ್ತರಾದರು. ಅವರೆಲ್ಲರೂ ಪೂರ್ಣಜ್ಞಾನ, ವೈರಾಗ್ಯ, ಅದ್ವೇಷ ಇವುಗಳುಳ್ಳವರೂ ಸೃಷ್ಟಿಯಲ್ಲಿ ಅಪೇಕ್ಷೆಯಿಲ್ಲದವರೂ ಇಚ್ಛಾರಹಿತರೂ ಆಗಿದ್ದರು.

೬೮. ಹಿರಣ್ಯಗರ್ಭನೂ ಪೂಜ್ಯನೂ ಉತ್ತಮನೂ ಆದ ಬ್ರಹ್ಮದೇವನು ಯೋಚಿಸಿದನು ಆಗ ಆವನು ಕೋಪದಿಂದ ಸೂರ್ಯಸಮಾನತೇಜಸ್ವಿಯಾದ ಮತ್ತೊಬ್ಬ ಪುರುಷನನ್ನು ಸೃಷ್ಟಿಸಿದನು.

೬೯. ಎಲ್ಲವೂ ತೇಜೋಮಯವೂ ಸೂರ್ಯನಿಗೆ ಸಮವಾದ ಕಾಂತಿಯುಳ್ಳವುಗಳೂ ಆಗಿದ್ದವು. ಆಗ ಬ್ರಹ್ಮನು ಆತ್ಮನನ್ನು, ವಿಭಾಗಿಸಿ ಸೃಷ್ಟಿಯನ್ನು ಮಾಡೆಂದು ಹೇಳಿ ಮಾಯವಾದನು.

ಏವಮುಕ್ತ್ವಾ ದ್ವಿಧಾಭೂತಃ ಪೃಥಕ್ ಸ್ತ್ರೀಪುರುಷಃ ಪೃಥಕ್ ।
ಸಚೈಕಾದಶಧಾ ಜಜ್ಞೇ ಅರ್ಧಮಾತ್ಮಾನಮೀಶ್ವರಃ ॥ ೭೦ ॥

ತೇನೋಕ್ತಾಸ್ತೇ ಮಹಾತ್ಮಾನಃ ಸರ್ವ ಏವ ಮಹಾತ್ಮನಾ ।
ಜಗತೋ ಬಹುಳೀ ಭಾವಮಧಿಕೃತ್ಯ ಹಿತೈಷಿಣಃ ॥ ೭೧ ॥

ಲೋಕವೃತ್ತಾಂತ ಹೇತೋರ್ಹಿ ಪ್ರಯತಧ್ವಮತಂದ್ರಿತಾಃ ।
ವಿಶ್ವಂ ವಿಶ್ವಸ್ಯ ಲೋಕಸ್ಯ ಸ್ಥಾಪನಾಯ ಹಿತಾಯ ಚ ॥ ೭೨ ॥

ಏವಮುಕ್ತಾಸ್ತು ರುರುದುರ್ದುದ್ರುವುಶ್ಚ ಸಮಂತತಃ ।
ರೋದನಾದ್ರಾವಣಾಚ್ಚೈವ ರುದ್ರಾನಾಮ್ನೇತಿ ವಿಶ್ರುತಾಃ ॥ ೭೩ ॥

ಯೈರ್ಹಿ ವ್ಯಾಪ್ತಮಿದಂ ಸರ್ವಂ ತ್ರೈಲೋಕ್ಯಂ ಸಚರಾಚರಂ ।
ತೇಷಾಮನುಚರಾಲೋಕೇ ಸರ್ವಲೋಕಪರಾಯಣಾಃ ॥ ೭೪ ॥

---

೭೦. ಹೀಗೆ ಉಕ್ತನಾದ ಈಶ್ವರನು ನರನಾರೀ ರೂಪಗಳನ್ನು ಧರಿಸಿದನು. ಮತ್ತು ತನ್ನ ಪುರುಷರೂಪದಿಂದ ಏಕಾದಶರುದ್ರ ರೂಪಗಳನ್ನು ಸೃಷ್ಟಿಮಾಡಿದನು.

೭೧. ಮಹಾತ್ಮನೂ ಮೂಲರೂಪಿಯೂ ಆದ ಈಶ್ವರನು ತನ್ನಾಂಶಗಳಿಂದ ಏಕಾದಶರುದ್ರ ರೂಪಿಗಳಾದ ಮಹಾತ್ಮರಿಗೆ ಜಗತ್ತಿನ ಹಿತದ ವಿಷಯದಲ್ಲಿಯೂ, ಅಭಿವೃದ್ಧಿಯ ವಿಷಯದಲ್ಲಿಯೂ ಉಪದೇಶಮಾಡಿದನು.

೭೨. ನೀವೆಲ್ಲರೂ ಜಾಗರೂಕರಾಗಿಯೂ ಲೋಕಹಿತೈಷಿಗಳಾಗಿಯೂ ಲೋಕ ವೃತ್ತಾಂತವನ್ನರಿಯಿರಿ ಮತ್ತು ಜಗತ್ತನ್ನು ಸ್ಥಾಪಿಸುವುದಕ್ಕಾಗಿಯೂ ಲೋಕಹಿತಾರ್ಥ ಕ್ಕಾಗಿಯೂ ಪ್ರಯತ್ನಮಾಡಿರೆಂದುಪದೇಶಿಸಿದನು.

೭೩. ಹೀಗೆ ಉಕ್ತರಾದ ಆ ಏಕಾದಶರುದ್ರರೂ ರೋದನಮಾಡಿದರು ಮತ್ತು ಓಡಿದರು. ಈ ಎರಡು ಕಾರಣಗಳಿಂದಲೂ ಆ ರೂಪಗಳಿಗೆ ರುದ್ರರೆಂಬ ಸಂಜ್ಞೆ ಯುಂಟಾಗಿದೆ.

೭೪. ಯಾವ ಈಶ್ವರನ ರೂಪಗಳಿಂದ ಚರಾಚರಾತ್ಮಕವಾದ ಈ ಮೂರು ಲೋಕಗಳೂ ವ್ಯಾಪ್ತವಾಗಿವೆಯೋ ಅಂತಹ ಈಶ್ವರನ ಅನುಚರರೇ ಸರ್ವಲೋಕ ರಕ್ಷಣೆಯಲ್ಲಿ ಪರಾಯಣರಾಗಿರುತ್ತಾರೆ.

ನೈಕನಾಗಾಯುತಬಲಾ ವಿಕ್ರಾಂತಾಶ್ಚ ಗಣೇಶ್ವರಾಃ ।
ತತ್ರ ಯಾಸಾ ಮಹಾಭಾಗಾ ಶಂಕರಸ್ಯಾರ್ಧಕಾಯಿನೀ ॥ ೭೫ ॥

ಪ್ರಾಗುಕ್ತಾತು ಮಯಾ ತುಭ್ಯಂ ಸ್ತ್ರೀ ಸ್ವಯಂಭೋರ್ಮುಖೋದ್ಗತಾ ।
ಕಾಯಾರ್ಧಂ ದಕ್ಷಿಣಂ ತಸ್ಯಾಃ ಶುಕ್ಲಂ ವಾಮಂ ತಥಾಸಿತಂ ॥ ೭೬ ॥

ಆತ್ಮಾನಂ ವಿಭಜಸ್ವೇತಿ ಸೋಕ್ತಾ ದೇವೀ ಸ್ವಯಂಭುವಾ ।
ಸಾ ತು ಪ್ರೋಕ್ತಾ ದ್ವಿಧಾಭೂತಾ ಶುಕ್ಲಾಕೃಷ್ಣಾ ಚ ವೈ ದ್ವಿಜಾಃ ।
ತಸ್ಯಾ ನಾಮಾನಿ ವಕ್ಷ್ಯಾಮಿ ಶೃಣುಧ್ವಂ ಸುಸಮಾಹಿತಾಃ ॥ ೭೭ ॥

ಸ್ವಾಹಾ ಸ್ವಧಾ ಮಹಾವಿದ್ಯಾ ಮೇಧಾ ಲಕ್ಷ್ಮೀಃ ಸರಸ್ವತೀ ।
ಅಪರ್ಣಾ ಚೈಕಪರ್ಣಾ ಚ ತಥಾಸ್ಯಾದೇವ ಪಾಟಲಾ ॥ ೭೮ ॥

---

೭೫. ಈಶ್ವರನ ಪ್ರತಿಯೊಬ್ಬ ಗಣೇಶ್ವರರು ಹತ್ತು ಸಹಸ್ರ ಆನೆಗಳ ಶಕ್ತಿಯುಳ್ಳವರಾಗಿಯೂ ಮಹಾ ಪರಾಕ್ರಮಿಗಳಾಗಿಯೂ ಇರುತ್ತಾರೆ. ಅಲ್ಲಿ ಪರಮೇಶ್ವರನ ಅರ್ಧಾಂಗಿಯೂ ಮಹಾನುಭಾವಳೂ ಆದ ಯಾವ ಅಂಬಿಕೆಯು ಇರುವಳೋ, ಅವಳ ವಿಷಯವೇನೆಂದರೆ—

೭೬. ಬ್ರಹ್ಮದೇವನ ಮುಖದಿಂದ ಜನಿಸಿದ ಸ್ತ್ರೀ ವಿಚಾರವಾಗಿ ಪೂರ್ವದಲ್ಲಿಯೇ ನಾನು ನಿಮಗೆ ಏನು ಹೇಳಿದ್ದೆನೋ ಅಂತಹ ಪಾರ್ವತೀದೇವಿಯು, ಶರೀರದ ಪೂರ್ವಭಾಗವು ಶುಭ್ರವಾಗಿಯೂ ಎಡಭಾಗವು ಕೃಷ್ಣವರ್ಣವಾಗಿಯೂ ಇದ್ದುವು.

೭೭ ಬ್ರಹ್ಮದೇವನು ಪಾರ್ವತಿಗೆ ತನ್ನ ಶರೀರವನ್ನು ಎರಡು ಭಾಗವಾಗಿ ವಿಭಾಗಿಸು, ಎಂಬುದಾಗಿ ಹೇಳಿದನು ಆಕೆಯು ಹಾಗೆಯೇ ಎರಡು ಭಾಗವಾಗಿ ಮಾಡಿದಳು. ಅದರಲ್ಲಿ ಒಂದು ರೂಪವು ಶುಕ್ಲವರ್ಣವೂ, ಮತ್ತೊಂದು ಕೃಷ್ಣವರ್ಣವೂ ಆಗಿದ್ದುವು. ಎಲೈ ಬ್ರಾಹ್ಮಣರೇ, ಆಕೆಯ ನಾಮಗಳನ್ನು ಹೇಳುವೆನು ಕೇಳಿ ಎಂದು ಸೂತರು ಹೇಳಿದರು

೭೮-೭೯. ಆ ದೇವಿಗೆ ಸ್ವಾಹಾ, ಸ್ವಧಾ, ಮಹಾವಿದ್ಯಾ, ಮೇಧಾ, ಲಕ್ಷ್ಮಿ, ಸರಸ್ವತಿ, ಅಪರ್ಣಾ, ಏಕಪರ್ಣಾ, ಪಾಟಲಾ, ಉಮಾ, ಹೈಮವತೀ, ಷಷ್ಠೀ,

ಉಮಾ ಹೈಮವತೀ ಷಷ್ಠೀ ಕಲ್ಯಾಣೀ ಚೈವ ನಾಮತಃ ।
ಖ್ಯಾತಿಃ ಪ್ರಜ್ಞಾ ಮಹಾಭಾಗಾ ಲೋಕೇ ಗೌರೀತಿ ವಿಶ್ರುತಾ ॥ ೭೯ ॥

ವಿಶ್ವರೂಪಮಥಾರ್ಯಾಯಾಃ ಪೃಥಗ್ದೇಹವಿಭಾವನಾತ್ ।
ಶೃಣು ಸಂಕ್ಷೇಪತಸ್ತಸ್ಯಾ ಯಥಾವದನುಪೂರ್ವಶಃ ॥ ೮೦ ॥

ಪ್ರಕೃತಿ ರ್ನಿಯತಾ ರೌದ್ರೀ ದುರ್ಗಾ ಭದ್ರಾ ಪ್ರಮಾಥಿನೀ ।
ಕಾಲರಾತ್ರಿ ರ್ಮಹಾಮಾಯಾ ರೇವತೀ ಭೂತನಾಯಿಕಾ ॥ ೮೧ ॥

ದ್ವಾಪರಾಂತ ವಿಕಾರೇಷು ದೇವ್ಯಾ ನಾಮಾನಿ ಮೇ ಶೃಣು ।
ಗೌತಮೀ ಕೌಶಿಕೀ ಆರ್ಯಾ ಚಂಡೀ ಕಾತ್ಯಾಯನೀ ಸತೀ ॥ ೮೨ ॥

ಕುಮಾರೀ ಯಾದವೀ ದೇವೀ ವರದಾ ಕೃಷ್ಣ ಪಿಂಗಳಾ ।
ಬರ್ಹಿರ್ಧ್ವಜಾ ಶೂಲಧರಾ ಪರಮ ಬ್ರಹ್ಮಚಾರಣೀ ॥ ೮೩ ॥

---

ಕಲ್ಯಾಣಿ, ಖ್ಯಾತಿ, ಪ್ರಜ್ಞಾ. ಮಹಾಭಾಗಾ, ಎಂಬುದಾಗಿ ಅನೇಕ ನಾಮಗಳಿದ್ದರೂ ಗೌರೀ ಎಂಬ ನಾಮವು ಲೋಕದಲ್ಲಿ ಸುಪ್ರಸಿದ್ಧವಾಗಿದೆ.

೮೦. ಪೂಜ್ಯಳಾದ ದೇವಿಯು ತನ್ನ ದೇಹವನ್ನು ವಿಭಾಗಮಾಡಿಕೊಂಡು ವಿಶ್ವರೂಪಿಯಾದಳು. ಅವಳ ಮಹಾತ್ಮ್ಯವನ್ನು ಕ್ರಮವಾಗಿ ನಿರೂಪಿಸುವೆನು ಕೇಳಿ ಎಂದನು.

೮೧. ಆ ಗೌರೀದೇವಿಗೆ ಪ್ರಕೃತಿ, ನಿಯತಾ, ರೌದ್ರೀ, ದುರ್ಗಾ, ಭದ್ರಾ, ಪ್ರಮಾಥಿನೀ, ಕಾಲರಾತ್ರಿ ಮಹಾಮಾಯಾ, ರೇವತೀ, ಭೂತನಾಯಕಾ, ಎಂಬ ಉಪನಾಮಗಳೂ ಪ್ರಖ್ಯಾತವಾಗಿವೆ.

೮೨-೮೫ ದ್ವಾಪರಾಂತರದಲ್ಲಿ ವಿಕಾರವನ್ನು ಹೊಂದಿದ ಆ ಗೌರೀದೇವಿಗೆ, ದಿವ್ಯವಾದ ಗೌತಮೀ, ಕೌತಕೀ, ಆರ್ಯಾ, ಚಂಡೀ, ಕಾತ್ಯಾಯನೀ, ಸತೀ ಕುಮಾರೀ, ಯಾದವೀ, ವರದಾ, ಕೃಷ್ಣಪಿಂಗಳಾ, ಬರ್ಹಿರ್ಧ್ವಜಾ, ಶೂಲಧರಾ, ಬ್ರಹ್ಮ ಚಾರಿಣೀ, ಮಾಹೇಂದ್ರೀ, ಇಂದ್ರಭಗಿನೀ, ವೃಷಕನ್ಯಾ, ಏಕವಾಸಸಿ, ಅಪರಾಜಿತಾ,

**ಮಾಹೇಂದ್ರೀ ಚೇಂದ್ರಭಗಿನೀ ವೃಷಕನ್ಯೈಕ ವಾಸಸೀ ।**
**ಅಪರಾಜಿತಾ ಬಹುಭುಜಾ ಪ್ರಗಲ್ಭಾ ಸಿಂಹವಾಹಿನೀ ॥ ೮೪ ॥**

**ಏಕನಾಸಾ ದೈತ್ಯಹನೀ ಮಾಯಾ ಮಹಿಷಮರ್ದಿನೀ**
**ಅಮೋಘಾ ವಿಂಧ್ಯನಿಲಯಾ ವಿಕ್ರಾಂತಾ ಗಣನಾಯಿಕಾ । ॥ ೮೫ ॥**

**ದೇವೀ ನಾಮವಿಕಾರಾಣಿ ಇತ್ಯೇತಾನಿ ಯಥಾಕ್ರಮಂ ।**
**ಭದ್ರಕಾಲ್ಯಾಸ್ತ್ವಮೋಕ್ತಾನಿ ದೇವ್ಯಾ ನಾಮಾನಿ ತತ್ವತಃ ॥ ೮೬ ॥**

**ಯೇ ಪಠಂತಿ ನರಾಸ್ತೇಷಾಂ ವಿದ್ಯತೇ ನ ಪರಾಭವಃ ।**
**ಅರಣ್ಯೇ ಪ್ರಾಂತರೇ ವಾಪಿ ಪುರೇ ವಾಪಿ ಗೃಹೇಪಿ ವಾ ॥ ೮೭ ॥**

**ರಕ್ಷಾಮೇತಾಂ ಪ್ರಯುಂಜೀತ ಜಲೇ ವಾಪಿ ಸ್ಥಲೇಪಿ ವಾ ।**
**ವ್ಯಾಘ್ರಕುಂಭೀರ ಚೌರೇಭ್ಯೋ ಭೂತಸ್ಥಾನೇ ವಿಶೇಷತಃ ।**
**ಆಧಿಷ್ವಪಿ ಚ ಸರ್ವಾಸು ದೇವ್ಯಾ ನಾಮಾನಿ ಕೀರ್ತಯೇತ್ ॥ ೮೮ ॥**

---

ಬಹುಭುಜಾ, ಪ್ರಗಲ್ಭಾ, ಸಿಂಹವಾಹಿನೀ, ಏಕನಾಸಾ, ದೈತ್ಯಹನೀ, ಮಾಯಾ, ಮಹಿಷಮರ್ದಿನೀ, ಅಮೋಘಾ, ವಿಂಧ್ಯನಿಲಯಾ, ವಿಕ್ರಾಂತಾ, ಗಣನಾಯಕಾ, ಎಂಬ ಅನೇಕ ನಾಮಗಳು ಪ್ರಖ್ಯಾತವಾಗಿವೆ.

೮೬-೮೭ ಯಾವ ಮನುಷ್ಯನು ಗೌರೀದೇವಿಯ ದಿವ್ಯವಾದ ಈ ರೂಪ ನಾಮಗಳನ್ನು ಕ್ರಮವಾಗಿ ಭಕ್ತಿಯಿಂದ ಪಠನಮಾಡುತ್ತಾನೋ ಅಂತಹ ಪುರುಷನಿಗೆ ಅರಣ್ಯ, ವನಸಮೀಪ ಪುರ, ಗೃಹ ಇವೇ ಮುಂತಾದ ಜಾಗಗಳಲ್ಲಿ ಯಾವ ವಿಧವಾದ ಪರಾಭವವೂ, ಭಯವೂ ಉಂಟಾಗುವುದಿಲ್ಲ.

೮೮. ಪುರುಷರು ಜಲದಲ್ಲಿಯಾಗಲೀ, ಸ್ಥಳದಲ್ಲಿಯಾಗಲೀ ಭಯಗೊಂಡರೆ ಭಯಪರಿಹಾರಾರ್ಥವಾಗಿ ಗೌರಿದೇವಿಯ ಈ ನಾಮಪಠನರೂಪವಾದ ರಕ್ಷಾವಿಧಾನ ವನ್ನು ಮಾಡಬೇಕು. ಮತ್ತು ಹುಲಿ, ಹಾವು, ಚೋರ, ಭೂತ, ಪ್ರೇತ, ಪಿಶಾಚ, ರೋಗ ಇವೇ ಮೊದಲಾದ ಕಷ್ಟಗಳು ಬಂದಾಗಲೂ ಗೌರೀದೇವಿಯ ಈ ದಿವ್ಯನಾಮ ಗಳನ್ನು ಭಕ್ತಿಪೂರ್ವಕವಾಗಿ ಕೀರ್ತನೆಮಾಡಬೇಕು.

ಅರ್ಭಕೆಗ್ರಹಭೂತೈಶ್ಚ ಪೂತನಾ ಮಾತೃಭಿಃ ಸದಾ ।
ಅಭ್ಯರ್ದಿತಾನಾಂ ಬಾಲಾನಾಂ ರಕ್ಷಾಮೇತಾಂ ಪ್ರಯೋಜಯೇತ್ ॥ ೮೯ ॥

ಮಹಾದೇವೀ ಕುಲೇದ್ವೇತು ಪ್ರಜ್ಞಾಶ್ರೀಶ್ಚ ಪ್ರಕೀರ್ತ್ಯತೇ ।
ಆಭ್ಯಾಂ ದೇವೀ ಸಹಸ್ರಾಣಿ ಯೈರ್ವ್ಯಾಪ್ತಮಖಿಲಂ ಜಗತ್ ॥ ೯೦ ॥

ಸಾ ಸೃಜತ್ ವ್ಯವಸಾಯಂತು ಧರ್ಮಂ ಭೂತಸುಖಾವಹಂ ।
ಸಂಕಲ್ಪಂ ಚೈವ ಕಲ್ಪಾದೌ ಜಜ್ಞಿರೇಽವ್ಯಕ್ತಯೋನಿತಃ ॥ ೯೧ ॥

ಮಾನಸಶ್ಚ ರುಚಿರ್ನಾಮ ವಿಜ್ಞೇಯೋ ಬ್ರಹ್ಮಣಃ ಸುತಃ ।
ಪ್ರಾಣಾತ್ಸ್ವದಸೃಜದ್ದಕ್ಷಂಚಕ್ಷುಭ್ಯಾಂ ಚ ಮರೀಚಿಕಂ ॥ ೯೨ ॥

ಭೃಗುಸ್ತು ಹೃದಯಾಜ್ಜಜ್ಞೇ ಋಷಿಸ್ಸಲಿಲ ಜನ್ಮನಃ ।
ಶಿರಸೋಂಗಿರಸಂ ಚೈವ ಶ್ರೋತ್ರಾದತ್ರಿಂ ತಥೈವ ಚ ॥ ೯೩ ॥

---

೮೯. ಹುಡುಗರು ಬಾಲಗ್ರಹ, ಭೂತ, ಪೂತನಾ ಮೊದಲಾದ ಮಾತೃಗಳಿಂದ ಭಯಪೀಡಿತರಾದರೆ ಭೀತಿಪರಿಹಾರಕ್ಕಾಗಿ ಈ ದೇವಿಯ ನಾಮಗಳನ್ನು ಪಠನಮಾಡಿ ರಕ್ಷಾವಿಧಾನವನ್ನು ಮಾಡಬೇಕು.

೯೦. ಮಹಾದೇವಿಯ ಕುಲದಲ್ಲಿ ಪ್ರಜ್ಞಾ, ಶ್ರೀ, ಎಂಬುದಾಗಿ ಇಬ್ಬರು ಜನಿಸಿದರು. ಅವರ ಸಂತತಿಗಳಿಂದ ಜಗತ್ತೆಲ್ಲವೂ ಪೂರ್ಣವಾಗಿವೆ.

೯೧. ಅವ್ಯಕ್ತಜನ್ಯಳಾದ ದೇವಿಯು ಕಲ್ಪಪ್ರಾರಂಭದಲ್ಲಿ ಸಕಲ ಭೂತಗಳನ್ನೂ, ಸುಖಕರವಾದ ಧರ್ಮವನ್ನೂ, ಪ್ರಯತ್ನವನ್ನೂ, ಸಂಕಲ್ಪವನ್ನೂ ಸೃಷ್ಟಿಸಿದನು.

೯೨. ಮಾನಸಪುತ್ರನಾದ ರುಚಿಯು ಬ್ರಹ್ಮನಿಗೆ ಪುತ್ರನಾಗಿ ಜನಿಸಿದನು. ಬ್ರಹ್ಮನ ಪ್ರಾಣಗಳಿಂದ ದಕ್ಷನೂ, ನೇತ್ರಗಳಿಂದ ಮರೀಚಿಯೂ ಜನಿಸಿದರು.

೯೩-೯೫. ಬ್ರಹ್ಮದೇವನು ಹೃದಯದಿಂದ ಭೃಗುವನ್ನು, ಶಿರಸ್ಸಿನಿಂದ ಅಂಗಿರಸನನ್ನು, ಶ್ರೋತ್ರಗಳಿಂದ ಅತ್ರಿಯನ್ನು, ಉದಾನದಿಂದ ಪುಲಸ್ತ್ಯನನ್ನು, ವ್ಯಾನದಿಂದ ಪುಲಹನನ್ನು, ಸಮಾನದಿಂದ ವಸಿಷ್ಠನನ್ನು, ಅಪಾನದಿಂದ ಕ್ರತುವನ್ನು,

ಪುಲಸ್ತ್ಯಂ ಚ ತಥೋದಾನಾದ್ವ್ಯಾನಾಚ್ಚ ಪುಲಹಂ ಪುನಃ ।
ಸಮಾನಜಂ ವಸಿಷ್ಠಂ ತು ಅಪಾನಾನ್ನಿರ್ಮಮೇ ಕ್ರತುಂ ॥ ೯೪ ॥

ಅಭಿಮಾನಾತ್ಮಕಂ ಭದ್ರಂ ನಿರ್ಮಮೇ ನೀಲಲೋಹಿತಂ ।
ಇತ್ಯೇತೇ ಬ್ರಹ್ಮಣಃ ಪುತ್ರಾಃ ಪ್ರಾಣಜಾ ದ್ವಾದಶ ಸ್ಮೃತಾಃ ॥ ೯೫ ॥

ಇತ್ಯೇತೇ ಮಾನಸಾಃ ಪುತ್ರಾ ವಿಜ್ಞೇಯಾ ಬ್ರಹ್ಮಣಃ ಸುತಾಃ ।
ಭೃಗ್ವಾದಯಸ್ತು ಯೇ ಸೃಷ್ಟಾ ನ ಚೈತೇ ಬ್ರಹ್ಮವಾದಿನಃ ॥ ೯೬ ॥

ಗೃಹಮೇಧಿನಃ ಪುರಾಣಾಸ್ತೇ ಧರ್ಮಸ್ತೈಃ ಪ್ರಾಕ್ ಪ್ರವರ್ತಿತಃ ।
ದ್ವಾದಶೈತೇ ಪ್ರವರ್ತಂತೇ ಸಹ ರುದ್ರೇಣ ವೈ ಪ್ರಜಾಃ ॥ ೯೭ ॥

ಋಭುಃ ಸನತ್ಕುಮಾರಸ್ತು ದ್ವಾವೇತಾವೂರ್ಧ್ವರೇತಸೌ ।
ಪೂರ್ವೋತ್ಪನ್ನೌ ಪುರಾ ತೇಭ್ಯಃ ಸರ್ವೇಷಾಮಪಿ ಪೂರ್ವಜೌ ॥ ೯೮ ॥

ವ್ಯತೀತೇ ಪ್ರಥಮೇ ಕಲ್ಪೇ ಪುರಾಣೇ ಲೋಕಸಾಧಕೌ ।
ವೈರಾಜೇ ತಾವುಭೌ ಲೋಕೇ ತೇಜಃ ಸಂಕ್ಷಿಪ್ಯ ಚಾಸ್ಥಿತೌ । ॥ ೯೯ ॥

---

ಪ್ರಾಣದಿಂದ ಅಗಸ್ತ್ಯನನ್ನು, ಅಭಿಮಾನದಿಂದ ಮಂಗಳಕರನಾದ ಈಶ್ವರನನ್ನು ಸೃಷ್ಟಿಸಿದನು. ಈ ರೀತಿಯಾಗಿ ಮೇಲೆ ಹೇಳಿದ ಹನ್ನೆರಡು ಜನರು ಬ್ರಹ್ಮನಿಗೆ ಮಾನಸಪುತ್ರರಾಗಿ ಜನಿಸಿದರು.

೯೬. ಮೇಲೆ ಹೇಳಿದ ಹನ್ನೆರಡು ಜನರೂ ಬ್ರಹ್ಮನ ಮಾನಸಪುತ್ರರಾದರು. ಆದರೆ ಬ್ರಹ್ಮನಿಂದ ಸೃಷ್ಟರಾದ ಭೃಗ್ವಾದಿಋಷಿಗಳು ಬ್ರಹ್ಮವಾದಿಗಳಾಗಲಿಲ್ಲ.

೯೭. ಇವರು ಪೂರ್ವಕಾಲದ ಗೃಹಸ್ಥರಾಗಿದ್ದರು. ಇವರಿಂದ ಪುರಾತನ ಧರ್ಮಗಳೆಲ್ಲವೂ ಸ್ಥಿರವಾದುವು. ಈಶ್ವರನೊಡನೆ ಆ ಹನ್ನೆರಡು ಜನರೂ ಧರ್ಮ ಪ್ರವರ್ತಕರಾದರು.

೯೮. ಋಭು, ಸನತ್ಕುಮಾರರೆಂಬ ಇವರಿಬ್ಬರೂ ಪೂರ್ವದಲ್ಲಿ ಜನಿಸಿದ್ದರಿಂದ ಎಲ್ಲಾ ಮಕ್ಕಳಿಗಿಂತಲೂ ಜ್ಯೇಷ್ಠರೂ, ಊರ್ಧ್ವರೇತಸ್ಕರೂ, ಪುರಾಣಪುರುಷರೂ ಆಗಿದ್ದರು.

೯೯. ಪೂರ್ವಕಲ್ಪವು ಕಳೆಯಲು ಲೋಕಪ್ರವರ್ತಕರಾದ ಅವರಿಬ್ಬರೂ ವೈರಾಜನಾಮಕವಾದ ಲೋಕದಲ್ಲಿ ತೇಜೋವಂತರಾಗಿ ನಿಂತರು.

ತಾವುಭೌ ಯೋಗಧರ್ಮಾಣಾ ವಾರೋಪ್ಯಾತ್ಮಾನಮಾತ್ಮನಿ ।
ಪ್ರಜಾಧರ್ಮಂ ಚ ಕಾಮಂ ಚ ವರ್ತಯೇತಾಂ ಮಹೌಜಸಾ ॥ ೧೦೦ ॥

ಯಥೋತ್ಪನ್ನಸ್ತಥೈವೇಹ ಕುಮಾರ ಇತಿ ಚೋಚ್ಯತೇ ।
ತಸ್ಮಾತ್ಸನತ್ಕುಮಾರೋಯಮಿತಿ ನಾಮಾಸ್ಯ ಕೀರ್ತಿತಂ ॥ ೧೦೧ ॥

ತೇಷಾಂ ದ್ವಾದಶತೇ ವಂಶಾ ದಿವ್ಯಾ ದೇವಗುಣಾನ್ವಿತಾಃ ।
ಕ್ರಿಯಾವಂತಃ ಪ್ರಜಾವಂತೋ ಮಹರ್ಷಿಭಿರಲಂಕೃತಾಃ ॥ ೧೦೨ ॥

ಇತ್ಯೇಷ ಕರಣೋದ್ಭೂತೋ ಲೋಕಾನ್ ಸ್ರಷ್ಟುಂ ಸ್ವಯಂಭುವಃ ।
ಮಹದಾದಿ ವಿಶೇಷಾಂತೋ ವಿಕಾರಃ ಪ್ರಕೃತೇಃ ಸ್ವಯಂ ॥ ೧೦೩ ॥

ಚಂದ್ರಸೂರ್ಯಪ್ರಭಾಲೋಕೋ ಗ್ರಹನಕ್ಷತ್ರಮಂಡಿತಃ ।
ನದೀಭಿಶ್ಚ ಸಮುದ್ರೈಶ್ಚ ಪರ್ವತೈಶ್ಚ ಸಮಾವೃತಃ ॥ ೧೦೪ ॥

---

೧೦೦. ಅವರಿಬ್ಬರೂ ಯೋಗಜನ್ಯವಾದ ಮಹಾತೇಜಸ್ಸಿನಿಂದ ಪರಮಾತ್ಮನಲ್ಲಿ ತಮ್ಮ ಮನಸ್ಸಿಟ್ಟು ಪ್ರಜಾಧರ್ಮವನ್ನೂ ಕಾಮವನ್ನೂ ತ್ಯಜಿಸಿದರು.

೧೦೧ ಯಾರು ಹುಟ್ಟಿದಾರಭ್ಯ ಒಂದೇ ಸಮರಾಗಿ ವಿಕಾರರಾಗದೆ ಕುಮಾರರಾಗಿಯೇ ಇದ್ದರೋ ಅವರು ಸನತ್ಕುಮಾರರೆಂದು ಲೋಕದಲ್ಲಿ ಖ್ಯಾತಿಗೊಂಡರು.

೧೦೨. ಅವರ ಆ ಹನ್ನೆರಡು ವಂಶಗಳು ದಿವ್ಯವಾಗಿಯೂ, ಗುಣೋಪೇತಗಳಾಗಿಯೂ, ಕ್ರಿಯೆಯುಳ್ಳವುಗಳಾಗಿಯೂ, ಪ್ರಜೆಗಳುಳ್ಳವುಗಳಾಗಿಯೂ, ಮಹರ್ಷಿಗಳಿಂದಲಂಕೃತಗಳಾಗಿಯೂ ಇದ್ದುವು.

೧೦೩. ಮೇಲೆ ಹೇಳಿದ ಹನ್ನೆರಡು ವಂಶಗಳು ಬ್ರಹ್ಮದೇವನ ಲೋಕಸೃಷ್ಟಿಗೆ ಸಾಧನಭೂತಗಳಾಗಿವೆ. ಮಹತ್ತತ್ವದಿಂದ ಭೂಪರ್ಯಂತವಾದ ಜಗತ್ತೆಲ್ಲವೂ ಪ್ರಕೃತಿಯ ವಿಕಾರಗಳೇ ಆಗಿವೆ.

೧೦೪-೧೦೫. ಚಂದ್ರಸೂರ್ಯಪ್ರಭೆಗಳಿಂದಲಂಕೃತವೂ ಗ್ರಹನಕ್ಷತ್ರಗಳಿಂದ ಮಂಡಿತವೂ ನದೀ ಪರ್ವತ ಸಮುದ್ರಗಳಿಂದ ಸುತ್ತಲ್ಪಟ್ಟದ್ದೂ ವಿವಿಧ ಪಟ್ಟಣಗಳು

ಪುರೈಶ್ಚ ವಿವಿಧಾಕಾರೈಃ ಪ್ರೀತೈರ್ಜನಪದೈಸ್ತಥಾ ।
ತಸ್ಮಿನ್ ಬ್ರಹ್ಮವನೇಽವ್ಯಕ್ತೇ ಬ್ರಹ್ಮಾಚರತಿ ಶರ್ವರೀಂ ॥ ೧೦೫ ॥

ಅವ್ಯಕ್ತಬೀಜಪ್ರಭವಸ್ತಸ್ಯೈವಾನುಗ್ರಹೋತ್ಥಿತಃ ।
ಬುದ್ಧಿಸ್ಕಂಧಮಯಶ್ಚೈವ ಇಂದ್ರಿಯಾಂಕುರ ಕೋಟರಃ ॥ ೧೦೬ ॥

ಮಹಾಭೂತ ಪ್ರಶಾಖಾಶ್ಚ ವಿಶೇಷೈಃ ಪತ್ರವಾಂಸ್ತಥಾ ।
ಧರ್ಮಾಧರ್ಮಸು ಪುಷ್ಪಸ್ತು ಸುಖದುಃಖ ಫಲೋದಯಃ ॥ ೧೦೭ ॥

ಆಜೀವಃ ಸರ್ವಭೂತಾನಾಮಯಂ ವೃಕ್ಷಃ ಸನಾತನಃ ।
ಏತದ್‌ಬ್ರಹ್ಮ ಬಲಂ ಚೈವ ಬ್ರಹ್ಮ ವೃಕ್ಷಸ್ಯ ತಸ್ಯ ಹ ॥ ೧೦೮ ॥

ಅವ್ಯಕ್ತಂ ಕಾರಣಂ ಯತ್ತನ್ನಿತ್ಯಂ ಸದ ಸದಾತ್ಮಕಂ ।
ಇತ್ಯೇಷೋಽನುಗ್ರಹಃ ಸರ್ಗೋ ಬ್ರಹ್ಮಣಃ ಪ್ರಾಕೃತಸ್ತು ಯಃ ॥ ೧೦೯ ॥

ಮುಖ್ಯಾದಯಸ್ತು ಷಟ್ ಸರ್ಗಾ ವೈ ಕೃತಾ ಬುದ್ಧಿಪೂರ್ವಕಾಃ ।
ತ್ರೈಕಾಲೇ ಸಮವರ್ತಂತ ಬ್ರಹ್ಮಣಸ್ತೇಽಭಿಮಾನಿನಃ ॥ ೧೧೦ ॥

---

ನಗರೋಪವನಗಳಿಂದ ಭೂಷಿತವೂ, ಅವ್ಯಕ್ತವೂ ಆದ ಬ್ರಹ್ಮವನದಲ್ಲಿ ಬ್ರಹ್ಮದೇವನು ರಾತ್ರಿಯನ್ನು ಅನುಭವಿಸಿದನು (ಕಳೆದನು)

೧೦೬-೧೦೮. ಸರ್ವಪ್ರಾಣಿಗಳಿಗೆ ಜೀವನಪ್ರದವೂ, ಪುರಾಣವೂ, ಆದ ಬ್ರಹ್ಮದೇವನೆಂಬ ಆ ಕಲ್ಪವೃಕ್ಷವು ಅವ್ಯಕ್ತವೆಂಬ ಬೀಜ, ಅದರ ಅನುಗ್ರಹವೆಂಬ ನೀರು, ಬುದ್ಧಿಯೆಂಬ ಸ್ಕಂಧ, ಇಂದ್ರಿಯಗಳೆಂಬ ಪೊಟ್ಟರೆ, ಮಹಾಭೂತಗಳೆಂಬ ರೆಂಬೆ, ವಿಶೇಷಗಳೆಂಬ ಎಲೆಗಳು, ಧರ್ಮಾಧರ್ಮಗಳೆಂಬ ಪುಷ್ಪ, ಸುಖದುಃಖಗಳೆಂಬ ಫಲ ಇವುಗಳುಳ್ಳದ್ದೂ ಸರ್ವಭೂತಗಳಿಗೆ ಆಶ್ರಯವೂ ಆಗಿದೆ.

೧೦೯. ಸದಸದ್ರೂಪವಾದ ಅವ್ಯಕ್ತ ತತ್ತ್ವವು ಯಾವುದಕ್ಕೆ ಕಾರಣವೋ ಅಂತಹ ಪ್ರಾಕೃತವೂ ಚರಾಚರಾತ್ಮಕವೂ ಆದ ಜಗತ್ತೆಲ್ಲವೂ ಬ್ರಹ್ಮದೇವನ ಅನುಗ್ರಹ ದಿಂದಲೇ ವೃದ್ಧಿಯಾಗಿದೆ.

೧೧೦. ಬುದ್ಧಿಪೂರ್ವಕವೂ, ವೈಕೃತವೂ, ಮುಖ್ಯವೂ, ಆದ ಷಟ್‌ಸರ್ಗಗಳು ಅಭಿಮಾನಿಯಾದ ಬ್ರಹ್ಮದೇವನ ಅನುಗ್ರಹದಿಂದ ಕಾಲತ್ರಯಗಳಲ್ಲಿಯೂ ಇರುತ್ತವೆ.

ಸರ್ಗಾಃ ಪರಸ್ಪರಸ್ಯಾಥ ಕಾರಣಂ ತೇ ಬುಧೈಃ ಸ್ಮೃತಾಃ
ದಿವ್ಯೌ ಸುಪರ್ಣೌ ಸಯುಜೌ ಸ ಶಾಖೌ ಪಟವಿದ್ರುಮೌ ।
ಏಕಸ್ತು ಯೋ ದ್ರುಮಂ ವೇತ್ತಿ ನಾನ್ಯಃ ಸರ್ವಾತ್ಮನಸ್ತತಃ ॥ ೧೧೧ ॥

ದ್ಯಾಮೂರ್ಧಾನಂ ಯಸ್ಯ ವಿಪ್ರಾಸ್ತುವಂತಿ
ಖನ್ನಾಭಿಂ ವೈ ಚಂದ್ರಸೂರ್ಯೌ ಚ ನೇತ್ರೇ ।
ದಿಶಃಶ್ರೋತ್ರೇ ಚರಣೌ ಚಾಸ್ಯ ಭೂಮಿಃ ।
ಸೋ ಚಿಂತ್ಯಾತ್ಮಾ ಸರ್ವಭೂತ ಪ್ರಸೂತಿಃ ॥ ೧೧೨ ॥

ವಕ್ತ್ರಾದ್ಯಸ್ಯ ಬ್ರಾಹ್ಮಣಾಃ ಸಂಪ್ರಸೂತಾಃ
ಯದ್ವಕ್ಷಸ್ತಃ ಕ್ಷತ್ರಿಯಾಃ ಪೂರ್ವಭಾಗೇ ।
ವೈಶ್ಯಾಶ್ಚೋರೋರ್ಯಸ್ಯ ಪಸ್ಭ್ಯಾಂ ಚ ಶೂದ್ರಾಃ
ಸರ್ವೇ ವರ್ಣಾ ಗಾತ್ರತಃ ಸಂಪ್ರಸೂತಾಃ ॥ ೧೧೩ ॥

---

೧೧೧. ಜೀವಪರಮಾತ್ಮರೆಂಬ :ಎರಡು ಪಕ್ಷಿಗಳು, ಶರೀರವೆಂಬ ಒಂದೇ ವೃಕ್ಷವನ್ನು ಹೊಂದಿ, ದಿವ್ಯಗಳೂ, ಸುಂದರಗಳೂ ಆದ ಪಕ್ಷವುಳ್ಳವುಗಳೂ ಪರಸ್ಪರ ಸಂಬಂಧಿಗಳೂ, ಏಕಾಶ್ರಿತಗಳೂ, ವಸ್ತ್ರರೂಪವಾದ ಚಿಗುರೆಲೆಯುಳ್ಳವುಗಳೂ, ಆಗಿವೆ. ಇವುಗಳಲ್ಲಿ ಒಂದು ಪಕ್ಷಿಯು, ವೃಕ್ಷವನ್ನು ತಿಳಿಯುತ್ತದೆ, ಮತ್ತೊಂದು ಹಕ್ಕಿಯು ಇದನ್ನು ತಿಳಿಯುವುದಿಲ್ಲವೆಂದು ಜ್ಞಾನಿಗಳು ಪರಸ್ಪರ ಸಂಬಂಧವನ್ನು ತಿಳಿಸುವರು.

೧೧೨. ಬ್ರಾಹ್ಮಣರು ಯಾವ ಭಗವಂತನಿಗೆ ಆಕಾಶವು ತಲೆಯು, ಅಂತರಿಕ್ಷವು ನಾಭಿಯು, ಚಂದ್ರಸೂರ್ಯರು ನೇತ್ರಗಳೂ, ದಿಕ್ಕುಗಳು ಶ್ರೋತ್ರಗಳು ಭೂಮಿಯೇ ಚರಣಗಳು ಆಗಿವೆಯೋ ಅಂತಹ ಪರಮಾತ್ಮನು ಅಚಿಂತ್ಯಶಕ್ತನೂ ಸರ್ವಭೂತ ಕಾರಣನೂ ಆಗಿರುವನೆಂದು ಹೇಳುವರು.

೧೧೩. ಯಾರ ಮುಖದಿಂದ ಬ್ರಾಹ್ಮಣರೂ, ಹೃದಯದಿಂದ ಕ್ಷತ್ರಿಯರೂ, ತೊಡೆಯಿಂದ ವೈಶ್ಯರೂ, ಕಾಲುಗಳಿಂದ ಶೂದ್ರರೂ, ಹೀಗೆ ಸರ್ವವರ್ಣಗಳೂ ಶರೀರದಿಂದ ಹುಟ್ಟಿವೆಯೋ ಅವನೇ ಈ ಲೋಕಕ್ಕೆ ಮೂಲಕಾರಣನಾಗಿರುವನು.

**ಮಹೇಶ್ವರಃ ಪರೋಽವ್ಯಕ್ತಾ ದಂಡಮವ್ಯಕ್ತ ಸಂಭವಂ ।**
**ಅಂಡಾಜ್ಜಜ್ಞೇ ಪುನರ್ಬ್ರಹ್ಮಾ ಯೇನ ಲೋಕಾಃ ಕೃತಾಸ್ತ್ವಮೇ ॥ ೧೧೪ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ ದೇವಾದಿಸೃಷ್ಟಿವರ್ಣನಂ ನಾಮ ನವಮೋಽಧ್ಯಾಯಃ**

---

೧೧೪. ಪರಮೇಶ್ವರನು ಅವ್ಯಕ್ತತತ್ವದಿಂದ ಬ್ರಹ್ಮಾಂಡವನ್ನು ಸೃಷ್ಟಿಸಿದನು. ಅದರಿಂದ ಚತುರ್ಮುಖ ಬ್ರಹ್ಮನು ಪುನಃ ಹುಟ್ಟಿ ಈ ಲೋಕಗಳೆಲ್ಲವನ್ನು ಸೃಷ್ಟಿಮಾಡಿದನು.

ಹೀಗೆ ವಾಯುದೇವನಿಂದ ಹೇಳಲ್ಪಟ್ಟ ವಾಯು ಮಹಾಪುರಾಣದಲ್ಲಿ ದೇವಾದಿಸೃಷ್ಟಿವರ್ಣನೆಯೆಂಬ ಒಂಭತ್ತನೆಯ ಅಧ್ಯಾಯವು ಸಮಾಪ್ತವು.

## ಒಂಭತ್ತನೆಯ ಅಧ್ಯಾಯದ ಸಾರಾಂಶವು

ಶ್ರೀ ಬ್ರಹ್ಮದೇವನು ಕಲ್ಪಾದಿಯಲ್ಲಿ ಪ್ರಜೆಗಳನ್ನು ಸೃಷ್ಟಿಮಾಡಲಿಚ್ಛಿಸಿ ದೇವತೆಗಳು, ಅಸುರರು, ಪಿತೃಗಳು, ಮನುಜರು, ಮಾನಸಪುತ್ರರು, ಇವರನ್ನು ಸೃಷ್ಟಿ ಮಾಡಿದನು. ಅನಂತರ ರಾತ್ರಿಯ ಕಾಲದಲ್ಲಿ ತನ್ನ ಪೃಷ್ಠಭಾಗದಿಂದ ಅಸುರರನ್ನೂ ಹಗಲಿನಲ್ಲಿ ಮುಖದಿಂದ ದೇವತೆಗಳನ್ನೂ ಸಂಜೆಯಲ್ಲಿ ಪಿತೃಗಳನ್ನೂ ಜ್ಯೋತ್ಸ್ನೆಯಲ್ಲಿ ಋಷಿಗಳೇ ಮೊದಲಾದವರನ್ನೂ ಸೃಷ್ಟಿಮಾಡಿದನು. ಆಗ ಅವರು ಭಗವದ್ರೂಪಗಳನ್ನು ಸೇವಿಸಿದರು. ಇವರೇ ಮುಂದಿನ ಮನ್ವಾದಿ ಸೃಷ್ಟಿಗಳಿಗೆ ಬೀಜರೂಪರಾಗಿರುವರು. ಪುನಃ ದೇವದಾನವ ರಾಕ್ಷಸಾದಿಗಳನ್ನು ಸೃಷ್ಟಿಸಲು ಬಯಸಿ ಅಂಧಕಾರದಲ್ಲಿ ಕ್ಷುತ್ಪೀಡಿತವಾದ ಶರೀರದಿಂದ ಅಸುರರನ್ನು ಸೃಷ್ಟಿಸಿದನು.

ಅವರು ಪ್ರಜೆಗಳನ್ನು ಪೀಡಿಸಲು ಬ್ರಹ್ಮನು ಕೋಪಗೊಂಡು ತನ್ನ ಕೇಶಗಳನ್ನು ಕೆದರಿ ಭೂತ, ಪ್ರೇತ, ಪಿಶಾಚ, ಗುಹ್ಯಕ, ಸರ್ಪ, ಪಕ್ಷಿ, ಗಜ, ತುರಗ, ರಥ, ಪದಾತಿ, ಪಶು, ಕುರಿ ಇವೇ ಮೊದಲಾದುವುಗಳನ್ನು ಸೃಷ್ಟಿಸಿದನು.

ಹಾಗೆಯೇ ಯಾಗಾಂಗಗಳಾದ ಕರ್ಮಗಳು ಯಾಗೋಪಯುಕ್ತಗಳಾದ ಸಾಮಾನುಗಳೂ, ಮಳೆ, ಬೆಳೆ, ಗುಡುಗು, ಮಿಂಚು, ಕಾಮನಬಿಲ್ಲು ಮುಂತಾದುವೂ ಕೂಡ ಸೃಷ್ಟಿಸಲ್ಪಟ್ಟವು.

ಆಮೇಲೆ ಸನಕ ಸನಂದನಾದಿಗಳು ಈಶ್ವರ ಪಾರ್ವತೀ ದೇವಿಯರು ಇವರ ಸೃಷ್ಟಿಯೂ ಪಾರ್ವತಿಯ ರೂಪನಾಮಗಳೂ ತರುವಾಯ ಕಶ್ಯಪಾದಿ ಸಪ್ತ ಋಷಿಗಳ ಉತ್ಪತ್ತಿಯೂ ಭೃಗು ಮೊದಲಾದವರ ಜನನವೂ ಉಕ್ತವಾಗಿವೆ. ಸನತ್ಕುಮಾರರು ಹುಟ್ಟಿದಾರಭ್ಯ ಒಂದೇ ರೀತಿಯಲ್ಲಿದ್ದದ್ದರಿಂದ ಕುಮಾರನಾಮಕರಾಗಿರುವರು.

ತೇಜೋಮಯವೂ ಚಂದ್ರಾದಿಗಳಿಂದ ಅಲಂಕೃತವೂ ಆದ ಬ್ರಹ್ಮವನದಲ್ಲಿ ಅವ್ಯಕ್ತ ತತ್ತ್ವದಿಂದ ಜನ್ಯವಾದ ಬ್ರಹ್ಮದೇವನೆಂಬ ಕಲ್ಪವೃಕ್ಷೋತ್ಪತ್ತಿಯಾಗುವುದು. ಯಾರ ಮುಖಕಮಲದಿಂದ ಬ್ರಾಹ್ಮಣಾದಿ ವರ್ಣಗಳು ಜನಿಸಿದವೋ ಅವನೇ ಅಂಡವನ್ನು ಮತ್ತು ಬ್ರಹ್ಮನನ್ನು ಸೃಷ್ಟಿಮಾಡಿದ ಭಗವಂತನೆಂದೂ, ಜಗದೊಡೆಯನೆಂದೂ ಒಂಭತ್ತನೆಯ ಅಧ್ಯಾಯದಲ್ಲಿ ವರ್ಣಿತವಾಗಿದೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ದಶಮೋಽಧ್ಯಾಯಃ

॥ ಸೂತ ಉವಾಚ ॥

ಏವಂ ಭೂತೇಷು ಲೋಕೇಷು ಬ್ರಹ್ಮಣಾ ಲೋಕಕರ್ತೃಣಾ ।
ಯದಾ ತಾ ನ ಪ್ರವರ್ತಂತೇ ಪ್ರಜಾಃ ಕೇನಾಪಿ ಹೇತುನಾ । ॥ ೧ ॥

ತಮೋ ಮಾತ್ರಾ ವೃತೋ ಬ್ರಹ್ಮಾ ತದಾ ಪ್ರಭೃತಿ ದುಃಖಿತಃ ।
ತತಃ ಸ ವಿದಧೆ ಬುದ್ಧಿ ಮರ್ಥನಿಶ್ಚಯ ಕಾಮಿನೀಂ ॥ ೨ ॥

ಅಥಾತ್ಮನಿ ಸಮಸ್ರಾಕ್ಷೀತ್ ತಮೋಮಾತ್ರಾಂ ನಿಯಾಮಿಕಾಂ ।
ರಾಜಸತ್ವಂ ಪರಾಜಿತ್ಯ ವರ್ತಮಾನಂ ಸ ಧರ್ಮತಃ ॥ ೩ ॥

---

## ಹತ್ತನೆಯ ಅಧ್ಯಾಯವು

೧-೨. ಸೂತನು ಹೇಳಿದನು:—ಲೋಕಗಳು ಹೀಗಿರಲಾಗಿ ಲೋಕಕರ್ತನಾದ ಬ್ರಹ್ಮದೇವನು ಯಾವಾಗ ಕಾರಣಾಂತರದಿಂದ ಪ್ರಜೆಗಳನ್ನು ಸೃಷ್ಟಿಮಾಡಲಿಲ್ಲವೋ ಆಗ ತಮೋಗುಣದಿಂದಾವೃತನಾಗಿ ದುಃಖಿಯುಂಟಾದನು. ಅನಂತರ ಅರ್ಥನಿಶ್ಚಾಯಕವಾದ ಬುದ್ಧಿಯನ್ನು ಏರ್ಪಡಿಸಿಕೊಂಡನು.

೩. ಆ ಬ್ರಹ್ಮನು ತನ್ನಲ್ಲಿರತಕ್ಕ ರಜೋಗುಣವನ್ನು ಬಿಟ್ಟು ನಿಯಾಮಕವಾದ ತಮೋಗುಣವನ್ನೇ ತನ್ನಲ್ಲಿ ಸೃಷ್ಟಿಸಿಕೊಂಡನು. ತಮೋಗುಣಪ್ರಾಚುರ್ಯವಾಗಬೇಕೆಂದು ಯೋಚಿಸಿದನು.

ತಪ್ಯತೇ ತೇನ ದುಃಖೇನ ಶೋಕಂ ಚಕ್ರೇ ಜಗತ್ಪತಿಃ ।
ತಮಶ್ಚ ವ್ಯನುದತ್ತಸ್ಮಾದ್ರಜಸ್ತಮುಸಮಾವೃಣೋತ್ ॥ ೪ ॥

ತತ್ತಮಃ ಪ್ರತಿನುತ್ತಂ ವೈ ಮಿಥುನಂ ಸ ವ್ಯಜಾಯತ ।
ಅಧರ್ಮಾಚ್ಚರಣಾಜ್ಜಜ್ಞೇ ಹಿಂಸಾ ಶೋಕಾದಜಾಯತ ॥ ೫ ॥

ತತಸ್ತಸ್ಮಿನ್ ಸಮುದ್ಭೂತೇ ಮಿಥುನೇ ಚರಣಾತ್ಮನಿ ।
ತತಶ್ಚ ಭಗವಾನಾಸೀತ್ ಪ್ರೀತಶ್ಚೈವ ಮಶಿಶ್ರಿಯತ್ ॥ ೬ ॥

ಸ್ವಾಂ ತನುಂ ಸ ತತೋ ಬ್ರಹ್ಮಾ ತಾಮಪೋಹದಭಾಸ್ವರಾಂ ।
ದ್ವಿಧಾ ಕರೋತ್ಸತಂ ದೇಹಂ ಅರ್ಧೇನ ಪುರುಷೋ ಭವತ್ ॥ ೭ ॥

ಅರ್ಧೇನ ನಾರೀ ಸಾ ತಸ್ಯ ಶತರೂಪಾ ವ್ಯಜಾಯತಾ ।
ಪ್ರಾಕೃತಾಂ ಭೂತಧಾತ್ರೀಂ ತಾಂ ಕಾಮಾನ್ವೈ ಸೃಷ್ಟವಾನ್ ವಿಭುಃ ॥ ೮ ॥

---

೪. ಜಗದೊಡೆಯನಾದ ಬ್ರಹ್ಮನು ಆ ದುಃಖದಿಂದ ತಾಪಗೊಂಡು ಶೋಕವನ್ನು ಸೃಷ್ಟಿಸಿದನು. ಆದರಿಂದ ತಮಸ್ಸು ವ್ಯಾಪಿಸಿತು. ಅನಂತರ ರಜಸ್ಸು ತಮಸ್ಸನ್ನು ಆವರಿಸಿತು.

೫. ಹೀಗೆ ಪ್ರೇರಿಸಲ್ಪಟ್ಟ ತಮಸ್ಸು ಮಿಥುನವನ್ನು ಸೃಷ್ಟಿಸಿತು. ಅಧರ್ಮಾಚರಣೆಯುಳ್ಳ ಶೋಕದಿಂದ ಹಿಂಸೆಯುಂಟಾಯಿತು.

೬. ಅನಂತರ ಅಧರ್ಮಾಚರಣರೂಪವಾದ ಆ ಮಿಥುನವು ಜನಿಸಲಾಗಿ ಭಗವಂತನು ಪ್ರೀತನಾಗಿ ಅದನ್ನು ಆಶ್ರಯಿಸಿದನು.

೭. ತರುವಾಯ ಬ್ರಹ್ಮನು ಕಾಂತಿಹೀನವಾದ ತನ್ನ ಶರೀರವನ್ನು ಬದಲಾಯಿಸಿದನು. ಮತ್ತು ಅದನ್ನು ಎರಡು ಭಾಗಮಾಡಿ ಒಂದು ಭಾಗದಿಂದ ಪುರುಷ ರೂಪಿಯಾದನು.

೮. ಮಿಕ್ಕ ಅರ್ಧಭಾಗದಿಂದ ಸ್ತ್ರೀರೂಪವನ್ನು ಧರಿಸಿ ಅದಕ್ಕೆ ಶತರೂಪೆ ಯೆಂಬ ನಾಮವನ್ನು ಕೊಟ್ಟನು. ಪ್ರಾಕೃತಳಾದ ಭೂಮಾತೆಯಿಂದ ಸಕಲ ಕಾಮ ಗಳನ್ನೂ ಸೃಷ್ಟಿಸಿದನು.

ಸಾ ದಿವಂ ಪೃಥಿವೀಂ ಚೈವ ಮಹಿಮ್ನಾ ವ್ಯಾಪ್ಯ ಧಿಷ್ಟಿತಾ ।
ಬ್ರಹ್ಮಣಃ ಸಾ ತನುಃ ಪೂರ್ವಾ ದಿವ ಮಾವೃತ್ಯ ತಿಷ್ಠತಿ ॥ ೯ ॥

ಯಾ ತ್ವರ್ಧಾತ್ ಸೃಜತೇ ನಾರೀ ಶತರೂಪಾ ವ್ಯಜಾಯತ ।
ಸಾ ದೇವೀ ನಿಯತಂ ತಪ್ತ್ವಾ ತಪಃ ಪರಮದುಶ್ಚರಂ ॥ ೧೦ ॥

ಭರ್ತಾರಂ ದೀಪ್ತಯಶಸಂ ಪುರುಷಂ ಪ್ರತ್ಯಪದ್ಯತ ।
ಸ ವೈ ಸ್ವಾಯಂಭುವಃ ಪೂರ್ವಂ ಪುರುಷೋ ಮನುರುಚ್ಯತೇ ॥ ೧೧ ॥

ತಸ್ಯೈಕ ಸಪ್ತತಿಯುಗಂ ಮನ್ವಂತರಮಿಹೋಚ್ಯತೇ ।
ಲಬ್ಧ್ವಾ ತು ಪುರುಷಃ ಪತ್ನೀಂ ಶತರೂಪಾಮಯೋನಿಜಾಂ ॥ ೧೨ ॥

ತಯಾ ಸ ರಮತೇ ಸಾರ್ಧಂ ತಸ್ಮಾತ್ಸಾರತಿರುಚ್ಯತೇ ।
ಪ್ರಥಮಃ ಸಂಪ್ರಯೋಗಃ ಸ ಕಲ್ಪಾದೌ ಸಮವರ್ತತ ॥ ೧೩ ॥

---

೯. ಆಕೆಯು ಸ್ವಶಕ್ತಿಯಿಂದ ಭೂಮಿ ಮತ್ತು ಸ್ವರ್ಗವನ್ನು ವ್ಯಾಪಿಸಿಕೊಂಡಿದ್ದಳು. ಬ್ರಹ್ಮದೇವನ ಆ ಪ್ರಥಮ ಶರೀರವೂ ಕೂಡ ಸ್ವರ್ಗವನ್ನು ವ್ಯಾಪಿಸಿಕೊಂಡಿತ್ತು.

೧೦. ಯಾವ ಅರ್ಧಶರೀರದಿಂದ ಶತರೂಪೆಯು ಜನಿಸಿದಳೋ ಆ ಮಹಾದೇವಿಯು ಹತ್ತುಸಾವಿರ ವರ್ಷಗಳಕಾಲ ಘೋರತಪಸ್ಸನ್ನು ಮಾಡಿದಳು.

೧೧. ಆ ಶತರೂಪೆಯು ಪ್ರಖ್ಯಾತವಾದ ಕೀರ್ತಿಯುಳ್ಳ ಸ್ವಾಯಂಭುವಮನುವೆಂದು ಪ್ರಸಿದ್ಧಿಯನ್ನು ಪಡೆದ ಪತಿಯನ್ನು ಹೊಂದಿದಳು.

೧೨-೧೩. ಆ ಸ್ವಾಯಂಭುವಮನುವಿನ ಕಾಲವು ಎಪ್ಪತ್ತೊಂದು ಯುಗಗಳು ಆಗಿರುತ್ತದೆ. ಅವನು ಅಯೋನಿಜಳಾದ ಶತರೂಪೆಯೆಂಬ ಪತ್ನಿಯನ್ನು ಹೊಂದಿ ಅವಳೊಡನೆ ರಮಿಸುತ್ತಿದ್ದುದರಿಂದ ಅವಳಿಗೆ ರತಿಯೆಂಬ ನಾಮವು ಪ್ರಾಪ್ತವಾಗಿದೆ ಕಲ್ಪಾದಿಯಲ್ಲಿ ಈ ದಂಪತಿಗಳಿಗೆ ಸಮಾವೇಶವು ಉಂಟಾಯಿತು.

ವಿರಾಜಮ ಸೃಜತ್ ಬ್ರಹ್ಮಾ ಸೋ ಭವತ್ ಪುರುಷೋ ವಿರಾಟ್ ।
ಸಮ್ರಾಣ್ಮಾನಸ ರೂಪಾತ್ತು ವೈರಾಜಸ್ತು ಮನುಃ ಸ್ಮೃತಃ ॥ ೧೪ ॥

ಸ ವೈರಾಜಃ ಪ್ರಜಾಸರ್ಗಃ ಸ ಸರ್ಗೇ ಪುರುಷೋ ಮನುಃ ।
ವೈರಾಜಾತ್ಪುರುಷಾದ್ವೀರಾತ್ ಶತರೂಪಾವ್ಯಜಾಯತ ॥ ೧೫ ॥

ಪ್ರಿಯವ್ರತೋತ್ತನಪಾದೌ ಪುತ್ರೌ ಪುತ್ರವತಾಂವರೌ ।
ಕನ್ಯೇ ದ್ವೇ ಚ ಮಹಾಭಾಗೇ ಯಾಭ್ಯಾಂ ಜಾತಾಃ ಪ್ರಜಾಸ್ತ್ವಿಮಾಃ ॥ ೧೬ ॥

ದೇವೀ ನಾಮ್ನಾ ತಥಾ ಕೂತಿಃ ಪ್ರಸೂತಿಶ್ಚೈವ ತೇ ಶುಭೇ ।
ಸ್ವಾಯಭುವಃ ಪ್ರಸೂತಿಂ ತು ದಕ್ಷಾಯಾ ವ್ಯಸೃಜತ್ ಪ್ರಭುಃ ॥ ೧೭ ॥

ಪ್ರಾಣೋ ದಕ್ಷಸ್ತು ವಿಜ್ಞೇಯಃ ಸಂಕಲ್ಪೋ ಮನುರುಚ್ಯತೇ ।
ರುಚೇಃ ಪ್ರಜಾಪತೇಶ್ಚೈಪ ಆಕೂತಿಂ ಪ್ರತ್ಯಪಾದಯತ್ ॥ ೧೮ ॥

---

೧೪. ಬ್ರಹ್ಮನು ವಿರಾಡ್ರೂಪಿಯಾದ ಪುರುಷನನ್ನು ಸೃಷ್ಟಿಸಿದನು. ಅಂದರೆ ಚಕ್ರವರ್ತಿಯಾದ ಆ ಸ್ವಾಯಂಭುವಮನುವಿನಿಂದ ವಿರಾಡ್ರೂಪಿಯೂ, ಮಾನಸ ಪುತ್ರನೂ, ವೈರಾಜನಾಮಕನೂ ಆದ ಮನುವು ಜನಿಸಿದನು.

೧೫. ತರುವಾಯ ಆಗುವ ಸೃಷ್ಟಿಗೆ ವೈರಾಜಕಸೃಷ್ಟಿಯೆಂದು ಹೆಸರು ಬಂದಿದೆ. ಆ ಸರ್ಗದಲ್ಲಿ ಸ್ವಾಯಂಭುವಮನುವೇ ಪುರುಷನು. ಅಂದರೆ ಯಜಮಾನನು. ಶೂರನಾದ ಆ ವೈರಾಜಪುರುಷನಿಂದ ಶತರೂಪೆ ಎಂಬುವಳು ಜನಿಸಿದಳು.

೧೬-೧೭. ಅವರಿಗೆ ಪುತ್ರವಂತರಲ್ಲಿ ಶ್ರೇಷ್ಠರಾದ ಪ್ರಿಯವ್ರತ ಮತ್ತು ಉತ್ತಾನಪಾದರೆಂಬ ಇಬ್ಬರು ಗಂಡುಮಕ್ಕಳೂ, ಪ್ರಸೂತಿ, ಆಕೂತಿಯೆಂಬ ಸಕಲ ಪ್ರಜಾಸೃಷ್ಟಿಗೂ ಕಾರಣರಾದ ಇಬ್ಬರು ಹೆಣ್ಣುಮಕ್ಕಳೂ ಜನಿಸಿದರು. ಸ್ವಾಯಂಭುವ ಮನುವು ಪ್ರಸೂತಿಯನ್ನು ದಕ್ಷನಿಗೆ ಕೊಟ್ಟು ಮದುವೆಮಾಡಿದನು.

೧೮. ಪ್ರಾಣನೇ ದಕ್ಷನೆಂದು, ಸಂಕಲ್ಪವೇ ಮನುವೆಂದು ತಿಳಿಯತಕ್ಕದ್ದು. ಅವನು ರುಚಿನಾಮಕ ಪ್ರಜಾಪತಿಗೆ ಆಕೂತೀದೇವಿಯನ್ನು ಕೊಟ್ಟು ಲಗ್ನಮಾಡಿದನು.

ಆಕೂತ್ಯಾಂ ಮಿಥುನಂ ಜಜ್ಞೇ ಮಾನಸಸ್ಯ ರುಚೇಃ ಶುಭಂ ।
ಯಜ್ಞಶ್ಚ ದಕ್ಷಿಣಾ ಚೈವ ಯಮಕೌ ಸಂಬಭೂವತುಃ ॥ ೧೯ ॥

ಯಜ್ಞಸ್ಯ ದಕ್ಷಿಣಾಯಾಂಚ ಪುತ್ರಾ ದ್ವಾದಶ ಜಜ್ಞಿರೇ ।
ಯಾಮಾ ಇತಿ ಸಮಾಖ್ಯಾತಾ ದೇವಾಃ ಸ್ವಾಯಂಭುವೇಂತರೇ ॥ ೨೦ ॥

ಯಮಸ್ಯ ಪುತ್ರಾ ಯಜ್ಞಸ್ಯ ತಸ್ಮಾದ್ಯಾಮಾಸ್ತು ತೇ ಸ್ಮೃತಾಃ ।
ಅಜಿತಾಶ್ಚೈವ ಶುಕಾಶ್ಚ ಗಣೌ ದ್ವೌ ಬ್ರಹ್ಮಣಃ ಸ್ಮೃತೌ ॥ ೨೧ ॥

ಯಾಮಾಃ ಪೂರ್ವಂ ಪರಿಕ್ರಾಂತಾ ಯತಃ ಸಂಜ್ಞಾ ದಿವೌಕಸಃ ।
ಸ್ವಾಯಂಭುವ ಸುತಾಯಾಂತು ಪ್ರಸೂತ್ಯಾಂ ಲೋಕಮಾತರಃ ॥ ೨೨ ॥

ತಸ್ಯಾಂ ಕನ್ಯಾಶ್ಚತುರ್ವಿಂಶತ್ ದಕ್ಷಸ್ತ್ವಜನಯತ್ ಪ್ರಭುಃ ।
ಸರ್ವಾಸ್ತಾಶ್ಚ ಮಹಾಭಾಗಾಃ ಸರ್ವಾಃ ಕಮಲಲೋಚನಾಃ ॥ ೨೩ ॥

---

೧೯. ಮಾನಸಪುತ್ರನಾದ ರುಚಿ ಮತ್ತು ಆಕೂತಿಗಳೆಂಬ ದಂಪತಿಗಳಿಗೆ ಯಜ್ಞ, ದಕ್ಷಿಣೆಗಳೆಂಬ ಅವಳಿಜವಳಿ ಮಕ್ಕಳಿಬ್ಬರು ಜನಿಸಿದರು

೨೦. ಸ್ವಾಯಂಭುವಮನ್ವಂತರ ಯಜ್ಞ, ದಕ್ಷಿಣೆ ಎಂಬ ದಂಪತಿಗಳಿಗೆ ಯಾಮಾನಾಮಕರೆಂದು ಪ್ರಖ್ಯಾತರಾದ ಹನ್ನೆರಡು ಜನ ಪುತ್ರರು ಜನಿಸಿದರು.

೨೧. ಅವನಿಗೆ ಯಮನಾಮಕಯಜ್ಞನ ಮಕ್ಕಳಾದ ಯಾಮಾ ಎಂದು ಹೆಸರುಳ್ಳ ಮಕ್ಕಳು ಜನಿಸಿದರು. ಬ್ರಹ್ಮನು, ಅಜಿತ, ಶುಕ ಎಂಬ ಎರಡು ಗಣಗಳನ್ನು ಸೃಷ್ಟಿಸಿದನು.

೨೨. ಪೂರ್ವದಲ್ಲಿ ವಿಕ್ರಾಂತರಾದ ಯಾಮಾ ಎಂಬುವರಿಗೆ ದೇವತೆಗಳೆಂದು ಹೆಸರುಬಂದಿದೆ. ಸ್ವಾಯಂಭುವಮನುವಿನ ಮಗಳಾದ ಪ್ರಸೂತಿಯಲ್ಲಿ ಲೋಕ ಮಾತೆಯರಾದ ಹೆಣ್ಣುಮಕ್ಕಳು ಜನಿಸಿದರು.

೨೩. ದಕ್ಷಪ್ರಜಾಪತಿಯು ಪ್ರಸೂತಿಯಲ್ಲಿ ಮಹಾಭಾಗ್ಯಶಾಲಿಗಳೂ, ಕಮಲ ಲೋಚನೆಯರೂ ಆದ ಇಪ್ಪತ್ತುನಾಲ್ಕುಜನ ಹೆಣ್ಣುಮಕ್ಕಳನ್ನು ಪಡೆದನು

**ಯೋಗಪತ್ನ್ಯಶ್ಚತಾಃ ಸರ್ವಾಃ ಸರ್ವಾಸ್ತಾ ಯೋಗಮಾತರಃ ।**
**ಶ್ರದ್ಧಾಲಕ್ಷ್ಮೀ ಧೃತಿಸ್ತುಷ್ಟಿಃ ಪುಷ್ಟಿರ್ಮೇಧಾಕ್ರಿಯಾ ತಥಾ ।**
**ಬುದ್ಧಿರ್ಲ್ಲಜ್ಜಾ ವಪುಃ ಶಾಂತಿಃ ಸಿದ್ಧಿಃ ಕೀರ್ತಿಸ್ತ್ರಯೋದಶೀ ॥ ೨೪ ॥**

**ಪತ್ನ್ಯರ್ಥೇ ಪ್ರತಿಜಗ್ರಾಹ ಧರ್ಮೋ ದಾಕ್ಷಾಯಣೀಃ ಪ್ರಭುಃ ।**
**ದ್ವಾರಾಣ್ಯೇತಾನಿ ಚೈವಾಸ್ಯ ವಿಹಿತಾನಿ ಸ್ವಯಂಭುವಾ ॥ ೨೫ ॥**

**ತಾಭ್ಯಃ ಶಿಷ್ಟಾಯ ವೀಯಸ್ಯ ಏಕಾದಶ ಸುಲೋಚನಾಃ ।**
**ಖ್ಯಾತಿಃ ಸತ್ಯಥ ಸಂಭೂತಿಃ ಸ್ಮೃತಿಃ ಪ್ರೀತಿಃ ಕ್ಷಮಾ ತಥಾ ॥ ೨೬ ॥**

**ಸನ್ನತಿಶ್ಚಾನುಸೂಯಾ ಚ ಊರ್ಜಾ ಸ್ವಾಹಾ ಸ್ವಧಾ ತಥಾ ।**
**ತಾಸ್ತತಃ ಪ್ರತ್ಯಪದ್ಯಂತ ಪುನರನ್ಯೇ ಮಹರ್ಷಯಃ ॥ ೨೭ ॥**

**ರುದ್ರೋ ಭೃಗುರ್ಮರೀಚಿಶ್ಚ ಅಂಗಿರಾಃ ಪುಲಹಃ ಕ್ರತುಃ ।**
**ಪುಲಸ್ತ್ಯೋ ತ್ರಿರ್ವಸಿಷ್ಠಶ್ಚ ಪಿತರೋಽಗ್ನಿಸ್ತಥೈವಚ ॥ ೨೮ ॥**

---

೨೪. ಶ್ರದ್ಧಾ, ಲಕ್ಷ್ಮೀ, ಧೃತಿ, ತುಷ್ಟಿ, ಪುಷ್ಟಿ, ಮೇಧಾ, ಕ್ರಿಯಾ, ಬುದ್ಧಿ, ಲಜ್ಜಾ, ವಪು, ಶಾಂತಿ, ಸಿದ್ಧಿ, ಕೀರ್ತಿ ಎಂಬ ಹದಿನಾಲ್ಕುಜನ ಹೆಣ್ಣುಮಕ್ಕಳೂ ಯೋಗಮಾತೆಯರಾಗಿದ್ದರು.

೨೫. ಪ್ರಭುವಾದ ಧರ್ಮನು ಆ ದಾಕ್ಷಾಯಣೀದೇವಿಯನ್ನು ಪತ್ನಿಯನ್ನಾಗಿ ಸ್ವೀಕರಿಸಿದನು. ಬ್ರಹ್ಮದೇವನು ಇವರ ಮೂಲಕವಾಗಿ ಮುಂದಿನ ಸೃಷ್ಟಿಯನ್ನು ಮಾಡಿದುದರಿಂದ ಇವರೇ ಆ ಸೃಷ್ಟಿಗೆ ಮೂಲಕಾರಣರಾಗಿರುವರು.

೨೬-೨೮. ಮೇಲೆ ಹೇಳಿದವರಿಗಿಂತಲೂ ಬೇರೆಯಾದವರು ಮತ್ತು ಚಿಕ್ಕವರು ಆದ ಖ್ಯಾತಿ, ಸಂಭೂತಿ, ಸ್ಮೃತಿ, ಪ್ರೀತಿ, ಕ್ಷಮಾ, ಸನ್ನತಿ, ಸತಿ, ಅನುಸೂಯ, ಊರ್ಜಾ, ಸ್ವಾಹ ಮತ್ತು ಸ್ವಧಾ ಎಂಬ ಹನ್ನೊಂದುಜನ ಸುಂದರಿಯರಾದ ಹೆಣ್ಣು ಮಕ್ಕಳೂ ಮತ್ತು ರುದ್ರ, ಭೃಗು, ಮರೀಚಿ, ಅಂಗಿರಸ, ಪುಲಹ, ಕ್ರತು, ಪುಲಸ್ತ್ಯ ವಸಿಷ್ಠ, ಅತ್ರಿ, ಪಿತೃಗಳು ಮತ್ತು ಅಗ್ನಿಯೆಂಬ ಮಹರ್ಷಿಗಳೂ ಜನಿಸಿದರು.

ಸತೀಂ ಭವಾಯ ಪ್ರಾಯಚ್ಛತ್ ಖ್ಯಾತಿಂಚ ಭೃಗವೇ ತಥಾ ।
ಮರೀಚಯೇ ಚ ಸಂಭೂತಿಂ ಸ್ಮೃತಿಮಂಗಿರಸೇ ದದೌ ॥ ೨೯ ॥

ಪ್ರೀತಿಂ ಚೈವ ಪುಲಸ್ತ್ಯಾಯ ಕ್ಷಮಾಂ ವೈ ಪುಲಹಾಯ ಚಾ ।
ಕ್ರತವೇ ಸನ್ನತಿಂ ನಾಮ ಅನುಸೂಯಾಂ ತಥಾತ್ರಯೇ ॥ ೩೦ ॥

ಊರ್ಜಾಂ ದದೌ ವಸಿಷ್ಠಾಯ ಸ್ವಾಹಾಂ ವೈ ಹ್ಯಗ್ನಯೇ ದದೌ ।
ಸ್ವಧಾಂ ಚೈವ ಪಿತೃಭ್ಯಸ್ತು ತಾಸ್ವಪತ್ಯಾನಿ ವಕ್ಷ್ಯತೇ ॥ ೩೧ ॥

ಏತೇ ಸರ್ವೇ ಮಹಾಭಾಗಾಃ ಪ್ರಜ್ಞಾಃ ಸ್ವಾನುಷ್ಠಿತಾಃ ಸ್ಥಿತಾಃ ।
ಮನ್ವಂತರೇಷು ಸರ್ವೇಷು ಯಾವದಾಹೂತ ಸಂಪ್ಲವಂ ॥ ೩೨ ॥

ಶ್ರದ್ಧಾ ಕಾಮಂ ವಿಜಜ್ಞೇ ವೈ ದರ್ಪೋ ಲಕ್ಷ್ಮೀಸುತಃ ಸ್ಮೃತಃ ।
ಧೃತ್ಯಾಸ್ತು ನಿಯಮಃ ಪುತ್ರಸ್ತುಷ್ಟ್ಯಾಃ ಸಂತೋಷ ಉಚ್ಯತೇ ॥ ೩೩ ॥

ಪುಷ್ಟ್ಯಾ ಲಾಭಃ ಸುತಶ್ಚಾಪಿ ಮೇಧಾ ಪುತ್ರ ಶ್ರುತಸ್ತಥಾ ।
ಕ್ರಿಯಾಯಾಸ್ತು ನಯಃ ಪ್ರೋಕ್ತೋ ದಂಡಃ ಸಮಯ ಏವ ಚ ॥ ೩೪ ॥

---

೨೯-೩೧. ದಕ್ಷಬ್ರಹ್ಮನು ಸತೀದೇವಿಯನ್ನು ಈಶ್ವರನಿಗೂ, ಖ್ಯಾತಿಯನ್ನು ಭೃಗುವಿಗೂ, ಸಂಭೂತಿಯನ್ನು ಮರೀಚಿಗೂ, ಸ್ಮೃತಿಯನ್ನು ಅಂಗಿರಸನಿಗೂ, ಪ್ರೀತಿಯನ್ನು ಪುಲಸ್ತ್ಯನಿಗೂ ಕ್ಷಮೆಯನ್ನು ಪುಲಹನಿಗೂ, ಸನ್ನತಿಯನ್ನು ಕ್ರತುವಿಗೂ, ಅನುಸೂಯೆಯನ್ನು ಅತ್ರಿಗೂ, ಊರ್ಜೆಯನ್ನು ವಸಿಷ್ಠನಿಗೂ, ಸ್ವಾಹೆಯನ್ನು ಅಗ್ನಿಗೂ, ಸ್ವಧೆಯನ್ನು ಪಿತೃಗಳಿಗೂ ಕೊಟ್ಟು ಮದುವೆಮಾಡಿದನು. ಅವರ ಸಂತಾನವನ್ನು ವರ್ಣಿಸುವೆನು ಕೇಳಿ.

೩೨. ಈ ಮಹಾನುಭಾವರೂ, ಪ್ರಾಜ್ಞರೂ, ಸ್ವಾನುಷ್ಠಾನಪರರೂ, ಸ್ಥಿರರೂ, ಆದ ಸರ್ವರೂ ಮಹಾ ಪ್ರಳಯದ ವರೆಗೂ ಸರ್ವಮನ್ವಂತರಗಳಲ್ಲಿಯೂ ಇರುವರು.

೩೩-೩೪ ಶ್ರದ್ಧೆಯಲ್ಲಿ ಕಾಮನೂ, ಲಕ್ಷ್ಮಿಯಲ್ಲಿ ದರ್ಪವೂ, ಧೃತಿಯಲ್ಲಿ ನಿಯಮವೂ, ತುಷ್ಟಿಯಲ್ಲಿ ಸಂತೋಷವೂ, ಪುಷ್ಟಿಯಲ್ಲಿ ಲಾಭವೂ, ಮೇಧೆಯಲ್ಲಿ

ಬುದ್ಧೇರ್ಭೋಧ ಸುತಶ್ಚಾಪಿ ಅಪ್ರಮಾದಶ್ಚ ತಾವುಭೌ ।
ಲಜ್ಜಾಯಾ ವಿನಯಃ ಪುತ್ರೋ ವ್ಯವಸಾಯೋ ವಪುಃ ಸುತಃ ॥ ೩೫ ॥

ಕ್ಷೇಮಃ ಶಾಂತಿ ಸುತಶ್ಚಾಪಿ ಸುಖಂ ಸಿದ್ಧೇರ್ವ್ಯಜಾಯತ ।
ಯಶಃ ಕೀರ್ತೇಃ ಸುತಶ್ಚಾಪಿ ಇತ್ಯೇತೇ ಧರ್ಮಸೂನವಃ ॥ ೩೬ ॥

ಕಾಮಸ್ಯ ಹರ್ಷಃ ಪುತ್ರೋ ವೈ ದೇವ್ಯಾರತ್ಯಾ ವ್ಯಜಾಯತ ।
ಇತ್ಯೇಷ ವೈ ಸುಖೋದರ್ಕಃ ಸರ್ಗೋ ಧರ್ಮಸ್ಯ ಕೀರ್ತಿತಃ ॥ ೩೭ ॥

ಜಜ್ಞೇ ಹಿಂಸಾತ್ವಧರ್ಮಾ ದ್ವೈ ನಿಕೃತಿಶ್ಚಾನೃತಾ ವುಭೌ ।
ನಿಕೃತ್ಯಾನೃತಯೋರ್ಜಜ್ಞೇ ಭಯಂ ನರಕ ಏವ ಚ ॥ ೩೮ ॥

ಮಾಯಾ ಚ ವೇದನಾ ಚಾಪಿ ಮಿಥುನದ್ವಯ ಮೇ ತಯೋಃ ।
ಭಯಾ ಜ್ಜಜ್ಞೇಽಥ ಸಾಮಾಯಾ ಮೃತ್ಯುಂ ಭೂತಾಪಹಾರಿಣಂ ॥ ೩೯ ॥

---

ಶೃತವೂ, ಕ್ರಿಯೆಯಲ್ಲಿ ನಯ ದಂಡ ಮತ್ತು ಸಮಯವೂ, ಬುದ್ಧಿಯಲ್ಲಿ ಜ್ಞಾನವೂ, ಮತ್ತು ಅಜ್ಞಾನವೂ, ಲಜ್ಜೆಯಲ್ಲಿ ವಿನಯವೂ, ವಪುವಿನಲ್ಲಿ ವ್ಯವಸಾಯವೂ ಜನಿಸಿದವು.

೩೬. ಶಾಂತಿಗೆ ಕ್ಷೇಮನೆಂಬ ಮಗನೂ, ಸಿದ್ಧಿಗೆ ಸುಖವೂ, ಕೀರ್ತಿಗೆ ಯಶಸ್ಸೂ, ಎಂಬ ಮಕ್ಕಳು ಹುಟ್ಟಿದರು. ಇವರೆಲ್ಲರೂ ಧರ್ಮನ ಪುತ್ರರಾಗಿರುವರು.

೩೭. ಕಾಮನಿಗೆ ರತೀದೇವಿಯಲ್ಲಿ ಸಂತೋಷವೆಂಬ ಪುತ್ರನು ಜನಿಸಿದನು. ಹೀಗೆ ಪರಿಣಾಮದಲ್ಲಿ ಸುಖಕರವಾದ ಧರ್ಮನ ಸೃಷ್ಟಿಕ್ರಮವು ನಿರೂಪಿಸಲ್ಪಟ್ಟಿದೆ.

೩೮-೪೦. ಅಧರ್ಮದಿಂದ ಹಿಂಸೆಯಲ್ಲಿ ನಿಕೃತಿ, ಅನೃತವೆಂಬ ಇಬ್ಬರು ಹುಟ್ಟಿದರು. ಆ ನಿಕೃತಿ, ಅನೃತಗಳಿಗೆ ಭಯ, ನರಕವೆಂಬ ಇಬ್ಬರೂ, ಅವರಿಬ್ಬರಿಗೆ ಮಾಯಾ, ವೇದನೇ ಎಂಬ ಇಬ್ಬರೂ ಹುಟ್ಟಿದರು. ಭಯದಿಂದ ಮಾಯೆಯಲ್ಲಿ ಸರ್ವಭೂತಗಳನ್ನು ಅಪಹರಿಸುವ ಮೃತ್ಯುವು ಹುಟ್ಟಿದನು. ರೌರವನಿಂದ ವೇದನೆ

ವೇದಾನಾಯಾಸ್ತತಶ್ಚಾಪಿ ದುಃಖಂ ಜಜ್ಞೇಥ ರೌರವಾತ್ ।
ಮೃತ್ಯೋರ್ವ್ಯಾಧಿ ಜ್ವರಾಶೋಕಾಃ ಕ್ರೋಧೋ ಸೂಯಾಚ ಜಜ್ಞಿರೇ ।
ದುಃಖಾಂತರಾ ಸ್ಮೃತಾಹ್ಯೇತೇ ಸರ್ವೇ ಚಾ ಧರ್ಮಲಕ್ಷಣಾಃ ॥ ೪೦ ॥

ತೇಷಾಂ ಭಾರ್ಯಾಸ್ತಿ ಪುತ್ರೋವಾ ತೇ ಸರ್ವೇ ನಿಧನಾ ಸ್ಮೃತಾಃ ।
ಇತ್ಯೇಷತಾಮಸಃ ಸರ್ಗೋ ಜಜ್ಞೇ ಧರ್ಮನಿಯಾಮಕಃ ॥ ೪೧ ॥

ಪ್ರಜಾ ಸೃಜೇತಿ ವ್ಯಾದಿಷ್ಟೋ ಬ್ರಹ್ಮಣಾ ನೀಲಲೋಹಿತಃ ।
ಸೋಭಿಧ್ಯಾಯ ಸತೀಂ ಭಾರ್ಯಾಂ ನಿರ್ಮಮೇ ಹ್ಯಾತ್ಮಸಂಭವಾನ್ ॥ ೪೨ ॥

ನಾಧಿಕಾನ್ನಚ ಹೀನಾಂ ಸ್ತಾನ್ ಮಾನಸಾನಾತ್ಮನಃ ಸಮಾನ್ ।
ಸಹಸ್ರಂ ಹಿ ಸಹಸ್ರಾಣಾ ಮಸೃಜತ್ ಕೃಮಿವಾಸಸಾ
ತುಲ್ಯಾಶ್ಚೈವಾತ್ಮನಃ ಸರ್ವೇ ರೂಪತೇಜೋಬಲಶ್ರುತೈಃ ॥ ೪೩ ॥

---

ಯಲ್ಲಿ ದುಃಖವು ಹುಟ್ಟಿತು. ಮೃತ್ಯುವಿಗೆ ವ್ಯಾಧಿ, ಜ್ವರ, ಶೋಕ, ಕ್ರೋಧ, ಅಸೂಯಾ, ಇವುಗಳು ಹುಟ್ಟಿದವು. ಅಧರ್ಮಲಕ್ಷಣಗಳಾದ ಇವೆಲ್ಲವೂ ದುಃಖಾಂತರ ಗಳೆಂದು ವ್ಯಕ್ತವಾಗಿವೆ.

೪೧. ಅವರಿಗೆ ಹೆಂಡತಿಯರೂ, ಮಕ್ಕಳೂ ಇದ್ದರು. ಅವರೆಲ್ಲರೂ ನಿಧನ ನಾಮಕರಾಗಿ ಪ್ರಖ್ಯಾತಿಹೊಂದಿರುವರು. ಈ ರೀತಿಯಾಗಿ ತಾಮಸಸೃಷ್ಟಿಯಾಯಿತು. ಇವುಗಳಿಗೆ ಯಮನೇ ನಿಯಾಮಕನಾಗಿರುವನು.

೪೨ ಬ್ರಹ್ಮದೇವನು ಪ್ರಜೆಗಳನ್ನು ಸೃಷ್ಟಿಮಾಡೆಂದು ಪರಮೇಶ್ವರನಿಗೆ ಆಜ್ಞಾಪಿಸಿದನು. ಅದರಂತೆ ಈಶ್ವರನು ತನ್ನ ಪತ್ನಿಯಾದ ಸತೀದೇವಿಯನ್ನು ಧ್ಯಾನಿಸಿ ಅವಳ ಮೂಲಕ ಅಸಂಖ್ಯಾತರಾದ ಪ್ರಜಾಸೃಷ್ಟಿಯನ್ನು ಮಾಡಿದನು.

೪೩. ಆ ಮಕ್ಕಳು ಈಶ್ವರನಿಗೆ ಅಧಿಕರೂ, ಹೀನರೂ ಆಗದೇ ರೂಪ, ತೇಜಸ್ಸು, ಜ್ಞಾನ, ಬಲ ಇವುಗಳಿಂದ ಸಮರೂ, ಕೋಟಿಸಂಖ್ಯಾಕರೂ, ಮಾನಸ ಪುತ್ರರೂ ಆಗಿದ್ದರು.

ಪಿಂಗಳಾನ್ ಸನ್ನಿಷಂಗಾಂಶ್ಚ ಸಕಪರ್ದಾನ್ ವಿಲೋಹಿತಾನ್ ।
ನಿವಾಸಾನ್ ಹರಿಕೇಶಾಂಶ್ಚ ದೃಷ್ಟಿಘ್ನಾಂಶ್ಚ ಕಪಾಲಿನಃ ॥ ೪೪ ॥

ಬಹುರೂಪಾನ್ ವಿರೂಪಾಂಶ್ಚ ವಿಶ್ವರೂಪಾಂಶ್ಚ ರೂಪಿಣಃ ।
ರಥಿನೋ ವರ್ಮಿಣಶ್ಚೈವ ಧರ್ಮಿಣಶ್ಚ ವರೂಥಿನಃ ॥ ೪೫ ॥

ಸಹಸ್ರಶತಬಾಹೂಂಶ್ಚ ದಿವ್ಯಾನ್ ಭೌಮಾಂತರಿಕ್ಷಗಾನ್ ।
ಸ್ಥೂಲಶೀರ್ಷಾನಷ್ಟ ದಂಷ್ಟ್ರಾ ನುದ್ವಿಜಿಹ್ವಾಂ ಸ್ತ್ರಿಲೋಚನಾನ್ ॥ ೪೬ ॥

ಅನ್ನಾದಾನ್ ಪಿಶಿತಾದಾಂಶ್ಚ ಆಜ್ಯಪಾನ್ ಸೋಮಪಾಂ ಸ್ತಥಾ ।
ಮೇದಪಾಂಶ್ಚಾತಿ ಕಾಯಾಂಶ್ಚ ಶಿತಿಕಂಠೋಗ್ರಮನ್ಯವಃ ॥ ೪೭ ॥

ಸೋಪಾಸಂಗತಲತ್ರಾಂಶ್ಚ ಧನ್ವಿನೋ ಹ್ಯುಪವರ್ಮಿಣಃ ।
ಅಸೀನಾನ್ ಧಾವತಶ್ಚೈವ ಜೃಂಭಿನಶ್ಚೈವ ಧಿಷ್ಠಿತಾನ್ ॥ ೪೮ ॥

ಅಧ್ಯಾಪಿನೋಥ ಜಪತೋ ಯುಂಜತೋಧ್ಯಾಯತಸ್ತಥಾ ।
ಜ್ವಲತೋ ವರ್ಷತಶ್ಚೈವ ದ್ಯೋತಮಾನಾನ್ ಪ್ರಧೂಪಿತಾನ್ ॥ ೪೯ ॥

---

೪೪-೫೧. ಹೀಗೆ ಸೃಷ್ಟರಾದವರಲ್ಲಿ ಕೆಲವರು ಪಿಂಗಳಬಣ್ಣವುಳ್ಳವರೂ, ಬತ್ತಳಿಕೆಗಳುಳ್ಳವರೂ, ಜಟಾಧಾರಿಗಳೂ, ಕೆಂಪುಬಣ್ಣವುಳ್ಳವರೂ, ದಿಗಂಬರರೂ, ಕಪಿಕೇಶಿಗಳೂ, ದೃಷ್ಟಿನಾಶಕರೂ, ಕಪಾಲಧಾರಿಗಳೂ, ಬಹುರೂಪಿಗಳೂ, ವಿಶ್ವರೂಪಿಗಳೂ, ಕುರೂಪಿಗಳೂ, ಸುರೂಪಿಗಳೂ, ರಥಿಗಳೂ, ಕವಚಧಾರಿಗಳೂ, ಧರ್ಮಿಷ್ಟರೂ, ಸೈನ್ಯಸಹಿತರೂ, ಅಸಂಖ್ಯಾಕವಾದ ಭುಜವುಳ್ಳವರೂ, ಸ್ವರ್ಗ ಭೂಮಿ, ಅಂತರಿಕ್ಷಗಾಮಿಗಳೂ, ಸ್ಥೂಲತಲೆಯುಳ್ಳವರೂ, ಎಂಟುಹಲ್ಲು, ಎರಡುನಾಲಗೆ, ಮೂರುಕಣ್ಣು ಇವುಗಳುಳ್ಳವರೂ, ಅನ್ನ, ಮಾಂಸ. ತುಪ್ಪ, ಸೋಮ ಇವುಗಳನ್ನು ಸೇವಿಸುವವರೂ, ಮೇಧಾವಿಗಳೂ, ಅತಿಕಾಯರೂ, ಶಿತಿಕಂಠರೂ, ಭಯಂಕರರೂ, ಬತ್ತಳಿಕೆ, ಚೀಲ ಧನುಸ್ಸು ಇವುಗಳುಳ್ಳವರೂ, ಅನಂತಕವಚವುಳ್ಳವರೂ ಆಗಿದ್ದರು. ಇವರಲ್ಲಿ ಕೆಲವರು ಕೂಡುತ್ತಲೂ, ಓಡುತ್ತಲೂ, ಆಕಳಿಸುತ್ತಲೂ, ನಿಲ್ಲುತ್ತಲೂ, ಅಧ್ಯಯನ, ಜಪ, ತಪ, ಯೋಗ, ಧ್ಯಾನ ಇವುಗಳನ್ನು ಮಾಡುತ್ತಲೂ ಇರುವರು. ಮತ್ತು ಕೆಲವರು ಬೆಂಕಿ, ಮಳೆ, ಪ್ರಕಾಶ, ಧೂಮ ಇವುಗಳನ್ನುಂಟುಮಾಡುತ್ತಲೂ ಇರುವರು. ಮತ್ತೆ ಕೆಲವರು ಬುದ್ಧರೂ, ಮೇಧಾವಿಗಳೂ, ಬ್ರಹ್ಮಿಷ್ಠರೂ, ಶುಭದರ್ಶಿಗಳೂ, ನೀಲ

ಬುದ್ಧಾನ್ ಬುದ್ಧತಮಾಂಶ್ಚೈವ ಬ್ರಹ್ಮಿಷ್ಠಾನ್ ಶುಭದರ್ಶನಾನ್ ।
ನೀಲಗ್ರೀವಾನ್ ಸಹಸ್ರಾಕ್ಷಾನ್ ಸರ್ವಾಂಶ್ಚಾಥ ಕ್ಷಪಾಚರಾನ್ ॥ ೩೦ ॥

ಅದೃಶ್ಯಾನ್ ಸರ್ವಭೂತಾನಾಂ ಮಹಾಯೋಗಾನ್ ಮಹೌಜಸಃ ।
ರುದತೋ ದ್ರವತಶ್ಚೈವ ಏವಂ ಯುಕ್ತಾನ್ ಸಹಸ್ರಶಃ ।
ಅಪಾತಯಾಮಾನಸೃಜತ್ ರುದ್ರರೂಪಾನ್ ಸುರೋತ್ತಮಾನ್ ॥ ೩೧ ॥

ಬ್ರಹ್ಮಾ ದೃಷ್ಟ್ವಾ ಬ್ರವೀದೇತಾನ್ ಮಾಸ್ರಾಕ್ಷೀರೀದೃಶೀಃ ಪ್ರಜಾಃ ।
ಸ್ರಷ್ಟವ್ಯಾನಾತ್ಮನಸ್ತುಲ್ಯಾಃ ಪ್ರಜಾನ್ನೈವಾಧಿಕಾಸ್ತ್ವಯಾ ।
ಅನ್ಯಾಸೃಜತ್ವಂ ಭದ್ರಂತೇ ಸ್ಥಿತೋ ಹಂತ್ವಂ ಸೃಜ ಪ್ರಜಾಃ ॥ ೩೨ ॥

ಏತೇ ಯೇ ವೈ ಮಯಾ ಸೃಷ್ಟಾ ವಿರೂಪಾ ನೀಲಲೋಹಿತಾಃ ।
ಸಹಸ್ರಾಣಾಂ ಸಹಸ್ರಂತು ಆತ್ಮನೋಪಮ ನಿಶ್ಚಿತಾಃ ॥ ೩೩ ॥

---

ಕಂಠರೂ, ಸಹಸ್ರಾಕ್ಷಿಗಳೂ, ರಾತ್ರಿಂಚರರೂ, ಸರ್ವರ ದೃಷ್ಟಿಗಳಿಗೆ ಅಗೋಚರರೂ, ಮಹಾಯೋಗಿಗಳೂ, ತೇಜಸ್ವಿಗಳೂ ಆಗಿದ್ದರು ಮತ್ತೆ ಕೆಲವರು ಅಳುತ್ತಲೂ, ಓಡುತ್ತಲೂ ಬ್ರಹ್ಮನನ್ನು ಧ್ಯಾನಿಸುತ್ತಲೂ ಇದ್ದರು. ಕೆಲವರು ಈಶ್ವರನಿಗೆ ಸಮಾನರೂ, ಸುರೋತ್ತಮರೂ ಆಗಿದ್ದರು. ಇಂತಹ ಮಕ್ಕಳನ್ನು ಈಶ್ವರನು ಸೃಷ್ಟಿಸಿದನು.

೩೨. ಬ್ರಹ್ಮನು ಅವರನ್ನು ನೋಡಿ ಎಲೈ ಪರಮೇಶ್ವರನೇ, " ನೀನು ಇಂತಹ ಮಕ್ಕಳನ್ನು ಸೃಷ್ಟಿಸಬೇಡ. ನಿನಗೆ ಸಮಾನರೂ, ಶ್ರೇಷ್ಠರೂ ಆದ ಮಕ್ಕಳನ್ನು ಸೃಷ್ಟಿಸಬಾರದು. ನಾನು ನಿನ್ನ ಬಳಿಯಲ್ಲಿರುವೆನು. ಯೋಗ್ಯರೂ, ಸಾಧುಗಳೂ ಆದ ಮಕ್ಕಳನ್ನು ಸೃಷ್ಟಿಸೆಂದು ಈಶ್ವರನಿಗೆ ಹೇಳಿದನು "

೩೩-೩೪. ಎಲೈ ಬ್ರಹ್ಮನೇ, ವಿರೂಪರೂ, ನೀಲಲೋಹಿತರೂ, ನನಗೆ ಸಮಾನರೂ, ಕೋಟಿಸಂಖ್ಯಾಕರೂ ಮತ್ತು ಮಹಾಬಲಿಷ್ಠರೂ ಆದ ಈ ದೇವತೆಗಳು ರುದ್ರನಾಮಗಳಿಂದ ಪ್ರಖ್ಯಾತರಾಗಿರುವರು. ಈ ರುದ್ರನಾಮದಿಂದ ಪ್ರಸಿದ್ಧರಾದ ಇವರು ಭೂಮಿಯಲ್ಲಿಯೂ, ಅಂತರಿಕ್ಷದಲ್ಲಿಯೂ ವಾಸಿಸುತ್ತಾ ಶತರುದ್ರನಾಮದಿಂದಲೂ, ಯಜ್ಞಭೋಕ್ತೃತ್ವದಿಂದಲೂ ಪ್ರಸಿದ್ಧರಾಗಿರುವರು. ಇವರೆಲ್ಲರೂ

ಏತೇ ದೇವಾ ಭವಿಷ್ಯಂತಿ ರುದ್ರಾನಾಮ ಮಹಾಬಲಾಃ ।
ಪೃಥಿವ್ಯಾಮಂತರಿಕ್ಷೇ ಚ ರುದ್ರನಾಮ್ನಾ ಪ್ರತಿಶ್ರುತಾಃ ॥ ೫೪ ॥

ಶತರುದ್ರಸಮಾಮ್ನಾತಾ ಭವಿಷ್ಯಂತಿ ಹ ಯಜ್ಞಿಯಾಃ ।
ಯಜ್ಞಭಾಜೋ ಭವಿಷ್ಯಂತಿ ಸರ್ವೇದೇವಯುಗೈಃಸಹ ॥ ೫೫ ॥

ಮನ್ವಂತರೇಷು ಯೇ ದೇವಾಃ ಭವಿಷ್ಯಂತೀಹ ಛಂದಜಾಃ ।
ತೈಃ ಸಾರ್ಧಮಿಾಜ್ಯಮಾನಾಸ್ತೇ ಸ್ಥಾಸ್ಯಂತೀಹ ಯುಗಕ್ಷಯಾತ್ ॥ ೫೬ ॥

ಏವಮುಕ್ತಸ್ತದಾ ಬ್ರಹ್ಮಾ ಮಹಾದೇವೇನ ಧೀಮತಾ ।
ಪ್ರತ್ಯುವಾಚ ತದಾಭೀಮಂ ಹೃಷ್ಯಮಾಣಃ ಪ್ರಜಾಪತಿಃ ॥ ೫೭ ॥

ಏವಂ ಭವತು ಭದ್ರಂತೇ ಯಥಾ ತೇ ವ್ಯಾಹೃತಂ ಪ್ರಭೋ ।
ಬ್ರಹ್ಮಣಾ ಸಮನುಜ್ಞಾತೇ ಸದಾ ಸರ್ವಮಭೂತ್ಕಿಲ ॥ ೫೮ ॥

---

ಪ್ರಳಯಕಾಲಪರ್ಯಂತವಾಗಿಯೂ, ಯಜ್ಞಭೋಕ್ತೃಗಳಾಗಿ ದೇವತೆಗಳೊಡನೆ ವಾಸಮಾಡುವರೆಂದು ಈಶ್ವರನು ಹೇಳಿದನು.

೫೬. ಅವರು ಮನ್ವಂತರಗಳಲ್ಲಿ ಸ್ವೇಚ್ಛೆಯಾಗಿ ಜನ್ಯರಾದ ದೇವತೆಗಳಿಂದ ಪ್ರೀತಿಸಲ್ಪಟ್ಟವರಾಗಿ ಪ್ರಳಯಕಾಲದವರೆಗೂ ಅವರ ಸಂಗಡಲೇ ವಾಸಿಸುವರು.

೫೭. ಜ್ಞಾನಿಯಾದ ಮಹೇಶ್ವರನು ಬ್ರಹ್ಮದೇವನನ್ನು ಕುರಿತು ಹೀಗೆ ಹೇಳಲಾಗಿ ಪ್ರೀತನಾದ ಬ್ರಹ್ಮನು ಭಯಪ್ರದನಾದ ಈಶ್ವರನಿಗೆ ಇಂತೆಂದನು.

೫೮. ಎಲೈ ಸ್ವಾಮಿಯಾದ ಈಶ್ವರನೇ, "ನೀನು ಹೇಗೆ ಹೇಳಿದೆಯೋ ಅವೆಲ್ಲವೂ ಹಾಗೆಯೇ ಆಗಲಿ" ಎಂದು ಬ್ರಹ್ಮದೇವನು ಹೇಳಲು ಅವೆಲ್ಲವೂ ಹಾಗೆಯೇ ನಡೆದುವು.

ತತಃ ಪ್ರಭೃತಿ ದೇವೇಶೋ ನಪ್ರಾಸೂಯತವೈ ಪ್ರಜಾಃ ।
ಊರ್ಧ್ವರೇತಾಃ ಸ್ಥಿತಃ ಸ್ಥಾಣುರ್ಯಾವದಾಭೂತಸಂಪ್ಲವಂ ॥
ಯಸ್ಮಾಚ್ಚೋಕ್ತಂ ಸ್ಥಿತೋ ಸ್ಮೀತೀತತಃ ಸ್ಥಾಣುರಿತಿ ಸ್ಮೃತಃ ॥ ೫೯ ॥

ಜ್ಞಾನಂ ವೈರಾಗ್ಯಮೈಶ್ವರ್ಯಂ ತಪಃ ಸತ್ಯಂ ಕ್ಷಮಾ ಧೃತಿಃ ।
ಸ್ರಷ್ಟೃತ್ವಮಾತ್ಮಸಂಬೋಧ ಸ್ತ್ವಧಿಷ್ಠಾತೃತ್ವಮೇವ ಚ ।
ಅಥ ಯಾನಿ ದಶೈತಾನಿ ನಿತ್ಯಂ ತಿಷ್ಠಂತಿ ಶಂಕರೇ ॥ ೬೦ ॥

ಸರ್ವಾನ್ ದೇವಾನ್ ಋಷೀಂಶ್ಚೈವ ಸಮೇತಾನಸುರೈಃ ಸಹ ।
ಅತ್ಯೇತಿ ತೇಜಸಾ ದೇವೋ ಮಹಾದೇವಸ್ತತಃ ಸ್ಮೃತಃ ॥ ೬೧ ॥

ಅತ್ಯೇತಿ ದೇವಾನೈಶ್ವರ್ಯಾದ್ಬಲೇನ ಚ ಮಹಾಸುರಾನ್ ।
ಜ್ಞಾನೇನ ಚ ಮುನೀನ್ ಸರ್ವಾನ್ ಯೋಗಾದ್ಭೂತಾನಿ ಸರ್ವಶಃ ॥ ೬೨ ॥

---

೫೯. ಅಂದಿನಿಂದಲೂ ದೇವೇಶನಾದ ಈಶ್ವರನು ಪುನಃ ಸೃಷ್ಟಿಯನ್ನು ಮಾಡಲಿಲ್ಲ. ಜಿತೇಂದ್ರಿಯನೂ, ಸ್ಥಾಣುವಿನಂತೆ ನಿಶ್ಚಲನೂ, ಆಗಿ ಪ್ರಳಯಕಾಲದ ವರೆಗೂ ಅಚಲನಾಗಿದ್ದನು. ಹಾಗಿದ್ದುದರಿಂದ ಅವನಿಗೆ ಸ್ಥಾಣುವೆಂದು ಹೆಸರು ಬಂದಿತು.

೬೦. ಜ್ಞಾನ, ವೈರಾಗ್ಯ, ಐಶ್ವರ್ಯ, ತಪಸ್ಸು, ಸತ್ಯ, ಕ್ಷಮಾ, ಧೃತಿ, ಸ್ರಷ್ಟೃತ್ವ, ಆತ್ಮಜ್ಞಾನ, ಮತ್ತು ಆಶ್ರಯವೆಂಬ ಈ ಹತ್ತು ಗುಣಗಳು ಈಶ್ವರನಲ್ಲಿ ನಿರಂತರವಾಗಿಯೂ ಇರುವುವು.

೬೧. ಯಾವ ಈಶ್ವರನು ದಿವ್ಯತೇಜಸ್ಸಿನಿಂದ ಸಮಸ್ತರಾದ ದೇವತೆಗಳು ಋಷಿಗಳು, ಅಸುರರು, ಇವರೇ ಮೊದಲಾದವರನ್ನು ಅತಿಕ್ರಮಿಸಿರುತ್ತಾನೋ, ಅದ ರಿಂದ ಅವನು ಮಹಾದೇವನೆಂದು ಪ್ರಖ್ಯಾತನಾಗಿರುವನು.

೬೨. ಪರಮೇಶ್ವರನು ದೇವತೆಗಳನ್ನು ಐಶ್ವರ್ಯದಿಂದಲೂ, ಅಸುರರನ್ನು ಬಲದಿಂದಲೂ, ಮುನಿಗಳನ್ನು ಜ್ಞಾನದಿಂದಲೂ, ಸಮಸ್ತ ಭೂತಗಳನ್ನು ಯೋಗ ಬಲದಿಂದಲೂ ಅತಿಕ್ರಮಿಸಿರುವನು.

॥ ಋಷಯ ಊಚುಃ ॥

ಯೋಗಂ ತಪಶ್ಚ ಸತ್ಯಂಚ ಧರ್ಮಂ ಚಾಪಿ ಮಹಾಮುನೇ ।
ಮಾಹೇಶ್ವರಸ್ಯ ಜ್ಞಾನಸ್ಯ ಸಾಧನಂ ಚ ಪ್ರಚಕ್ಷ್ವ ನಃ ॥ ೬೩ ॥

ಯೇನ ಯೇನ ಚ ಧರ್ಮೇಣ ಗತಿಂ ಪ್ರಾಪ್ಸ್ಯಂತಿ ವೈ ದ್ವಿಜಾಃ ।
ತತ್ಸರ್ವಂ ಶ್ರೋತುಮಿಚ್ಛಾಮಿ ಯೋಗಂ ಮಾಹೇಶ್ವರಂ ಪ್ರಭೋ ॥ ೬೪ ॥

॥ ವಾಯುರುವಾಚ ॥

ಪಂಚ ಧರ್ಮಾಃ ಪುರಾಣೇ ತು ರುದ್ರೇಣ ಸಮುದಾಹೃತಾಃ ।
ಮಾಹೇಶ್ವರ್ಯಂ ಯಥಾಪ್ರೋಕ್ತಂ ರುದ್ರೈರಕ್ಲಿಷ್ಟ ಕರ್ಮಭಿಃ ॥ ೬೫ ॥

ಆದಿತ್ಯೈರ್ವಸುಭಿಃ ಸಾಧ್ಯೈರಶ್ವಿಭ್ಯಾಂ ಚೈವ ಸರ್ವಶಃ ।
ಮರುದ್ಭಿರ್ಭೃಗುಭಿಶ್ಚೈವ ಯೇಚಾನ್ಯೇ ವಿಬುಧಾಲಯಾಃ ॥ ೬೬ ॥

ಯಮಶುಕ್ರ ಪುರೋಗೈಶ್ಚ ಪಿತೃಕಾಲಾಂತಕೈ ಸ್ತಥಾ ।
ಏತೈಶ್ಚಾನ್ಯೈಶ್ಚ ಬಹುಭಿಸ್ತೇ ಧರ್ಮಾಃ ಪರ್ಯುಪಾಸಿತಾಃ ॥ ೬೭ ॥

---

೬೩. ಋಷಿಗಳು ಹೇಳಿದರು :—ಎಲೈ, ಸೂತರೇ, ಆ ಪರಮೇಶ್ವರನ ಯೋಗಾಭ್ಯಾಸ, ತಪಸ್ಸು, ಸತ್ಯ, ಧರ್ಮ, ಜ್ಞಾನ, ಮತ್ತು ಜ್ಞಾನಸಾಧನ ಇವುಗಳನ್ನು ನಮಗಾಗಿ ತಿಳಿಸಬೇಕೆಂದು ಪ್ರಾರ್ಥಿಸಿದರು.

೬೪. ಎಲೈ ದೇವನೇ, ಯಾವ ಯಾವ ಧರ್ಮಾಚರಣೆಯಿಂದ ವಿಪ್ರರು ಸದ್ಗತಿಯನ್ನು ಹೊಂದುವರೋ ಅಂತಹ ಧರ್ಮವೆಲ್ಲವನ್ನೂ ಮತ್ತು ಮಹೇಶ್ವರನ ಯೋಗಾಭ್ಯಾಸಕ್ರಮವನ್ನೂ ಕೇಳಲು ನಾನು ಬಯಸುತ್ತೇನೆಂದನು.

೬೫. ರುದ್ರದೇವನು ಪುರಾಣದಲ್ಲಿ ಪಂಚಧರ್ಮಗಳನ್ನು ನಿರೂಪಿಸಿರುವನು. ಆಯಾಸವಿಲ್ಲದ ಕರ್ಮಗಳನ್ನು ಮಾಡತಕ್ಕ ರುದ್ರಾದಿಗಳು ಪುರಾಣದಲ್ಲಿ ಮಹೇಶ್ವರನ ಧರ್ಮಗಳನ್ನು ಹೇಳಿರುತ್ತಾರೆ.

೬೬-೬೭. ಆದಿತ್ಯರು, ವಸುಗಳು, ಸಾಧ್ಯರು, ಅಶ್ವಿನೀದೇವತೆಗಳು, ಮರುತ್ತಗಳು, ಭೃಗು, ಯಮ, ಶುಕ್ರ, ಪಿತೃ, ಕಾಲಾಂತಕರು ಇವರೇ ಮೊದಲಾದ ಸ್ವರ್ಗಲೋಕವಾಸಿಗಳೂ, ಅಸಂಖ್ಯಾಕರೂ ಆದ ಮಹಾತ್ಮರು ಆ ಪೂರ್ವೋಕ್ತಗಳಾದ ಧರ್ಮಗಳನ್ನು ಆಚರಿಸಿದರು.

ತೇ ವೈ ಪ್ರಕ್ಷೀಣಕರ್ಮಾಣಃ ಶಾರದಾಂಬರನಿರ್ಮಲಾಃ ।
ಉಪಾಸತೇ ಮುನಿಗಣಾಃ ಸಂಧಾಯಾತ್ಮಾನಮಾತ್ಮನಿ ॥ ೬೮ ॥

ಗುರುಪ್ರಿಯ ಹಿತೇ ಯುಕ್ತಾ ಗುರೂಣಾಂ ವೈ ಪ್ರಿಯೇಪ್ಸವಃ ।
ವಿಮುಚ್ಯ ಮಾನುಷಂ ಜನ್ಮ ವಿಹರಂತಿ ಚ ದೇವವತ್ ॥ ೬೯ ॥

ಮಹೇಶ್ವರೇಣ ಯೇ ಪ್ರೋಕ್ತಾಃ ಪಂಚ ಧರ್ಮಾಃ ಸನಾತನಾಃ ।
ತಾನ್ ಸರ್ವಾನ್ ಕ್ರಮಯೋಗೇನ ಉಚ್ಯಮಾನಾನ್ ನಿಬೋಧತ ॥ ೭೦ ॥

ಪ್ರಾಣಾಯಾಮಸ್ತಥಾ ಧ್ಯಾನಂ ಪ್ರತ್ಯಾಹಾರೋಽಥ ಧಾರಣಾ ।
ಸ್ಮರಣಂ ಚೈವ ಯೋಗೇಸ್ಮಿನ್ ಪಂಚಧರ್ಮಾಃ ಪ್ರಕೀರ್ತಿತಾಃ ॥ ೭೧ ॥

ತೇಷಾಂ ಕ್ರಮ ವಿಶೇಷೇಣ ಲಕ್ಷಣಂ ಕಾರಣಂ ತಥಾ ।
ಪ್ರವಕ್ಷ್ಯಾಮಿ ತಥಾ ತತ್ವಂ ಯಥಾ ರುದ್ರೇಣ ಭಾಷಿತಂ ॥ ೭೨ ॥

---

೬೮. ನಷ್ಟವಾದ ಕರ್ಮಗಳುಳ್ಳವರೂ, ಶರತ್ಕಾಲದ ಆಕಾಶದಂತೆ ನಿರ್ಮಲರೂ ಆದ ಮುನಿಗಳು ಪರಮಾತ್ಮನಲ್ಲಿ ಮನಸ್ಸನ್ನು ನಿಲ್ಲಿಸಿ ಅಂದರೆ ಪರಮಾತ್ಮನನ್ನು ಧ್ಯಾನಿಸಿ ಆ ಧರ್ಮವನ್ನು ಆಚರಿಸುವರು.

೬೯. ಗುರುಗಳ ಹಿತದಲ್ಲಿ ನಿಯುಕ್ತರೂ, ಮತ್ತು ಅವರ ಹಿತಾಪೇಕ್ಷಿಗಳೂ, ಆದ ಜ್ಞಾನಿಗಳು ಆ ಮನುಷ್ಯಜನ್ಮವನ್ನು ತ್ಯಜಿಸಿ, ದೇವತೆಗಳಂತೆ ಸರ್ವದಾ ಆಚರಿಸುವರು.

೭೦. ಮಹೇಶ್ವರನು ಯಾವ ಸನಾತನಗಳಾದ, ಪಂಚಧರ್ಮಗಳನ್ನು ಹೇಳಿರುವನೋ, ಕ್ರಮವಾಗಿ ನಿರೂಪಿಸಿರುವ ಆ ಸಮಸ್ತ ಧರ್ಮಗಳನ್ನೂ ಕೇಳಿ ತಿಳಿಯಿರಿ.

೭೧. ಈ ಯೋಗಾಭ್ಯಾಸ ಕ್ರಮದಲ್ಲಿ ಪ್ರಾಣಾಯಾಮ, ಧ್ಯಾನ, ಪ್ರತ್ಯಾಹಾರ, ಧಾರಣ, ಮತ್ತು ಸ್ಮರಣವೆಂಬ ಐದು ಧರ್ಮಗಳು ಉಕ್ತಗಳಾಗಿವೆ.

೭೨. ಆ ಪಂಚ ಧರ್ಮಗಳಿಗೆ ಕ್ರಮವಾಗಿ ಈಶ್ವರನು ಹೇಳಿದ ರೀತಿಯಲ್ಲಿ ಲಕ್ಷಣ ಮತ್ತು ಕಾರಣಗಳ ತತ್ವವನ್ನು ನಿರೂಪಿಸುವೆನು ಕೇಳಿ.

ಪ್ರಾಣಾಯಾಮಗತಿಶ್ಚಾಪಿ ಪ್ರಾಣಸ್ಯಾಯಾಮ ಉಚ್ಯತೇ ।
ಸ ಚಾಪಿ ತ್ರಿವಿಧಃ ಪ್ರೋಕ್ತೋ ಮಂದೋ ಮಧ್ಯೋತ್ತಮಸ್ತಥಾ ॥ ೭೩ ॥

ಪ್ರಾಣಾನಾಂ ಚ ನಿರೋಧಸ್ತು ಸ ಪ್ರಾಣಾಯಾಮ ಸಂಜ್ಞಿತಃ ।
ಪ್ರಾಣಾಯಾಮ ಪ್ರಮಾಣಂ ತು ಮಾತ್ರಾ ವೈ ದ್ವಾದಶ ಸ್ಮೃತಾಃ ॥ ೭೪ ॥

ಮಂದೋ ದ್ವಾದಶ ಮಾತ್ರಸ್ತು ಉದ್ಘಾತಾ ದ್ವಾದಶ ಸ್ಮೃತಾಃ ।
ಮಧ್ಯಮಶ್ಚ ದ್ವಿರುದ್ಘಾತಶ್ಚತುರ್ವಿಂಶತಿ ಮಾತ್ರಿಕಃ ॥ ೭೫ ॥

ಉತ್ತಮಸ್ತು ತ್ರಿರುದ್ಘಾತೋ ಮಾತ್ರಾಃ ಷಟ್ ತ್ರಿಂಶದುಚ್ಯತೇ ।
ಸ್ವೇದಕಂಪ ವಿಷಾದಾನಾಂ ಜನನೋ ಹ್ಯುತ್ತಮ ಸ್ಮೃತಃ ॥ ೭೬ ॥

---

೭೩. ಪ್ರಾಣಾಯಾಮವೆಂದರೆ ಪ್ರಾಣವಾಯುವಿನ ಸಂಚಾರದ ಆಳತೆಯಾಗಿದೆ. ಅದೂ ಕೂಡ, ಮಂದ, ಮಧ್ಯಮ, ಉತ್ತಮವೆಂದು ಮೂರು ವಿಧವಾಗಿದೆ.

೭೪. ಪ್ರಾಣವಾಯುವನ್ನು ನಿರೋಧಿಸುವುದಕ್ಕೆ ಪ್ರಾಣಾಯಾಮವೆಂದು ಹೆಸರು. ಅದರ ಪ್ರಮಾಣವಾದರೋ, ಹನ್ನೆರಡು ಮಾತ್ರೆಗಳುಳ್ಳದ್ದಾಗಿದೆ ಒಂದು ಮಾತ್ರೆಯೆಂದರೆ ರೆಪ್ಪೆಯ ನಿಮೇಷೋನ್ಮೇಷಕಾಲಕ್ಕೆ ಹೆಸರಾಗಿದೆ. (ಹನ್ನೆರಡು ನಿಮೇಷೋನ್ಮೇಷಗಳ ಕಾಲದವರೆಗೂ, ಪ್ರಾಣವಾಯುವನ್ನು ತಡೆಯುವುದೇ ಪ್ರಾಣಾಯಾಮವು.

೭೫. ಹನ್ನೆರಡುಸಾರಿ ರೆಪ್ಪೆಗಳನ್ನು ಹೊಡೆಯುವಕಾಲದವರೆಗೂ ಪ್ರಾಣ ನಿರೋಧಮಾಡಿದರೆ ಅದಕ್ಕೆ ಮಂದಪ್ರಾಣಾಯಾಮವೆಂತಲೂ ಅಥವಾ ಉದ್ಘಾತ ವೆಂತಲೂ ಸಂಜ್ಞೆಯಾಗಿದೆ. ಮಧ್ಯಮಪ್ರಾಣಾಯಾಮವು ಇಪ್ಪತ್ತನಾಲ್ಕುಮಾತ್ರೆ ಯುಳ್ಳದ್ದಾಗಿದೆ. ಆದಕ್ಕೆ ಎರಡು ಉದ್ಘಾತವೆಂದೂ ಸಂಜ್ಞೆಯುಂಟು.

೭೬. ಉತ್ತಮ ಪ್ರಾಣಾಯಾಮಕ್ಕೆ ಮೂರು ಉದ್ಘಾತಗಳಿರಬೇಕು ಎಂದರೆ ಮೂವತ್ತಾರು ಮಾತ್ರಾಕಾಲಗಳು ಪ್ರಾಣನಿರೋಧಮಾಡಿದರೆ ಉತ್ತಮ ಪ್ರಾಣಾಯಾಮ ವಾಗುವುದು. ಇದರಿಂದ ಬೆವರು, ಕಂಪ ಮತ್ತು ದುಃಖ ಇವುಗಳು ಉಂಟಾಗುವುವು.

ಇತ್ಯೇತತ್ತ್ರಿವಿಧಂ ಪ್ರೋಕ್ತಂ ಪ್ರಾಣಾಯಾಮಸ್ಯ ಲಕ್ಷಣಂ ।
ಪ್ರಮಾಣಂ ಚ ಸಮಾಸೇನ ಲಕ್ಷಣಂ ಚ ನಿಬೋಧತ ॥ ೭೭ ॥

ಸಿಂಹೋವಾ ಕುಂಜರೋ ವಾಪಿ ತಥಾನ್ಯೋವಾ ಮೃಗೋ ವನೇ ।
ಗೃಹೀತಃ ಸೇವಮಾನಸ್ತು ಮೃದುಃ ಸಮುಪಜಾಯತೇ ॥ ೭೮ ॥

ತಥಾ ಪ್ರಾಣೋ ದುರಾಧರ್ಷಃ ಸರ್ವೇಷಾಮಕೃತಾತ್ಮನಾಂ ।
ಯೋಗತಃ ಸೇವ್ಯಮಾನಸ್ತು ಸ ಏವಾಭ್ಯಾಸತೋ ವ್ರಜೇತ್ ॥ ೭೯ ॥

ಸ ಚೈವ ಹಿ ಯಥಾ ಸಿಂಹಃ ಕುಂಜರೋ ವಾಪಿ ದುರ್ಬಲಃ ।
ಕಾಲಾಂತರವಶಾದ್ಯೋಗಾತ್ ಗಮ್ಯತೇ ಪರಿಮರ್ದನಾತ್ ॥ ೮೦ ॥

ಪರಿಧಾಯ ಮನೋ ಮಂದಂ ವಶ್ಯತ್ವಂ ಚಾಧಿಗಚ್ಛತಿ ।
ಪರಿಧಾಯ ಮನೋ ದೇವಂ ತಥಾ ಜೀವತಿ ಮಾರುತಃ ॥ ೮೧ ॥

---

೭೭. ಈ ರೀತಿಯಾಗಿ ಪ್ರಾಣಾಯಾಮಕ್ಕೆ ಮೂರು ವಿಧವಾದ ಲಕ್ಷಣ ಪ್ರಮಾಣಗಳು ಉಕ್ತವಾಗಿವೆ. ಅವುಗಳನ್ನು ಪುನಃ ಸಂಕ್ಷೇಪವಾಗಿ ವಿವರಿಸುವೆನು ಕೇಳಿರಿ.

೭೮. ಅರಣ್ಯದಲ್ಲಿರುವ ಸಿಂಹ, ಗಜ ಮತ್ತು ಇತರ ದುಷ್ಟಮೃಗಗಳು ಇವುಗಳನ್ನು ಹಿಡಿದು ಅಭ್ಯಾಸಮಾಡಿಸಿದರೆ ಅವು ಸಾಧುಪ್ರಾಣಿಗಳಾಗುತ್ತವೆ.

೭೯. ಅದರಂತೆ ಅಜಿತೇಂದ್ರಿಯಗಳಿಗೆ ವಶ್ಯವಾಗದ ಈ ಪ್ರಾಣವು ಯೋಗಾಭ್ಯಾಸದಿಂದ ಕ್ರಮವಾಗಿ ಅಭ್ಯಾಸಮಾಡಿದರೆ ಸ್ವಾಧೀನವಾಗುವುದು.

೮೦. ಅರಣ್ಯದಲ್ಲಿರುವ ದುರ್ಬಲಗಳಾದ ಆನೆ, ಸಿಂಹ, ಮೊದಲಾದ ದುಷ್ಟ ಪ್ರಾಣಿಗಳನ್ನು ಹಿಡಿದುತಂದು ಅಭ್ಯಾಸಮೂಲಕ, ಯುಕ್ತಿಯಿಂದಲೂ, ಮರ್ದನದಿಂದಲೂ, ಅವನ್ನು ಹೇಗೆ ಸ್ವಾಧೀನಮಾಡಿಕೊಳ್ಳುವರೋ, ಹಾಗೆಯೇ ಅಭ್ಯಾಸದಿಂದ ಪ್ರಾಣಾಯಾಮವನ್ನು ಸ್ವಾಧೀನಮಾಡಿಕೊಳ್ಳಬಹುದು.

೮೧. ಮನಸ್ಸು ಅತಿವೇಗದಿಂದ ಸಂಚಾರಮಾಡುವದಾದರೂ, ಪುರುಷ ಪ್ರಯತ್ನದಿಂದ ಅವನ ವಶದಲ್ಲಿದ್ದು ಹೇಗೆ ಶರೀರದಲ್ಲಿ ಅಡಗಿರುತ್ತದೆಯೋ, ಹಾಗೆಯೇ ಪ್ರಾಣವಾಯುವೂ ಕೂಡ, ಭಗವಂತನನ್ನು ಆಶ್ರಯಿಸಿ ಅವನ ಅಧೀನದಲ್ಲಿರುತ್ತದೆ.

ವಶ್ಯತ್ವಂ ಹಿ ಯಥಾವಾಯುರ್ಗಚ್ಛತೇ ಯೋಗಮಾಸ್ಥಿತಃ ।
ತದಾ ಸ್ವಚ್ಛಂದತಃ ಪ್ರಾಣಂ ನಯತೇ ಯತ್ರ ಚೇಚ್ಛತಿ ॥ ೮೨ ॥

ಯಥಾ ಸಿಂಹೋ ಗಜೋ ವಾಪಿ ವಶ್ಯತ್ವಾದವತಿಷ್ಠತೇ ।
ಅಭಯಾಯ ಮನುಷ್ಯಾಣಾಂ ಮೃಗೇಭ್ಯಃ ಸಂಪ್ರವರ್ತತೇ ॥ ೮೩ ॥

ಯಥಾ ಪರಿಚಿತಶ್ಚಾಯಂ ವಾಯುರ್ವೈ ವಿಶ್ವತೋ ಮುಖಃ ।
ಪರಿಧ್ಯಾಯಮಾನಃ ಸಂರುದ್ಧಃ ಶರೀರೇ ಕಿಲ್ಬಿಷಂ ದಹೇತ್ ॥ ೮೪ ॥

ಪ್ರಾಣಾಯಾಮೇನ ಯುಕ್ತಸ್ಯ ವಿಪ್ರಸ್ಯ ನಿಯತಾತ್ಮನಃ ।
ಸರ್ವೇ ದೋಷಾಃ ಪ್ರಣಶ್ಯಂತಿ ಸತ್ವಸ್ಥಶ್ಚೈವ ಜಾಯತೇ ॥ ೮೫ ॥

ತಪಾಂಸಿ ಯಾನಿ ತಪ್ಯಂತೇ ವ್ರತಾನಿ ನಿಯಮಾಶ್ಚ ಯೇ ।
ಸರ್ವಯಜ್ಞ ಫಲಂ ಚೈವ ಪ್ರಾಣಾಯಾಮಶ್ಚ ತತ್ಸಮಃ ॥ ೮೬ ॥

---

೮೨. ಯೋಗಾಭ್ಯಾಸದಲ್ಲಿ ನಿರತನಾದ ಪುರುಷನು. ಅಭ್ಯಾಸದಿಂದ ವಾಯು ನಿರೋಧಮಾಡಿ ಸ್ವಾಧೀನಕ್ಕೆ ತಂದುಕೊಂಡು, ತನಗೆ ಇಷ್ಟಬಂದ ಜಾಗಕ್ಕೆ ಆ ವಾಯು ಗಳನ್ನು ಕಳುಹಿಸಬಲ್ಲನು.

೮೩. ಸಿಂಹ, ಗಜ ಮೊದಲಾದ ದುಷ್ಟಮೃಗಗಳು ಪುರುಷನಿಗೆ ವಶವಾದರೆ ಅವುಗಳಿಂದಲೂ, ಮತ್ತು ಇತರ ಪ್ರಾಣಿಗಳಿಂದಲೂ ಹೇಗೆ ಭಯವುಂಟಾಗುವುದಿಲ್ಲವೋ, ಹಾಗೆಯೇ ಪ್ರಾಣಾಯಾಮದಿಂದಲೂ ಕೂಡ ಸರ್ವವೂ ವಶವಾಗುವುವು.

೮೪. ಸರ್ವತ್ರ ಸಂಚರಿಸುವ ವಾಯುವನ್ನು ಪ್ರಾಣಾಯಾಮದ ಅಭ್ಯಾಸ ದಿಂದ ಶರೀರದಲ್ಲಿ ನಿರೋಧಮಾಡಿದರೆ ಅದು ಮನುಷ್ಯನ ದೇಹಗತವಾದ ಸಕಲ ದೋಷಗಳನ್ನೂ ಪರಿಹರಿಸುತ್ತದೆ.

೮೫. ಪ್ರಾಣಾಯಾಮ ನಿರತನೂ, ಇಂದ್ರಿಯ ನಿಗ್ರಹವುಳ್ಳವನೂ, ಆದ ಬ್ರಾಹ್ಮಣನಿಗೆ ಸಮಸ್ತದೋಷಗಳೂ, ಪರಿಹಾರವಾಗಿ ಸತ್ವರೂಪದಲ್ಲಿ, ಅಂದರೆ ಪರಿಶುದ್ಧ ನಾಗಿ ಇರುವನು.

೮೬. ತಪಸ್ಸು, ವ್ರತ, ನಿಯಮ, ಸರ್ವಯಜ್ಞ ಇವುಗಳಿಂದ ಯಾವ ಮಹಾ ಫಲಗಳು ಲಭಿಸುವುವೋ, ಅಂತಹ ಫಲಗಳು ಪ್ರಾಣಾಯಾಮದಿಂದ ಸಿದ್ಧವಾಗುತ್ತವೆ.

ಅಬ್ಬಿಂದುಂಯಃ ಕುಶಾಗ್ರೇಣ ಮಾಸಿ ಮಾಸಿ ಸಮಶ್ನುತೇ ।
ಸಂವತ್ಸರ ಶತಂ ಸಾಗ್ರಂ ಪ್ರಾಣಾಯಾಮಶ್ಚ ತತ್ಸಮಃ ॥ ೮೭ ॥

ಪ್ರಾಣಾಯಾಮೈರ್ದಹೇದ್ದೋಷಾನ್ ಧಾರಣಾಭಿಶ್ಚ ಕಿಲ್ಬಿಷಂ ।
ಪ್ರತ್ಯಾಹಾರೇಣ ವಿಷಯಾನ್ ಧ್ಯಾನೇನಾನೀಶ್ವರಾನ್ ಗುಣಾನ್ ॥ ೮೮ ॥

ತಸ್ಮಾದ್ಯುಕ್ತಃ ಸದಾಯೋಗೀ ಪ್ರಾಣಾಯಾಮ ಪರೋಭವೇತ್ ।
ಸರ್ವಪಾಪವಿಶುದ್ಧಾತ್ಮಾ ಪರಂ ಬ್ರಹ್ಮಾಧಿಗಚ್ಛತಿ ॥ ೮೯ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ ಮನ್ವಂತರಾದಿ
ವರ್ಣನಂ ನಾಮ ದಶಮೋಽಧ್ಯಾಯಃ

---

೮೭. ಮಾಸೋಪವಾಸವನ್ನು ಮಾಡಿ ಮಾಸಾಂತ್ಯದಲ್ಲಿ ದರ್ಭೆಯ ತುದಿಯಲ್ಲಿರುವ ಜಲಬಿಂದುಗಳನ್ನು ಕುಡಿದುಕೊಂಡು, ನೂರು ವರ್ಷಗಳ ಕಾಲ ತಪಸ್ಸು ಮಾಡಿದರೆ ಯಾವ ಫಲವು ದೊರೆಯುವುದೊ, ಅಂತಹ ಫಲವು ಪ್ರಾಣಾಯಾಮದಿಂದಲೇ ಸಿದ್ಧವಾಗುತ್ತದೆ.

೮೮. ಪ್ರಾಣಾಯಾಮಗಳಿಂದ ದೋಷಗಳನ್ನೂ, ಧಾರಣೆಗಳಿಂದ ಪಾಪಗಳನ್ನೂ, ಪ್ರತ್ಯಾಹಾರದಿಂದ ವಿಷಯಗಳನ್ನೂ, ಧ್ಯಾನದಿಂದ ತನ್ನ ಪ್ರಾಕೃತ ಗುಣಗಳನ್ನೂ, ದಹಿಸಬೇಕು (ಪರಿಹರಿಸಿಕೊಳ್ಳಬೇಕು).

೮೯. ಆದುದರಿಂದ ಯೋಗಿಯು ಸದಾ ಪ್ರಾಣಾಯಾಮಪರನಾಗಬೇಕು. ಅದರಿಂದ ಸರ್ವಪಾಪವೂ ಪರಿಹಾರವಾಗಿ ಪರಬ್ರಹ್ಮನನ್ನು ಹೊಂದುವನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ಮನ್ವಂತರ ವರ್ಣನವೆಂಬ
ಹತ್ತನೆಯ ಅಧ್ಯಾಯವು ಸಮಾಪ್ತವು.

## ಹತ್ತನೆಯ ಅಧ್ಯಾಯದ ಸಾರಾಂಶವು

ಬ್ರಹ್ಮದೇವನು ಮೊದಲು ತಮೋಗುಣವನ್ನು ಸೃಷ್ಟಿಸಿ ಆದರಿಂದ ಹಿಂಸಾ ಶೋಕರೂಪವಾದ ಮಿಥುನವನ್ನೇರ್ಪಡಿಸಿದನು. ಆ ತಮೋಮಯವಾದ ಶರೀರವನ್ನು ಎರಡು ಭಾಗಮಾಡಿ, ಒಂದರಿಂದ ಮಹಾಶರೀರವನ್ನು ಪಡೆದು, ವಿಹರಿಸುತ್ತಿದ್ದನು. ಮತ್ತೊಂದು ಭಾಗದಿಂದ ಶತರೂಪಿಯನ್ನು ಸೃಷ್ಟಿಸಿದನು. ಅವಳಾದರೋ ಸ್ವಾಯಂಭುವ ಮನುವನ್ನು ಮದುವೆಯಾದಳು. ಆ ದಂಪತಿಗಳಿಂದ ವಿರಾಡ್ರೂಪೋತ್ಪತ್ತಿಯಾಗಿ ವೈರಾಜಕಸೃಷ್ಟಿ ಎನಿಸಿತು. ಅವನಿಗೆ ಪ್ರಿಯವ್ರತ, ಉತ್ತಾನಪಾದರೆಂಬ ಇಬ್ಬರು ಪುತ್ರರು ಜನಿಸಿದರು. ಅವರು ಜಗತ್ಸೃಷ್ಟಿಗೆ ಕಾರಣರಾದರು. ಸ್ವಾಯಂಭುವ ಮನುವು ತನ್ನ ಪುತ್ರಿಯಾದ ಪ್ರಸೂತಿಯನ್ನು ದಕ್ಷನಿಗೂ, ಆಕೂತಿಯನ್ನು ರುಚಿಗೂ ಕೊಟ್ಟನು. ಅವರಿಗೆ ಅನೇಕಜನ ಪುತ್ರರು ಜನಿಸಿದರು. ಮತ್ತು ಬ್ರಹ್ಮನಿಂದ ಪ್ರೇರಿತನಾದ ಈಶ್ವರನು ತನಗೆ ಸಮಾನರೂಪರಾದ ಕೋಟ್ಯಂತರ ಪ್ರಜೆಗಳನ್ನು ಸೃಷ್ಟಿಮಾಡಿದನು. ಅನಂತರ ಯೋಗ, ತಪಸ್ಸು, ಸತ್ಯ, ಧರ್ಮ, ಜ್ಞಾನ, ವೈರಾಗ್ಯ, ಪ್ರಾಣಾಯಾಮ ಮೊದಲಾದವುಗಳು ಉಂಟಾದವು. ಅವುಗಳ ಅನುಷ್ಠಾನದಿಂದ ಯೋಗಿಗಳು ಸರ್ವಪಾಪಗಳಿಂದ ಮುಕ್ತರಾಗಿ ನಿತ್ಯನಾದ ಪರಬ್ರಹ್ಮನನ್ನು ಹೊಂದವರು. ಎಂಬೀ ವಿಷಯಗಳೇ ಹತ್ತನೆಯ ಅಧ್ಯಾಯದಲ್ಲಿ ನಿರೂಪಿತವಾಗಿವೆ

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಏಕಾದಶೋಽಧ್ಯಾಯಃ

॥ ವಾಯುರುವಾಚ ॥

**ಏಕಂ ಮಹಾಂತಂ ದಿವಸಮಹೋರಾತ್ರಮಥಾಪಿ ವಾ ।**
**ಅರ್ಧಮಾಸಂ ತಥಾ ಮಾಸಮಯನಾಬ್ದ ಯುಗಾನಿ ಚ ॥ ೧ ॥**

**ಮಹಾಯುಗ ಸಹಸ್ರಾಣಿ ಋಷಯಸ್ತಪಸಿ ಸ್ಥಿತಾಃ ।**
**ಉಪಾಸತೇ ಮಹಾತ್ಮಾನಃ ಪ್ರಾಣಂ ದಿವ್ಯೇನ ಚಕ್ಷುಷಾ ॥ ೨ ॥**

**ಅತ ಊರ್ಧ್ವಂ ಪ್ರವಕ್ಷ್ಯಾಮಿ ಪ್ರಾಣಾಯಾಮ ಪ್ರಯೋಜನಂ ।**
**ಫಲಂಚೈವ ವಿಶೇಷೇಣ ಯಥಾಹ ಭಗವಾನ್ ಪ್ರಭುಃ ॥ ೩ ॥**

---

## ಹನ್ನೊಂದನೆಯ ಅಧ್ಯಾಯವು

೧-೨. ವಾಯುದೇವನು ಹೇಳಿದನು:—ಮಹಾತ್ಮರಾದ ಋಷಿಗಳು ಹಗಲು, ರಾತ್ರಿ, ದಿವಸ, ಪಕ್ಷ, ಮಾಸ, ಅಯನ ವರ್ಷ. ಯುಗ, ಮಹಾಯುಗಸಹಸ್ರ, ಇವುಗಳಲ್ಲಿ ತಪಸ್ಸನ್ನು ಮಾಡಿ ದಿವ್ಯ ಸಿದ್ಧಿಯನ್ನು ಪಡೆದು ದಿವ್ಯಜ್ಞಾನದಿಂದ ಪ್ರಾಣದೇವನನ್ನು ಸೇವಿಸುತ್ತಾರೆ.

೩. ಈಗ ಪ್ರಾಣಾಯಾಮದ ವಿಷಯದಲ್ಲಿ ಭಗವಂತನಾದ ವಾಯುದೇವನು ಹೇಗೆ ನಿರೂಪಿಸಿರುವನೋ ಅದೇ ಪ್ರಾಣಾಯಾಮವನ್ನು ಮತ್ತು ಅದರ ಪ್ರಯೋಜನವನ್ನೂ ವಿಶೇಷವಾಗಿ ತಿಳಿಸುವೆನು.

ಪ್ರಯೋಜನಾನಿ ಚತ್ವಾರಿ ಪ್ರಾಣಾಯಾಮಸ್ಯ ವಿದ್ಧಿ ವೈ ।
ಶಾಂತಿಃ ಪ್ರಶಾಂತಿರ್ದೀಪ್ತಿಶ್ಚ ಪ್ರಸಾದಶ್ಚ ಚತುಷ್ಟಯಂ ॥ ೪ ॥

ಘೋರಾಕಾರ ಶಿವಾನಾಂತು ಕರ್ಮಣಾಂ ಫಲಸಂಭವಂ ।
ಸ್ವಯಂ ಕೃತಾನಿ ಕಾಲೇನ ಇಹಾಮುತ್ರ ಚ ದೇಹಿನಾಂ ॥ ೫ ॥

ಪಿತೃಮಾತೃಪ್ರದುಷ್ಟಾನಾಂ ಜ್ಞಾತಿಸಂಬಂಧಿ ಸಂಕರೈಃ ।
ಕ್ಷಪಣಂ ಹಿ ಕಷಾಯಾಣಾಂ ಪಾಪಾನಾಂ ಶಾಂತಿರುಚ್ಯತೇ ॥ ೬ ॥

ಲೋಭಮಾನಾತ್ಮಕಾನಾಂ ಹಿ ಪಾಪಾನಾಮಪಿ ಸಂಯಮಃ ।
ಇಹಾಮುತ್ರ ಹಿತಾರ್ಥಾಯ ಪ್ರಶಾಂತಿಸ್ತಪ ಉಚ್ಯತೇ ॥ ೭ ॥

ಸೂರ್ಯೇಂದು ಗ್ರಹತಾರಾಣಾಂ ತುಲ್ಯಸ್ತು ವಿಷಯೋ ಭವೇತ್ ।
ಋಷೀಣಾಂ ಚ ಪ್ರಸಿದ್ಧಾನಾಂ ಜ್ಞಾನವಿಜ್ಞಾನಸಂಪದಾಂ ॥ ೮ ॥

---

೪. ಯೋಗಿಗಳು ಮಾಡತಕ್ಕ ಪ್ರಾಣಾಯಾಮಕ್ಕೆ ಶಾಂತಿ, ಪ್ರಶಾಂತಿ, ದೀಪ್ತಿ, ಪ್ರಸಾದವೆಂಬ ನಾಲ್ಕು ವಿಧಗಳಾದ ಪ್ರಯೋಜನಗಳು ಇವೆ ಎಂದು ತಿಳಿಯಬೇಕು.

೫ ಮನುಷ್ಯರು ತಾವು ಮಾಡುವ ಘೋರ, ಮತ್ತು ಮಂಗಳಕರವಾದ ಕರ್ಮಗಳ ಫಲಗಳನ್ನು ಕೆಲವು ಕಾಲದ ತರುವಾಯ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ತಾವೇ ಪಡೆಯುತ್ತಾರೆ. ಶುಭಕರ್ಮಗಳಿಂದ ಇಹಪರಲೋಕಗಳಲ್ಲಿ ಸುಖವೂ, ದುಷ್ಕರ್ಮಗಳಿಂದ ದುಃಖವೂ ಉಂಟಾಗುವುವು.

೬. ಪಿತೃ, ಮಾತೃ, ಜ್ಞಾತಿ, ಬಂಧು ಇವರ ದುಷ್ಟತನದ ಸಾಂಕರ್ಯಗಳಿಂದ ಸಂಭವಿಸುವ ಪಾಪಗಳ ಪರಿಹಾರೋಪಾಯಗಳನ್ನು ತಿಳಿಸುವೆನು ಕೇಳಿ ಎಂದನು.

೭. ಲೋಭಿಗಳು ಮತ್ತು ಪಾಪಿಗಳು ತಾವು ಮಾಡಿದ ಪಾಪಗಳನ್ನು ಪರಿಹರಿಸಿಕೊಂಡು ಇಹಪರಗಳಲ್ಲಿ ದಿವ್ಯಸುಖಗಳನ್ನು ಪಡೆಯಲಪೇಕ್ಷಿಸಿದರೆ ಅವರು ಯೋಗ್ಯವೂ, ಶಾಂತಿರೂಪವೂ ಆದ ತಪಸ್ಸನ್ನು ಆಚರಿಸಬೇಕು.

೮. ಸೂರ್ಯ, ಚಂದ್ರ, ಗ್ರಹ, ನಕ್ಷತ್ರ ಮತ್ತು ಸುಪ್ರಸಿದ್ಧರು, ಜ್ಞಾನವಿಜ್ಞಾನ ಸಂಪತ್ತುಳ್ಳ ಮಹರ್ಷಿಗಳು ಇವರಿಗೆ ಯಾವ ಯಾವ ವಿಷಯಗಳು ಸಿದ್ಧಿಸುತ್ತವೆಯೋ ಅಂತಹ ವಿಷಯಗಳು ಪ್ರಾಣಾಯಾಮಸಿದ್ಧಿಯುಳ್ಳವರಿಗೂ ಸಂಭವಿಸುತ್ತವೆ.

ಅತೀತಾನಾಗತಾನಂಚ ದರ್ಶನಂ ಸಾಂಪ್ರತಸ್ಯಚ ।
ಬುದ್ಧಸ್ಯ ಸಮತಾಂ ಯಾಂತಿ ದೀಪ್ತಿಃ ಸ್ಯಾತ್ತ್ರಪ ಉಚ್ಯತೇ ॥ ೯ ॥

ಇಂದ್ರಿಯಾಣೀಂದ್ರಿಯಾರ್ಥಾಂಶ್ಚ ಮನಃ ಪಂಚಚ ಮಾರುತಾನ್ ।
ಪ್ರಸಾದಯತಿ ಯೇನಾಸೌ ಪ್ರಸಾದ ಇತಿ ಸಂಜ್ಞಿತಃ ॥ ೧೦ ॥

ಇತ್ಯೇಷ ಧರ್ಮಃ ಪ್ರಥಮಃ ಪ್ರಾಣಾಯಾಮಶ್ಚತುರ್ವಿಧಃ ।
ಸನ್ನಿಕೃಷ್ಟಫಲೋಜ್ಞೇಯಃ ಸದ್ಯಃ ಕಾಲಪ್ರಸಾದಜಃ ॥ ೧೧ ॥

ಅತ ಊರ್ಧ್ವಂ ಪ್ರವಕ್ಷ್ಯಾಮಿ ಪ್ರಾಣಾಯಾಮಸ್ಯ ಲಕ್ಷಣಂ।
ಆಸನಂಚ ಯಥಾತತ್ವಂ ಯುಂಜತೋ ಯೋಗಮೇವಚ ॥ ೧೨ ॥

ಓಂಕಾರಂ ಪ್ರಥಮಂ ಕೃತ್ವಾ ಚಂದ್ರಸೂರ್ಯೌ ಪ್ರಣಮ್ಯಚ ।
ಆಸನಂ ಸ್ವಸ್ತಿಕಂ ಕೃತ್ವಾ ಪದ್ಮಮರ್ಧಾಸನಂ ತಥಾ ॥ ೧೩ ॥

---

೯. ಯೋಗಿಗೆ ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿರುವ ವಸ್ತುಗಳ ಜ್ಞಾನವೂ, ಬುದ್ಧಿಯ ಶಾಂತಿಯೂ ಮತ್ತು ಪ್ರಕಾಶವೂ ಈ ತಪಸ್ಸಿನಿಂದ ಸಂಭವಿಸುತ್ತವೆ.

೧೦. ಇಂದ್ರಿಯಗಳೂ, ಇಂದ್ರಿಯಾರ್ಥಗಳೂ, ಮನಸ್ಸು, ಪಂಚಪ್ರಾಣಗಳು ಇವು ಏತರಿಂದ ಪ್ರಸನ್ನವಾಗುತ್ತವೆಯೋ ಅದಕ್ಕೆ ಪ್ರಸಾದವೆಂದು ನಾಮವು ಪ್ರಾಪ್ತವಾಗಿದೆ.

೧೧. ಪ್ರಾಣಾಯಾಮಕ್ಕೆ ಪ್ರಸಾದವೇ ಮೊದಲನೆಯ ಧರ್ಮವಾಗಿದೆ. ಆ ಪ್ರಾಣಾಯಾಮವು ನಾಲ್ಕು ವಿಧವಾಗಿದೆ. ಶೀಘ್ರವಾಗಿ ಆಗತಕ್ಕ ಫಲವೇ ಪ್ರಸಾದಜನ್ಯವು. ಅಂದರೆ ಈ ಪ್ರಸಾದದಿಂದ ಶೀಘ್ರವಾಗಿ ಯೋಗಫಲಗಳು ಸಿದ್ಧಿಸುತ್ತವೆ.

೧೨. ಈಗ ಪ್ರಾಣಾಯಾಮದ ಲಕ್ಷಣವನ್ನೂ, ಯೋಗಾಭ್ಯಾಸವನ್ನು ಮಾಡುವವರಿಗೆ ಆವಶ್ಯಕವಾದ ಮತ್ತು ಮುಖ್ಯವಾದ ಆಸನಗಳನ್ನೂ ಯೋಗಾಭ್ಯಾಸಕ್ರಮವನ್ನೂ ಯಥಾಸ್ಥಿತವಾಗಿ ಹೇಳುವೆನು.

೧೩-೧೫. ಯೋಗಿಯು ಮೊದಲು ಓಂಕಾರವನ್ನು ಉಚ್ಚರಿಸಿ ಸೂರ್ಯ, ಚಂದ್ರರಿಗೆ ನಮಸ್ಕರಿಸಿ ಸ್ವಸ್ತಿಕಾಸನ, ಪದ್ಮಾಸನ, ಅರ್ಧಾಸನ ಇವುಗಳನ್ನು ಮಾಡಿ

ಸಮಜಾನುರೇಕಜಾನುರುತ್ತಾನಃ ಸುಸ್ಥಿತೋಽಪಿಚ ।
ಸಮೋ ದೃಢಾಸನೋ ಭೂತ್ವಾ ಸಂಹೃತ್ಯ ಚರಣಾವುಭೌ ॥ ೧೪ ॥

ಸಂವೃತಾಸ್ಯೋಽವಬದ್ಧಾಕ್ಷ ಉರೋವಿಷ್ಟಭ್ಯಜಾಗ್ರತಃ ।
ಪಾರ್ಷ್ಣಿಭ್ಯಾಂ ವೃಷಣೇಽಭಾದ್ಯ ತಥಾಪ್ರಜನನಂ ತತಃ ॥ ೧೫ ॥

ಕಿಂಚಿದುನ್ನಾಮಿತಶಿರಾಃ ಶಿರೋ ಗ್ರೀವಾಂ ತಥೈವ ಚ ।
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯರ್ನ್ ॥ ೧೬ ॥

ತಮಃ ಪ್ರಚ್ಛಾದ್ಯ ರಜಸಾ ರಜಃ ಸತ್ವೇನ ಚ್ಛಾದಯೇತ್ ।
ತತಃ ಸತ್ವಸ್ಥಿತೋ ಭೂತ್ವಾ ಯೋಗಂ ಯುಂಜರ್ನ್ ಸಮಾಹಿತಃ ॥ ೧೭ ॥

ಇಂದ್ರಿಯಾಣೀಂದ್ರಿಯಾರ್ಥಾಂಶ್ಚ ಮನಃ ಪಂಚ ಚ ಮಾರುತಾರ್ನ್ ।
ನಿಗೃಹ್ಯ ಸಮವಾಯೇನ ಪ್ರತ್ಯಾಹಾರ ಮುಪಾಕ್ರಮೇತ್ ॥ ೧೮ ॥

---

ಕೊಂಡು ಎರಡು ಮೊಳಕಾಲುಗಳನ್ನು ಒಂದೇ ಸಮನಾಗಿ ಮಾಡಿಕೊಂಡು ಅಥವಾ ಒಂದು ಜಾನುವನ್ನು ಮೇಲಕ್ಕೆ ಹಾಕಿಕೊಂಡು ಸುಸ್ಥಿರನೂ, ದೃಢಾಸನೂ ಆಗಿ ಎರಡು ಚರಣಗಳನ್ನು ಕೂಡಿಸಿಕೊಂಡಿರಬೇಕು ಮತ್ತು ಮುಖ ನೇತ್ರಗಳನ್ನು ಮುಚ್ಚಿಕೊಂಡು ಎದೆಯನ್ನು ಮುಂದಕ್ಕೆ ಚಾಚಿ ಹಿಮ್ಮಡಿಗಳಿಂದ ಬೀಜಗಳನ್ನು, ಲಿಂಗವನ್ನು ಮುಚ್ಚಿಕೊಂಡು ಧ್ಯಾನಿಸಬೇಕು.

೧೬-೧೮. ಯೋಗಾಭ್ಯಾಸವನ್ನು ಮಾಡುವವನು ಕತ್ತು ತಲೆಗಳನ್ನು ಸ್ವಲ್ಪ ಮೇಲಕ್ಕೆತ್ತಿಕೊಂಡು ನಾಸಿಕಾಗ್ರದಲ್ಲಿ ದೃಷ್ಟಿಯನ್ನಿಟ್ಟು ಸುತ್ತಮುತ್ತಲೂ ನೋಡದೆಯೇ ರಜಸ್ಸಿನಿಂದ ತಮಸ್ಸನ್ನೂ, ಸತ್ವಗುಣದಿಂದ ರಜೋಗುಣವನ್ನೂ ಆಚ್ಛಾದಿಸಿ ಸತ್ವರೂಪಿಯಾಗಿ ಸ್ಥಿರಮನಸ್ಸಿನಿಂದ ಯೋಗಾಭ್ಯಾಸವನ್ನು ಮಾಡಬೇಕು. ಮತ್ತು ಇಂದ್ರಿಯಗಳು, ಅವುಗಳ ವಿಷಯಗಳು, ಮನಸ್ಸು, ಪಂಚಪ್ರಾಣಗಳು ಇವುಗಳನ್ನು ಪ್ರತ್ಯೇಕಪ್ರತ್ಯೇಕವಾಗಿಯೂ, ಸಾಮೂಹಿಕವಾಗಿಯೂ ನಿಗ್ರಹಿಸಿ ಪ್ರತ್ಯಾಹಾರವನ್ನು ಆಚರಿಸಬೇಕು.

ಯಸ್ತು ಪ್ರತ್ಯಾಹರೇತ್ ಕಾಮಾ೯ ಕೂರ್ಮೋ೯ಂಗಾನೀವ ಸರ್ವತಃ ।
ತಥಾತ್ಮರತಿರೇಕಸ್ಥಃ ಪಶ್ಯತ್ಯಾತ್ಮಾನ ಮಾತ್ಮನಿ ॥ ೧೯ ॥

ಪೂರಯಿತ್ವಾ ಶರೀರಂತು ಸ ಬಾಹ್ಯಾಭ್ಯಂತರಂ ಶುಚಿಃ ।
ಆಕಂಠನಾಭಿಯೋಗೇನ ಪ್ರತ್ಯಾಹಾರ ಮುಪಕ್ರಮೇತ್ ॥ ೨೦ ॥

ಕಲಾಮಾತ್ರಸ್ತು ವಿಜ್ಞೇಯೋ ನಿಮೇಷೋನ್ಮೇಷ ಏವ ಚ ।
ತಥಾ ದ್ವಾದಶಮಾತ್ರಸ್ತು ಪ್ರಾಣಯಾಮೋ ವಿಧೀಯತೇ ॥ ೨೧ ॥

ಧಾರಣಾ ದ್ವಾದಶಾಯಾಮೋ ಯೋಗೋ ವೈ ಧಾರಣಾದ್ವಯಂ ।
ತಥಾ ವೈ ಯೋಗಯುಕ್ತಶ್ಚ ಐಶ್ವರ್ಯಂ ಪ್ರತಿಪದ್ಯತೇ ।
ಪ್ರೇಕ್ಷತೇ ಪರಮಾತ್ಮಾನಂ ದೀಪ್ಯಮಾನಂ ಸ್ವತೇಜಸಾ । ॥ ೨೨ ॥

---

೧೯. ಆಮೆಯು ಅಂಗಗಳನ್ನು ಸಂಕೋಚಮಾಡುವಂತೆ ಯೋಗಿಯು ಕಾಮ ಕ್ರೋಧಾದಿಗಳನ್ನು ಸಂಕೋಚಮಾಡಿ ಸಂತೋಷಯುಕ್ತನಾಗಿ ತನ್ನಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮನನ್ನು ಧ್ಯಾನಮಾಡಬೇಕು.

೨೦. ಯೋಗಿಯು ತನ್ನ ದೇಹದಲ್ಲಿ ಭಗವಂತನನ್ನು ಧ್ಯಾನಿಸುತ್ತಾ ಬಾಹ್ಯಾಭ್ಯಂತರ ಶುದ್ಧನಾಗಿ ನಾಭಿಯಿಂದ ಕಂಠದವರೆಗೂ ಪ್ರಾಣನಿರೋಧರೂಪವಾದ ಪ್ರತ್ಯಾಹಾರವನ್ನು ಮಾಡಬೇಕು.

೨೧ ನಿಮೇಷೋನ್ಮೇಷಕಾಲಕ್ಕೆ ಅಂದರೆ ಕಣ್ಣಿನ ರೆಪ್ಪೆಯನ್ನು ಮುಚ್ಚಿ ತೆಗೆಯುವಕಾಲಕ್ಕೆ ಮಾತ್ರೆಯೆಂದು ಹೆಸರು ಬಂದಿದೆ. ಅಂತಹ ಹನ್ನೆರಡು ಮಾತ್ರೆಗಳ ಕಾಲದವರೆಗೂ ಪ್ರಾಣನಿರೋಧಮಾಡಿದರೆ ಅದು ಪ್ರಾಣಾಯಾಮವಾಗುವುದು.

೨೨. ಹನ್ನೆರಡು ನಿಮಿಷಕಾಲ ಪ್ರಾಣನಿರೋಧನವನ್ನು ಮಾಡುವುದಕ್ಕೆ ಧಾರಣೆಯೆಂದೂ, ಆ ಧಾರಣಾದ್ವಯಗಳಿಗೆ ಯೋಗವೆಂದೂ ಹೆಸರು ಬಂದಿದೆ. ಅಂತಹ ಯೋಗಯುಕ್ತನಾದ ಯೋಗಿಯು ಮಹದೈಶ್ವರ್ಯವನ್ನು ಪಡೆಯುವನು. ಮತ್ತು ಆ ಯೋಗಿಯು ದಿವ್ಯತೇಜಸ್ಸಿನಿಂದ ಪ್ರಕಾಶಿಸುತ್ತಿರುವ ಪರಮಾತ್ಮನನ್ನು ನೋಡುವನು.

ಪ್ರಾಣಾಯಾಮೇನ ಯುಕ್ತಸ್ಯ ವಿಪ್ರಸ್ಯ ನಿಯತಾತ್ಮನಃ ।
ಸರ್ವೇ ದೋಷಾಃ ಪ್ರಣಶ್ಯಂತಿ ಸತ್ವಸ್ಥಶ್ಚೈವ ಜಾಯತೇ ॥ ೨೩ ॥

ಏವಂ ವೈ ನಿಯತಾಹಾರಃ ಪ್ರಾಣಾಯಾಮಪರಾಯಣಃ ।
ಜಿತ್ವಾ ಜಿತ್ವಾ ಸದಾ ಭೂಮಿಮಾರೋಹೇತ್ತು ಸದಾ ಮುನಿಃ ॥ ೨೪ ॥

ಅಜಿತಾ ಹಿ ಮಹಾಭೂಮಿರ್ದೋಷಾನುತ್ಪಾದಯೇದ್ಬಹೂನ್ ।
ವಿವರ್ಧಯತಿ ಸಂಮೋಹಂ ನ ರೋಹೇದಜಿತಾಂ ತತಃ ॥ ೨೫ ॥

ನಾಲೇನ ತು ಯಥಾ ತೋಯಂ ಯಂತ್ರೇಣೈವ ಬಲಾನ್ವಿತಃ ।
ಆಪಿಬೇತ ಪ್ರಯತ್ನೇನ ತಥಾ ವಾಯುಂ ಜಿತಶ್ರಮಃ ॥ ೨೬ ॥

ನಾಭ್ಯಾಂ ಚ ಹೃದಯೇ ಚೈವ ಕಂಠೇ ಉರಸಿ ಚಾನನೇ ।
ನಾಸಾಗ್ರೇ ತು ತಥಾ ನೇತ್ರೇ ಭ್ರುವೋರ್ಮಧ್ಯೇಽಥ ಮೂರ್ಧನಿ ॥ ೨೭ ॥

---

೨೩. ಪ್ರಾಣಾಯಾಮದಲ್ಲಿ ಆಸಕ್ತನೂ, ಜಿತೇಂದ್ರಿಯನೂ, ಆದ ವಿಪ್ರನ ಸಕಲ ದೋಷಗಳೂ ನಾಶವಾಗುವುದಲ್ಲದೇ ಸತ್ವಗುಣಸಂಪನ್ನನೂ ಆಗುವನು.

೨೪. ಹೀಗೆ ನಿಯತಾಹಾರಿಯೂ, ಪ್ರಾಣಾಯಾಮ ಪರಾಯಣನೂ, ಆದ ಯೋಗಿಯು ಕಾಮಕ್ರೋಧಾದಿಗಳನ್ನು ಜಯಿಸಿ ಈ ಭೂಮಿಯಿಂದ ಊರ್ಧ್ವ ಲೋಕಕ್ಕೆ ಹೋಗುವನು (ಮೇಲಕ್ಕೆ ಏರುವನು).

೨೫. ಅಜಿತೇಂದ್ರಿಯರಿಗೆ ಭೂಮಿಯು ಮಹಾದೋಷವನ್ನು ಮತ್ತು ಭ್ರಾಂತಿಯನ್ನುಂಟುಮಾಡುತ್ತದೆ. ಆದುದರಿಂದ ಅವನು ಈ ಭೂಲೋಕದಿಂದ ಮೇಲಕ್ಕೆ (ಊರ್ಧ್ವಲೋಕಗಳಿಗೆ) ಹೋಗಲಾರನು.

೨೬. ಶಕ್ತರಾದ ಪುರುಷರು ಯಂತ್ರದ ಶಕ್ತಿಯಿಂದ ಕೊಳಾಯಿಗಳ ಮೂಲಕ ನೀರನ್ನು ದೂರದಿಂದ ತಂದು ಹೇಗೆ ಬೇಕಾಗುವ ಸ್ಥಳಗಳಲ್ಲಿ ಉಪಯೋಗಿಸಿಕೊಳ್ಳುವರೋ, ಹಾಗೆಯೇ, ಜಿತೇಂದ್ರಿಯರಾದ ಯೋಗಿಗಳು ಪ್ರಾಣಾದಿವಾಯುಗಳನ್ನು ತಮ್ಮ ಸ್ವಾಧೀನಮಾಡಿಕೊಳ್ಳುವರು.

೨೭-೨೮. ಯೋಗಿಯು ಪ್ರಾಣಾದಿವಾಯುಗಳನ್ನು ನಾಭಿ, ಹೃದಯ, ಕಂಠ, ಎದೆ, ಮುಖ, ನಾಸಾಗ್ರ, ನೇತ್ರ, ಹುಬ್ಬುಗಳ ನಡುವೆ, ಮತ್ತು ಶಿರಸ್ಸು ಇವುಗಳಲ್ಲಿಯೂ, ಮತ್ತು ಸ್ವಲ್ಪ ಊರ್ಧ್ವಭಾಗದಲ್ಲಿಯೂ, ಇತರ ವಸ್ತುಗಳಲ್ಲಿಯೂ, ಮನಸ್ಸನ್ನು ಚಲಿಸ

ಕಿಂಚಿದೊದ್ಧ್ವರ್ಣಂ ಪರಸ್ಮಿಂಶ್ಚ ಧಾರಣಾ ಪರಮಾ ಸ್ಮೃತಾ ।
ಪ್ರಾಣಾಪಾನಸಮಾರೋಧಾತ್ ಪ್ರಾಣಾಯಾಮಃ ಸ ಕಥ್ಯತೇ ॥ ೨೮ ॥

ಮನಸೋ ಧಾರಣಾ ಚೈವ ಧಾರಣೇತಿ ಪ್ರಕೀರ್ತಿತಾ ।
ನಿವೃತ್ತಿರ್ವಿಷಯಾಣಾಂ ತು ಪ್ರತ್ಯಾಹಾರಸ್ತು ಸಂಜ್ಞಿತಃ ॥ ೨೯ ॥

ಸರ್ವೇಷಾಂ ಸಮವಾಯೇ ತು ಸಿದ್ಧಿಃ ಸ್ಯಾದ್ಯೋಗಲಕ್ಷಣಾ ।
ತಯೋತ್ಪನ್ನಸ್ಯ ಯೋಗಸ್ಯ ಧ್ಯಾನಂ ವೈ ಸಿದ್ಧಿಲಕ್ಷಣಂ ॥
ಧ್ಯಾನಯುಕ್ತಃ ಸದಾ ಪಶ್ಯೇದಾತ್ಮಾನಂ ಸೂರ್ಯಚಂದ್ರವತ್ ॥ ೩೦ ॥

ಸತ್ವಸ್ಯಾನುಪಪತ್ತ್ಯಾತು ದರ್ಶನಂತು ನವಿದ್ಯತೇ ।
ಅದೇಶಕಾಲಯೋಗಸ್ಯ ದರ್ಶನಂ ತು ನ ವಿದ್ಯತೇ ॥ ೩೧ ॥

ಅಗ್ನ್ಯಭ್ಯಾಶೇ ವನೇ ವಾಪಿ ಶುಷ್ಕಪರ್ಣಚಯೇ ತಥಾ ।
ಜಂತುವ್ಯಾಪ್ತೇ ಶ್ಮಶಾನೇ ವಾ ಜೀರ್ಣಗೋಷ್ಠೇ ಚತುಷ್ಪತೇ ॥ ೩೨ ॥

---

ದಂತೆ ಸ್ಥಿರವಾಗಿ ನಿಲ್ಲಿಸುವುದಕ್ಕೆ "ಧಾರಣೆ"ಯೆಂಬ ಶ್ರೇಷ್ಠವಾದ ಸಂಜ್ಞೆಯು ಬಂದಿದೆ. ಹೀಗೆ ಪ್ರಾಣಾದಿವಾಯುನಿರೋಧವನ್ನು ಮಾಡುವುದಕ್ಕೆ ಪ್ರಾಣಾಯಾಮವೆಂದು ಹೆಸರುಂಟಾಗಿದೆ.

೨೯. ಹೀಗೆ ಮನೋನಿಗ್ರಹಮಾಡುವುದಕ್ಕೆ ಧಾರಣೆಯೆಂತಲೂ ವಿಷಯಗಳನ್ನು ನಿಗ್ರಹಿಸುವುದಕ್ಕೆ "ಪ್ರತ್ಯಾಹಾರವೆಂತಲೂ ಸಂಜ್ಞೆಯು ಉಂಟಾಗಿದೆ.

೩೦. ಏಕಕಾಲದಲ್ಲಿ ಮೇಲೆ ಹೇಳಿದ ಸರ್ವಸಿದ್ಧಿಗಳೂ, ಉಂಟಾದರೆ ಅದಕ್ಕೆ "ಯೋಗಸಿದ್ಧಿ"ಯೆಂದು ಹೆಸರು ಬಂದಿದೆ. ಆ ಸಿದ್ಧಿಯಿಂದ ಉಂಟಾದ ಯೋಗಕ್ಕೆ "ಧ್ಯಾನ"ವೆಂದು ಸಂಜ್ಞೆಯುಂಟಾಗಿದೆ. ಹೀಗೆ ಧ್ಯಾನವಂತನಾದ ಯೋಗಿಯು ಸೂರ್ಯಚಂದ್ರರನ್ನು ನೋಡುವಂತೆ ಪರಮಾತ್ಮನನ್ನು ನೋಡಬಲ್ಲನು.

೩೧. ಸತ್ವಗುಣಪ್ರಾಚುರ್ಯರಹಿತನೂ, ದೇಶಕಾಲಜ್ಞಾನಶೂನ್ಯನೂ ಆದ ಯೋಗಿಗೆ, ಪರಮಾತ್ಮನ ದರ್ಶನ ಉಂಟಾಗುವುದಿಲ್ಲ.

೩೨-೩೪. ಧ್ಯಾನಾಸಕ್ತನಾದ ಯೋಗಿಯು, ಅಗ್ನಿಯಸಮೀಪ, ವನ, ಒಣಗಿದ ಎಲೆಗಳ ಗುಂಪು, ದುಷ್ಟಸತ್ವಗಳಿರುವ ವನ, ಶ್ಮಶಾನ, ಜೀರ್ಣಗೋಷ್ಠ, ಚೌಕ, ಶಬ್ದ

**ಸಶಬ್ದೇ ಸಭಯೇ ವಾಪಿ ಚೈತ್ಯವಾಲ್ಮೀಕಸಂಚಯೇ ।**
**ಉದಪಾನೇ ತಥಾ ನದ್ಯಾಂ ನ ಬಾಧಾತಃ ಕದಾಚನ ॥ ೩೩ ॥**

**ಕ್ಷುಧಾವಿಷ್ಟಸ್ತಥಾ ಪ್ರೀತೋ ನ ಚ ವ್ಯಾಕುಲಚೇತನಃ ।**
**ಯುಂಜೀತ ಪರಮಂ ಧ್ಯಾನಂ ಯೋಗೀ ಧ್ಯಾನಪರಃ ಸದಾ ॥ ೩೪ ॥**

**ಏತಾನ್ ದೋಷಾನ್ ವಿನಿಶ್ಚಿತ್ಯ ಪ್ರಮಾದಾದ್ಯೋ ಯುನಕ್ತಿ ವೈ ।**
**ತಸ್ಯ ದೋಷಾಃ ಪ್ರಕುಪ್ಯಂತಿ ಶರೀರೇ ವಿಘ್ನಕಾರಕಾಃ ॥ ೩೫ ॥**

**ಜಡತ್ವಂ ಬಧಿರತ್ವಂ ಚ ಮೂಕತ್ವಂ ಚಾಧಿಗಚ್ಛತಿ ।**
**ಅಂಧತ್ವಂ ಸ್ಮೃತಿಲೋಪಶ್ಚ ಜರಾರೋಗ ಸ್ತಥೈವಚ ॥ ೩೬ ॥**

**ತಸ್ಯದೋಷಾಃ ಪ್ರಕುಪ್ಯಂತಿ ಅಜ್ಞಾನಾದ್ಯೋ ಯುನಕ್ತಿ ವೈ ।**
**ತಸ್ಮಾತ್ ಜ್ಞಾನೇನ ಶುದ್ಧೇನ ಯೋಗೀ ಯುಂಜೇತ್ಸಮಾಹಿತಃ ॥ ೩೭ ॥**

---

ಮತ್ತು ಭಯಂಕರವಾದ ಪ್ರದೇಶ, ದೇವಾಲಯ, ವಲ್ಮೀಕವಿರುವಸ್ಥಾನ, ಜಲಾಶಯ, ನದಿ ಮತ್ತು ಬಾಧಿತಪ್ರದೇಶ ಇವುಗಳಲ್ಲಿ ಕ್ಷುತ್ಪಿಪಾಸಾಪೀಡಿತನಾಗಿ ಚಾಂಚಲ್ಯದಿಂದ ಯೋಗಾಭ್ಯಾಸವನ್ನು ಮಾಡಿದರೆ ಎಂದಿಗೂ ಸಿದ್ಧಿಯುಂಟಾಗುವುದಿಲ್ಲ

೩೫. ಈ ದೋಷಗಳು ಕಂಡುಬಂದರೂ ಕೂಡ ಯಾವನು ಅಜ್ಞಾನದಿಂದ ಯೋಗದಲ್ಲಿ ಆಸಕ್ತನಾಗುವನೋ ವಿಘ್ನಕಾರಿಗಳಾದ ದೋಷಗಳು ಅವನ ಶರೀರಕ್ಕೆ ತೊಂದರೆಗಳನ್ನು ಉಂಟುಮಾಡಿ ಕೋಪಗೊಳ್ಳುತ್ತವೆ.

೩೬-೩೭. ದೋಷಯುಕ್ತನಾದ ಯೋಗಿಯು ಅಜ್ಞಾನದಿಂದ ಯೋಗಾಭ್ಯಾಸವನ್ನು ಮಾಡಿದರೆ ಅವನು ಮೂರ್ಖನೂ, ಕಿವುಡನೂ, ಮೂಕನೂ, ಅಂಧನೂ, ಸ್ಮೃತಿರಹಿತನೂ, ಜರಾವಂತನೂ, ಕುರೂಪಿಯೂ, ಆಗುವನು, ಆದುದರಿಂದ ಯೋಗಿಯು ಶುದ್ಧಚಿತ್ತನೂ, ನಿರ್ಮಲಜ್ಞಾನಿಯೂ, ಸ್ಥಿರಮನಸ್ಕನೂ, ಆಗಿ ಯೋಗಾಭ್ಯಾಸವನ್ನು ಮಾಡಬೇಕು.

ಅಪ್ರಮತ್ತಃ ಸದಾಚ್ಛೈವ ನ ದೋಷಾನ್ ಪ್ರಾಪ್ನುಯಾತ್ ಕ್ವಚಿತ್ ।
ತೇಷಾಂ ಚಿಕಿತ್ಸಾಂ ವಕ್ಷ್ಯಾಮಿ ದೋಷಾಣಾಂ ಚ ಯಥಾಕ್ರಮಂ ।
ಯಥಾ ಗಚ್ಛಂತಿ ತೇ ದೋಷಾಃ ಪ್ರಾಣಾಯಾಮ ಸಮುತ್ಥಿತಾಃ ॥ ೩೮ ॥

ಸ್ನಿಗ್ಧಾಂ ಯವಾಗೂಮತ್ಯುಷ್ಣಾಂ ಭುಕ್ತ್ವಾ ತತ್ರಾವಧಾರಯೇತ್ ।
ಏತೇನ ಕ್ರಮಯೋಗೇನ ವಾತಗುಲ್ಮಂ ಪ್ರಶಾಮ್ಯತಿ । ॥ ೩೯ ॥

ಗುದಾವರ್ತಪ್ರತೀಕಾರಮಿದಂ ಕುರ್ಯಾಚ್ಚಿಕಿತ್ಸಿತಂ ।
ಭುಕ್ತ್ವಾ ದಧಿ ಯವಾಗೂರ್ವಾ ವಾಯುರೂರ್ಧ್ವಂ ತತೋ ವ್ರಜೇತ್ ॥೪೦॥

ವಾಯುಗ್ರಂಥಿಂ ತತೋಽಭಿತ್ವಾ ವಾಯುದೇಶೇ ಪ್ರಯೋಜಯೇತ್ ।
ತಥಾಪಿ ನ ವಿಶೇಷಃ ಸ್ಯಾತ್ ಧಾರಣಾಂ ಮೂರ್ಧ್ನಿ ಧಾರಯೇತ್ ॥ ೪೧ ॥

---

೩೮. ಪುರುಷನು ಜಾಗರೂಕನಾಗಿದ್ದರೆ ಎಂದಿಗೂ ದೋಷಗಳನ್ನು ಹೊಂದಲಾರನು. ಆ ದೋಷಗಳಿಗೆ ಪರಿಹಾರೋಪಾಯಗಳನ್ನು ಕ್ರಮವಾಗಿ ನಿರೂಪಿಸುವೆನು ಪ್ರಾಣಾಯಾಮದಿಂದ ಆ ದೋಷಗಳು ಪರಿಹಾರವಾಗುತ್ತವೆ.

೩೯. ಯೋಗಿಯು ಮನೋಹರವೂ, ಬಿಸಿಯಾಗಿಯೂ ಇರುವ ಗಂಜಿಯನ್ನು ಕುಡಿದು ಕ್ರಮವಾಗಿ ಯೋಗಾಭ್ಯಾಸವನ್ನು ಮಾಡಬೇಕು. ಈ ಕ್ರಮದಿಂದ ಯೋಗಾಭ್ಯಾಸವನ್ನು ಮಾಡಿದರೆ ವಾಯುರೋಗವು ಪರಿಹಾರವಾಗುವುದು.

೪೦. ಯೋಗಿಯು ಆ ದೋಷಪರಿಹಾರಕ್ಕಾಗಿ ಗುದಾವರ್ತಪ್ರತೀಕಾರನೆಂಬ ಚಿಕಿತ್ಸೆಯನ್ನು ಮಾಡಬೇಕು. ಅದು ಹೇಗೆಂದರೆ, ವಾಯುವು ಅಧೋಗತಿಯಾಗ ದಂತೆ ತಡೆದು ಮೊಸರು ಗಂಜಿ ಇವನ್ನು ಸೇವಿಸಿ, ಆ ವಾಯುವನ್ನು ಊರ್ಧ್ವಕ್ಕೆ ಹೋಗುವಂತೆ ಪ್ರೇರಿಸಬೇಕು.

೪೧. ವಾಯುಗ್ರಂಥಿಯನ್ನು ಬಿಡಿಸಿ ಅದನ್ನು ವಾಯು ಸಂಚಾರಮಾಡುವ ದೇಶದಲ್ಲಿ ಪ್ರಯೋಗಿಸಬೇಕು, ಅದರಿಂದ ಏನೂ ವಿಶೇಷವಾಗದಿದ್ದರೆ ಆ ವಾತ ವನ್ನು ಶಿರಸ್ಸಿನಲ್ಲಿ ಧಾರಣೆಮಾಡಬೇಕು.

ಯುಂಜಾನಸ್ಯ ತನುಂ ತಸ್ಯ ಸತ್ವಸ್ಥಸ್ಯೈವ ದೇಹಿನಃ ।
ಗುದಾವರ್ತಪ್ರತೀಘಾತೇ ಏತತ್ಕುರ್ಯಾಚ್ಚಿಕಿತ್ಸಿತಂ ॥ ೪೨ ॥

ಸರ್ವಗಾತ್ರ ಪ್ರಕಂಪೇನ ಸಮಾರಬ್ಧಸ್ಯ ಯೋಗಿನಃ ।
ಇಮಾಂ ಚಿಕಿತ್ಸಾಂ ಕುರ್ವೀತ ತಯಾ ಸಂಪದ್ಯತೇ ಸುಖೀ ॥ ೪೩ ॥

ಮನಸಾ ಯದ್ವ್ರತಂ ಕಿಂಚಿತ್ ವಿಷ್ಟಂಭೀಕೃತ್ಯ ಧಾರಯೇತ್ ।
ಉರೋದ್ಘಾತೇ ಉರಃಸ್ಥಾನಂ ಕಂಠದೇಶೇ ಚ ಧಾರಯೇತ್ ॥ ೪೪ ॥

ತ್ವಚೋವಘಾತೇ ತಾಂ ವಾಚಿ ಬಾಧಿರ್ಯೇ ಶ್ರೋತ್ರಯೋಸ್ತಥಾ ।
ಜಿಹ್ವಾಸ್ಥಾನೇ ತೃಷಾರ್ತಸ್ತು ಅಗ್ರೇ ಸ್ನೇಹಾಂಶ್ಚ ತಂತುಭಿಃ ।
ಫಲಂ ವೈ ಚಿಂತಯೇದ್ಯೋಗೀ ತತಃ ಸಂಪದ್ಯತೇ ಸುಖೀ ॥ ೪೫ ॥

---

೪೨. ಕೇವಲ ಸತ್ವಗುಣಪ್ರಾಚುರ್ಯವುಳ್ಳ ಯೋಗಿಯು ಯೋಗಾಭ್ಯಾಸದಲ್ಲಿ ತನ್ನ ಶರೀರವನ್ನು ನೇಮಿಸಿ ವಾತವನ್ನು ಅಧೋಗಮನವಾಗದಂತೆ ತಡೆದು ಈ ಚಿಕಿತ್ಸೆಯನ್ನು ಮಾಡಬೇಕು.

೪೩. ಯೋಗಾಭ್ಯಾಸದಲ್ಲಿ ನಿರತನಾದ ಯೋಗಿಯು ದೇಹದಲ್ಲಿ ಸರ್ವತ್ರಕಂಪ ವಾದರೆ ಈ ಚಿಕಿತ್ಸೆಮಾಡುವುದರಿಂದ ಅವನು ಸುಖಿಯಾಗುವನು.

೪೪. ಯೋಗಿಯು ಮನಸ್ಸಿನಲ್ಲಿ ಯಾವ ವ್ರತವನ್ನು ಯೋಚಿಸಿ ಧಾರಣೆ ಮಾಡುತ್ತಾನೋ ಅದನ್ನು ಹೃದಯದಲ್ಲಿಯೂ, ಕಂಠಸ್ಥಾನದಲ್ಲಿಯೂ, ಮಾಡಬೇಕು.

೪೫. ಯೋಗಿಯು ಚರ್ಮವು ಉಪಘಾತವಾದರೆ ಮಾತಿನಲ್ಲಿಯೂ, ಅದೂ ನಷ್ಟವಾದರೆ ಶ್ರೋತ್ರಗಳಲ್ಲಿಯೂ, ಅವೂ ನಿಷ್ಫಲವಾಗಿ ಬಾಯಾರಿಕೆಯಾದರೆ, ನಾಲಿಗೆ ಯಲ್ಲಿಯೂ, ಚಿಕಿತ್ಸೆಯನ್ನು ಮಾಡಬೇಕು. ಹೀಗೆ ಯೋಗಿಯು ಕೊನೆಗೆ ಸರ್ವ ವಿಷಯಗಳಲ್ಲಿಯೂ ಸ್ನೇಹವನ್ನು ಬಿಟ್ಟು ಫಲವನ್ನು ಚಿಂತಿಸಬೇಕು. ಈ ರೀತಿ ಮಾಡಿದರೆ ಯೋಗಿಯು ಕೊನೆಗೆ ಸುಖಿಯಾಗುವನು.

ಕ್ಷಯೇ ಕುಷ್ಟೇ ಸಕೀಲಾಸೇ ಧಾರಯೇತ್ಸರ್ವಸಾತ್ವಿಕೀಂ ।
ಯಸ್ಮಿನ್ ಯಸ್ಮಿನ್ ರಜೋದೇಶೇ ತಸ್ಮಿನ್ ಯುಕ್ತೋ ವಿನಿರ್ದಿಶೇತ್॥ ೪೬ ॥

ಯೋಗೋತ್ಪನ್ನಸ್ಯ ವಿಪ್ರಸ್ಯ ಇದಂ ಕುರ್ಯಾತ್ ಚಿಕಿತ್ಸಿತಂ ।
ವಂಶಕೀಲೇನ ಮೂರ್ಧಾನಂ ಧಾರಯಾಣಸ್ಯ ತಾಡಯೇತ್ ।
ಮೂರ್ಧ್ನಿಕೀಲಂ ಪ್ರತಿಷ್ಠಾಪ್ಯಕಾಷ್ಠಂ ಕಾಷ್ಠೇನ ತಾಡಯೇತ್ ॥ ೪೭ ॥

ಭಯಭೀತಸ್ಯ ಸಾ ಸಂಜ್ಞಾ ತತಃ ಪ್ರತ್ಯಾಗಮಿಷ್ಯತಿ ।
ಅಥ ವಾ ಲುಪ್ತಸಂಜ್ಞಸ್ಯ ಹಸ್ತಾಭ್ಯಾಂ ತತ್ರ ಧಾರಯೇತ್ ॥ ೪೮ ॥

ಪ್ರತಿಲಭ್ಯ ತತಃ ಸಂಜ್ಞಾಂ ಧಾರಣಾಂ ಮೂರ್ಧ್ನಿ ಧಾರಯೇತ್ ।
ಸ್ನಿಗ್ಧಮಲ್ಪಂ ಚ ಭುಂಜೀತ ತತಃ ಸಂಪದ್ಯತೇ ಸುಖೀ ॥ ೪೯ ॥

---

೪೬. ಯಾವ ಯಾವ ಶರೀರಗಳಲ್ಲಿ ಕ್ಷಯ, ಕುಷ್ಟ, ಮೂರ್ಛೆ, ಮೊದಲಾದ ರೋಗಗಳು ರಜೋಗುಣದಿಂದ ಉಂಟಾಗುತ್ತವೆಯೋ, ಯೋಗಿಯು ಅಂತಹ ಶರೀರಗಳನ್ನು ಬಿಟ್ಟು ಸಾತ್ವಿಕ ಶರೀರವನ್ನು ಪಡೆಯಬೇಕು.

೪೭. ಯೋಗಸಿದ್ಧಿಯುಳ್ಳ ವಿಪ್ರನನ್ನು ಮುಂದೆ ಹೇಳುವಂತೆ ಪರೀಕ್ಷಿಸಬೇಕು. ಯೋಗಸಿದ್ಧಿಯನ್ನು ಪರೀಕ್ಷೆಮಾಡುವುದಕ್ಕಾಗಿ ಅವನ ತಲೆಯಮೇಲೆ ಕೋಲಿನಿಂದ ಹೊಡೆಯಬೇಕು. ಅಥವಾ ಅವನ ತಲೆಗೆ ಗೂಟವನ್ನು ಹೊಡೆದು, ಅದನ್ನು ಕೋಲಿನಿಂದ ಹೊಡೆಯಬೇಕು.

೪೮. ಹಾಗೆ ಮಾಡಿದರೆ ಅವನಿಗೆ ಎಚ್ಚರವಾಗುತ್ತದೆ. ಹಾಗೆ ಎಚ್ಚರವಾಗದಿದ್ದರೆ, ಅವನನ್ನು ಕೈಗಳಿಂದ ಹಿಡಿದುಕೊಂಡು ಎಚ್ಚರಿಸಲು ಪ್ರಯತ್ನವನ್ನು ಮಾಡಬೇಕು.

೪೯. ಅನಂತರ ಯೋಗಿಯು ಎಚ್ಚರವನ್ನು ಹೊಂದಿ ಶಿರಸ್ಸಿನಲ್ಲಿ ವಾಯುನಿರೋಧವನ್ನು ಮಾಡಬೇಕು. ಅವನು ಮೃದುವೂ, ಅಲ್ಪವೂ ಆದ ಆಹಾರವನ್ನು ತೆಗೆದುಕೊಂಡರೆ ಸುಖಿಯಾಗುವನು.

ಅಮಾನುಷೇನ ಸತ್ವೇನ ಯದಾ ಬುಧ್ಯತಿ ಯೋಗವಿತ್ ।
ದಿವಂ ಚ ಪೃಥಿವೀಂ ಚೈವ ವಾಯುಮಗ್ನಿಂ ಚ ಧಾರಯೇತ್ ॥ ೫೦ ॥

ಪ್ರಾಣಾಯಾಮೇನ ತತ್ಸರ್ವಂ ದಹ್ಯಮಾನಂ ವಶೀಭವೇತ್ ।
ಅಥಾಪಿ ಪ್ರವಿಶೇದ್ದೇಹಂ ತತಸ್ತಂ ಪ್ರತಿಷೇಧಯೇತ್ ॥ ೫೧ ॥

ತತಃ ಸಂಸ್ತಭ್ಯ ಯೋಗೇನ ಧಾರಯಾನಸ್ಯ ಮೂರ್ಧನಿ ।
ಪ್ರಾಣಾಯಾಮಾಗ್ನಿನಾ ದಗ್ಧಂ ತತ್ಸರ್ವಂ ವಿಲಯಂ ವ್ರಜೇತ್ ॥ ೫೨ ॥

ಕೃಷ್ಣಸರ್ಪಾಪರಾಧಂ ತು ಧಾರಯೇದ್ಧೃದಯೋದರೇ ।
ಮಹರ್ಜನಸ್ತಪಃ ಸತ್ಯಂ ಹೃದಿಕೃತ್ವಾತು ಧಾರಯೇತ್ ॥ ೫೩ ॥

ವಿಷಸ್ಯ ತು ಫಲಂ ಪೀತ್ವಾ ವಿಶಲ್ಯಾಂ ಧಾರಯೇತ್ತತಃ ।
ಸರ್ವತಃ ಸನಗಾಂ ಪೃಥ್ವೀಂ ಕೃತ್ವಾ ಮನಸಿ ಧಾರಯೇತ್ ॥ ೫೪ ॥

---

೫೦. ಯೋಗಿಯು ಅಮಾನುಷಿಕವಾದ ಸತ್ವಗುಣದಿಂದ ಯಾವಾಗ ಸ್ವರ್ಗ, ಭೂಮಿ, ವಾಯು ಮತ್ತು ಅಗ್ನಿ ಇವುಗಳನ್ನು ತಿಳಿಯುತ್ತಾನೆಯೋ ಆಗ ಧಾರಣೆಯನ್ನು ಮಾಡಬೇಕು.

೫೧. ಯೋಗಿಯು ಪ್ರಾಣಾಯಾಮದಿಂದ ದಗ್ಧವಾದ ಎಲ್ಲವನ್ನೂ ವಶಪಡಿಸಿಕೊಳ್ಳುವನು. ಆದರೂ ದೇಹವನ್ನು ವಶಪಡಿಸಿಕೊಳ್ಳುವನು. ಅನಂತರ ಅದನ್ನು ತಡೆಯುವನು.

೫೨. ಅನಂತರ ಯೋಗಾಭ್ಯಾಸದಿಂದ ಶಿರಸ್ಸಿನಲ್ಲಿ ಧಾರಣಮಾಡಿದವನ ಪಾಪಗಳೆಲ್ಲವೂ ಪ್ರಾಣಾಯಾಮಾಗ್ನಿಯಿಂದ ಸುಟ್ಟು ಲಯವಾಗುವುದು.

೫೩ ಕೃಷ್ಣಸರ್ಪದ ವಿಷಸಿದ್ಧಿಯನ್ನು ಪಡೆಯುವ ಯೋಗಿಯು ಹೃದಯ ಗುಹೆಯಲ್ಲಿ ಮಹರ್ಲೋಕ, ಜನೋಲೋಕ, ತಪೋಲೋಕ ಮತ್ತು ಸತ್ಯಲೋಕ ಇವುಗಳನ್ನು ಧಾರಣಮಾಡಬೇಕು.

೫೪. ಅನಂತರ ವಿಷವನ್ನು ಭಕ್ಷಿಸಿದರೆ ಅದರ ಪರಿಹಾರಕ್ಕಾಗಿ ವಿಶಲ್ಯಕರಣಿಯಲ್ಲಿ ಮನಸ್ಸನ್ನು ಧಾರಣಮಾಡಬೇಕು. ನಂತರ ಸಕಲೌಷಧಿಗಳಿಗೂ ಆಶ್ರಯವಾದ ಪರ್ವತಗಳಿಂದಕೂಡಿದ ಭೂಮಿಯನ್ನು ಮನಸ್ಸಿನಲ್ಲಿ ಧಾರಣಮಾಡಬೇಕು.

ಹೃದಿ ಕೃತ್ವಾ ಸಮುದ್ರಾಂಶ್ಚ ತಥಾ ಸರ್ವಾಶ್ಚ ದೇವತಾಃ ।
ಸಹಸ್ರೇಣ ಘಟಾನಾಂ ಚ ಯುಕ್ತಃ ಸ್ನಾಯೀತ ಯೋಗವಿತ್ ॥ ೫೫ ॥

ಉದಕೇ ಕಂಠ ಮಾತ್ರೇತು ಧಾರಣಾಂ ಮೂರ್ಧ್ನಿ ಧಾರಯೇತ್ ।
ಪ್ರತಿಸ್ರೋತೋ ವಿಷಾವಿಷ್ಟೋ ಧಾರಯೇತ್ಸರ್ವಗಾತ್ರಿಕೀಂ ॥ ೫೬ ॥

ಶೀರ್ಣೈರರ್ಕಪತ್ರಪುಟಕೈಃ ಪಿಬೇದ್ವಲ್ಮೀಕ ಮೃತ್ತಿಕಾಂ ।
ಚಿಕಿತ್ಸಿತವಿಧಿರ್ಹ್ಯೇಷ ವಿಶ್ರುತೋ ಯೋಗನಿರ್ಮಿತಃ ॥ ೫೭ ॥

ವ್ಯಾಖ್ಯಾತಸ್ತು ಸಮಾಸೇನ ಯೋಗದೃಷ್ಟೇನ ಹೇತುನಾ ।
ಬ್ರುವತೋ ಲಕ್ಷಣಂ ವಿದ್ಧಿ ವಿಪ್ರಸ್ಯ ಕಥಯೇತ್ ಕ್ವಚಿತ್ ॥ ೫೮ ॥

---

೫೫. ವಿಷಯುಕ್ತನಾದ ಯೋಗಿಯು ಮನಸ್ಸಿನಲ್ಲಿ ಸಮುದ್ರಗಳನ್ನೂ, ಸಕಲ ದೇವತೆಗಳನ್ನೂ ಧ್ಯಾನಿಸಿ ಸಹಸ್ರಸಂಖ್ಯಾಕವಾದ ಕುಂಭಗಳ ಜಲದಿಂದ ಸ್ನಾನಮಾಡಿದರೆ ಆ ವಿಷವು ಪರಿಹಾರವಾಗುವುದು.

೫೬. ವಿಷಪಾನಮಾಡಿದ ಯೋಗಿಯು ಕತ್ತಿದ್ದ ನೀರಿನಲ್ಲಿ ನಿಂತುಕೊಂಡು ಶಿರಸ್ಸು ಮತ್ತು ಸರ್ವ ಅವಯವಗಳಲ್ಲಿಯೂ ವಿಷಸರ್ಗಗಳಿಂದ ಕೂಡಿರುವ ಸಕಲ ತೀರ್ಥಗಳನ್ನು ಧಾರಣಮಾಡಬೇಕು.

೫೭. ಹೀಗೆ ವಿಷಪಾನಮಾಡಿದ ಯೋಗಿಯು ಎಕ್ಕದ ಎಲೆಯ ದೊನ್ನೆಯಿಂದ ಹುತ್ತದಮಣ್ಣನ್ನು ತಿನ್ನಬೇಕು. ಈ ವಿಷಪರಿಹಾರವಾಗತಕ್ಕ ಮಾರ್ಗವು ಯೋಗಶಾಸ್ತ್ರದಲ್ಲಿ ಪ್ರಖ್ಯಾತವಾಗಿದೆ.

೫೮. ಹೀಗೆ ವಿಷಪರಿಹಾರವಾಗುವ ಮಾರ್ಗವು ಯೋಗಶಾಸ್ತ್ರದಲ್ಲಿ ಹೇಳಿದ್ದನ್ನು ಸಂಕ್ಷೇಪವಾಗಿ ನಿಮಗೆ ತಿಳಿಸಿರುವೆನು. ಅದನ್ನು ಯಾರಾದರೂ ಕೇಳಿದರೆ ಅವರಿಗೆ (ಆ ಬ್ರಾಹ್ಮಣನಿಗೆ) ಈ ಪರಿಹಾರೋಪಾಯವನ್ನು ತಿಳಿಸಬಹುದು.

ಅಥಾಪಿ ಕಥಯೇನ್ಮೋಹಾತ್ತದ್ವಿಜ್ಞಾನಂ ಪ್ರಲೀಯತೇ ।
ತಸ್ಮಾತ್ ಪ್ರವೃತ್ತಿರ್ಯೋಗಸ್ಯ ನವಕ್ತವ್ಯಾ ಕಥಂಚನ ॥ ೫೯ ॥

ಸತ್ವಂ ತಥಾರೋಗ್ಯಮಲೋಲುಪತ್ವಂ ।
ವರ್ಣಪ್ರಭಾ ಸುಸ್ವರ ಸೌಮ್ಯತಾಚ ॥
ಗಂಧಃ ಶುಭೋ ಮೂತ್ರ ಪುರೀಷಮಲ್ಪಂ ।
ಯೋಗಃ ಪ್ರವೃತ್ತಿಃ ಪ್ರಥಮಾಶರೀರೇ ॥ ೬೦ ॥

ಆತ್ಮಾನಂ ಪೃಥಿವೀಂ ಚೈವ ಜ್ವಲಂತೀಂ ಯದಿಪಶ್ಯತಿ ।
ಕೃತ್ವಾನ್ಯಂ ವಿಶತೇ ಚೈವ ವಿದ್ಯಾತ್ಸಿದ್ಧಿಮುಪಸ್ಥಿತಾಂ ॥ ೬೧ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಪಾಶುಪತಯೋಗೋ" ನಾಮ ಏಕಾದಶೋಽಧ್ಯಾಯಃ

---

೫೯. ಈ ವಿಷಪರಿಹಾರವಾಗುವ ಉಪಾಯವನ್ನು ಎಲ್ಲರೂ, ಸರ್ವಕಾಲ ದಲ್ಲಿಯೂ ಹೇಳಬಾರದು. ಹಾಗೆ ಮನಸ್ಸು ಬಂದವರಿಗೆ ಅದನ್ನು ತಿಳಿಸಿದರೆ ಆ ಸಿದ್ಧಿಯು ನಷ್ಟವಾಗುವುದು. ಆದುದರಿಂದ ಅದನ್ನು ಗೋಪ್ಯವಾಗಿಡಬೇಕು.

೬೦. ಬಲ, ಆರೋಗ್ಯ, ಅಚಾಂಚಲ್ಯ, ಕಾಂತಿ, ಸುಸ್ವರ, ಶಾಂತತೆ, ಸುಗಂಧ, ಅಲ್ಪವಾದಮೂತ್ರ, ಮಲ ಇವುಗಳು ಶರೀರದಲ್ಲಿ ಉಂಟಾದರೆ ಯೋಗಸಿದ್ಧಿಯಾಗಿದೆ ಯೆಂದು ಈ ಲಕ್ಷಣದಿಂದ ತಿಳಿಯಬೇಕು.

೬೧. ಯೋಗಿಯು ತನ್ನ ಶರೀರ ಮತ್ತು ಪೃಥಿವೀ ಇವು ಉರಿಯುತ್ತಿರು ವುದನ್ನು ನೋಡಿ ಯೋಗಮಹಿಮೆಯಿಂದ ಬೇರೆ ಶರೀರವನ್ನು ನಿರ್ಮಿಸಿ ಯಾವಾಗ ಪ್ರವೇಶಿಸಿರುತ್ತಾನೆಯೋ ಆಗ ಯೋಗಸಿದ್ಧಿಯು ಅವನಿಗೆ ಆಗಿದೆಯೆಂದು ತಿಳಿಯ ಬೇಕು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಪಾಶುಪತಯೋಗವೆಂಬ" ಹನ್ನೊಂದನೆಯ ಅಧ್ಯಾಯವು ಸಮಾಪ್ತವು.

## ಹನ್ನೊಂದನೆಯ ಅಧ್ಯಾಯದ ಸಾರಾಂಶವು

ಮಹರ್ಷಿಗಳು ಅನೇಕ ಸಹಸ್ರವರ್ಷಗಳು ತಪಸ್ಸನ್ನು ಮಾಡಿ ಯಾವ ಸಿದ್ಧಿಯನ್ನು ಪಡೆಯುವರೋ ಅವೆಲ್ಲವೂ ಪ್ರಾಣಾಯಾಮದಿಂದಲೇ ಸಿದ್ಧವಾಗುತ್ತವೆ. ಮತ್ತು ಶಾಂತಿ, ಪ್ರಶಾಂತಿ, ದೀಪ್ತಿ, ಪ್ರಸಾದವೆಂಬ ನಾಲ್ಕುವಿಧ ಸಿದ್ಧಿಗಳೂ ಉಂಟಾಗುತ್ತವೆ. ಭೂತಭವಿಷ್ಯದ್ವರ್ತಮಾನಕಾಲಗಳಲ್ಲಾಗುವ ವಸ್ತುಗಳ ಜ್ಞಾನವೂ ಉಂಟಾಗುವುದು. ಜಡತನವು ಪರಿಹಾರವಾಗುವುದು. ಯಾವ ವಿಧವಾದ ರೋಗಗಳೂ ಬರುವುದಿಲ್ಲ. ಈ ಶರೀರವು ಭಸ್ಮವಾದರೆ ಯೋಗಿಯು ಬೇರೊಂದು ಶರೀರವನ್ನು ಪ್ರವೇಶಿಸಬಲ್ಲನು. ವಿಷವು ಪ್ರಾಪ್ತವಾದರೂ ಅದನ್ನು ಯೋಗಿಯು ಪರಿಹರಿಸಿಕೊಳ್ಳುವನು. ಸೌಂದರ್ಯ, ಸೌಮ್ಯತೆ ಇವೇ ಮೊದಲಾದ ಗುಣಗಳು ಕಂಡುಬಂದರೆ ಯೋಗಸಿದ್ಧಿಯು ಉಂಟಾಗಿದೆ ಎಂದು ತಿಳಿಯಬೇಕೆಂಬ ವಿಷಯವು ಉಕ್ತವಾಗಿದೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ದ್ವಾದಶೋಽಧ್ಯಾಯಃ

॥ ಸೂತ ಉವಾಚ ॥

ಅತ ಊರ್ಧ್ವಂ ಪ್ರವಕ್ಷ್ಯಾಮಿ ಉಪಸರ್ಗಾ ಯಥಾ ತಥಾ ।
ಪ್ರಾದುರ್ಭವಂತಿ ಯೇ ದೋಷಾ ದೃಷ್ಟ ತತ್ವಸ್ಯ ದೇಹಿನಃ ॥ ೧ ॥

ಮಾನುಷ್ಯಾ ವಿವಿಧಾ ಕಾಮಾ ಕಾಮಯೇತ ಋತುಂ ಸ್ತ್ರಿಯಃ ।
ವಿದ್ಯಾದಾನಫಲಂ ಚೈವ ಉಪಸೃಷ್ಟಸ್ತು ಯೋಗವಿತ್ ॥ ೨ ॥

ಅಗ್ನಿಹೋತ್ರಂ ಹವಿರ್ಯಜ್ಞನೋ ತತ್ ಪ್ರಾಯತನಂ ತಥಾ ।
ಮಾಯಾಕರ್ಮ ಧನಂ ಸ್ವರ್ಗಮುಪಸೃಷ್ಟಸ್ತು ಕಾಂಕ್ಷತಿ ॥ ೩ ॥

---

## ಹನ್ನೆರಡನೆಯ ಅಧ್ಯಾಯವು

೧. ಸೂತನು ಹೇಳಿದನು:—ತತ್ವಜ್ಞಾನಿಯಾದ ಪುರುಷನಿಗೆ ಯಾವ ಯಾವ ಬಾಧಕಗಳು ಹೇಗೆ ಉಂಟಾಗುತ್ತವೆಯೋ, ಆ ವಿಷಯಗಳನ್ನು ನಿಮಗಾಗಿ ಈಗ ನಿರೂಪಿಸುವೆನು ಕೇಳಿ ಎಂದನು.

೨. ಯೋಗಿಯು ವಿಷಯಬಾಧೆಗಳಿಂದ ಪೀಡಿತನಾದರೆ ಮನುಷ್ಯನ ನಾನಾ ವಿಧಗಳಾದ ಕಾಮಗಳನ್ನೂ, ಋತುಮತಿಯಾಗುವ ಸ್ತ್ರೀಯನ್ನೂ, ವಿದ್ಯ, ದಾನ, ಫಲ, ಇವುಗಳನ್ನೂ ಬಯಸುವನು.

೩. ವಿಷಯಗಳಿಂದ ಪೀಡಿತನಾದ ಪುರುಷನು ಅಗ್ನಿಹೋತ್ರ, ಹವಿಸ್ಸು, ಯಜ್ಞ, ಉತ್ತಮವಾದ ಗೃಹ, ಮಾಯಾಕರ್ಮ, ದ್ರವ್ಯ ಮತ್ತು ಸರ್ಗ ಇವುಗಳನ್ನು ಅಪೇಕ್ಷಿಸುವನು.

ಏಷ ಕರ್ಮಸು ಯುಕ್ತಸ್ಯ ಸೋಽವಿದ್ಯಾವಶ ಮಾಗತಃ ।
ಉಪಸೃಷ್ಟಂ ತು ಜಾನೀಯಾತ್ ಬುಧ್ವಾ ಚೈವ ವಿಸರ್ಜಯೇತ್ ।
ನಿತ್ಯಂ ಬ್ರಹ್ಮ ಪರೋಯುಕ್ತ ಉಪಸರ್ಗಾತ್ಪ್ರಮುಚ್ಯತೇ ॥ ೪ ॥

ಜಿತಪ್ರತ್ಯುಪ ಸರ್ಗಸ್ಯ ಜಿತಶ್ವಾಸಸ್ಯ ದೇಹಿನಃ ।
ಉಪಸರ್ಗಾಃ ಪ್ರವರ್ತಂತೇ ಸಾತ್ವರಾಜಸ ತಾಮಸಾಃ ॥ ೫ ॥

ಪ್ರತಿಭಾ ಶ್ರವಣೇ ಚೈವ ದೇವಾನಾಂ ಚೈವ ದರ್ಶನಂ ।
ಭ್ರಮಾವರ್ತಶ್ಚ ಇತ್ಯೇತೇ ಸಿದ್ಧಿಲಕ್ಷಣ ಸಂಜ್ಞಿತಾಃ ॥ ೬ ॥

ವಿದ್ಯಾ ಕಾವ್ಯಂ ತಥಾ ಶಿಲ್ಪಂ ಸರ್ವಂ ವಾಚಾವೃತಾನಿ ತು ।
ವಿದ್ಯಾರ್ಥಾಶ್ಚೋಪತಿಷ್ಠಂತಿ ಪ್ರಭಾವಸ್ಯೈವ ಲಕ್ಷಣಂ ॥ ೭ ॥

ಶೃಣೋತಿ ಶಬ್ದಾನ್ ಶ್ರೋತವ್ಯಾನ್ ಯೋಜನಾನಾಂ ಶತಾದಪಿ ।
ಸರ್ವಜ್ಞಶ್ಚ ವಿಧಿಜ್ಞಶ್ಚ ಯೋಗೀಚೋನ್ಮತ್ತವದ್ಭವೇತ್ ॥ ೮ ॥

---

೪. ಕರ್ಮವಶನೂ, ಅವಿದ್ಯಾಧೀನನೂ, ಆದ ಪುರುಷನು ತನ್ನ ಬುದ್ಧಿ ಶಕ್ತಿಯಿಂದಲೇ ಇವುಗಳಲ್ಲಿರುವ ಬಾಧಕಗಳಿಲ್ಲವನ್ನೂ ಅರಿತು ಅವನ್ನು ಬಿಡಬೇಕು. ಬ್ರಹ್ಮಜ್ಞಾನಿಯಾದವನು ಈ ಉಪದ್ರವಗಳಿಗೆ ಸಿಕ್ಕದೆ ಮುಕ್ತನಾಗುವನು.

೫. ಈ ಉಪದ್ರವಗಳನ್ನೂ ಶ್ವಾಸೋಚ್ಛ್ವಾಸಗಳನ್ನೂ ಜಯಿಸಿರುವ ಯೋಗಿಗೆ ಸಾತ್ವಿಕ ರಾಜಸ ತಾಮಸಗಳಾದ ಬಾಧೆಗಳುಂಟಾಗುವುದಿಲ್ಲ.

೬. ನೂತನವಾದ ಬುದ್ಧಿಶಕ್ತಿ, ಶ್ರವಣ ದೇವತೆಗಳ ದರ್ಶನ, ಸಂಚಾರ, ಭ್ರಮಣ ಇವುಗಳು ಯೋಗಾಭ್ಯಾಸದಿಂದ ಉಂಟಾಗುವ ಫಲಗಳಾಗಿವೆ.

೭. ಯೋಗಪ್ರಭಾವದಿಂದ ಯೋಗಿಗಳಿಗೆ ವಿದ್ಯೆ, ಕಾವ್ಯ, ಶಿಲ್ಪ, ವಾಕ್ಚಾತುರ್ಯ, ವಿದ್ಯಾಫಲ, ಇವುಗಳುಂಟಾಗುತ್ತವೆ.

೮. ಯೋಗಿಯಾದವನು ನೂರಾರು ಯೋಜನಗಳ ದೂರದಿಂದ ಉತ್ಪನ್ನವಾಗುವ ಧ್ವನಿಯನ್ನು ಕೇಳಬಲ್ಲನು. ಮತ್ತು ಸರ್ವಜ್ಞನೂ, ಸರ್ವವಿಧಿಗಳನ್ನೂ ತಿಳಿದವನೂ ಆಗಿ ಹುಚ್ಚನಂತೆ ನಿರ್ಲಿಪ್ತನಾಗುವನು.

ಯಕ್ಷರಾಕ್ಷಸ ಗಂಧರ್ವಾನ್ ವೀಕ್ಷತೇ ದಿವ್ಯ ಮಾನುಷಾನ್ ।
ವೇತ್ತಿ ತಾಂಶ್ಚ ಮಹಾಯೋಗೀ ಉಪಸರ್ಗಸ್ಯ ಲಕ್ಷಣಂ ॥ ೯ ॥

ದೇವದಾನವ ಗಂಧರ್ವಾನ್ ಋಷೀಂಶ್ಚಾಪಿ ತಥಾ ಪಿತ್ರ್ಯಾನ್ ।
ಪ್ರೇಕ್ಷತೇ ಸರ್ವತಶ್ಚೈವ ಉನ್ಮತ್ತಂ ತಂ ವಿನಿರ್ದಿಶೇತ್ ॥ ೧೦ ॥

ಭ್ರಮೇಣ ಭ್ರಾಮ್ಯತೇ ಯೋಗೀ ಚೋದ್ಯಮಾನೋಂತರಾತ್ಮನಾ ।
ಭ್ರಮೇಣ ಭ್ರಾಂತಬುದ್ಧೇಸ್ತು ಜ್ಞಾನಂ ಸರ್ವಂ ಪ್ರಣಶ್ಯತಿ ॥ ೧೧ ॥

ವಾರ್ತಾನಾಶಯತೇ ಚಿತ್ತಂ ಚೋದ್ಯಮಾನೋಂತರಾತ್ಮನಾ ।
ವರ್ತನಾಕ್ರಾಂತಬುದ್ಧೇಸ್ತು ಸರ್ವಂ ಜ್ಞಾನಂ ಪ್ರಣಶ್ಯತಿ ॥ ೧೨ ॥

ಆವೃತ್ತ್ಯ ಮನಸಾ ಶುಕ್ಲಂ ಪಟಂ ವಾ ಕಂಬಲಂ ತಥಾ ।
ತತಸ್ತು ಪರಮಂ ಬ್ರಹ್ಮ ಕ್ಷಿಪ್ರಮೇವಾನು ಚಿಂತಯೇತ್ ॥ ೧೩ ॥

---

೯. ಮಹಾಯೋಗಿಯು ಉಪಸರ್ಗಸಿದ್ಧಿಯನ್ನು ಪಡೆದರೆ ಯಕ್ಷರು, ರಾಕ್ಷಸರು, ಗಂಧರ್ವರು, ದಿವ್ಯಪುರುಷರು, ಇವರನ್ನು ಪ್ರತ್ಯಕ್ಷವಾಗಿ ನೋಡುವನು.

೧೦ ಯೋಗಸಿದ್ಧಿಯನ್ನು ಹೊಂದಿದ ಯೋಗಿಯು ದೇವ, ದಾನವ, ಗಂಧರ್ವ, ಋಷಿ ಮತ್ತು ಪಿತೃ ಇವರನ್ನು ಸರ್ವತ್ರದಲ್ಲಿಯೂ ಸಾಕ್ಷಾತ್ತಾಗಿ ನೋಡುವನು. ಅವನನ್ನು ಜನರು ಉನ್ಮತ್ತನೆಂದು ಹೇಳುವರು.

೧೧. ಯೋಗಿಯು ಅಂತರಾತ್ಮನಿಂದ ಪ್ರೇರಿತನಾಗಿ ಭ್ರಾಂತಿಯಿಂದ ಅಲೆದಾಡುತ್ತಾನೆ. ಹೀಗೆ ಭ್ರಾಂತಿಯಿಂದ ಬುದ್ಧಿಯು ಸಂಪೂರ್ಣವಾಗಿ ಕೂಡಿದ್ದೇ ಆದರೆ ಜಗದ್ವಿಷಯಕವಾದ ಜ್ಞಾನವೆಲ್ಲವೂ ಹೋಗಿ ಬ್ರಹ್ಮಜ್ಞಾನಿಯಾಗುವನು.

೧೨. ಅವನ ಅತ್ಯಧಿಕವೂ ಜಗದ್ವಿಷಯಕವೂ ಆದ ತಿಳುವಳಿಕೆಯು ಅಂತರಾತ್ಮನಿಂದ ಪ್ರೇರಿತವಾಗಿ ಚಿತ್ತವನ್ನೇ ಭ್ರಾಂತಿಗೊಳಿಸುತ್ತದೆ. ಈ ರೀತಿಯಾದ ತಿಳುವಳಿಕೆಯಿಂದ ಸಾಮಾನ್ಯವಾದ ಬುದ್ಧಿಯೆಲ್ಲವೂ ನಷ್ಟವಾಗಿ ಕೊನೆಗೆ ಬ್ರಹ್ಮವಿಷಯಕವಾದ ಜ್ಞಾನವು ಉದಯಿಸುವುದು.

೧೩. ಯೋಗಿಯು ಶುಭ್ರವಾದ ವಸ್ತ್ರವನ್ನು ಅಥವಾ ಕಂಬಳಿಯನ್ನಾಗಲೀ, ಹೊದ್ದುಕೊಂಡು ತನ್ನ ಮನಸ್ಸಿನಿಂದ ಸರ್ವದಾ ಪರಬ್ರಹ್ಮನನ್ನು ಬೇಗನೆ ಚಿಂತಿಸಬೇಕು.

ತಸ್ಮಾಚ್ಚೈವಾತ್ಮನೋ ದೋಷಾಂಸ್ತೂಪಸರ್ಗಾನುಪಸ್ಥಿತಾನ್ ।
ಪರಿತ್ಯಜೇತ ಮೇಧಾವೀ ಯದೀಚ್ಛೇತ್ ಸಿದ್ಧಿಮಾತ್ಮನಃ ॥ ೧೪ ॥

ಋಷಯೋ ದೇವಗಂಧರ್ವಾ ಯಕ್ಷೋರಗ ಮಹಾಸುರಾಃ ।
ಉಪಸರ್ಗೇಷು ಸಂಯುಕ್ತಾ ಆವರ್ತಂತೇ ಪುನಃ ಪುನಃ ॥ ೧೫ ॥

ತಸ್ಮಾದ್ಯುಕ್ತಃ ಸದಾ ಯೋಗೀ ಲಘ್ವಾಹಾರೀ ಜಿತೇಂದ್ರಿಯಃ ।
ತಥಾ ಸುಪ್ತಃ ಸುಸೂಕ್ಷ್ಮೇಷು ಧಾರಣಾಂ ಮೂರ್ಧ್ನಿ ಧಾರಯೇತ್ ॥ ೧೬ ॥

ತತಸ್ತು ಯೋಗಯುಕ್ತಸ್ಯ ಜಿತನಿದ್ರಸ್ಯ ಯೋಗಿನಃ ।
ಉಪಸರ್ಗಾಃ ಪುನಶ್ಚಾಂತೇ ಜಾಯಂತೇ ಪ್ರಾಣಸಂಜ್ಞಿಕಾಃ ॥ ೧೭ ॥

ಪೃಥಿವೀಂ ಧಾರಯೇತ್ಸರ್ವಾಂ ತತಶ್ಚಾಪೋ ಹ್ಯನಂತರಂ ।
ತತೋಽಗ್ನಿಂಚೈವ ಸರ್ವೇಷಾಮಾಕಾಶಂ ಮನ ಏವ ಚ ॥ ೧೮ ॥

---

೧೪. ಆದುದರಿಂದ ಮೇಧಾವಿಯಾದ ಪುರುಷನು ತನಗೆ ಯೋಗಸಿದ್ಧಿಯನ್ನು ಬಯಸಿದವನಾದರೆ ತನ್ನಲ್ಲಿ ದೋಷರೂಪವಾದ ಉಪದ್ರವಗಳು ಬಾರದಂತೆ ಜಾಗರೂಕನಾಗಿರಬೇಕು.

೧೫. ಋಷಿಗಳು, ದೇವತೆಗಳು, ಗಂಧರ್ವರು, ಯಕ್ಷರು, ಉರಗಗಳು, ಮಹಾಸುರರು, ಇವರೇ ಮೊದಲಾದವರು ಉಪಸರ್ಗವೆಂಬ ದೋಷದಿಂದ ಕೂಡಿದವರಾಗಿ ಈ ಲೋಕದಲ್ಲಿ ಜನನಮರಣವನ್ನು ಪುನಃ ಪುನಃ ಹೊಂದುವರು.

೧೬. ಆದುದರಿಂದ ಯೋಗಿಯು ಯೋಗಾಭ್ಯಾಸನಿರತನೂ, ಮಿತಾಹಾರಿಯೂ ಜಿತೇಂದ್ರಿಯನೂ, ಸುಪ್ತನೂ, ಆಗಿ ಸೂಕ್ಷ್ಮಗಳಾದ ವಿಷಯಗಳನ್ನು ಶಿರಸ್ಸಿನಿಂದ ಧಾರಣೆ ಮಾಡಬೇಕು.

೧೭. ಅನಂತರ ಯೋಗನಿರತನೂ, ಜಿತೇಂದ್ರಿಯನೂ, ಆದ ಯೋಗಿಗೆ ಈ ಉಪಸರ್ಗಗಳು ಪ್ರಾಣನಾಮಕಗಳಾಗಿ ಕೊನೆಗೆ ಪುನಃ ಜನಿಸುತ್ತವೆ.

೧೮. ಯೋಗಿಯು ಮೊದಲು ಸಮಸ್ತವಾದ ಭೂಮಂಡಲವನ್ನೂ, ಅನಂತರ ಜಲವನ್ನೂ, ತರುವಾಯ ಅಗ್ನಿಯನ್ನೂ, ಅನಂತರ ಆಕಾಶ ಮತ್ತು ಮನಸ್ಸನ್ನೂ ಕೂಡ ಧಾರಣೆಮಾಡಬೇಕು.

**ತತಃ ಪರಾಂ ಪುನರ್ಬುದ್ಧಿಂ ಧಾರಯೇದ್ಯತ್ನತೋ ಯತಿಃ ।**
**ಸಿದ್ಧೀನಾಂಚೈವ ಲಿಂಗಾನಿ ಧೃಷ್ಟ್ವಾ ದೃಷ್ಟ್ವಾ ಪರಿತ್ಯಜೇತ್ ॥ ೧೯ ॥**

**ಪೃಥ್ವೀಂ ಧಾರಯಮಾಣಸ್ಯ ಮಹೀ ಸೂಕ್ಷ್ಮಾ ಪ್ರವರ್ತತೇ ।**
**ಆಪೋ ಧಾರಯಮಾಣಸ್ಯ ಆಪಃ ಸೂಕ್ಷ್ಮಾ ಭವಂತಿ ಹಿ ॥**
**ಶೀತಾ ರಸಾಃ ಪ್ರವರ್ತಂತೇ ಸೂಕ್ಷ್ಮಾ ಹ್ಯಮೃತಸನ್ನಿಭಾಃ ॥ ೨೦ ॥**

**ತೇಜೋ ಧಾರಯಮಾಣಸ್ಯ ತೇಜಃ ಸೂಕ್ಷ್ಮಂ ಪ್ರವರ್ತತೇ ।**
**ಆತ್ಮಾನಂ ಮನ್ಯತೇ ತೇಜಸ್ತದ್ಭಾವ ಮನುಪಶ್ಯತಿ ॥ ೨೧ ॥**

**ಆತ್ಮಾನಂ ಮನ್ಯತೇ ವಾಯುಂ ವಾಯುವನ್ಮಂಡಲಂ ಪ್ರಭೋ ।**
**ಆಕಾಶಂ ಧಾರಾಯಾಣಸ್ಯ ವ್ಯೋಮ ಸೂಕ್ಷ್ಮಂ ಪ್ರವರ್ತತೇ ॥ ೨೨ ॥**

---

೧೯. ನಂತರ ಯತಿಯು ಪ್ರಯತ್ನಪೂರ್ವಕವಾಗಿ ಬೇರೊಂದು ಸಿದ್ಧಿಯನ್ನು ಉತ್ತಮವೆಂದು ಭಾವಿಸಿ ಧಾರಣೆಮಾಡಬೇಕು. ತರುವಾಯ ಸಿದ್ಧಿಗಳ ಚಿನ್ಹೆಗಳನ್ನು ತಿಳಿದು ಅವುಗಳನ್ನು ಬಿಡುತ್ತಾ ಬರಬೇಕು.

೨೦. ಪೃಥ್ವಿಯನ್ನು ಧಾರಣೆಮಾಡಿ ಸಿದ್ಧಿಯನ್ನು ಪಡೆದ ಯೋಗಿಗೆ ಪೃಥ್ವಿಯು ಸೂಕ್ಷ್ಮರೂಪವಾಗಿಯೂ, ಆಗುತ್ತದೆ. ಶೀತವಾದ ರಸಗಳೂ ಸಹ ಅವನಿಗೆ ಅಮೃತ ಪ್ರಾಯಗಳಾಗುತ್ತವೆ.

೨೧. ತೇಜಸ್ಸನ್ನು ಧಾರಣೆಮಾಡಿದವನಿಗೆ ಅಗ್ನಿಯು ಸೂಕ್ಷ್ಮರೂಪವಾಗಿ ತಿಳಿಯುಬರುವುದು. ತರುವಾಯ ಯೋಗಿಯು ತನ್ನನ್ನು ತೇಜೋಮಯನನ್ನಾಗಿ ಭಾವಿಸುವನು.

೨೨. ವಾತವನ್ನು ಧಾರಣೆಮಾಡಿದ ಯೋಗಿಗೆ ಆತ್ಮನು ವಾಯುಮಂಡಲ ರೂಪನಾಗಿ ಕಾಣಿಸುತ್ತಾನೆ. ಹೀಗೆಯೇ ಆಕಾಶವನ್ನು ಧಾರಣೆಮಾಡಿದವನಿಗೆ ಆಕಾಶವು ಸೂಕ್ಷ್ಮರೂಪವಾಗಿ ಗೋಚರವಾಗುವುದು.

ಪಶ್ಯತೇ ಮಂಡಲಂ ಸೂಕ್ಷ್ಮಂ ಘೋಷಶ್ಚಾಸ್ಯ ಪ್ರವರ್ತತೇ
ಆತ್ಮಾನಂ ಮನ್ಯತೇ ನಿತ್ಯಂ ವಾಯುಃ ಸೂಕ್ಷ್ಮಃ ಪ್ರವರ್ತತೇ ॥ ೨೩ ॥

ತಥಾ ಮನೋ ಧಾರಯತೋ ಮನಃ ಸೂಕ್ಷ್ಮಂ ಪ್ರವರ್ತತೇ ।
ಮನಸಾ ಸರ್ವಭೂತಾನಾಂ ಮನಸ್ತು ವಿಶತೇ ಹಿ ಸಃ ।
ಬುದ್ಧ್ಯಾ ಬುದ್ಧಿಂ ಯದಾ ಯುಂಜೇತ್ತದಾ ವಿಜ್ಞಾಯ ಬುದ್ಧ್ಯತೇ ॥ ೨೪ ॥

ಏತಾನಿ ಸಪ್ತ ಸೂಕ್ಷ್ಮಾಣಿ ವಿದಿತ್ವಾಯಸ್ತು ಯೋಗವಿತ್ ।
ಪರಿತ್ಯಜತಿ ಮೇಧಾವೀ ಸ ಬುದ್ಧ್ಯಾ ಪರಮಂ ವ್ರಜೇತ್ ॥ ೨೫ ॥

ಯಸ್ಮಿನ್ ಯಸ್ಮಿಂಶ್ಚ ಸಂಯುಕ್ತೋ ಭೂತ ಐಶ್ವರ್ಯಲಕ್ಷಣೇ ।
ತತ್ರೈವ ಸಂಗಂ ಭಜತೇ ತೇನೈವ ಪ್ರವಿನಶ್ಯತಿ ॥ ೨೬ ॥

---

೨೩. ಆಕಾಶವನ್ನು ಧಾರಣೆಮಾಡಿದ ಯೋಗಿಗೆ ಶಬ್ದವು ಸೂಕ್ಷ್ಮರೂಪವಾಗಿ ತಿಳಿದುಬರುತ್ತದೆ. ವಾಯುವನ್ನು ಧಾರಣೆಮಾಡಿದ ಯತಿಗೆ ವಾಯುವು ಸೂಕ್ಷ್ಮ ರೂಪವಾಗಿ ಗೋಚರವಾಗುವುದು. ಆಗ ತನ್ನನ್ನು ನಿತ್ಯನನ್ನಾಗಿ ಭಾವಿಸುವನು.

೨೪. ಅನಂತರ ಮನಸ್ಸಿದ್ಧಿಯುಳ್ಳ ಯೋಗಿಗೆ ಮನಸ್ಸು ಸೂಕ್ಷ್ಮರೂಪ ವಾಗುತ್ತದೆ. ಅವನು ಸೂಕ್ಷ್ಮರೂಪವಾದ ಸರ್ವರ ಮನಸ್ಸನ್ನೂ ಪ್ರವೇಶಿಸಿ ಅದನ್ನು ತಿಳಿಯುತ್ತಾನೆ. ಮತ್ತು ಬುದ್ಧಿಸಿದ್ಧಿಯುಳ್ಳವನು ಸೂಕ್ಷ್ಮವಾದ ಪರರ ಬುದ್ಧಿಯನ್ನು ತಿಳಿದು ಅದನ್ನು ತನ್ನ ವಶವನ್ನಾಗಿ ಮಾಡಿಕೊಳ್ಳುವನು.

೨೫. ಯಾವ ಯೋಗಿಯು ಸೂಕ್ಷ್ಮವಾದ ಈ ಏಳು ವಿಷಯಗಳನ್ನೂ ತಿಳಿದು ತ್ಯಜಿಸುತ್ತಾನೆಯೋ ಅಂತಹ ಜ್ಞಾನಿಯಾದ ಯೋಗಿಯು ತನ್ನ ಬುದ್ಧಿಶಕ್ತಿ ಯಿಂದ ಉತ್ತಮಗತಿಯನ್ನು ಪಡೆಯುವನು.

೨೬. ಯೋಗಿಯು ಐಶ್ವರ್ಯರೂಪವಾದ ಯಾವ ಯಾವ ಭೂತಗಳಲ್ಲಿ ಸಿದ್ಧಿ ಯನ್ನು ಪಡೆಯುತ್ತಾನೋ ಆಯಾ ವಿಷಯಗಳಲ್ಲಿಯೇ ಆಸಕ್ತನಾಗುವನು. ಆದರಿಂದಲೇ ಕೊನೆಗೆ ನಾಶವಾಗುವನು.

ತಸ್ಮಾದ್ವಿದಿತ್ವಾ ಸೂಕ್ಷ್ಮಾಣಿ ಸಂಸಕ್ತಾನಿ ಪರಸ್ಪರಂ ।
ಪರಿತ್ಯಜತಿ ಯೋ ಬುದ್ಧ್ಯಾ ಸ ಪರಂ ಪ್ರಾಪ್ನುಯಾ ದ್ವಿಜಃ ॥ ೨೭ ॥

ದೃಶ್ಯಂತೇ ಹಿ ಮಹಾತ್ಮಾನ ಋಷಯೋ ದಿವ್ಯಚಕ್ಷುಷಃ ।
ಸಂಸಕ್ತಾಃ ಸೂಕ್ಷ್ಮಭಾವೇಷು ತೇ ದೋಷಾಸ್ತೇಷು ಸಂಜ್ಞಿತಾಃ ॥ ೨೮ ॥

ತಸ್ಮಾನ್ನ ನಿಶ್ಚಯಃ ಕಾರ್ಯಃ ಸೂಕ್ಷ್ಮೇಷ್ವಿಹ ಕದಾಚನ ।
ಐಶ್ವರ್ಯಾಜ್ಜಾಯತೇರಾಗೋ ವಿರಾಗಂ ಬ್ರಹ್ಮ ಚೋಚ್ಯತೇ ॥ ೨೯ ॥

ವಿದಿತ್ವಾ ಸಪ್ತ ಸೂಕ್ಷ್ಮಾಣಿ ಷಡಂಗಂ ಚ ಮಹೇಶ್ವರಂ ।
ಪ್ರಧಾನಂ ವಿನಿಯೋಗಜ್ಞಃ ಪರಂ ಬ್ರಹ್ಮಾದಿ ಗಚ್ಛತಿ ॥ ೩೦ ॥

---

೨೭. ಆದುದರಿಂದ ಯಾವ ಯೋಗಿಯು ಪರಸ್ಪರಸಂಬಂಧಗಳಾದ ಈ ಸೂಕ್ಷ್ಮ ವಿಷಯಗಳನ್ನು ತಿಳಿದು ಅವುಗಳ ಗುಣದೋಷಗಳನ್ನು ತನ್ನ ಬುದ್ಧಿಶಕ್ತಿಯಿಂದ ಯೋಚಿಸಿ ಅವುಗಳನ್ನು ತ್ಯಜಿಸುತ್ತಾನೋ ಅಂತಹ ವಿಪ್ರನೇ ಉತ್ತಮಗತಿಯನ್ನು ಪಡೆಯುವನು.

೨೮. ದಿವ್ಯಜ್ಞಾನಿಗಳೂ, ಮಹಾತ್ಮರೂ ಆದ ಮಹರ್ಷಿಗಳನೇಕರು ಪ್ರಾಪಂಚಿಕ ವಿಷಯಗಳಲ್ಲಿ ಆಸಕ್ತರಾದರೆ ದೋಷಿಗಳಾಗಿಯೂ, ಬದ್ಧರಾಗಿಯೂ ಕೊನೆಗೆ ವಿವೇಚನೆಯಿಂದ ಮುಕ್ತರಾಗಿಯೂ ಆಗುವರು ಎಂಬ ವಿಷಯವು ತಿಳಿದು ಬರುತ್ತದೆ.

೨೯. ಆದುದರಿಂದ ಯೋಗಿಯು ಸೂಕ್ಷ್ಮವಿಷಯಗಳಲ್ಲಿ ಆಸಕ್ತನಾದರೇ ಬದ್ಧನಾಗುವನು. ಆದುದರಿಂದ ಅವುಗಳಲ್ಲಿ ಆಸಕ್ತನಾಗಿರಬಾರದು. ಆಸಕ್ತಿಯಿಂದ ಅನುರಾಗವೂ, ವೈರಾಗ್ಯದಿಂದ ಬ್ರಹ್ಮಪ್ರಾಪ್ತಿಯೂ ಆಗುವುದು.

೩೦. ಯೋಗಿಯು ಸೂಕ್ಷ್ಮವಾದ ಸಪ್ತವಿಷಯಗಳನ್ನೂ ಈಶ್ವರಸಂಬಂಧಿಯಾದ ಷಡಂಗಗಳನ್ನೂ, ಪ್ರಕೃತಿಯನ್ನೂ ತಿಳಿದು ಪರಬ್ರಹ್ಮನನ್ನು ಪಡೆಯುವನು.

ಸರ್ವಜ್ಞತಾ ತೃಪ್ತಿರನಾದಿಬೋಧಃ ।
ಸ್ವತಂತ್ರತಾ ನಿತ್ಯಮಲುಪ್ತ ಶಕ್ತಿಃ ॥
ಅನಂತಶಕ್ತಿಶ್ಚ ವಿಭೋರ್ವಿಧಿಜ್ಞಾಃ ।
ಷಡಾಂಹುರಂಗಾನಿ ಮಹೇಶ್ವರಸ್ಯ ॥ ೩೧ ॥

ನಿತ್ಯಂ ಬ್ರಹ್ಮಧನೋ ಯುಕ್ತ ಉಪಸರ್ಗೈಃ ಪ್ರಮುಚ್ಯತೇ ।
ಜಿತಶ್ವಾಸೋಪಸರ್ಗಸ್ಯ ಜಿತರಾಗಸ್ಯ ಯೋಗಿನಃ ।
ಏಕಾ ಬಹಿಃ ಶರೀರೇಸ್ಮಿನ್ ಧಾರಣಾ ಸರ್ವಕಾಮಿಕೀ ॥ ೩೨ ॥

ವಿಶೇದ್ಯದಾ ದ್ವಿಜೋ ಯುಕ್ತೋ ಯತ್ರ ಯತ್ರಾರ್ಪಯೇನ್ಮನಃ ।
ಭೂತಾನ್ಯಾ ವಿಷತೇ ವಾಪಿ ತ್ರೈಲೋಕ್ಯಂ ಚಾಪಿ ಕಂಪಯೇತ್ ॥ ೩೩ ॥

ಏತಯಾ ಪ್ರವಿಶೇದ್ದೇಹಂ ಹಿತ್ವಾ ದೇಹಂ ಪುನಸ್ತ್ವಿಹ ।
ಮನೋದ್ವಾರಂ ಹಿ ಯೋಗಾನಾಮಾದಿತ್ಯಂ ಚ ವಿನಿರ್ದಿಶೇತ್ ॥ ೩೪ ॥

---

೩೧. ಜ್ಞಾನಿಗಳು ಸರ್ವಜ್ಞತೇ, ತೃಪ್ತಿ, ಅನಾದಿಬೋಧ, ಸ್ವತಂತ್ರತೇ, ನಿತ್ಯವೂ ಲುಪ್ತವೂ ಆದಶಕ್ತಿ, ಅನಂತಶಕ್ತಿ ಇವು ಆರೂ ಸ್ವಾಮಿಯಾದ ಮಹೇಶ್ವರನ ಅಂಗಗಳೆಂಬುದಾಗಿ ಹೇಳುವರು.

೩೨. ಬ್ರಹ್ಮನೇ ಧನವಾಗಿಯುಳ್ಳ ಯೋಗಿಯು ಅಂದರೆ ಬ್ರಹ್ಮಜ್ಞಾನಿಯಾದ ಯೋಗಿಯು, ಉಪಸರ್ಗಗಳಿಂದ ಬಿಡಲ್ಪಡುತ್ತಾನೆ. ಹೀಗೆ ಜಿತೇಂದ್ರಿಯನೂ, ದೋಷಶೂನ್ಯನೂ, ಜಿತರಾಗನೂ, ಆದ ಯೋಗಿಗೆ ಬಾಹ್ಯಶರೀರದಲ್ಲಿ ಧಾರಣೆ ಯುಂಟಾಗಿ ಸಕಲೇಷ್ಟಸಿದ್ಧಿಗಳೂ ಉಂಟಾಗುತ್ತವೆ.

೩೩. ಬ್ರಾಹ್ಮಣನು ಯಾವಾಗ ಯೋಗಾರೂಢನಾಗಿ ಸಕಲ ಪದಾರ್ಥಗಳಲ್ಲಿಯೂ ಮನಸ್ಸನ್ನು ಸ್ಥಿರೀಕರಿಸಿ ಭೂತಾದಿಗಳಲ್ಲಿ ಪ್ರವೇಶಿಸುತ್ತಾನೋ, ಆಗ ಅವನು ಈ ಮೂರು ಲೋಕಗಳನ್ನೂ ಕಂಪಿಸುವನು. (ಅಲ್ಲಾಡಿಸುವನು)

೩೪. ಯೋಗಿಯು ಈ ಯೋಗಶಕ್ತಿಯಿಂದ ತನ್ನ ದೇಹವನ್ನು ಬಿಟ್ಟು, ಮತ್ತೊಂದು ಶರೀರವನ್ನು ಪ್ರವೇಶಿಸಿ ಪುನಃ ತನ್ನ ಶರೀರವನ್ನೇ ಹೊಂದಬಲ್ಲನು. ಸರ್ವಕ್ಕೂ ಮನಸ್ಸೇ ಮುಖ್ಯಕಾರಣವಾಗಿದೆ. ಇಂತಹ ಸ್ಥಿರಮನಸ್ಕನಾದ ಯೋಗಿಯು ಅಕಾಲದಲ್ಲಿಯೂ ಸೂರ್ಯನನ್ನು ತೋರಿಸಬಲ್ಲನು.

ಆದಾನಾದಿಕ್ರಿಯಾಣಾಂ ತು ಆದಿತ್ಯ ಇತಿ ಚೋಚ್ಯತೇ ।
ಏತೇನ ವಿಧಿನಾ ಯೋಗೀ ವಿರಕ್ತಃ ಸೂಕ್ಷ್ಮವರ್ಜಿತಃ ।
ಪ್ರಕೃತಿಂ ಸಮತಿಕ್ರಮ್ಯ ರುದ್ರಲೋಕೇ ಮಹೀಯತೇ ॥ ೩೫ ॥

ಐಶ್ವರ್ಯಗುಣಸಂಪ್ರಾಪ್ತಂ ಬ್ರಹ್ಮಭೂತಂ ತು ತಂ ಪ್ರಭುಂ ।
ದೇವಸ್ಥಾನೇಷು ಸರ್ವೇಷು ಸರ್ವತಸ್ತು ನಿವರ್ತತೇ ॥ ೩೬ ॥

ಪೈಶಾಚೇನ ಪಿಶಾಚಾಂಶ್ಚ ರಾಕ್ಷಸೇನ ಚ ರಾಕ್ಷಸಾನ್ ।
ಗಾಂಧರ್ವೇಣ ಚ ಗಂಧರ್ವಾನ್ ಕೌಬೇರೇಣ ಕುಬೇರಜಾನ್ ॥ ೩೭ ॥

ಇಂದ್ರಮೈಂದ್ರೇಣ ಸ್ಥಾನೇನ ಸೌಮ್ಯಂ ಸೌಮ್ಯೇನ ಚೈವ ಹಿ ।
ಪ್ರಜಾಪತಿಂ ತಥಾ ಚೈವ ಪ್ರಾಜಾಪತ್ಯೇನ ಸಾಧಯೇತ್ ॥ ೩೮ ॥

ಬ್ರಾಹ್ಮಂ ಬ್ರಾಹ್ಮ್ಯೇನ ಚಾಪ್ಯೇವಮುಪಾಮಂತ್ರಯತೇ ಪ್ರಭುಂ ।
ತತ್ರ ಸಕ್ತಸ್ತು ಉನ್ಮತ್ತಸ್ತಸ್ಮಾತ್ಸರ್ವಂ ಪ್ರವರ್ತತೇ ॥ ೩೯ ॥

---

೩೫. ಆದಾನಾದಿಕ್ರಿಯೆಗಳಿಗೆ "ಆದಿತ್ಯ"ವೆಂಬ ಸಂಜ್ಞೆಯುಂಟಾಗಿದೆ. ಈ ಕ್ರಮದಿಂದ ಯೋಗಿಯು ವಿರಕ್ತನೂ, ಸ್ಥೂಲಜ್ಞನೂ, ಆಗಿ ಪ್ರಕೃತಿಯನ್ನು ಮೀರಿ ಕೈಲಾಸಲೋಕದಲ್ಲಿ ಪೂಜ್ಯನಾಗುವನು.

೩೬. ಸಕಲೈಶ್ವರ್ಯಸಂಪನ್ನನೂ, ಸಕಲಗುಣವಂತನೂ, ಬ್ರಹ್ಮಸ್ವರೂಪನೂ ಸ್ವಾಮಿಯೂ ಆದ ಆ ಮಹೇಶ್ವರನು ಸರ್ವದೇವಾಲಯಗಳಲ್ಲಿಯೂ, ಮತ್ತು ಸರ್ವಜಗತ್ತಿನಲ್ಲಿಯೂ ಇರುವುದನ್ನು ಯೋಗಿಯು ತಿಳಿಯುವನು.

೩೭-೩೮ ಯೋಗಿಯು ಪಿಶಾಚರೂಪದಿಂದ ಪಿಶಾಚಗಳ ಸ್ಥಾನವನ್ನೂ, ರಾಕ್ಷಸರರೂಪದಿಂದ ರಾಕ್ಷಸರ ಸ್ಥಾನವನ್ನೂ, ಗಂಧರ್ವಾಕಾರದಿಂದ ಗಂಧರ್ವರ ಸ್ಥಾನವನ್ನೂ, ಕುಬೇರಾಕಾರದಿಂದ ಕುಬೇರನ ಸ್ಥಾನವನ್ನೂ, ಇಂದ್ರರೂಪದಿಂದ ಇಂದ್ರನ ಸ್ಥಾನವನ್ನೂ, ಚಂದ್ರರೂಪದಿಂದ ಅವನ ಪ್ರದೇಶವನ್ನೂ, ಬ್ರಹ್ಮರೂಪದಿಂದ ಬ್ರಹ್ಮನ ಸ್ಥಾನವನ್ನೂ, ಸಾಧಿಸಬೇಕು.

೩೯. ಯೋಗಿಯು ಹೀಗೆ ಬ್ರಹ್ಮಸ್ವರೂಪದಿಂದ ಬ್ರಹ್ಮನನ್ನು ಹೊಂದಿ ಆ ಪ್ರಭುವನ್ನು ಸೇವಿಸಬೇಕು. ಬ್ರಹ್ಮಾಸಕ್ತನಾದ ಯೋಗಿಯು ಉನ್ಮತ್ತನಂತೆ ವಿರಕ್ತನಾಗುವನು. ಅವನಿಗೆ ಸರ್ವಸಿದ್ಧಿಯೂ ಉಂಟಾಗುವುದು.

**ನಿತ್ಯಂ ಬ್ರಹ್ಮಪರೋ ಯುಕ್ತಃ ಸ್ಥಾನಾನ್ಯೇತಾನಿ ವೈ ತ್ಯಜೇತ್ ।**
**ಅಸಜ್ಯಮಾನಃ ಸ್ಥಾನೇಷು ದ್ವಿಜಃ ಸರ್ವಗತೋ ಭವೇತ್ ॥ ೪೦ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ ಯೋಗೋಪಸರ್ಗ ನಿರೂಪಣಂ ನಾಮ ದ್ವಾದಶೋಽಧ್ಯಾಯಃ**

---

೪೦. ಆದುದರಿಂದ ಯೋಗಾಸಕ್ತನಾದ ವಿಪ್ರನು ನಿರಂತರದಲ್ಲಿಯೂ ಬ್ರಹ್ಮ ಜ್ಞಾನಿಯಾಗಿ ಪೂರ್ವೋಕ್ತಗಳಾದ ಸರ್ವಸ್ಥಾನಗಳನ್ನೂ ತ್ಯಜಿಸಬೇಕು. ಹೀಗೆ ಸರ್ವತ್ರದಲ್ಲಿಯೂ ವಿರಕ್ತನಾದ ಯೋಗಿಯು ಸರ್ವವ್ಯಾಪಿಯಾಗುವನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಯೋಗೋಪಸರ್ಗನಿರೂಪಣ " ವೆಂಬ ಹನ್ನೆರಡನೆಯ ಅಧ್ಯಾಯವು ಸಮಾಪ್ತವು

## ಹನ್ನೆರಡನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ನಾನಾವಿಧ ವಿಷಯಸುಖಗಳಿಂದುಂಟಾಗುವ ಉಪದ್ರವಗಳನ್ನರಿತು ಅವನ್ನು ತ್ಯಜಿಸಿ ನಿತ್ಯಸುಖವನ್ನು ಪಡೆಯಬೇಕೆಂಬ ವಿಷಯವು ಉಕ್ತವಾಗಿದೆ. ಯೋಗಿಯು ನಾನಾ ವಿಷಯಗಳಲ್ಲಿ ಆಸಕ್ತನಾದರೆ ನಾನಾ ತೊಂದರೆಗಳಿಗೆ ಗುರಿಯಾಗುವನು. ಹೀಗೆ ವಿಷಯಗಳಲ್ಲಿ ಆಸಕ್ತನಾದರೆ ಬುದ್ಧಿಶಕ್ತಿಯಿಂದ ವಿಮರ್ಶಿಸಿ ಉಪಸರ್ಗದಿಂದ ಮುಕ್ತನಾಗಬೇಕು. ಯೋಗಸಿದ್ಧಿಯಾದರೆ ದಿವ್ಯಜ್ಞಾನ, ದೇವತೆಗಳ ದರ್ಶನ, ಸರ್ವತ್ರಸಂಚಾರ, ಇವುಗಳು ಉಂಟಾಗುವುವು. ಉಪಸರ್ಗಸಿದ್ಧಿಯಾದರೆ ವಿದ್ಯ, ಶಿಲ್ಪ, ಶಬ್ದಶ್ರವಣ, ಯಕ್ಷಾದಿ ದರ್ಶನವೇ ಮೊದಲಾದುವು ಉಂಟಾಗುವುವು. ಸಿದ್ಧಪುರುಷನು ಹುಚ್ಚನಂತೆ ಭ್ರಾಂತನಾಗಿರುವನು. ಉಪಸರ್ಗಗಳಿಗೆ ವಶನಾದರೆ ಋಷ್ಯಾದಿರೂಪದಿಂದ ಪುನಃಪುನಃ ಜನನಮರಣಾದಿಗಳಿಗೆ ಸಿಲುಕಿ ದುಃಖಿಯಾಗುವನು. ಪೃಥಿವ್ಯಾದಿ ಪಂಚಭೂತಗಳ ಸಿದ್ಧಿಯಾದರೆ ಅವು ಸೂಕ್ಷ್ಮರೂಪವಾಗಿ ಕಾಣುವುವು. ಈ ಸಪ್ತಸಿದ್ಧಿಯನ್ನು ಪಡೆದವನು ಪರಮಪದವಿಯನ್ನು ಪಡೆಯುವನು. ಇಂದ್ರಾದಿ ಪದವಿಗಳಲ್ಲಿ ಆಸಕ್ತನಾದರೆ ಅವನ್ನು ಪಡೆದು ಸುಕೃತಗಳನ್ನು ಕಳೆದುಕೊಂಡು ಪುನಃ ಜನನಮರಣಾದಿಗಳಿಗೆ ವಶನಾಗುವನು

ಆದುದರಿಂದ ಯೋಗಿಯು ಸಿದ್ಧಿಯನ್ನು ಪಡೆದು ಉಪಸರ್ಗಗಳನ್ನು ಜಯಿಸಿ ಶಾಶ್ವತವಾದ ಬ್ರಹ್ಮಪದವಿಯನ್ನು ಪಡೆಯಲು ಯತ್ನಿಸಬೇಕು.

—|| ಹರಿಃ ಓಮ್ ||—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ತ್ರಯೋದಶೋಽಧ್ಯಾಯಃ

|| ವಾಯುರುವಾಚ ||

ಅತ ಊರ್ಧ್ವಂ ಪ್ರವಕ್ಷ್ಯಾಮಿ ಐಶ್ವರ್ಯಗುಣವಿಸ್ತರಂ ।
ಯೇನ ಯೋಗವಿಶೇಷೇಣ ಸರ್ವಲೋಕಾನತಿಕ್ರಮೇತ್ || ೧ ||

ತತ್ರಾಷ್ಟಗುಣಮೈಶ್ವರ್ಯಂ ಯೋಗಿನಾಂ ಸಮುದಾಹೃತಂ ।
ತತ್ಸರ್ವಂ ಕ್ರಮಯೋಗೇನ ಉಚ್ಯಮಾನಂ ನಿಬೋಧತ || ೨ ||

ಅಣಿಮಾ ಲಘಿಮಾ ಚೈವ ಮಹಿಮಾ ಪ್ರಾಪ್ತಿರೇವ ಚ ।
ಪ್ರಾಕಾಮ್ಯಂ ಚೈವ ಸರ್ವತ್ರ ಈಶತ್ವಂ ಚೈವ ಸರ್ವತಃ || ೩ ||

---

## ಹದಿಮೂರನೆಯ ಅಧ್ಯಾಯವು

೧. ವಾಯುದೇವನು ಹೇಳಿದನು :—ಈ ಅಧ್ಯಾಯದಲ್ಲಿ ಯಾವ ಯೋಗೈಶ್ವರ್ಯಮಹಿಮೆಯಿಂದ ಸರ್ವಲೋಕಗಳನ್ನೂ ಅತಿಕ್ರಮಿಸಬಹುದೋ ಅಂತಹ ಯೋಗೈಶ್ವರ್ಯದ ಗುಣಗಳನ್ನು ವಿಸ್ತಾರವಾಗಿ ನಿರೂಪಿಸುವೆನು ಕೇಳಿ ಎಂದನು

೨. ಯೋಗಿಗಳಿಗೆ ಎಂಟುವಿಧವಾದ ಐಶ್ವರ್ಯಸಿದ್ಧಿಗಳು ಉಂಟಾಗುತ್ತವೆ. ಅವುಗಳೆಲ್ಲವನ್ನೂ ಕ್ರಮವಾಗಿ ಹೇಳುವೆನು ಕೇಳಿ ಎಂದನು

೩. ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ ಎಂಬ ಈ ಅಷ್ಟವಿಧವಾದ ಐಶ್ವರ್ಯಗಳು ಯೋಗಾಭ್ಯಾಸದಿಂದ ಉಂಟಾಗುತ್ತವೆ.

ವಶಿತ್ವಮಥ ಸರ್ವತ್ರ ಯತ್ರ ಕಾಮಾವಸಾಯಿತಾ ।
ತಚ್ಚಾಪಿ ವಿವಿಧಂ ಜ್ಞೇಯಮೈಶ್ವರ್ಯಂ ಸರ್ವಕಾಮಿಕಂ ॥ ೪ ॥

ಸಾವದ್ಯಂ ನಿರವದ್ಯಂ ಚ ಸೂಕ್ಷ್ಮಂಚೈವ ಪ್ರವರ್ತತೇ ।
ಸಾವದ್ಯಂ ನಾಮ ತತ್ತ್ವಂ ಪಂಚಭೂತಾತ್ಮಕಂ ಸ್ಮೃತಂ ॥ ೫ ॥

ನಿರವದ್ಯಂ ತಥಾನಾಮ ಪಂಚಭೂತಾತ್ಮಕಂ ಸ್ಮೃತಂ ।
ಇಂದ್ರಿಯಾಣಿ ಮನಶ್ಚೈವ ಅಹಂಕಾರಶ್ಚ ವೈ ಸ್ಮೃತಂ ॥ ೬ ॥

ತತ್ರ ಸೂಕ್ಷ್ಮಪ್ರವರ್ತಂತು ಪಂಚಭೂತಾತ್ಮಕಂ ಪುನಃ ।
ಇಂದ್ರಿಯಾಣಿ ಮನಶ್ಚೈವ ಬುದ್ಧ್ಯಹಂಕಾರ ಸಂಜ್ಞಿತಂ ॥ ೭ ॥

ತಥಾ ಸರ್ವಮಯಂ ಚೈವ ಆತ್ಮಸ್ಥಾ ಖ್ಯಾತಿರೇವ ಚ ।
ಸಂಯೋಗ ಏವಂ ತ್ರಿವಿಧಃ ಸೂಕ್ಷ್ಮೇಷ್ವೇವ ಪ್ರವರ್ತತೇ ॥ ೮ ॥

---

೪. ಯಾವ ವಸ್ತುಗಳಲ್ಲಿ ಮನಸ್ಸು ಇಷ್ಟಾರ್ಥಗಳನ್ನು ಪಡೆದು ಕೊನೆಯನ್ನು ಹೊಂದುತ್ತದೆಯೋ ಅಂತಹ ಸರ್ವವಸ್ತುಗಳ ವಶೀಕರಣಕ್ಕೆ "ವಶಿತ್ವ" ವೆಂದು ಸಂಜ್ಞೆಯುಂಟಾಗಿದೆ. ಅಂತಹ ವಶಿತ್ವಗಳು ನಾನಾಪ್ರಕಾರಗಳಾಗಿಯೂ, ಸಮಸ್ತ ಐಶ್ವರ್ಯಪ್ರದವಾಗಿಯೂ ಇವೆ.

೫. ಲೋಕದಲ್ಲಿ ತತ್ವವು ಸಾವದ್ಯ, ನಿರವದ್ಯ ಮತ್ತು ಸೂಕ್ಷ್ಮವೆಂಬುದಾಗಿ ಮೂರು ವಿಧಗಳು. ಅವುಗಳಲ್ಲಿ ಪಂಚಭೂತಾತ್ಮಕವಾದ ತತ್ವವು ಸಾವದ್ಯವೆಂದು ಪ್ರಸಿದ್ಧವಾಗಿದೆ.

೬. ಪಂಚಭೂತಾತ್ಮಕವಾದ ತತ್ವಗಳು, ಇಂದ್ರಿಯಗಳು, ಮನಸ್ಸು ಮತ್ತು ಅಹಂಕಾರ ಇವುಗಳಿಗೆ ನಿರವದ್ಯವೆಂದು ನಾಮವು ಸಂಭವಿಸಿದೆ.

೭. ಪಂಚಭೂತಗಳಲ್ಲಿ ಇಂದ್ರಿಯಗಳು, ಮನಸ್ಸು, ಬುದ್ಧಿ ಮತ್ತು ಅಹಂಕಾರ ಇವುಗಳು ಸೂಕ್ಷ್ಮವಾಗಿ ಪ್ರವರ್ತಿಸಿದರೆ ಅದಕ್ಕೆ "ಸೂಕ್ಷ್ಮ" ವೆಂದು ಸಂಜ್ಞೆಯು ಉಂಟಾಗಿದೆ.

೮. ಸಂಯೋಗವು ಸರ್ವಮಯ ಆತ್ಮಗತ ಮತ್ತು ಖ್ಯಾತಿಯೆಂದು ಮೂರು ವಿಧವಾಗಿದೆ. ಅದೂ ಸಹ ಸೂಕ್ಷ್ಮವಸ್ತುಗಳಲ್ಲಿಯೇ ಪ್ರವರ್ತಿಸುತ್ತದೆ.

ಪುನರಷ್ಟಗುಣಸ್ಯಾಪಿ ತೇಷ್ವೇವಾಥ ಪ್ರವರ್ತತೇ ।
ತಸ್ಯರೂಪಂ ಪ್ರವಕ್ಷ್ಯಾಮಿ ಯಥಾಹ ಭಗವಾನ್ ಪ್ರಭುಃ ॥ ೯ ॥

ತ್ರೈಲೋಕ್ಯೇ ಸರ್ವಭೂತೇಷು ಜೀವಸ್ಯಾನಿಯತಃ ಸ್ಮೃತಃ ।
ಅಣಿಮಾ ಚ ಯಥಾ ವ್ಯಕ್ತಂ ಸರ್ವಂ ತತ್ರ ಪ್ರತಿಷ್ಠಿತಂ ॥ ೧೦ ॥

ತ್ರೈಲೋಕ್ಯೇ ಸರ್ವಭೂತಾನಾಂ ದುಷ್ಪ್ರಾಪ್ಯಂ ಸಮುದಾಹೃತಂ ।
ತಚ್ಚಾಪಿ ಭವತಿ ಪ್ರಾಪ್ಯಂ ಪ್ರಥಮಂ ಯೋಗಿನಾಂ ಬಲಾತ್ ॥ ೧೧ ॥

ಲಂಬನಂ ಪ್ಲವನಂ ಯೋಗೇ ರೂಪಮಸ್ಯ ಸದಾ ಭವೇತ್ ।
ಶೀಘ್ರಗಂ ಸರ್ವಭೂತೇಷು ದ್ವಿತೀಯಂ ತತ್ಪದಂ ಸ್ಮೃತಂ ॥ ೧೨ ॥

---

೯. ಪೂರ್ವೋಕ್ತಗಳಾದ ಅಷ್ಟಗುಣಗಳೂ ಕೂಡ ಆ ಪಂಚಭೂತಗಳ ಸೂಕ್ಷ್ಮ ವಸ್ತುಗಳಲ್ಲಿಯೇ ಪ್ರವರ್ತಿಸುತ್ತವೆ. ಅದರ ಸ್ವರೂಪವನ್ನು, ಪೂಜ್ಯನೂ, ಪ್ರಭುವೂ ಆದ ವಾಯುದೇವನು ಹೇಗೆ ತಿಳಿಸಿರುವನೋ ಹಾಗೆಯೇ ನಿಮಗೆ ನಿರೂಪಿಸುವೆನು ಕೇಳಿ ಎಂದನು.

೧೦. ಮೂರುಲೋಕಗಳಲ್ಲಿಯೂ, ಸರ್ವಭೂತಗಳಲ್ಲಿಯೂ ಇರುವ ಜೀವನು ಅಸ್ಥಿರನೆಂಬುದು ವ್ಯಕ್ತವಾಗಿದೆ. ಅಣುರೂಪವಾದ ಅವ್ಯಕ್ತತತ್ವದಲ್ಲಿ ಈ ಸರ್ವ ಭೂತಗಳೂ ಮತ್ತು ಜಗತ್ತೂ ಸಹ ಅಡಕವಾಗಿದೆ.

೧೧. ಸರ್ವ ಪ್ರಾಣಿಗಳಿಗೂ ಮೂರುಲೋಕಗಳಲ್ಲಿಯೂ ಕೂಡ ಯಾವುದು ಹೊಂದಲಶಕ್ಯವಾಗಿದೆಯೋ ಅದನ್ನು ನಿಮಗೆ ತಿಳಿಸಿರುತ್ತೇನೆ. ಅಂತಹ ವಸ್ತುವೂ ಕೂಡ ಯೋಗಿಗಳಿಗೆ ಯೋಗಶಕ್ತಿಯಿಂದ ಪಡೆಯಲು ಸಾಧ್ಯವಾಗಿದೆ. ಅದೇ ಮೊದಲನೆಯ ಯೋಗಮಹಿಮೆಯು.

೧೨. ಯೋಗಸಿದ್ಧಿಯಾದರೆ ಯೋಗಿಯ ಸ್ವರೂಪವು ಸರ್ವಭೂತಗಳಲ್ಲಿರುವ ಹಾರುವ, ನೆಗೆಯುವ ಮತ್ತು ಶೀಘ್ರವಾಗಿ ನಡೆಯುವ ಶಕ್ತಿಯನ್ನು ಪಡೆಯುತ್ತದೆ. ಇದೇ ಯೋಗಸಿದ್ಧಿಯ ಎರಡನೆಯ ಲಕ್ಷಣವು.

ತ್ರೈಲೋಕ್ಯೇ ಸರ್ವಭೂತಾನಾಂ ಪ್ರಾಪ್ತಿಃ ಪ್ರಾಕಾಮ್ಯಮೇವ ಚ ।
ಮಹಿಮಾ ಚಾಪಿ ಯೋ ಯಸ್ಮಿಂಸ್ತೃತಿಯೋ ಯೋಗ ಉಚ್ಯತೇ ॥ ೧೩ ॥

ತ್ರೈಲೋಕ್ಯೇ ಸರ್ವಭೂತೇಷು ತ್ರೈಲೋಕ್ಯಮಗಮಂ ಸ್ಮೃತಂ ।
ಪ್ರಕಾಮಾರ್ ವಿಷಯಾರ್ ಭುಂಕ್ತೇ ನ ಚ ಪ್ರತಿಹತಃ ಕ್ವಚಿತ್ ।
ತ್ರೈಲೋಕ್ಯೇ ಸರ್ವಭೂತಾನಾಂ ಸುಖದುಃಖಂ ಪ್ರವರ್ತತೇ ॥ ೧೪ ॥

ಈಶೋ ಭವತಿ ಸರ್ವತ್ರ ಪ್ರವಿಭಾಗೇನ ಯೋಗವಿತ್ ।
ವಶ್ಯಾನಿ ಚೈವ ಭೂತಾನಿ ತ್ರೈಲೋಕ್ಯೇ ಸಚರಾಚರೇ ।
ಭವಂತಿ ಸರ್ವಕಾರ್ಯೇಷು ಇಚ್ಛತೋ ನ ಭವಂತಿ ಚ ॥ ೧೫ ॥

ಯತ್ರ ಕಾಮಾವಸಾಯಿತ್ವಂ ತ್ರೈಲೋಕ್ಯೇ ಸಚರಾಚರೇ ।
ಇಚ್ಛಯಾ ಚೇಂದ್ರಿಯಾಣಿ ಸ್ಯುರ್ಭವಂತಿ ನ ಭವಂತಿ ಚ ॥ ೧೬ ॥

---

೧೩. ಮೂರುಲೋಕಗಳಲ್ಲಿರುವ ಸರ್ವಭೂತಗಳ ಪ್ರಾಪ್ತಿಯೇ ಪ್ರಾಕಾಮ್ಯವಾಗಿದೆ. ಅಂದರೆ ಹಸ್ತಾಗ್ರದಿಂದ ಚಂದ್ರಸ್ಪರ್ಶಾದಿಗಳು ಆದರೆ ಅದು ಪ್ರಾಪ್ತಿಯೆಂಬ ಸಿದ್ಧಿಯ ಫಲವಾಗುತ್ತದೆ. ಈ ಮಹಿಮೆಯೇ ಮೂರನೆಯ ಯೋಗದ ಮಹಿಮೆಯಾಗಿದೆ.

೧೪. ಮೂರುಲೋಕಗಳಲ್ಲಿರುವ ಸರ್ವಭೂತಗಳ ವಿಷಯವೆಲ್ಲವೂ ಯೋಗಿಗೆ ಅಗಮ್ಯವಾಗದೇ ಗಮ್ಯವಾಗಿಯೇ ಇರುತ್ತದೆ. ಸ್ವೇಚ್ಛೆಯಾಗಿ ಅವನು ವಿಷಯ ಸುಖಗಳನ್ನು ಪ್ರತಿಬಂಧಕವಿಲ್ಲದೆಯೇ ಅನುಭವಿಸಬಹುದು. ಮೂರುಲೋಕಗಳಲ್ಲಿರುವ ಸರ್ವಭೂತಗಳಿಗೆ ಉಂಟಾಗುವ ಸುಖದುಃಖಗಳನ್ನು ತಿಳಿಯಬಲ್ಲನು

೧೫. ಯೋಗಿಯು ವಿಚ್ಛೇದವಿಲ್ಲದೆಯೇ ಸರ್ವಕಾಲಗಳಲ್ಲಿಯೂ ಸ್ವಾತಂತ್ರ್ಯವನ್ನು ಹೊಂದಿ ಒಡೆಯನಾಗುವನು. ಈ ವಿಷಯದಲ್ಲಿ ಪರಾಧೀನತೆ ಇಲ್ಲ. ಚರಾಚರಾತ್ಮಕವಾದ ಜಗತ್ತೆಲ್ಲವೂ, ಸರ್ವಕಾರ್ಯಗಳೂ ಅವನ ಅಧೀನದಲ್ಲಿರುತ್ತದೆ. ಇಷ್ಟವಿಲ್ಲದಿದ್ದರೆ ಅವನ್ನು ಬಿಡಲೂಬಹುದು.

೧೬. ಚರಾಚರಾತ್ಮಕವಾದ ಜಗತ್ತಿನಲ್ಲಿರುವ ಯಾವ ವಸ್ತುವಿನಲ್ಲಿ ಪುರುಷನ ಕಾಮವು ಪ್ರವೃತ್ತಿಸುತ್ತದೆಯೋ ಅವುಗಳಲ್ಲಿ ಯೋಗಿಯ ಇಂದ್ರಿಯಗಳು ಸ್ವೇಚ್ಛೆಯಾಗಿ ಸುಖಗಳನ್ನು ಅನುಭವಿಸಬಹುದು. ಯೋಗಿಯು ಇಚ್ಛೆಪಟ್ಟರೆ ವಿಷಯ ಸುಖಗಳನ್ನು ಅನುಭವಿಸಬಹುದು ಇಲ್ಲವಾದರೆ ತ್ಯಜಿಸಬಹುದು.

ಶಬ್ದಃ ಸ್ಪರ್ಶೋ ರಸೋ ಗಂಧೋ ರೂಪಂ ಚೈವ ಮನಸ್ತಥಾ ।
ಪ್ರವರ್ತಂತೇಽಸ್ಯ ಚೇಚ್ಛಾತೋ ನ ಭವಂತಿ ತಥೇಚ್ಛಯಾ ॥ ೧೭ ॥

ನ ಜಾಯತೇ ನ ಮ್ರಿಯತೇ ಭಿದ್ಯತೇ ನ ಚ ಛಿದ್ಯತೇ ।
ನ ದಹ್ಯತೇ ನ ಮುಹ್ಯತೇ ಹೀಯತೇ ನ ಚ ಲಿಪ್ಯತೇ ॥ ೧೮ ॥

ನ ಕ್ಷೀಯತೇ ನ ಕ್ಷರತಿ ನ ಖಿದ್ಯತಿ ಕದಾಚನ ।
ಕ್ರಿಯತೇ ಚೈವ ಸರ್ವತ್ರ ತಥಾ ವಿಕ್ರಿಯತೇ ನ ಚ ॥ ೧೯ ॥

ಅಗಂಧರಸರೂಪಸ್ತು ಸ್ಪರ್ಶಶಬ್ದವಿವರ್ಜಿತಃ ।
ಅವರ್ಣೋಽಹ್ಯವರಶ್ಚೈವ ತಥಾವರ್ಣಸ್ಯ ಕರ್ಹಿಚಿತ್ ॥ ೨೦ ॥

ಭುಂಕ್ತೇಽಥ ವಿಷಯಾಂಶ್ಚೈವ ವಿಷಯೈರ್ನ ಚ ಯುಜ್ಯತೇ ।
ಜ್ಞಾತ್ವಾ ತು ಪರಮಂ ಸೂಕ್ಷ್ಮಂ ಸೂಕ್ಷ್ಮತ್ವಾಚ್ಚಾಪವರ್ಗಕಃ ॥ ೨೧ ॥

---

೧೭. ಯೋಗಿಯ ಇಚ್ಛಾನುಸಾರವಾಗಿ ಶಬ್ದ, ಸ್ಪರ್ಶ, ರಸ, ಗಂಧ, ರೂಪ ಇವುಗಳಲ್ಲಿ ಮನಸ್ಸು ಪ್ರವರ್ತಿಸುತ್ತದೆ. ಇಚ್ಛೆಯಿಲ್ಲದಿದ್ದರೆ ಮನಸ್ಸು ವಿಷಯಗಳಲ್ಲಿ ಪ್ರವರ್ತಿಸುವುದಿಲ್ಲ

೧೮-೧೯. ಅಣಿಮಾದಿಸಿದ್ಧಿವಂತನಾದ ಪುರುಷನು ಜನನಮರಣಗಳನ್ನು, ಭೇದನಛೇದನಗಳನ್ನು, ದಹನಮೋಹಗಳನ್ನು, ಕ್ಷಯ ಲೇಪನಗಳನ್ನು, ನಾಶಕ್ಷರಣ ಗಳನ್ನು ಮತ್ತು ಖೇದನವನ್ನೂ ಕೂಡ ಎಂದಿಗೂ ಪಡೆಯುವುದಿಲ್ಲ. ಮೇಲೆ ನಿರೂಪಿಸಿರುವ ಛೇದನಾದಿಗಳನ್ನು ಇತರರಿಗೆ ಉಂಟುಮಾಡಬಲ್ಲನು. ತಾನು ಅವು ಗಳಿಗೆ ಅಧೀನವಾಗದೆಯೇ ಅವುಗಳನ್ನು ತನ್ನ ಅಧೀನದಲ್ಲಿ ಇಟ್ಟುಕೊಳ್ಳಬಲ್ಲನು.

೨೦ ಸಿದ್ಧಪುರುಷನು ರೂಪ, ರಸ, ಗಂಧ, ಶಬ್ದ, ಸ್ಪರ್ಶ, ವರ್ಣ, ಅವರ್ಣ ಗಳಿಂದ ವರ್ಜಿತನೂ ತನಗೆ ಬೇಕಾದರೆ ಇವುಗಳಿಂದ ಸಹಿತನೂ ಆಗುವನು.

೨೧. ಯೋಗಿಯು ವಿಷಯಸುಖಗಳನ್ನು ಅನುಭವಿಸುವನು. ಆದರೆ ಆ ವಿಷಯಸುಖಗಳಿಗೆ ಅಧೀನವಾಗುವುದಿಲ್ಲ. ಉತ್ತಮವಾದ ಸೂಕ್ಷ್ಮವಸ್ತುಗಳನ್ನರಿತು ತಾನೂ ಸೂಕ್ಷ್ಮರೂಪಿಯಾಗುವನು. ಇದರಿಂದ ಮೋಕ್ಷವನ್ನೂ ಕೂಡ ಹೊಂದುವನು.

ವ್ಯಾಪಕಸ್ತ್ವಪವರ್ಗಾಚ್ಚ ವ್ಯಾಪಿತ್ವಾತ್ಪುರುಷಯೋಃ ಸ್ಮೃತಃ ।
ಪುರುಷಃ ಸೂಕ್ಷ್ಮಭಾವಾತ್ತು ಐಶ್ವರ್ಯೇ ಪರತಃ ಸ್ಥಿತಃ ॥ ೨೨ ॥

ಗುಣಾಂತರಂತು ಐಶ್ವರ್ಯೇ ಸರ್ವತಃ ಸೂಕ್ಷ್ಮ ಉಚ್ಯತೇ ।
ಐಶ್ವರ್ಯಮಪ್ರತೀಘಾತಿ ಪ್ರಾಪ್ಯಯೋಗ ಮನುತ್ತಮಂ ।
ಅಪವರ್ಗಂ ತತೋ ಗಚ್ಛೇತ್ ಸುಸೂಕ್ಷ್ಮಂ ಪರಮಂಪದಂ ॥ ೨೩ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ ಯೋಗೈಶ್ವರ್ಯಾಣಿ
ನಾಮ ತ್ರಯೋದಶೋಽಧ್ಯಾಯಃ

---

೨೨. ಪುರುಷನು ಅಪವರ್ಗಕ್ಕಿಂತಲೂ ವ್ಯಾಪಕನೂ, ಸರ್ವತ್ರವ್ಯಾಪಿಯೂ ಆಗಿರುತ್ತಾನೆ. ಮತ್ತು ಸೂಕ್ಷ್ಮರೂಪಿಯಾಗಿರುವುದರಿಂದ ಪರವೈಶ್ವರ್ಯವುಳ್ಳವನೂ ಆಗಿರುವನು.

೨೩. ಅತಿಸೂಕ್ಷ್ಮರೂಪವೇ ಐಶ್ವರ್ಯದ ಮತ್ತೊಂದು ಗುಣ. ಅಂತಹ ಶಾಶ್ವತವಾದ ಐಶ್ವರ್ಯವನ್ನು ಪಡೆದಬಳಿಕ ಅತಿಸೂಕ್ಷ್ಮವೂ, ಉತ್ತಮವೂ ಆದ ಮೋಕ್ಷಪದವಿಯನ್ನು ಪಡೆಯಬಹುದು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಯೋಗೈಶ್ವರ್ಯನಿರೂಪಣವೆಂಬ "
ಹದಿಮೂರನೆಯ ಅಧ್ಯಾಯವು ಸಮಾಪ್ತವು.

## ಹದಿಮೂರನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಯೋಗಿಗಳ ಪರಮೈಶ್ವರ್ಯಗಳು ಉಕ್ತವಾಗಿವೆ ಯೋಗ ಮಹಿಮೆಯಿಂದ ಸಮಸ್ತಲೋಕಗಳನ್ನೂ ಗೆಲ್ಲಬಹುದು. ಯೋಗಿಗಳಿಗೆ ಅಣಿಮಾದಿ ಸಿದ್ಧಿಗಳುಂಟಾಗುತ್ತವೆ. ಇವುಗಳಿಂದ ಜಗತ್ತೆಲ್ಲವನ್ನೂ ಅತಿಕ್ರಮಿಸಬಹುದು. ಕೇವಲ ಅಣುರೂಪವಾಗುವುದೇ ಅಣಿಮಾಸಿದ್ಧಿಯು, ಮಹಾರೂಪವನ್ನು ಪಡೆಯುವುದೇ ಮಹಿಮೆಯಗುಣವು. ಹತ್ತಿಯಂತೆ ಹಗುರವಾಗುವುದೇ ಲಘಿಮೆಯು. ಗಿರಿಯಂತೆ ಭಾರವಾಗುವುದೇ ಗರಿಮೆಯು. ಸರ್ವಸಿದ್ಧಿಯನ್ನು ಪಡೆಯುವುದು ಪ್ರಾಪ್ತಿಯು. ಸ್ವೇಚ್ಛೆಯಾಗಿ ಪ್ರತಿಬಂಧಕವಿಲ್ಲದೆ ವಿಷಯಗಳನ್ನು ಅನುಭವಿಸುವುದೇ ಪ್ರಾಕಾಮ್ಯವು. ಸರ್ವಭೂತಗಳ ನಿಯಾಮಕತ್ವವೇ ಈಶತನವು. ಈ ಸಿದ್ಧಿಯುಳ್ಳವರಿಗೆ ರೂಪ ರಸಾದಿಗಳು ಬೇಕಾದಾಗ ಬರುತ್ತವೆ. ಬೇಡವಾದರೆ ಹೋಗುತ್ತವೆ. ಯೋಗಸಿದ್ಧಿ ಯಾದರೆ ಕ್ಷಯನಾಶಗಳು ಇಲ್ಲ. ಪ್ರಾಕೃತಗಂಧಾದಿಗಳಿಂದ ವರ್ಜಿತನಾಗುವನು. ವಿಷಯಾನುಭವವಿದ್ದರೂ ಅವನಿಗೆ ಬಂಧನವಿಲ್ಲ. ಇಂತಹ ಮಹಿಮೆಯನ್ನು ಪಡೆದ ಯೋಗಿಯು ಪರಮಪದವಿಯನ್ನು ಹೊಂದುವನು.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ಚತುರ್ಥೋಽಧ್ಯಾಯಃ

॥ ವಾಯುರುವಾಚ ॥

**ನ ಚೈವ ಮಾಗತೋ ಜ್ಞಾನಾದ್ರಾಗಾತ್ ಕರ್ಮಸಮಾಚರೇತ್ ।**
**ರಾಜಸಂ ತಾಮಸಂ ವಾಪಿ ಭುಕ್ತ್ವಾ ತತ್ರೈವ ಯುಜ್ಯತೇ ॥ ೧ ॥**

**ತಥಾ ಸುಕೃತಕರ್ಮಾ ತು ಫಲಂ ಸ್ವರ್ಗೇ ಸಮಶ್ನುತೇ ।**
**ತಸ್ಮಾತ್ ಸ್ಥಾನಾತ್ ಪುನರ್ಭ್ರಷ್ಟೋ ಮಾನುಷ್ಯಮನುಪದ್ಯತೇ ॥ ೨ ॥**

---

## ಹದಿನಾಲ್ಕನೆಯ ಅಧ್ಯಾಯವು

೧. ವಾಯುದೇವನು ಹೇಳಿದನು :—ಹೀಗೆ ಯೋಗದಿಂದ ಬ್ರಹ್ಮಜ್ಞಾನವನ್ನು ಹೊಂದಿದ ಪುರುಷನು ರಾಗಕ್ಕೆ ವಶನಾಗಿ ಕರ್ಮಾನುಷ್ಠಾನವನ್ನು ಮಾಡಬಾರದು. ಹಾಗೆ ಮಾಡಿದರೆ ರಾಜಸ, ತಾಮಸಗಳಾದ ವಿಷಯಗಳನ್ನು ಅನುಭವಿಸಿ ಸಂಸಾರದಲ್ಲಿಯೇ ಮುಳುಗಿ ತೇಲುವನು.

೨. ಪೂರ್ವೋಕ್ತಕ್ರಮದಲ್ಲಿ ಪುಣ್ಯಕರ್ಮಗಳನ್ನು ಮಾಡಿದ ಪುರುಷನು ಸ್ವರ್ಗಲೋಕದಲ್ಲಿ ದಿವ್ಯಸುಖಗಳನ್ನು ಅನುಭವಿಸಿ ಆ ಪುಣ್ಯವು ಕ್ಷೀಣವಾಗಲು ಸ್ವರ್ಗಲೋಕದಿಂದ ಚ್ಯುತನಾಗಿ ಮನುಷ್ಯಲೋಕವನ್ನೇ ಹೊಂದುವನು.

**ತಸ್ಮಾತ್ ಬ್ರಹ್ಮ ಪರಂ ಸೂಕ್ಷ್ಮಂ ಬ್ರಹ್ಮ ಶಾಶ್ವತಮುಚ್ಯತೇ ।**
**ಬ್ರಹ್ಮ ಏವ ಹಿ ಸೇವೇತ ಬ್ರಹ್ಮೈವ ಪರಮಂ ಸುಖಂ ॥ ೩ ॥**

**ಪರಿಶ್ರಮಸ್ತು ಯಜ್ಞಾನಾಂ ಮಹತಾರ್ಥೇನ ವರ್ತತೇ ।**
**ಭೂಯೋ ಮೃತ್ಯುವಶಂ ಯಾತಿ ತಸ್ಮಾತ್ ಮೋಕ್ಷಃ ಪರಂ ಸುಖಂ ॥ ೪ ॥**

**ಅಥ ವೈ ಧ್ಯಾನಸಂಯುಕ್ತೋ ಬ್ರಹ್ಮಯಜ್ಞ ಪರಾಯಣಃ ।**
**ನ ಸ ಸ್ಯಾತ್ ವ್ಯಾಪಿತುಂ ಶಕ್ಯೋ ಮನ್ವಂತರ ಶತೈರಪಿ ॥ ೫ ॥**

**ದೃಷ್ಟ್ವಾ ತು ಪುರುಷಂ ದಿವ್ಯಂ ವಿಶ್ವಾಖ್ಯಂ ವಿಶ್ವರೂಪಿಣಂ ।**
**ವಿಶ್ವಪಾದ ಶಿರೋಗ್ರೀವಂ ವಿಶ್ವೇಶಂ ವಿಶ್ವಭಾವನಂ ।**
**ವಿಶ್ವಗಂಧಂ ವಿಶ್ವಮಾಲ್ಯಂ ವಿಶ್ವಾಂಬರಧರಂ ಪ್ರಭುಂ ॥ ೬ ॥**

---

೩. ಆದುದರಿಂದ ಬ್ರಹ್ಮನೇ ಸೂಕ್ಷ್ಮನೂ, ಸರ್ವೋತ್ತಮನೂ, ಶಾಶ್ವತನೂ ಆಗಿರುವದರಿಂದ ಅವನನ್ನೇ ಸೇವಿಸಬೇಕು. ಹೀಗೆ ಸೇವಿಸಿದರೆ ಪರಮಸುಖರೂಪವಾದ ಬ್ರಹ್ಮಪದವಿಯು ದೊರೆಯುವುದು. (ಬ್ರಹ್ಮನೇ ಸುಖರೂಪಿಯಾಗಿರುವನು.)

೪. ಯಜ್ಞಯಾಗಾದಿಗಳಿಗೆ ಮಹತ್ತಾದ ದ್ರವ್ಯಗಳನ್ನು ವ್ಯಯಮಾಡಿ ಮಹಾ ಪ್ರಯಾಸವನ್ನು ಹೊಂದಿ ಸ್ವರ್ಗಸುಖವನ್ನು ಪಡೆದರೂ ಮತ್ತೆ ಈ ಭೂಮಿಯಲ್ಲಿ ಜನಿಸಿ ಯಮನ ವಶಕ್ಕೆ ಸಿಲುಕಿ ದುಃಖವನ್ನು ಹೊಂದುವನು. ಆದುದರಿಂದ ಮೋಕ್ಷವೇ ಶಾಶ್ವತವೂ, ಸುಖಪ್ರದವೂ ಆದ ಪರಮಪದವಾಗಿದೆ.

೫. ಧ್ಯಾನಪರನೂ, ಬ್ರಹ್ಮಯಜ್ಞಪಾರಾಯಣನೂ ಆದ ಪುರುಷನು ನೂರಾರು ಮನ್ವಂತರಗಳಿಂದಲೂ ಕೂಡ ಆ ಪರಬ್ರಹ್ಮನನ್ನು ಅತಿಕ್ರಮಿಸಲು ಶಕ್ತನಾಗುವುದಿಲ್ಲ

೬. ಯೋಗಿಯು ಪುರುಷನಾಮಕನೂ, ದೇವರೂಪನೂ, ವಿಶ್ವನಾಯಕನೂ, ವಿಶ್ವರೂಪಿಯೂ, ಅಸಂಖ್ಯಾತವಾದ, ಪಾದ, ಶಿರಸ್ಸು, ಕತ್ತು ಇವುಗಳುಳ್ಳವನೂ, ವಿಶ್ವೇಶನೂ, ವಿಶ್ವಜ್ಞನೂ, ವಿಶ್ವಗಂಧಿಯೂ, ಜಗತ್ತಿಗೆ ಮೂಲಕಾರಣನೂ, ವಿಶ್ವಾಂಭರಧರನೂ, ಸ್ವಾಮಿಯೂ ಆದ ಪರಬ್ರಹ್ಮನನ್ನು ತಿಳಿದರೂ ಅವನನ್ನು ಮೀರಲು ಅಸಾಧ್ಯವು.

ಗೋಭಿರ್ಮಹೀ ಸಂಯುತತೇ ಪತತ್ರಿಣಂ ।
ಮಹಾತ್ಮಾನಂ ಪರಮಮತಿಂ ವರೇಣ್ಯಂ ॥
ಕವಿಂ ಪುರಾಣಮನುಶಾಸಿತಾರಂ ಸೂಕ್ಷ್ಮಾಚ್ಚ ।
ಸೂಕ್ಷ್ಮಂ ಮಹತೋ ಮಹಾಂತಂ ।
ಯೋಗೇನ ಪಶ್ಯಂತಿ ನ ಚಕ್ಷುಷಾ ತಂ ॥
ನಿರಿಂದ್ರಿಯಂ ಪುರುಷಂ ರುಕ್ಮವರ್ಣಂ ॥ ೭ ॥

ಅಲಿಂಗಿನಿಂ ಪುರುಷಂ ರಕ್ತವರ್ಣಂ ।
ಸಲಿಂಗಿನಂ ನಿರ್ಗುಣಂ ಚೇತನಂ ಚ ॥
ನಿತ್ಯಂ ಸದಾ ಸರ್ವಗತಂ ತು ಶೌಚಂ ।
ಪಶ್ಯಂತಿ ಯುಕ್ತ್ಯಾ ಹ್ಯಚಲಂ ಪ್ರಕಾಶಂ ॥ ೮ ॥

ತದ್ಭಾವಿತಸ್ತೇಜಸಾ ದೀಪ್ಯಮಾನಃ ।
ಅಪಾಣಿಪಾದೋದರ ಪಾರ್ಶ್ವಜಿಹ್ವಃ ॥

---

೭. ಭೂಮಾತೆಯು ಗರುಡರೂಪಿಯೂ, ಮಹಾತ್ಮನೂ, ಪರಮಮತಿಯೂ, ಅತ್ಯುತ್ತಮನೂ, ಕವಿಯೂ, ಪುರಾಣಪುರುಷನೂ, ಶಾಸಕನೂ, ಸೂಕ್ಷ್ಮಕ್ಕಿಂತಲೂ ಸೂಕ್ಷ್ಮರೂಪಿಯೂ, ಮಹತ್ತಿಗಿಂತಲೂ ಮಹಾತ್ಮನೂ ಆದ ಪರಮಪುರುಷನನ್ನು ಸ್ತೋತ್ರಗಳಿಂದ ಪ್ರೀತಿಸಲು ಪ್ರಯತ್ನವನ್ನು ಮಾಡುವಳು. ಹಾಗೆಯೇ ಜ್ಞಾನಿಗಳೂ ಕೂಡ ಪ್ರಾಕೃತೇಂದ್ರಿಯರಹಿತನೂ, ಸುವರ್ಣರೂಪಿಯೂ, ಆದ ಪರಬ್ರಹ್ಮನನ್ನು ಯೋಗಮಹಿಮೆಯಿಂದ ನೋಡುತ್ತಾರೆ. ಈ ಚರ್ಮಚಕ್ಷುಸ್ಸಿನಿಂದ ಅವನನ್ನು ನೋಡಲು ಸಾಧ್ಯವಿಲ್ಲವು.

೮ ಯೋಗಿಗಳು ಯೋಗಮಹಿಮೆಯಿಂದ ಲಿಂಗಶೂನ್ಯನೂ, ಪುರುಷನೂ, ಸುವರ್ಣರೂಪಿಯೂ, ಪುಲ್ಲಿಂಗಾದಿ ಶಬ್ದವಾಚ್ಯನೂ, ಪ್ರಾಕೃತಗುಣ ಶೂನ್ಯನೂ, ನಿತ್ಯನೂ, ಸರ್ವವ್ಯಾಪಿಯೂ, ಶುದ್ಧನೂ, ಅಚಲನೂ, ಪ್ರಕಾಶಕನೂ, ಆದ ಬ್ರಹ್ಮನನ್ನು ಸದಾ ನೋಡುತ್ತಾರೆ.

೯. ಜ್ಞಾನಿಗಳಿಂದ ಹೊಗಳಲ್ಪಡುವವನೂ, ತೇಜಸ್ವಿಯೂ, ಪ್ರಾಕೃತವಾದ ಹಸ್ತ, ಪಾದ, ಉದರ, ಪಾರ್ಶ್ವ, ರಸನ, ಇವುಗಳಿಲ್ಲದವನೂ, ಇಂದ್ರಿಯಾತೀತನೂ,

ಅತೀಂದ್ರಿಯೋದ್ಯಾಪಿ ಸುಸೂಕ್ಷ್ಮ ಏಕಃ ।
ಪಶ್ಯಂತ್ಯಚಕ್ಷುಃ ಸ ಶೃಣೋತ್ಯಕರ್ಣಃ ॥ ೯ ॥

ನಾಸ್ಯಾಸ್ತ್ಯಬುದ್ಧಂ ನ ಚ ಬುದ್ಧಿರಸ್ತಿ ।
ಸ ವೇದ ಸರ್ವಂ ನ ಚ ವೇದವೇದ್ಯಃ ॥
ತಮಾಹುರಗ್ರ್ಯಂ ಪುರುಷಂ ಮಹಾಂತಂ ।
ಸಚೇತನಂ ಸರ್ವಗತಂ ಸುಸೂಕ್ಷ್ಮಂ ॥ ೧೦ ॥

ತಮಾಹುರ್ಮುನಯಃ ಸರ್ವೇ ಲೋಕೇ ಪ್ರಸಪಧರ್ಮಿಣೀಂ ।
ಪ್ರಕೃತಿಂ ಸರ್ವಭೂತಾನಾಂ ಯುಕ್ತಾಃ ಪಶ್ಯಂತಿ ಚೇತಸಾ ॥ ೧೧ ॥

ಸರ್ವತಃ ಪಾಣಿಪಾದಾಂತಂ ಸರ್ವತೋಕ್ಷಿ ಶಿರೋಮುಖಂ ।
ಸರ್ವತಃ ಶ್ರುತಿಮಾರ್ಗ ಲೋಕೇ ಸರ್ವಮಾವೃತ್ಯ ತಿಷ್ಠತಿ ॥ ೧೨ ॥

---

ಸೂಕ್ಷ್ಮನೂ, ಅಸದೃಶನೂ, ಆದ ಭಗವಂತನು ಅಪ್ರಾಕೃತವಾದ ಕರ್ಣಗಳಿಂದ ಕೇಳತಕ್ಕವನೂ ಆಗುವನು. ಪ್ರಾಕೃತ ನೇತ್ರವಿಲ್ಲದಿದ್ದರೂ ದಿವ್ಯನೇತ್ರಗಳಿಂದ ನೋಡಬಲ್ಲನು.

೧೦. ಆ ಪರಮೇಶ್ವರನಿಗೆ ತಿಳಿಯದ ವಿಷಯವೇ ಇಲ್ಲ. ಅವನು ಪ್ರಾಕೃತ ಬುದ್ಧಿಶೂನ್ಯನು. ಅವನು ಸರ್ವಜ್ಞನು (ಎಲ್ಲವನ್ನೂ ತಿಳಿಯುತ್ತಾನೆ.) ಅವನನ್ನು ವೇದಗಳೂ ಸಹ ಸಂಪೂರ್ಣವಾಗಿ ಹೊಗಳಲಾರವು. ಜ್ಞಾನಿಗಳು ಅವನನ್ನು ಉತ್ತಮನೂ, ಮಹಾತ್ಮನೂ, ಚೇತನನೂ, ಸರ್ವಗತನೂ, ಸೂಕ್ಷ್ಮನೂ ಆದ ಪರಮ ಪುರುಷನೆಂದು ಹೊಗಳುತ್ತಾರೆ.

೧೧. ಲೋಕದಲ್ಲಿ ಮಹಾತ್ಮರಾದ ಮುನಿಗಳು ಆ ಪರಮಪುರುಷನನ್ನು, ಸಮಸ್ತಲೋಕ ಸೃಷ್ಟಿಗೂ ಮೂಲ ಕಾರಣನೆಂಬುದಾಗಿಯೂ, ಸರ್ವಭೂತಗಳಿಗೂ, ಕಾರಣವಾದ ಪ್ರಕೃತಿಸಿಯಾಮಕನೆಂದೂ, ತಿಳಿದು ತಮ್ಮ ಜ್ಞಾನದೃಷ್ಟಿಯಿಂದ ಅವನನ್ನು ನೋಡುತ್ತಾರೆ.

೧೨. ಈ ಲೋಕದಲ್ಲಿ ಪರಮೇಶ್ವರನು ಸರ್ವತ್ರದಲ್ಲಿಯೂ ಪಾಣಿ, ಪಾದ, ನೇತ್ರ, ಶಿರಸ್ಸು, ಮುಖ ಮತ್ತು ಕಿವಿ ಇವುಗಳುಳ್ಳವನೂ, ಸರ್ವವನ್ನೂ ಆವರಿಸಿ ಕೊಂಡಿರುವವನೂ, ಸರ್ವವ್ಯಾಪಿಯೂ, ಅಂದರೆ ವಿಶ್ವರೂಪಿಯೂ, ಆಗಿರುತ್ತಾನೆ.

**ಯುಕ್ತ್ವಾ ಯೋಗೇನ ಚೇಶಾನಂ ಸರ್ವತಶ್ಚ ಸನಾತನಂ ।**
**ಪುರುಷಂ ಸರ್ವಭೂತಾನಾಂ ತಸ್ಮಾದ್ಧ್ಯಾತಾ ನ ಮುಹ್ಯತೇ ॥ ೧೩ ॥**

**ಭೂತಾತ್ಮಾನಂ ಮಹಾತ್ಮಾನಂ ಪರಮಾತ್ಮಾನಮವ್ಯಯಂ ।**
**ಸರ್ವಾತ್ಮಾನಂ ಪರಂ ಬ್ರಹ್ಮ ತದ್ವೈ ಧ್ಯಾತ್ವಾ ನ ಮುಹ್ಯತಿ ॥ ೧೪ ॥**

**ಪವನೋ ಹಿ ಯಥಾ ಗ್ರಾಹ್ಯೋ ವಿಚರನ್ ಸರ್ವಮೂರ್ತಿಷು ।**
**ಪುರಿ ಶೇತೇ ತಥಾಬ್ರೇ ಚ ತಸ್ಮಾತ್ ಪುರುಷ ಉಚ್ಯತೇ ।**
**ಅಥ ಚೇಲ್ಲುಪ್ತಧರ್ಮಾತ್ತು ಸ ವಿಶೇಷೈಶ್ಚ ಕರ್ಮಭಿಃ ॥ ೧೫ ॥**

**ತತಸ್ತು ಬ್ರಹ್ಮಯೋನ್ಯಾಂ ವೈ ಶುಕ್ರಶೋಣಿತಸಂಯುತಂ ।**
**ಸ್ತ್ರೀಪುಮಾಂಸಪ್ರಯೋಗೇಣ ಜಾಯತೇ ಹಿ ಪುನಃ ಪುನಃ ॥ ೧೬ ॥**

---

೧೩. ಯೋಗಿಗಳಾದ ಮಹಾತ್ಮರು ಶ್ರೀ ಭಗವಂತನನ್ನು ಸಕಲೈಶ್ವರ್ಯವಂತನೂ, ಸರ್ವವ್ಯಾಪಿಯೂ, ಸನಾತನೂ, ಸರ್ವಭೂತಾಂತರ್ಯಾಮಿಯೂ, ಎಂಬುದಾಗಿ ಧ್ಯಾನಮಾಡಿದರೆ(ಭ್ರಾಂತರಾಗದೆಯೇ)ಜ್ಞಾನಿಗಳಾಗುವರು ಮತ್ತು ಮುಕ್ತರಾಗುವರು.

೧೪. ಯಾವನು ಶ್ರೀ ಪರಮಾತ್ಮನನ್ನು ಸಕಲ ಭೂತಾಂತರ್ಯಾಮಿಯೂ, ಮಹಾತ್ಮನೂ, ಉತ್ತಮಸ್ವರೂಪಿಯೂ, ನಾಶರಹಿತನೂ, ಸರ್ವಪ್ರೇರಕನೂ, ಪರಬ್ರಹ್ಮನೂ ಎಂಬುದಾಗಿ ಧ್ಯಾನಮಾಡುವನೋ, ಅವನು ಎಂದಿಗೂ ಭ್ರಾಂತನಾಗುವುದಿಲ್ಲ.

೧೫. ವಾಯುವು ಸರ್ವತ್ರ ಸಂಚರಿಸುತ್ತಾ ಸರ್ವರ ಹೃದಯದಲ್ಲಿಯೂ, ಹೊರಗೂ ವ್ಯಾಪಿಸಿಕೊಂಡು ಹೇಗೆ ಇರುತ್ತದೆಯೋ, ಹಾಗೆಯೇ ಪರಮಾತ್ಮನೂ ಕೂಡ, ಸರ್ವರ ಹೃದಯದಲ್ಲಿ ಅಂತರ್ಯಾಮಿಯಾಗಿಯೂ, ಹೊರಗಡೆಯಲ್ಲಿ ನಿಯಾಮಕನಾಗಿಯೂ ಇದ್ದು, ಜಗತ್ತನ್ನೇ ವ್ಯಾಪಿಸಿಕೊಂಡಿರುವನು. ಶರೀರದಲ್ಲಿರುವುದರಿಂದ ಪುರುಷಶಬ್ದವಾಚ್ಯನಾಗಿರುವನು. ಜೀವನು ವಿಶೇಷ ಕರ್ಮಗಳಿಂದ ಧರ್ಮಲೋಪಿಯಾದರೆ ಜನನಮರಣಗಳನ್ನು ಪುನಃ ಪಡೆಯುವನು.

೧೬. ಅನಂತರ ಜೀವನು ತನ್ನ ಪೂರ್ವಾರ್ಜಿತ ಕರ್ಮಶೇಷದಿಂದ ಶುಕ್ರ ಶೋಣಿತ ಸಂಬಂಧವುಳ್ಳವನಾಗಿ ಸ್ತ್ರೀ ಪುರುಷರ ಮೂಲಕ ಪುನಃ ಪುನಃ ಜನನ ಮರಣಗಳನ್ನು ಹೊಂದುವನು.

ತತಸ್ತು ಗರ್ಭಕಾಲೇ ತು ಕಲನಂ ನಾಮ ಜಾಯತೇ ।
ಕಾಲೇನ ಕಲನಂ ಚಾಪಿ ಬುದ್ಬುದಶ್ಚ ಪ್ರಜಾಯತೇ ॥ ೧೭ ॥

ಮೃತ್ಪಿಂಡಸ್ತು ಯಥಾ ಚಕ್ರೇ ಚಕ್ರಾವರ್ತೇನ ಪೀಡಿತಃ ।
ಹಸ್ತಾಭ್ಯಾಂ ಕ್ರಿಯಮಾಣಸ್ತು ವಿಶ್ವತ್ವಮುಪಗಚ್ಛತಿ ॥ ೧೮ ॥

ಏವಮಾತ್ಮಾಸ್ಥಿಸಂಯುಕ್ತೋ ವಾಯುನಾ ಸಮುದೀರಿತಃ ।
ಜಾಯತೇ ಮಾನುಷಸ್ತತ್ರ ಯಥಾರೂಪಂ ತಥಾ ಮನಃ ॥ ೧೯ ॥

ವಾಯುಃ ಸಂಭವತೇ ತೇಷಾಂ ವಾತಾತ್ ಸಂಜಾಯತೇ ಜಲಂ ।
ಜಲಾತ್ಸಂಭವತಿ ಪ್ರಾಣಃ ಪ್ರಾಣಾತ್ ಶುಕ್ರಂ ವಿವರ್ಧತೇ ॥ ೨೦ ॥

ರಕ್ತಭಾಗಾಸ್ತ್ರಯಸ್ತ್ರಿಂಶಚ್ಛುಕ್ರಭಾಗಶ್ಚತುರ್ದಶ ।
ಭಾಗತೋಽರ್ಧಫಲಂ ಕೃತ್ವಾ ತತೋ ಗರ್ಭೇ ನಿಷೇವತೇ ॥ ೨೧ ॥

---

೧೭. ಅನಂತರ ಗರ್ಭಕಾಲದಲ್ಲಿ ಶುಕ್ರಶೋಣಿತ ಸಂಬಂಧ ರೂಪವೂ, ಕಲನ ನಾಮಕವೂ, ಆದ ಪಿಂಡವು ಉತ್ಪನ್ನವಾಗುವುದು. ಕೆಲವು ಕಾಲಗಳಾದ ಬಳಿಕ ಆ ಪಿಂಡವು ಕ್ರಮವಾಗಿ ನೀರಿನ ಬುಡ್ಡೆಯಂತೆ ಆಕಾರವನ್ನು ಹೊಂದುವುದು.

೧೮. ಮಣ್ಣಿನಮುದ್ದೆಯನ್ನು ಚಕ್ರದಮೇಲಿರಿಸಿ ಹಸ್ತದಿಂದ ಒತ್ತುವ, ಕುಂಬಾರನ ವ್ಯಾಪಾರದಿಂದ ಮಡಿಕೆಯು ಉತ್ಪನ್ನವಾಗುವಂತೆ, ಪ್ರಕೃತಿ ಪುರುಷ ಪ್ರೇರಣೆಯಿಂದ ಸ್ವಕರ್ಮಾನುಗುಣವಾಗಿ ಜೀವನ ಉತ್ಪತ್ತಿಯು ಆಗುವುದು.

೧೯. ಹೀಗೆಯೇ ಪಿಂಡಾಕಾರನಾದ ಜೀವನು ಅಸ್ಥಿಸಂಬಂಧವನ್ನು ಪಡೆದು ವಾಯುವಿನಿಂದ ವೃದ್ಧಿಯನ್ನು ಹೊಂದಿ ಆಕಾರ, ಮನಸ್ಸುಗಳಿಂದ ಕೂಡಿ ಪುರುಷ ರೂಪಿಯಾಗುವನು.

೨೦. ಆ ಗರ್ಭಗತವೂ ಶುಕ್ರಶೋಣಿತ ಸಂಬಂಧವೂ ಆದ ಪಿಂಡಕ್ಕೆ ವಾಯುಸಂಬಂಧವೂ ಆದರಿಂದ ಜಲೋತ್ಪತ್ತಿಯೂ ಆಗಿ ಕ್ರಮವಾಗಿ ಆ ಶುಕ್ರವು ವೃದ್ಧಿಯಾಗುವುದು.

೨೧ ಆ ಪಿಂಡದಲ್ಲಿ ರಕ್ತಭಾಗವು ಮೂವತ್ತುಮೂರರಷ್ಟು (೩೩), ಶುಕ್ರಭಾಗವು ಹದಿನಾಲ್ಕರಷ್ಟು (೧೪), ಇರುತ್ತವೆ. ಇವೆರಡೂ ಕೂಡಿ ಅರ್ಧಫಲವಾಗುವುದು. ಅಂದರೆ ಒಂದೂವರೆ ತೊಲದಷ್ಟು ತೂಕವಾಗುತ್ತದೆ. ಅಂಥಹ ಗರ್ಭದಲ್ಲಿ ಜೀವನು ವಾಸಿಸುವನು.

ತತಸ್ತು ಗರ್ಭಸಂಯುಕ್ತಃ ಪಂಚಭಿರ್ವಾಯುಭಿರ್ವೃತಃ ।
ಪಿತುಃ ಶರೀರಾತ್ ಪ್ರತ್ಯಂಗರೂಪಮಸ್ಯೋಪ ಜಾಯತೇ ॥ ೨೨ ॥

ತತೋಽಸ್ಯ ಮಾತುರಾಹಾರಾತ್ ಪೀತಲೀಢ ಪ್ರವೇಸಿತಂ ।
ನಾಭಿಃ ಸ್ರೋತಃ ಪ್ರವೇಶೇನ ಪ್ರಾಣಾಧಾರೋಹಿ ದೇಹಿನಾಂ ॥ ೨೩ ॥

ನವಮಾಸಾನ್ ಪರಿಕ್ಲಿಷ್ಟಃ ಸಂವೇಷ್ಟಿತ ಶಿರೋಧರಃ ।
ವೇಷ್ಟಿತಃ ಸರ್ವಗಾತ್ರೈಶ್ಚ ಅಪರ್ಯಾಯ ಕ್ರಮಾಗತಃ ।
ನವಮಾಸೋಷಿತಶ್ಚೈವ ಯೋನಿಚ್ಛಿದ್ರಾದವಾಙ್ಮುಖಃ ॥ ೨೪ ॥

ತತಸ್ತು ಕರ್ಮಭಿಃ ಪಾಪೈರ್ನಿರಯಂ ಪ್ರತಿಪದ್ಯತೇ ।
ಅಸಿಪತ್ರವನಂ ಚೈವ ಶಾಲ್ಮಲೀಚ್ಛೇದ ಭೇದಯೋಃ ॥ ೨೫ ॥

---

೨೨. ಅನಂತರ ಗರ್ಭಗತನಾದ ಜೀವನಿಗೆ ಪಂಚಪ್ರಾಣಗಳ ಸಂಸರ್ಗವೂ, ತಾಯಿತಂದೆಗಳ ರೂಪವೂ, ಪ್ರತಿಯೊಂದು ಅವಯವಗಳೂ ಉಂಟಾಗುತ್ತವೆ. ಅಂದರೆ ತಂದೆಯ ಹೋಲಿಕೆಯು ಪುತ್ರನಲ್ಲಿ ಸಂಪೂರ್ಣವಾಗಿರುವುದು.

೨೩. ಅನಂತರ ತಾಯಿಯು ಭೋಜನಮಾಡುವ ಅನ್ನಪಾನಾದಿಗಳು ನಾಭಿಯ ನಾಳದ ಮೂಲಕವಾಗಿ ಗರ್ಭಗತವಾದ ಶಿಶುವಿಗೆ ಸೇರಿ ಪ್ರಾಣಧಾರಕಗಳಾಗುತ್ತವೆ. ಅಂದರೆ ತಾಯಿಯ ಆಹಾರಾದಿಗಳು ನಾಭಿಯ ಮೂಲಕ ಶಿಶುವಿಗೆ ಹೋಗಿ ಸೇರುತ್ತದೆ. ಅದರಿಂದ ಶಿಶುವು ವೃದ್ಧಿಯಾಗುವುದು.

೨೪. ಮಾತೃ ಗರ್ಭದಲ್ಲಿ ಜೀವನು ಗುಲ್ಮದಿಂದ ಆವರಿಸಲ್ಪಟ್ಟ, ಶಿರಸ್ಸು, ಸರ್ವಾವಯಗಳೂ, ಉಳ್ಳವನಾಗಿ ಒಂಬತ್ತು ತಿಂಗಳು ಕಷ್ಟಪಟ್ಟು, ವಾಸಿಸುವನು. ಕ್ರಮವಾಗಿ, ನವಮಾಸಾನಂತರ ಯೋನಿಯಮೂಲಕವಾಗಿ ಭೂಮಿಯಲ್ಲಿ ಜನಿಸುವನು.

೨೫. ಹೀಗೆ ಜನಿಸಿದ ಜೀವನು ತನ್ನ ದುಷ್ಕರ್ಮಾನುಗುಣವಾಗಿ ನರಕವನ್ನು ಹೊಂದುವನು ಮತ್ತು ದುಷ್ಕರ್ಮವು ಅಧಿಕವಾದರೆ ಶಾಲ್ಮಲೀಚ್ಛೇದ ಭೇದಗಳುಳ್ಳ ಭಯಂಕರವಾದ ಅಸಿಪತ್ರವನವೆಂಬ ನರಕವನ್ನು ಹೊಂದುವನು.

ತತ್ರ ನಿರ್ಭರ್ತ್ಸನಂ ಚೈವ ತಥಾ ಶೋಣಿತ ಭೋಜನಂ ।
ಯೇತಾಸ್ತು ಯಾತನಾ ಘೋರಾಃ ಕುಂಭೀಪಾಕೆ ಸುದುಃಸಹಾಃ ॥ ೨೬ ॥

ಯಥಾ ಹ್ಯಾಪಸ್ತು ವಿಚ್ಛಿನ್ನಾಃ ಸ್ವರೂಪಮುಪಯಾಂತಿ ವೈ ।
ತಸ್ಮಾಚ್ಛಿನ್ನಾಶ್ಚ ಭಿನ್ನಾಶ್ಚ ಯಾತನಾಸ್ಥಾನಮಾಗತಾಃ ॥ ೨೭ ॥

ಏವಂ ಜೀವಸ್ತು ತೈಃ ಪಾಪೈಃ ತಪ್ಯಮಾನಃ ಸ್ವಯಂ ಕೃತೈಃ ।
ಪ್ರಾಪ್ನುಯಾತ್ಕರ್ಮಭಿರ್ದುಃಖಂ ಶೇಷಂ ವಾ ಯದಿ ಚೇತರಂ ॥ ೨೮ ॥

ಏಕೇನೈವ ತು ಗಂತವ್ಯಂ ಸರ್ವಮೃತ್ಯು ನಿವೇಶನಂ ।
ಏಕೇನೈವ ಚ ಭೋಕ್ತವ್ಯಂ ತಸ್ಮಾತ್ಸುಕೃತ ಮಾಚರೇತ್ ॥ ೨೯ ॥

ನ ಹ್ಯೇನಂ ಪ್ರಸ್ಥಿತಂ ಕಶ್ಚಿತ್ ಗಚ್ಛಂತಮನುಗಚ್ಛತಿ ।
ಯದನೇನ ಕೃತಂ ಕರ್ಮ ತದೇನ ಮನುಗಚ್ಛತಿ ॥ ೩೦ ॥

---

೨೬. ಆ ನರಕದಲ್ಲಿ ಭಯೋತ್ಪಾದನ, ರಕ್ತಪಾನ, ಇವೇ ಮೊದಲಾದ ನಾನಾ ವಿಧವೂ, ಘೋರವೂ ಆದ ಯಾತನೆಗಳುಂಟಾಗುತ್ತವೆ. ಅವು ಸಹಿಸಲಸಾಧ್ಯವಾಗಿದೆ. ಅದಕ್ಕೆ ಕುಂಭೀಪಾಕ ನರಕಯಾತನೆಯೆಂಬ ಸಂಜ್ಞೆಯುಂಟಾಗಿದೆ.

೨೭. ಭಿನ್ನಭಿನ್ನವಾದ ಜಲವು ಒಂದೇ ಸ್ಥಳದಲ್ಲಿ ಕೂಡಿ ತನ್ನ ರೂಪವನ್ನು ಹೊಂದುವಂತೆ, ಭಿನ್ನಭಿನ್ನಗಳಾದ ನಾನಾಯಾತನೆಗಳು ಒಟ್ಟುಗೂಡಿ ಯಾತನಾ ಸ್ಥಾನವಾಗಿದೆ

೨೮. ಹೀಗೆ ಜೀವನು ತನ್ನ ಪೂರ್ವಾರ್ಜಿತವಾದ ಪಾಪಕರ್ಮಶೇಷದಿಂದಲೂ, ಈ ಜನ್ಮದಲ್ಲಿ ಕೃತವಾದ ಕರ್ಮಗಳಿಂದಲೂ, ನಾನಾವಿಧವಾದ ನರಕ ಯಾತನೆಯನ್ನು ಅನುಭವಿಸುವನು.

೨೯. ಯಾವನು ಪಾಪಕರ್ಮಗಳನ್ನಾಚರಿಸುವನೋ, ಅವನೇ ಸರ್ವದುಃಖ ಕರವಾದ ನರಕವನ್ನು ಹೊಂದುವನು. ಅವನೇ ದುಃಖವನ್ನು ಅನುಭವಿಸಬೇಕು. ಆದುದರಿಂದ ಸುಖಾಕಾಂಕ್ಷೆಯುಳ್ಳ ಜೀವನು ಸರ್ವದಾ ಪುಣ್ಯಕಾರ್ಯವನ್ನೇ ಮಾಡಬೇಕು

೩೦. ಹೀಗೆ ನರಕಕ್ಕೆ ಹೋಗತಕ್ಕ ಪುರುಷನನ್ನು ಪತ್ನೀಪುತ್ರರಲ್ಲಿ ಯಾರೊಬ್ಬರೂ ಹಿಂಬಾಲಿಸಿ ಹೋಗುವುದಿಲ್ಲ. ಪುರುಷಕೃತವಾದ ಪುಣ್ಯ ಪಾಪ ಕರ್ಮಗಳು ಮಾತ್ರವೇ ಅವನನ್ನು ಹಿಂಬಾಲಿಸುತ್ತವೆ.

ತೇ ನಿತ್ಯಂ ಯಮವಿಷಯೇ ವಿಭಿನ್ನದೇಹಾಃ ।
ಕ್ರೋಶಂತಃ ಸತತಮನಿಷ್ಟಸಂಪ್ರಯೋಗೈಃ ॥
ಶುಷ್ಯಂತೇ ಪರಿಗತ ವೇದನಾಶರೀರಾಃ ।
ಬಹ್ವೀಭಿಃ ಸುಭೃಶಮಧರ್ಮ ಯಾತನಾಭಿಃ ॥ ೩೧ ॥

ಕರ್ಮಣಾ ಮನಸಾ ವಾಚಾ ಯದಭೀಷ್ಟಂ ನಿಷೇವ್ಯತೇ ।
ತತ್ ಪ್ರಸಹ್ಯ ಹರೇತ್ ಪಾಪಂ ತಸ್ಮಾತ್ ಸುಕೃತಮಾಚರೇತ್ ॥ ೩೨ ॥

ಯಾದೃಗ್ಜಾತಾನಿ ಪಾಪಾನಿ ಪೂರ್ವಂ ಕರ್ಮಾಣಿ ದೇಹಿನಃ ।
ಸಂಸಾರಂ ತಾಮಸಂ ತಾದೃಕ್ ಷಡ್ವಿಧಂ ಪ್ರತಿಪದ್ಯತೇ ॥ ೩೩ ॥

ಮಾನುಷ್ಯಂ ಪಶುಭಾವಂ ಚ ಪಶುಭಾವಾನ್ಮೃಗೋ ಭವೇತ್ ।
ಮೃಗತ್ವಾತ್ ಪಕ್ಷಿಭಾವಂ ತು ತಸ್ಮಾಚ್ಚೈವ ಸರೀಸೃಪಃ ॥ ೩೪ ॥

---

೩೧. ಅಂತಹ ಪಾಪಿಗಳು ಯಮಪುರಿಯಲ್ಲಿ ಭಿನ್ನವಾದ ದೇಹವುಳ್ಳವರಾಗಿ ಸರ್ವದಾ ಅನಿಷ್ಟ ಅಧರ್ಮಕಾರ್ಯಗಳಿಂದ ಅರಚುತ್ತಲೂ, ನಾನಾವಿಧಯಾತನೆಗಳಿಂದ ವಿವಿಧದುಃಖಗಳನ್ನು ಅನುಭವಿಸುತ್ತಲೂ, ವ್ಯಸನಗಳಿಂದ ನರಕಯಾತನೆಯಲ್ಲಿ ಮುಳುಗಿಹೋಗುತ್ತಲೂ ಇರುವರು.

೩೨. ಮನುಷ್ಯನು ಮನೋವಾಕ್ಕಾಯಕರ್ಮಗಳಿಂದ ಸುಕೃತವನ್ನೇ ಮಾಡಬೇಕು. ಅಂತಹ ಸುಕೃತಕರ್ಮವೇ ಪಾಪವನ್ನು ಪರಿಹರಿಸುತ್ತದೆ. ಆದುದರಿಂದ ಸುಕೃತವನ್ನೇ ಆಚರಿಸಬೇಕು.

೩೩. ಪುರುಷನಿಗೆ ಪೂರ್ವಕರ್ಮಾನುಗುಣವಾಗಿ ಯಾವ ಪಾಪಗಳು ಸಂಭವಿಸುತ್ತದೆಯೋ ಅಂತಹ ತಾಮಸರೂಪವೂ ಷಡ್ವಿಧವೂ ಆದ ಪಾಪಗಳನ್ನು ಪಡೆಯುತ್ತಾನೆ.

೩೪-೩೫. ಪುರುಷನು ಮನುಷ್ಯತನದಿಂದ ಪಶುತ್ವವನ್ನೂ, ಆ ಪಶುತನದಿಂದ ಮೃಗಜಾತಿಯನ್ನೂ, ಅದರಿಂದ ಸರ್ಪಸ್ವಭಾವವನ್ನೂ, ಅದರಿಂದ ಸ್ಥಾವರತ್ವವನ್ನೂ

**ಸರೀಸೃಪತ್ವಾದ್ಗಚ್ಛದ್ಧಿ ಸ್ಥಾವರತ್ವಂ ನ ಸಂಶಯಃ ।**
**ಸ್ಥಾವರತ್ವಂ ಪುನಃ ಪ್ರಾಪ್ತೋ ಯಾವದುನ್ಮಿಷತೇ ನರಃ ।**

**ಕುಲಾಲಚಕ್ರವದ್ಭ್ರಾಂತಸ್ತತ್ರೈವ ಪರಿಕೀರ್ತಿತಃ** ॥ ೩೫ ॥
**ಇತ್ಯೇವಂ ಹಿ ಮನುಷ್ಯಾದಿಃ ಸಂಸಾರೇ ಸ್ಥಾವರಾಂತಕೇ ।**

**ವಿಜ್ಞೇಯಸ್ತಾಮಸೋ ನಾಮ ತತ್ರೈವ ಪರಿವರ್ತತೇ** ॥ ೩೬ ॥
**ಸಾತ್ವಿಕಶ್ಚಾಪಿ ಸಂಸಾರೋ ಬ್ರಹ್ಮಾದಿಃ ಪರಿಕೀರ್ತಿತಃ ।**

**ಪಿಶಾಚಾಂತಃ ಸ ವಿಜ್ಞೇಯಃ ಸ್ವರ್ಗಸ್ಥಾನೇಷು ದೇಹಿನಾಂ** ॥ ೩೭ ॥
**ಬ್ರಾಹ್ಮೇ ತು ಕೇವಲಂ ಸತ್ವಂ ಸ್ಥಾವರೇ ಕೇವಲಂ ತಮಃ ।**

**ಚತುರ್ದಶಾನಾಂ ಸ್ಥಾನಾನಾಂ ಮಧ್ಯೇ ವಿಷ್ಟಂಭಕಂ ರಜಃ ।**
**ಮರ್ಮಸು ಛಿದ್ಯಮಾನೇಷು ವೇದನಾರ್ತಸ್ಯ ದೇಹಿನಃ** ॥ ೩೮ ॥

---

ಹೊಂದಿ ವಿವೇಕಿಯಾಗುವನು. ಮತ್ತು ಕುಲಾಲನಚಕ್ರದಂತೆ ಜನನಮರಣಗಳಲ್ಲಿಯೇ ಓಡಾಡುವನು.

೩೬. ಹೀಗೆ ಮನುಷ್ಯಾದಿಯಾಗಿ ಸ್ಥಾವರದವರೆಗೂ ಪರಿಭ್ರಮಣವಾಗುವುದು. ತಾಮಸಗುಣದ ಉದ್ರೇಕದಕಾರ್ಯವೆಂದು ತಿಳಿಯಬೇಕು.

೩೭. ಸ್ವರ್ಗಲೋಕದಲ್ಲಿರತಕ್ಕ ಪ್ರಜೆಗಳ ಸಾತ್ವಿಕಸಂಸಾರವು ಯಾವುದೆಂದರೆ ಬ್ರಹ್ಮಾದಿಯಾಗಿ ಪಿಶಾಚಾಂತವಾದ ಪರಿವರ್ತನೆಯಾಗುವ ಸಂಸಾರವೇ ಆಗಿದೆ. ಅಂದರೆ ದೇವತೆಗಳೂ ಸಹ ಹೀನವಾದ ಕರ್ಮದಿಂದ ಅಲ್ಪದೇವತೆಗಳಾಗಿ ಪಿಶಾಚದ ವರೆಗೂ ಇಳಿಯುತ್ತಾರೆ. ಮನುಷ್ಯರೂ ಸಹ ಸ್ಥಾವರದವರೆಗೂ ನೀಚಜಾತಿಯನ್ನು ಪಡೆಯುವರು.

೩೮. ಬ್ರಹ್ಮಸಂಬಂಧವಾದ ಸಂಸಾರದಲ್ಲಿ ಕೇವಲ ಸತ್ವಗುಣಮಾತ್ರವೇ ಇರುವುದು. ಸ್ಥಾವರಸಂಸಾರದಲ್ಲಿ ಕೇವಲ ತಮೋಗುಣಪ್ರಾಚುರ್ಯವು ಇರುವುದು. ಹದಿನಾಲ್ಕುಲೋಕಗಳ ಮಧ್ಯಗತವಾದ ಭೂಲೋಕದಲ್ಲಿ ರಜೋಗುಣಪ್ರಾಚುರ್ಯ ವಿರುವುದು. ಮನುಷ್ಯನ ಮರ್ಮಸ್ಥಾನಗಳು ನರಕದಲ್ಲಿ ಕತ್ತರಿಸಲ್ಪಡಲಾಗಿ ವೇದನೆ ಯಿಂದ ದುಃಖಿತನಾದ ಮನುಜನಿಗೆ ತನ್ನ ದೋಷಗಳು ವ್ಯಕ್ತವಾಗುತ್ತವೆ.

**ತತಸ್ತು ಪರಮಂ ಬ್ರಹ್ಮ ಕಥಂ ವಿಪ್ರಃ ಸ್ಮರಿಷ್ಯತಿ ।
ಸಂಸ್ಕಾರಾತ್ಪೂರ್ವಧರ್ಮಸ್ಯ ಭಾವನಾಯಾಂ ಪ್ರಣೋದಿತಃ ।
ಮಾನುಷ್ಯಂ ಭಜತೇ ನಿತ್ಯಂ ತಸ್ಮಾನ್ನಿತ್ಯಂ ಸಮಾದಧೇತ್ ॥ ೩೯ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ ಪಾಶುಪತಯೋಗೋ ನಾಮ ಚತುರ್ದಶೋಽಧ್ಯಾಯಃ**

---

೩೯. ಆದುದರಿಂದ ಬ್ರಾಹ್ಮಣನು ಪರಬ್ರಹ್ಮನನ್ನು ಮರೆತು ಎಂದಿಗೂ ದುಷ್ಕರ್ಮಗಳನ್ನು ಮಾಡಬಾರದು. ಜನ್ಮಾಂತರದ ಸಂಸ್ಕಾರವಶದಿಂದ ಪ್ರೇರಿತನಾಗಿ ಜೀವನು ಮನುಷ್ಯಾದಿಶರೀರಗಳನ್ನು ಪಡೆಯುತ್ತಾನೆ. ಆದುದರಿಂದ ನಿತ್ಯವೂ ಸಮಾಹಿತಮನಸ್ಕನಾಗಿ ಸತ್ಕರ್ಮಗಳಮೂಲಕ ಶಾಶ್ವತವಾದ ಪರಮಪದವಿಯನ್ನು ಪಡೆಯಬೇಕು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಪಾಶುಪತಯೋಗ " ವೆಂಬ ಹದಿನಾಲ್ಕನೆಯ ಅಧ್ಯಾಯವು ಸಮಾಪ್ತವು.

## ಹದಿನಾಲ್ಕನೆಯ ಅಧ್ಯಾಯದ ಸಾರಾಂಶವು

ಪುರುಷನು ಜ್ಞಾನವನ್ನು ಪಡೆಯದಿದ್ದರೆ ಕರ್ಮಗಳಿಂದ ಸ್ವರ್ಗಾದಿಲೋಕಗಳನ್ನು ಹೊಂದುವನು. ಆ ಪುಣ್ಯಗಳು ಕ್ಷಯವಾಗಲು ಪುನಃ ಭೂಲೋಕದಲ್ಲಿ ಜನಿಸುವನು. ಆದುದರಿಂದ ಮನುಜನು ಶಾಶ್ವತವಾದ ಪರಮಪದವಿಯನ್ನು ಹೊಂದಲು ಯತ್ನಿಸಬೇಕು ಆ ಪರಮಪದವಿಯು ಶಾಶ್ವತವಾದುದು. ಯೋಗಿಗಳು ಭಗವಂತನನ್ನು ಅತೀಂದ್ರಿಯನು, ಪ್ರಾಕೃತೇಂದ್ರಿಯಶೂನ್ಯನು, ರುಕ್ಮವರ್ಣನು ಎಂಬುದಾಗಿ ನಾನಾರೀತಿಯಾಗಿ ವರ್ಣಿಸುವರು. ಇದರಿಂದ ಅವರಿಗೆ ಶಾಶ್ವತ ಪದವಿಯು ದೊರಕುವುದು. ಹಾಗಿಲ್ಲದಿದ್ದರೆ ಮೃತ್ಯುವಿನ ವಶಕ್ಕೆ ಸಿಕ್ಕಿ ಕುಂಬಾರನ ಹಸ್ತಕುಶಲತೆಯಿಂದ ಮಣ್ಣು ಘಟವಾಗುವಂತೆ ಜೀವನು ಜನನಮರಣಗಳಿಗೆ ಸಿಲುಕಿ ದುಃಖಿಯಾಗುವನು. ಮಾತಾಪಿತೃಗಳ ಗುಣರೂಪಗಳೇ ಪುತ್ರನಿಗೆ ಸಂಭವಿಸುವುವು. ತಾಯಿಯು ತಿಂದ ಅನ್ನಪಾನಾದಿಗಳು ನಾಭಿಕಮಲದಮೂಲಕ ಗರ್ಭದಲ್ಲಿರುವ ಶಿಶುವಿಗೆ ಆಹಾರವಾಗಿ ಪರಿಣಮಿಸುವುದು. ಹೀಗೆ ಜೀವನು ನವಮಾಸದವರೆಗೂ ಗುಲ್ಮದಿಂದ ವೇಷ್ಟಿತವಾಗಿ ನವಮಾಸಾನಂತರ ಭೂಮಿಯಲ್ಲಿ ಜನಿಸುವನು. ಪುನಃ ಸ್ವಕರ್ಮಾನುಗುಣವಾಗಿ ನಾನಾವಿಧಸುಖದುಃಖಗಳನ್ನು ಅನುಭವಿಸುವನು. ಈ ತಾಮಸಸೃಷ್ಟಿಯು ಬ್ರಹ್ಮಾದಿಯಾಗಿ ಪಿಶಾಚಾಂತವಾಗುವುದು. ಆದುದರಿಂದ ಶಾಶ್ವತನಾದ ಬ್ರಹ್ಮನನ್ನು ಸೇವಿಸಿ ಸ್ಥಿರವಾದ ಪರಮಪದವಿಯನ್ನು ಪಡೆಯಬೇಕು.

—|| ಹರಿಃ ಓಮ್ ||—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಪಂಚದಶೋಽಧ್ಯಾಯಃ

॥ ವಾಯುರುವಾಚ ॥

**ಚತುರ್ದಶವಿಧಂ ಹ್ಯೇತದ್ಬುಧ್ವಾ ಸಂಸಾರಮಂಡಲಂ ।**
**ತಥಾ ಸಮಾರಭೇತ್ ಕರ್ಮ ಸಂಸಾರಭಯಪೀಡಿತಃ ॥ ೧ ॥**

**ತತಃ ಸ್ಮರತಿ ಸಂಸಾರಚಕ್ರೇಣ ಪರಿವರ್ತಿತಃ ।**
**ತಸ್ಮಾತ್ತು ಸತತಂ ಯುಕ್ತೋ ಧ್ಯಾನತತ್ಪರಯುಂಜಕಃ**
**ತಥಾ ಸಮಾರಭೇದ್ಯೋಗಂ ಯಥಾತ್ಮಾನಂ ಸ ಪಶ್ಯತಿ ॥ ೨ ॥**

---

## ಹದಿನೈದನೆಯ ಅಧ್ಯಾಯವು

೧. ವಾಯುದೇವನು ಹೇಳಿದನು —:ಜೀವನು ಹದಿನಾಲ್ಕುವಿಧವಾದ ಸಂಸಾರ ಚಕ್ರವನ್ನರಿತು, ಸಂಸಾರಭಯಪೀಡಿತನಾಗಿ ಪುನಃ ಸಂಸಾರದಲ್ಲಿ ಪ್ರವೇಶಿಸದಂತೆ ಸತ್ಕರ್ಮಗಳನ್ನು ಮಾಡಬೇಕು.

೨. ಅನಂತರ ಜೀವನು ತನ್ನ ಕರ್ಮವಶದಿಂದ ಸಂಸಾರ ಚಕ್ರದಲ್ಲಿ ಸುಳಿದಾಡುತ್ತಾ ತನ್ನ ದುಷ್ಕರ್ಮಗಳಿಂದಲೇ, ಈ ವಿಧವಾದ ಕಷ್ಟಗಳು ಬಂದಿವೆಯೆಂದು ತಿಳಿಯುವನು. ಆದುದರಿಂದ ಸರ್ವದಾ ನಿರ್ಮಲಾಂತಃಕರಣನಾಗಿ ಪರಬ್ರಹ್ಮನನ್ನು ಧ್ಯಾನಿಸುತ್ತಾ, ಅವನನ್ನು ಹೊಂದಲು ಮಾಡಬೇಕಾದ ಸತ್ಕರ್ಮಗಳನ್ನು ಮಾಡಬೇಕು.

ಏಷ ಆದ್ಯಃ ಪರಂ ಜ್ಯೋತಿರೇಷ ಸೇತುರನುತ್ತಮಃ ।
ವಿವೃದ್ಧೋ ಹ್ಯೇಷ ಭೂತಾನಾಂ ನ ಸಂಭೇದಶ್ಚ ಶಾಶ್ವತಃ ॥ ೩ ॥

ತದೇನಂ ಸೇತುಮಾತ್ಮಾನಂ ಅಗ್ನಿಂ ವೈ ವಿಶ್ವತೋ ಮುಖಂ ।
ಹೃದಿಸ್ಥಂ ಸರ್ವಭೂತಾನಾಮುಪಾಸೀತ ವಿಧಾನವಿತ್ ॥ ೪ ॥

ಹುತ್ವಾಷ್ಟಾವಾಹುತೀಃ ಸಂಯುಕ್ ಶುಚಿಸ್ತದ್ಗತಮಾನಸಃ ।
ವೈಶ್ವಾನರಂ ಹೃದಿಸ್ಥಂ ತು ಯಥಾವದನುಪೂರ್ವಶಃ ।
ಆಪಃ ಪೂರ್ವಂ ಸಕೃತ್ ಪ್ರಾಶ್ಯ ತೂಷ್ಣೀಂ ಭೂತ್ವಾ ಉಪಾಸತೇ ॥ ೫ ॥

ಪ್ರಾಣಾಯೇತಿ ತತಸ್ತಸ್ಯ ಪ್ರಥಮಾ ಹ್ಯಾಹುತಿಃ ಸ್ಮೃತಾ ।
ಅಪಾನಾಯ ದ್ವಿತೀಯಾ ತು ಸಮಾನಾಯೇತಿ ಚಾಪರಾ ॥ ೬ ॥

---

೩. ಆ ಭಗವಂತನು ಅನಾದಿಯೂ ತೇಜಸ್ಸ್ವರೂಪನೂ, ಸರ್ವೋತ್ತಮನೂ, ಸಂಸಾರತಾರಕನೂ, ಸರ್ವಭೂತಗಳ ವೃದ್ಧಿಗೆ ಕಾರಣನೂ, ಸ್ವಕೀಯ ಪರಕೀಯ ಭೇದಜ್ಞಾನವಿಲ್ಲದವನೂ, ಶಾಶ್ವತನೂ ಆಗಿರುತ್ತಾನೆ.

೪. ಆದುದರಿಂದ ಕ್ರಮವನ್ನರಿತ ಜ್ಞಾನಿಯು ಸಂಸಾರ ಸಮುದ್ರಕ್ಕೆ ಸೇತುವೆ ಯಂತೆ ಇರತಕ್ಕವನೂ, ತೇಜೋರೂಪನೂ, ಸರ್ವತೋಮುಖನೂ, ಸರ್ವಪ್ರಾಣಿಗಳ ಹೃದಯದಲ್ಲಿರತಕ್ಕವನೂ ಆದ ಪರಮಾತ್ಮನನ್ನು ಕ್ರಮವಾಗಿ ಸೇವಿಸಬೇಕು.

೫. ಯೋಗಿಯು ಪರಿಶುದ್ಧನಾಗಿ ಪರಮಾತ್ಮನನ್ನು ಧ್ಯಾನಿಸುತ್ತಾ, ತನ್ನ ಅಂತರ್ಯಾಮಿಯೂ, ಹೃದಯಕಮಲದಲ್ಲಿರತಕ್ಕವನೂ, ಅಗ್ನಿರೂಪನೂ, ಆದ ಭಗವಂತನಿಗೆ ಎಂಟು ಆಹುತಿಗಳನ್ನು ಕ್ರಮವಾಗಿ ಕೊಟ್ಟು, ಮೊದಲು ಆಚಮನ ವನ್ನು ಮಾಡಿ ತರುವಾಯ ಅವನನ್ನು ಸೇವಿಸಬೇಕು.

೬-೭. ಯೋಗಿಯು ಒಂದು ಸಲ ಆಚಮನವನ್ನು ಮಾಡಿ, ಪ್ರಾಣಾಯ ಸ್ವಾಹ, ಅಪಾನಾಯಸ್ವಾಹ, ಸಮಾನಾಯಸ್ವಾಹ, ಉದಾನಾಯಸ್ವಾಹ, ವ್ಯಾನಾಯ ಸ್ವಾಹ, ಎಂಬುದಾಗಿ ಕ್ರಮವಾಗಿ ಐದು ಆಹುತಿಗಳನ್ನು ಕೊಟ್ಟು ಅನಂತರ ಸ್ವೇಚ್ಛೆ ಯಾಗಿ ಭೋಜನವನ್ನು ಮಾಡಬೇಕು. ಭೋಜನದಿಂದ ಏಳುವಾಗಲೂ, ಸಹ

ಉದಾನಾಯ ಚತುರ್ಥೀತಿ ವ್ಯಾನಾಯೇತಿ ಚ ಪಂಚಮೀ ।
ಸ್ವಾಹಾಕಾರೈಃ ಪರಂ ಹುತ್ವಾ ಶೇಷಂ ಭುಂಜೀತಿ ಕಾಮತಃ ।
ಅಪಃ ಪುನಃ ಸಕೃತ್ ಪ್ರಾಶ್ಯ ತ್ರ್ಯಾಚಮ್ಯ ಹೃದಯಂ ಸ್ಪೃಶೇತ್ ॥ ೭ ॥

ಓಂ ಪ್ರಾಣಾನಾಂ ಗ್ರಂಥಿರಸ್ಯಾತ್ಮಾ ರುದ್ರೋ ಹ್ಯಾತ್ಮಾ ವಿಶಾಂತಕಃ ।
ಸ ರುದ್ರೋ ಹ್ಯಾತ್ಮನಃ ಪ್ರಾಣಾ ಏವಮಾಪ್ಯಾಯಯೇತ್ವಯಂ ॥ ೮ ॥

ತ್ವಂ ದೇವಾನಾಮಪಿ ಜ್ಯೇಷ್ಠ ಉಗ್ರಸ್ತ್ವಂ ಚತುರೋ ವೃಷಾ ।
ಮೃತ್ಯುಘ್ನೋಽಸಿ ತ್ವಮಸ್ಮಭ್ಯಂ ಭದ್ರಮೇತದ್ಧುತಂ ಹವಿಃ ॥ ೯ ॥

ಏವಂ ಹೃದಯಮಾಲಭ್ಯ ಪಾದಾಂಗುಷ್ಠೇ ತು ದಕ್ಷಿಣೇ ।
ವಿಶ್ರಾವ್ಯ ದಕ್ಷಿಣಂ ಪಾಣಿಂ ನಾಭಿಂ ವೈ ಪಾಣಿನಾ ಸ್ಪೃಶೇಶ್ ।
ತತಃ ಪುನರುಪಸ್ಪೃಶ್ಯ ಚಾತ್ಮಾನಮಭಿಸಂಸ್ಪೃಶೇತ್ ॥ ೧೦ ॥

---

ಒಂದು ಸಲ ಆಚಮನವನ್ನು ಮಾಡಬೇಕು. ಹಸ್ತ ಪ್ರಕ್ಷಾಳನೆಯಾದ ಮೇಲೆ ತ್ರಿರಾಚಮನವನ್ನು ಮಾಡಬೇಕು. ಅದು ಹೃದಯಗತವಾಗುತ್ತದೆ. ಅನಂತರ ಹೃದಯವನ್ನು ಒಂದುಸಲ ಮುಟ್ಟಿಕೊಳ್ಳಬೇಕು.

೮. ಓಂಕಾರ ಶಬ್ದವಾಚ್ಯನಾದ ಆತ್ಮನೇ ಪ್ರಾಣಗಳಿಗೆ ಆಧಾರನಾಗಿರುವನು. ಆ ಆತ್ಮನೇ ರುದ್ರನಾಗಿರುವನು ಆ ರುದ್ರದೇವನೇ ಆತ್ಮನಿಗೆ ಪ್ರಾಣನಾಗಿರುವನೆಂದು ತಿಳಿದು ತನ್ನನ್ನು ಪ್ರೀತಿಸಿಕೊಳ್ಳಬೇಕು.

೯. ಎಲೈ ಭಗವಂತನೇ ನೀನು ಸರ್ವೋತ್ತಮನೂ, ಭಯಂಕರನೂ, ಚತುರನೂ, ಸಕಲೈಶ್ವರ್ಯವಂತನೂ, ಮೃತ್ಯುಪರಿಹಾರಕನೂ, ಆಗಿರುತ್ತೀಯೇ. ಆದುದರಿಂದ ಹೋಮಮಾಡಿದ ಈ ಹವಿಸ್ಸಿನಿಂದ ನೀನು ನಮಗೆ ಮಂಗಳವನ್ನು ಕೊಡು ಎಂದು ಪ್ರಾರ್ಥಿಸಬೇಕು.

೧೦. ಪೂರ್ವೋಕ್ತರೀತಿಯಲ್ಲಿ ಹೇಳಿ ಹೃದಯವನ್ನು ಸ್ಪರ್ಶಿಸಿ, ದಕ್ಷಿಣ ಪಾದಾಂಗುಷ್ಠವನ್ನು, ದಕ್ಷಿಣ ಹಸ್ತದಿಂದ ಮುಟ್ಟಿ, ಬಲಗೈಯಿಂದ ನಾಭಿಯನ್ನು ಸ್ಪರ್ಶಮಾಡಬೇಕು. ಅನಂತರ ಪುನರಾಚಮನವನ್ನು ಮಾಡಿ ಆತ್ಮನನ್ನು ಸ್ಪರ್ಶಿಸಿ ಧ್ಯಾನಿಸಬೇಕು.

ಅಕ್ಷಿಣೀ ನಾಸಿಕಾ ಶ್ರೋತ್ರೇ ಹೃದಯಂ ಶಿರ ಏವ ಚ ।
ದ್ವಾವಾತ್ಮಾನಾವುಭಾವೇತೌ ಪ್ರಾಣಾಪಾನಾವುದಾಹೃತೌ ॥ ೧೧ ॥

ತಯೋಃ ಪ್ರಾಣೋಂತರಾತ್ಮಾಸ್ಯ ಬಾಹ್ಯೋಽಪಾನೋತ ಉಚ್ಯತೇ ।
ಅನ್ನಂ ಪ್ರಾಣಸ್ತಥಾಪಾನಂ ಮೃತ್ಯುರ್ಜೀವಿತಮೇವ ಚ ॥ ೧೨ ॥

ಅನ್ನಂ ಬ್ರಹ್ಮ ಚ ವಿಜ್ಞೇಯಂ ಪ್ರಜಾನಾಂ ಪ್ರಸವಸ್ತಥಾ ।
ಅನ್ನಾದ್ಭೂತಾನಿ ಜಾಯಂತೇ ಸ್ಥಿತಿರನ್ನೇನ ಚೇಷ್ಯತೇ ।
ವರ್ಧಂತೇ ತೇನ ಭೂತಾನಿ ತಸ್ಮಾದನ್ನಂ ತದುಚ್ಯತೇ ॥ ೧೩ ॥

ತದೇವಾಗ್ನೌ ಹುತಂ ಹ್ಯನ್ನಂ ಭುಂಜತೇ ದೇವದಾನವಾಃ ।
ಗಂಧರ್ವಯಕ್ಷರಕ್ಷಾಂಸಿ ಪಿಶಾಚಾಶ್ಚಾನ್ನಮೇವ ಹಿ ॥ ೧೪ ॥

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ ಪಾಶುಪತಯೋಗೋ ನಾಮ ಪಂಚದಶೋಽಧ್ಯಾಯಃ**

---

೧೧. ತರುವಾಯ ಕಣ್ಣು, ಮೂಗು, ಕಿವಿ, ಹೃದಯ ಇವುಗಳಿಗೆ ಪ್ರಾಣಾಪಾನಗಳೆಂದೂ, ಎರಡು ವಿಧಗಳಾದ ಆತ್ಮಗಳಿರುತ್ತವೆಯೆಂದೂ, ತಿಳಿಯಬೇಕು.

೧೨ ಪ್ರಾಣಾಪಾನಗಳಲ್ಲಿ ಪ್ರಾಣವು, ಜೀವನಿಗೆ ಅಂತರ್ನಿಯಾಮಕವಾಗಿಯೂ ಅಪಾನವು ಬಹಿರ್ನಿಯಾಮಿಕವಾಗಿಯೂ ಆಗಿವೆ. ಅನ್ನಶಬ್ದವಾಚ್ಯನಾದ ಭಗವಂತನು ಪ್ರಾಣಾಪಾನಶಬ್ದವಾಚ್ಯನೂ, ಮೃತ್ಯುರೂಪಿಯೂ ಮತ್ತು ಜೀವನಪ್ರದನೂ ಆಗಿರುತ್ತಾನೆ.

೧೩. ಆದೇ ಅನ್ನವೇ ಬ್ರಹ್ಮರೂಪಿಯೂ, ಪ್ರಜೆಗಳ ಸೃಷ್ಟಿಕರ್ತೃವೂ ಆಗಿದೆ. ಅನ್ನಶಬ್ದವಾಚ್ಯನಾದ ಆ ಬ್ರಹ್ಮನಿಂದಲೇ ಸರ್ವಭೂತಗಳೂ ಉತ್ಪನ್ನವಾಗುತ್ತವೆ. ಅದರಿಂದಲೇ ಜೀವಿಸುತ್ತದೆ ಮತ್ತು ವೃದ್ಧಿಯಾಗುತ್ತದೆ. ಆದುದರಿಂದ ಬ್ರಹ್ಮನಿಗೆ ಅನ್ನನೆಂದು ಹೆಸರು ಬಂದಿದೆ.

೧೪. ಆ ಅಗ್ನಿಯಲ್ಲಿ ಪ್ರಕಾಶನಾಗಿರತಕ್ಕ ಅನ್ನಶಬ್ದವಾಚ್ಯನೂ, ಆದಿಕರ್ತನೂ ಆದ ಭಗವಂತನನ್ನೇ ಗಂಧರ್ವ, ಯಕ್ಷ, ರಾಕ್ಷಸ, ಪಿಶಾಚ, ದೇವ ಮತ್ತು ದಾನವ ಇವರು ಪಾಲನಕರ್ತನೆಂದು ತಿಳಿಯುತ್ತಾರೆ.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಪಾಶುಪತಯೋಗ" ವೆಂಬ ಹದಿನೈದನೆಯ ಅಧ್ಯಾಯವು ಸಮಾಪ್ತವು.

## ಹದಿನೈದನೆಯ ಅಧ್ಯಾಯದ ಸಾರಾಂಶವು

ಬ್ರಹ್ಮಾದಿಯೂ ಸ್ಥಾವರಾಂತವೂ ಆಗಿರುವ ಹದಿನಾಲ್ಕುವಿಧ ಸಂಸಾರಮಂಡಲವನ್ನರಿತ ಪುರುಷನು ಸಂಸಾರಚಕ್ರದಲ್ಲಿ ಜನನಮರಣರೂಪವಾದ ಭ್ರಮಣವನ್ನು ಹೊಂದಿ ಬೇಸತ್ತು ಧ್ಯಾನಪರನಾಗಿ ಸಂಸಾರಪರಿಹಾರಕನಾದ ಪರಮಾತ್ಮನನ್ನು ಭಜಿಸುವನು. ಆ ಭಗವಂತನೇ ಅನಾದಿಯೂ, ತೇಜೋರೂಪನೂ, ತಾರಕನೂ, ಭೂತನಿಯಾಮಕನೂ, ನಿತ್ಯನೂ, ವಿಶ್ವತೋಮುಖನೂ ಆಗಿರುವನು. ಅವನೇ ಸರ್ವಪ್ರಾಣಿಗಳ ಹೃದಯಗುಹೆಯಲ್ಲಿ ಇರತಕ್ಕ ಅಗ್ನಿರೂಪನಾಗಿರುವನು. ಶುಚಿಯೂ, ನಿರ್ಮಲವೂ ಆದ ಅಂತಃಕರಣದಿಂದ ಹೃದಯಗತನೂ, ವೈಶ್ವಾನರನಾಮಕನೂ ಆದ ಪರಮಾತ್ಮನಿಗೆ ಅಷ್ಟವಿಧಗಳಾದ ಆಹುತಿಗಳನ್ನು ಕೊಡಬೇಕು. ಹೇಗೆಂದರೆ ಪ್ರಥಮತಃ ಒಂದುಸಲ ಆಚಮನಮಾಡಿ ಧ್ಯಾನಿಸಿ ‘ ಪ್ರಾಣಾಯಸ್ವಾಹಾ, ಅಪಾನಾಯ ಸ್ವಾಹಾ, ಉದಾನಾಯಸ್ವಾಹಾ, ವ್ಯಾನಾಯಸ್ವಾಹಾ, ಸಮಾನಾಯಸ್ವಾಹಾ ’ ಎಂದು ಐದುಸಲ ಸ್ವಲ್ಪ ಸ್ವಲ್ಪ ಅನ್ನವನ್ನು ಆ ಭಗವಂತನಿಗೆ ಆಹುತಿಯನ್ನಾಗಿ ಕೊಟ್ಟು ಉಳಿದ ಅನ್ನವನ್ನು ತಾನು ಭುಂಜಿಸಬೇಕು. ಏಳುವಾಗ ಪುನಃ ಆಚಮನಮಾಡಬೇಕು. ಹಸ್ತಪ್ರಕ್ಷಾಳನಾನಂತರ ತ್ರಿರಾಚಮನವನ್ನು ಮಾಡಿ ಹೃದಯವನ್ನು ಸ್ಪರ್ಶಿಸಿ “ ಎಲೈ ಸ್ವಾಮಿಯೇ, ನೀನು ಪ್ರಾಣಿಗಳಿಗೆ ಆಶ್ರಯನೂ, ರೋಗನಿವರ್ತಕನೂ, ದೇವೋತ್ತಮನೂ, ಮೃತ್ಯುಪರಿಹಾರಕನೂ ಆಗಿರುತ್ತೀಯೆ, ನಮಗೆ ಮಂಗಳವನ್ನು ದಯಪಾಲಿಸು ” ಎಂದು ಪ್ರಾರ್ಥಿಸಬೇಕು. ನೀನು ಸಕಲೇಂದ್ರಿಯಗಳಿಗೂ, ಪ್ರಾಣಾಪಾನಗಳಿಗೂ, ಹೊರಗೂ, ಒಳಗೂ ನಿಯಾಮಕನಾಗಿ ಇರುತ್ತೀಯೆ. ಅವುಗಳು ಅನ್ನವನ್ನು ಆಶ್ರಯಿಸುತ್ತವೆ. ಅನ್ನವೇ ಬ್ರಹ್ಮನು. ಅದರಿಂದಲೇ ಹುಟ್ಟಿ ಬೆಳೆದು ವೃದ್ಧಿಲಯಗಳನ್ನು ಪಡೆಯುತ್ತವೆ. ಅಂಥ ಅನ್ನರೂಪನಾದ ಬ್ರಹ್ಮನನ್ನೇ ದೇವದಾನವರೂ, ಯಕ್ಷ, ರಾಕ್ಷಸರೂ, ಪಿಶಾಚಗುಹ್ಯಕಾದಿಗಳೂ ಸರ್ವದಾ ಸೇವಿಸುವರು

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಷೋಡಶೋಽಧ್ಯಾಯಃ

॥ ವಾಯುರುವಾಚ ॥

**ಅತ ಊರ್ಧ್ವಂ ಪ್ರವಕ್ಷ್ಯಾಮಿ ಶೌಚಾಚಾರಸ್ಯ ಲಕ್ಷಣಂ ।**
**ಯದನುಷ್ಠಾಯ ಶುದ್ಧಾತ್ಮಾ ಪ್ರೇತ್ಯ ಸ್ವರ್ಗಂ ಹಿ ಪ್ರಾಪ್ನುಯಾತ್ ॥ ೧ ॥**

**ಉದಕಾರ್ಥೀ ತು ಶೌಚಾನಾಂ ಮುನೀನಾಮುತ್ತಮಂ ಪದಂ ।**
**ಯಸ್ತು ತೇಷ್ವಪ್ರಮತ್ತಃ ಸ್ಯಾತ್ ಸ ಮುನಿರ್ನಾವಸೀದತಿ ॥ ೨ ॥**

**ಮಾನಾವಮಾನೌ ದ್ವಾವೇತೌ ತಾವೇವಾಹುರ್ವಿಷಾಮೃತೇ ।**
**ಅವಮಾನಂ ವಿಷಂ ತತ್ರ ಮಾನಂತ್ವಮೃತಮುಚ್ಯತೇ ॥ ೩ ॥**

---

### ಹದಿನಾರನೆಯ ಅಧ್ಯಾಯವು

೧. ವಾಯುದೇವನು ಹೇಳಿದನು :—ಪರಿಶುದ್ಧವಾದ ಅಂತಃಕರಣವುಳ್ಳ ಪುರುಷನು ಯಾವ ಆಚಾರವನ್ನು ಮಾಡುವುದರಿಂದ ಇಹಪರಗಳಲ್ಲಿ ಸುಖವನ್ನೂ, ಸ್ವರ್ಗವನ್ನೂ ಪಡೆಯುವನೋ ಅಂತಹ ಶೌಚಾಚಾರಸ್ವರೂಪಗಳನ್ನು ಈಗ ನಿಮಗಾಗಿ ತಿಳಿಸುವೆನು.

೨. ಶೌಚಾಚಾರಪರರಾದ ಮುನಿಗಳಿಗೆ ಜಲಾಶಯವಿರತಕ್ಕ ಸ್ಥಾನಗಳೇ ಉತ್ತಮವಾದ ಪ್ರದೇಶಗಳಾಗಿವೆ. ಇವುಗಳ ವಿಚಾರದಲ್ಲಿ ಜಾಗರೂಕನಾಗಿರುವ ಯೋಗಿಗೆ ಎಂದಿಗೂ ತೊಂದರೆಗಳು ಉಂಟಾಗುವುದಿಲ್ಲವು.

೩. ಮಾನಾವಮಾನಗಳಲ್ಲಿ ಮಾನವನ್ನು ಅಮೃತವೆಂದೂ ಅವಮಾನವನ್ನು ವಿಷವೆಂದೂ ಹೇಳುತ್ತಾರೆ. ಆದುದರಿಂದ ಇವುಗಳ ವಿಷಯದಲ್ಲಿ ಎಚ್ಚರವಿರಬೇಕು.

ಯಸ್ತು ತೇಷ್ವಪ್ರಮತ್ತಃ ಸ್ಯಾತ್ ಸ ಮುನಿರ್ನಾವಸೀದತಿ ।
ಗುರೋಃ ಪ್ರಿಯಹಿತೇ ಯುಕ್ತಃ ಸ ತು ಸಂವತ್ಸರಂ ವಸೇತ್ ॥ ೪ ॥

ನಿಯಮೇಷ್ವಪ್ರಮತ್ತಸ್ತು ಯಮೇಷು ಚ ಸದಾ ಭವೇತ್ ।
ಪ್ರಾಪ್ಯಾನುಜ್ಞಾಂ ತತಶ್ಚೈವ ಜ್ಞಾನಾಗಮನಮುತ್ತಮಂ ।
ಅವಿರೋಧೇನ ಧರ್ಮಸ್ಯ ವಿಚರೇತ್ ಪೃಥಿವೀಮಿಮಾಂ ॥ ೫ ॥

ಚಕ್ಷುಃ ಪೂತಂ ವ್ರಜೇನ್ಮಾರ್ಗಂ ವಸ್ತ್ರಪೂತಂ ಜಲಂ ಪಿಬೇತ್ ।
ಸತ್ಯಪೂತಾಂ ವದೇದ್ವಾಣೀಮಿತಿ ಧರ್ಮಾನುಶಾಸನಂ ॥ ೬ ॥

ಆತಿಥ್ಯಂ ಶ್ರಾದ್ಧಯಜ್ಞೇಷು ನ ಗಚ್ಛೇತ್ ಯೋಗವಿತ್ಕ್ವಚಿತ್ ।
ಏವಂ ಹ್ಯಹಿಂಸಕೋ ಯೋಗೀ ಭವೇದಿತಿ ವಿಚಾರಣಾ ॥ ೭ ॥

---

೪. ಯಾವನು ಮಾನಾಪಮಾನಗಳಲ್ಲಿ ಜಾಗರೂಕನಾಗಿ ದುಃಖಕ್ಕೆ ಭಾಗಿಯಾಗದೆ ಗುರುಗಳ ಪ್ರಿಯ ಮತ್ತು ಹಿತಗಳಲ್ಲಿ ಆಸಕ್ತನಾಗುವನೋ ಅವನು ಗುರುಕುಲದಲ್ಲಿ ಒಂದು ವರ್ಷಕಾಲ ವಾಸಮಾಡಬೇಕು.

೫. ಶಿಷ್ಯನು ಯಮನಿಯಮಗಳಲ್ಲಿ ಆಸಕ್ತನಾಗಿ ಗುರುಗಳ ಆಜ್ಞೆಯನ್ನು ಮೀರದೆ ಜ್ಞಾನವನ್ನು ಸಂಪಾದಿಸಿಕೊಂಡು ಧರ್ಮಗಳಿಗೆ ಅವಿರೋಧವಾಗಿ ಭೂಮಂಡಲದಲ್ಲಿ ಸಂಚರಿಸಬೇಕು.

೬. ಮನುಷ್ಯನು ಭೂಮಿಯು ಪರಿಶುದ್ಧವೆಂದು ನೇತ್ರಗಳಿಂದ ತಿಳಿದು ಆ ಮಾರ್ಗದಲ್ಲಿ ನಡೆಯಬೇಕು. ವಸ್ತ್ರದಿಂದ ಶೋಧಿಸಿದ ಜಲವನ್ನು ಪಾನಮಾಡಬೇಕು. ಸತ್ಯವಾದ ಮಾತನ್ನು ಆಡಬೇಕು. ಹೀಗೆ ಆಚರಿಸಬೇಕೆಂದು ಧರ್ಮಶಾಸ್ತ್ರಗಳು ಘೋಷಿಸುತ್ತವೆ.

೭. ಯೋಗಿಯು ಯಾವಾಗಲೂ ಶ್ರಾದ್ಧದ ಭೋಜನಕ್ಕೂ, ಯಾಗದ ಊಟಕ್ಕೂ ಹೋಗಬಾರದು. ಮತ್ತು ಪರಹಿಂಸೆಯನ್ನು ಮಾಡದೆ ವಿಹಿತಾಚರಣೆಗಳಲ್ಲಿಯೇ ನಿರತನಾಗಿರಬೇಕೆಂದು ಶಾಸ್ತ್ರಗಳು ತಿಳಿಸುತ್ತವೆ.

ವನ್ಹೌ ವಿಧೂಮೇ ವ್ಯಂಗಾರೇ ಸರ್ವಸ್ಮಿನ್ ಭುಕ್ತವಜ್ಜನೇ ।
ವಿಚರೇನ್ಮತಿರ್ನ್ಮ ಯೋಗೀ ನ ತು ತೇಷ್ವೇವ ನಿತ್ಯಶಃ ॥ ೮ ॥

ಯಥೈವಮನುಮನ್ಯಂತೇ ಯಥಾ ಪರಿಭವಂತಿ ಚ ।
ಯುಕ್ತಸ್ತಥಾ ಚರೇದ್ಭೈಕ್ಷಂ ಸತಾಂ ಧರ್ಮಮದೂಷಯನ್ ॥ ೯ ॥

ಭೈಕ್ಷಂ ಚರೇದ್ಗೃಹಸ್ಥೇಷು ಯಥಾಚಾರ ಗೃಹೇಷು ಚ ।
ಶ್ರೇಷ್ಠಾ ತು ಪರಮಾ ಚೇಯಂ ವೃತ್ತಿರಸ್ಯೋಪದಿಶ್ಯತೇ ॥ ೧೦ ॥

ಅತ ಊರ್ಧ್ವಂ ಗೃಹಸ್ಥೇಷು ಶಾಲೀನೇಷು ಚರೇದ್ದ್ವಿಜಃ ।
ಶ್ರದ್ಧಧಾನೇಷು ದಾಂತೇಷು ಶ್ರೋತ್ರಿಯೇಷು ಮಹಾತ್ಮಸು ॥ ೧೧ ॥

ಅತ ಊರ್ಧ್ವಂ ಪುನಶ್ಚಾಪಿ ಅದುಷ್ಟಪತಿತೇಷು ಚ ।
ಭೈಕ್ಷಚರ್ಯಾ ವಿವರ್ಣೇಷು ಜಘನ್ಯಾ ವೃತ್ತಿರುಚ್ಯತೇ ॥ ೧೨ ॥

---

೮ ಯೋಗಿಯಾದವನು ಅಡಿಗೆಯಾಗಿ ಬೆಂಕಿ, ಹೊಗೆ ಇವು ಆರಿದ ಮೇಲೆಯೂ, ಎಲ್ಲರೂ ಭೋಜನಮಾಡಿದಮೇಲೆಯೂ ಅಲ್ಲಿಗೆ ಹೋಗಬೇಕೇ ವಿನಾ ಮೊದಲಿನಿಂದಲೂ ಅಲ್ಲಿಯೇ ನಿರತನಾಗಬಾರದು. ಅಂದರೆ ಭುಕ್ತಶೇಷವಾಗಿ ಕೊಟ್ಟ ಅನ್ನದಿಂದ ಅಲ್ಪತೃಪ್ತನಾಗಿರಬೇಕು.

೯. ಯೋಗಿಯು ತನಗೆ ಹೇಗೆ ಅಪಮಾನವೂ ಮತ್ತು ತಿರಸ್ಕಾರವೂ ಆಗುವುದೋ ಕೂಡಿದಮಟ್ಟಿಗೂ ಹಾಗೆಯೇ ಭಿಕ್ಷೆಗಾಗಿ ನಡೆದುಕೊಳ್ಳಬೇಕು. ಇದೇ ಯತಿಗೆ ಧರ್ಮದಮಾರ್ಗವು. ಸಜ್ಜನರ ಧರ್ಮವನ್ನು ದೂಷಿಸಬಾರದು.

೧೦. ಯತಿಯು ಯೋಗ್ಯರಾದ ಗೃಹಸ್ಥರಮನೆಗಳಲ್ಲಿ ಭಿಕ್ಷವನ್ನು ಸ್ವೀಕರಿಸಬೇಕು. ಆಚಾರಶೀಲರಾದ ಗೃಹಸ್ಥರ ಭಿಕ್ಷೆಯೇ ಪರಮಶ್ರೇಷ್ಠವೆಂದು ಉಕ್ತವಾಗಿದೆ. ಇದೇ ಇವನ ಉತ್ತಮ ಜೀವನವು.

೧೧. ಈಗ ದ್ವಿಜನೂ, ಶೀಲವಂತನೂ, ವಿಶ್ವಾಸದಿಂದ ದಾನಮಾಡುವನೂ, ದಾನಶೂರನೂ, ಶ್ರೋತ್ರಿಯನೂ, ಮಹಾತ್ಮನೂ ಆದ ಗೃಹಸ್ಥರಲ್ಲಿ ಭಿಕ್ಷೆಯನ್ನು ತೆಗೆದುಕೊಳ್ಳುವುದು ಉತ್ತಮವಾದು ಎಂದು ಹಿರಿಯರು ಹೇಳುವರು.

೧೨. ಈಗ ದುಷ್ಟರೂ, ಪತಿತರೂ ಅಲ್ಲದೆ ವಿಜಾತೀಯರೂ ಆದವರ ಮನೆಗಳಲ್ಲಿ ಭಿಕ್ಷೆಯನ್ನು ಸ್ವೀಕರಿಸುವುದು ನಿಂದ್ಯವಾದ ವೃತ್ತಿಯೆಂದು ಜ್ಞಾನಿಗಳು ಹೇಳುವರು ಎಂಬುದನ್ನು ತಿಳಿಸುವೆನು.

ಭೈಕ್ಷಂ ಯೂವಾಗೂಂ ತಕ್ರಂ ವಾ ಪಯೋಯಾವಕಮೇವ ಚ ।
ಫಲಮೂಲಂ ವಿಪಕ್ವಂ ವಾ ಪಿಣ್ಯಾಕಂ ಶಕ್ತಿತೋಽಪಿ ವಾ ॥ ೧೩ ॥

ಇತ್ಯೇತೇ ವೈ ಮಯಾ ಪ್ರೋಕ್ತಾ ಯೋಗಿನಾಂ ಸಿದ್ಧಿವರ್ಧನಾಃ ।
ಅಹಾರಾಸ್ತೇಷು ಸಿದ್ಧೇಷು ಶ್ರೇಷ್ಠಂ ಭೈಕ್ಷಮಿತಿ ಸ್ಮೃತಂ ॥ ೧೪ ॥

ಅಬ್ಬಿಂದುಂ ಯಃ ಕುಶಾಗ್ರೇಣ ಮಾಸೇಮಾಸೇ ಸಮುಶ್ನುತೇ ।
ನ್ಯಾಯತೋ ಯಸ್ತು ಭಿಕ್ಷೇತ ಸ ಪೂರ್ವೋಕ್ತಾದ್ವಿಶಿಷ್ಯತೇ ॥ ೧೫ ॥

ಯೋಗಿನಾಂ ಚೈವ ಸರ್ವೇಷಾಂ ಶ್ರೇಷ್ಠಂ ಚಾಂದ್ರಾಯಣಂ ಸ್ಮೃತಂ ।
ಏಕಂ ದ್ವೇ ತ್ರೀಣಿ ಚತ್ವಾರಿ ಶಕ್ತಿತೋ ವಾ ಸಮಾಚರೇತ್ ॥ ೧೬ ॥

---

೧೩-೧೪. ಯೋಗಿಗಳಿಗೆ ಅನ್ನ, ಗಂಜಿ, ಮಜ್ಜಿಗೆ, ಹಾಲು, ಅಲಸಂದಿ, ಫಲ, ಗೆಡ್ಡೆಗೆಣಸು, ಕಾಯಿ, ಹಿಂಡಿ ಇವುಗಳು ಸಿದ್ಧಿದಾಯಕವಾದ ಆಹಾರಗಳಾಗಿವೆ. ಇವುಗಳಲ್ಲಿ ಭಿಕ್ಷಾನ್ನವೇ ಉತ್ತಮವಾದ ಆಹಾರವೆಂದು ಜ್ಞಾನಿಗಳು ಹೇಳುವರು.

೧೫. ಯಾವನು ಪ್ರತಿಮಾಸದಲ್ಲಿಯೂ ದರ್ಭೆಯ ಅಗ್ರದಿಂದ ಬೀಳುವ ಜಲಬಿಂದುಗಳನ್ನು ಪಾನಮಾಡುವನೋ ಮತ್ತು ಸರಿಯಾದ ರೀತಿಯಿಂದ ಯೋಗ್ಯ ಗೃಹಸ್ಥರ ಭಿಕ್ಷವನ್ನು ಸ್ವೀಕರಿಸುವನೋ ಅವನು ಎಲ್ಲರಿಗಿಂತಲೂ ಉತ್ತಮನಾಗಿರುವನು.

೧೬. ಯೋಗಿಗಳಲ್ಲಿ ಚಾಂದ್ರಾಯಣವ್ರತವನ್ನು ಮಾಡಿರುವ ಯೋಗಿಯೇ ಉತ್ತಮನು. ಚಾಂದ್ರಾಯಣವ್ರತವೆಂದರೆ ಶುಕ್ಲಪಕ್ಷದ ಪಾಡ್ಯಮಿ ಮೊದಲುಗೊಂಡು ಪ್ರತಿದಿನದಲ್ಲಿಯೂ ಒಂದೊಂದು ಕಬಳವನ್ನು ಹೆಚ್ಚಿಸಿ ಪೌರ್ಣಿಮೆಯಲ್ಲಿ ಹದಿನೈದು ಕಬಳವನ್ನೂ, ಕೃಷ್ಣಪಕ್ಷದಲ್ಲಿ ಒಂದೊಂದು ಕಬಳವನ್ನು ದಿನಪಹಿ ಕಡಿಮೆಮಾಡಿ ಅಮಾವಾಸ್ಯೆಯಲ್ಲಿ ಉಪವಾಸವನ್ನು ಮಾಡಿದರೆ ಚಾಂದ್ರಾಯಣವ್ರತವು. ಈ ವ್ರತವನ್ನು ಶಕ್ತ್ಯನುಸಾರವಾಗಿಯೂ, ನಿಯಮಪೂರ್ವಕವಾಗಿಯೂ ಮಾಡುವವನು ಉತ್ತಮನಾಗುವನು.

ಅಸ್ತೇಯಂ ಬ್ರಹ್ಮಚರ್ಯಂ ಚ ಅಲೋಭಸ್ತ್ಯಾಗ ಏವ ಚ ।
ವ್ರತಾನಿ ಚೈವ ಭಿಕ್ಷೂಣಾಮಹಿಂಸಾ ಪರಮಾರ್ಥಿತಾ ॥ ೧೭ ॥

ಅಕ್ರೋಧೋ ಗುರುಶುಶ್ರೂಷಾ ಶೌಚಮಾಹಾರಲಾಘವಂ ।
ನಿತ್ಯಂ ಸ್ವಾಧ್ಯಾಯ ಇತ್ಯೇತೇ ನಿಯಮಾಃ ಪರಿಕೀರ್ತಿತಾಃ ॥ ೧೮ ॥

ಬೀಜಯೋನಿರ್ಗುಣವಪುರ್ಬದ್ಧಃ ಕರ್ಮಭಿರೇವ ಚ ।
ಯಥಾ ದ್ವಿಪ ಇವಾರಣ್ಯೇ ಮನುಷ್ಯಾಣಾಂ ವಿಧೀಯತೇ ॥ ೧೯ ॥

ಪ್ರಾಪ್ಯತೇ ವಾ ಚಿರಾದೇವಾಂಕುಶೇನೇವ ನಿವಾರಿತಃ ।
ಏವಂ ಜ್ಞಾನೇನ ಶುದ್ಧೇನ ದಗ್ಧಬೀಜೋ ಹ್ಯಕಲ್ಮಷಃ ।
ವಿಮುಕ್ತಬಂಧಃ ಶಾಂತೋಽಸೌ ಮುಕ್ತ ಇತ್ಯಭಿಧೀಯತೇ ॥ ೨೦ ॥

---

೧೭. ಯೋಗಿಗಳಿಗೆ ಅಸ್ತೇಯ (ಕದಿಯದೇ ಇರುವುದು) ಬ್ರಹ್ಮಚರ್ಯ, ಅಲೋಭ, ತ್ಯಾಗ, ವ್ರತ, ಅಹಿಂಸಾ, ನಿಯಮ ಇವುಗಳು ಮುಖ್ಯವೂ, ಪಾರಮಾರ್ಥಿಕವೂ ಆದ ಧರ್ಮಗಳಾಗಿವೆ.

೧೮. ಯತಿಗಳಿಗೆ ಕೋಪರಾಹಿತ್ಯ, ಗುರುಸೇವೆ, ಶೌಚ, ಅಲ್ಪಾಹಾರ, ಸದಾ ಶಾಸ್ತ್ರಾಭ್ಯಾಸ ಇವುಗಳು ನಿಯತವಾದ ಧರ್ಮಗಳಾಗಿವೆಯೆಂದು ಜ್ಞಾನಿಗಳು ಹೇಳುವರು.

೧೯. ಪುರುಷನು ಪೂರ್ವಜನ್ಮದ ಕರ್ಮಾನುಗುಣವಾಗಿಯೂ, ಬೀಜಯೋನಿಗಳ ಗುಣಾನುಸಾರವಾಗಿಯೂ ಇರುವ ಶರೀರವನ್ನು ಪಡೆದು ಅರಣ್ಯದಲ್ಲಿ ಸಂಚರಿಸುವ ಆನೆಯಂತೆ ಮತ್ತನಾಗಿ ಸ್ವೇಚ್ಛೆಯಾಗಿ ಸಂಚರಿಸುವನು.

೨೦. ಆ ಆನೆಯು ಪುರುಷನ ವಶಕ್ಕೆ ಸಿಲುಕಿ ಅಂಕುಶಕ್ಕೆ ವಶವಾಗುವಂತೆ ಮನುಷ್ಯನೂ ಕೂಡ ಶುದ್ಧವಾದ ಜ್ಞಾನದಿಂದ ದಗ್ಧವಾದ ಪಾಪಗಳುಳ್ಳವನೂ, ನಿಷ್ಕಲ್ಮಷನೂ, ಮುಕ್ತಬಂಧನೂ, ಶಾಂತನೂ ಆಗಿ ಮುಕ್ತನಾಗುವನು ಎಂದು ಜ್ಞಾನಿಗಳು ಹೇಳುವರು.

ವೇದೈಸ್ತು ತ್ಯಾ ಸರ್ವಯಜ್ಞಕ್ರಿಯಾಸ್ತು ।
ಯಜ್ಞೇಜಪ್ಯಂ ಜ್ಞಾನಿನಾಮಾಹುರಗ್ರ್ಯಂ ॥
ಜ್ಞಾನಾದ್ಧ್ಯಾನಂ ಸಂಗರಾಗವ್ಯಪೇತಂ ।
ತಸ್ಮಿನ್ ಪ್ರಾಪ್ತೇ ಶಾಶ್ವತಸ್ಯೋಪಲಬ್ಧಿಃ ॥ ೨೦ ॥

ದಮಃ ಶಮಃ ಸತ್ಯಮಕಲ್ಮಷತ್ವಂ ।
ಮೌನಂಚ ಭೂತೇಷ್ವಖಿಲೇಷ್ವಥಾರ್ಜವಂ ॥
ಅತೀಂದ್ರಿಯ ಜ್ಞಾನಮಿದಂ ತಥಾರ್ಜವಂ ।
ಪ್ರಾಹುಸ್ತಥಾ ಜ್ಞಾನವಿಶುದ್ಧಸತ್ವಾಃ ॥ ೨೨ ॥

ಸಮಾಹಿತೋ ಬ್ರಹ್ಮಪರೋಽಪ್ರಮಾದೀ ।
ಶುಚಿಸ್ತಥೈವಾತ್ಮರತಿರ್ಜಿತೇಂದ್ರಿಯಃ ॥
ಸಮಾಪ್ನುಯುರ್ಯೋಗಮಿಮಂ ಮಹಾಧಿಯೋ ।
ಮಹರ್ಷಯಶ್ಚೈವ ಮನಿಂದಿತಾಮಲಾಃ ॥ ೨೩ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಶೌಚಾಚಾರ ಲಕ್ಷಣಂ " ನಾಮ ಷೋಡಶೋಽಧ್ಯಾಯಃ

---

೨೧. ವೇದಗಳು ಸಂಪೂರ್ಣವಾಗಿ ಯಜ್ಞಕರ್ಮಗಳನ್ನು ಸ್ತುತಿಸುತ್ತವೆ. ಆ ಕರ್ಮಗಳನ್ನು ಜ್ಞಾನಿಗಳು ಆಚರಿಸುವರು ಇದರಿಂದ ಜ್ಞಾನಿಗಳು ಮರ್ಯಾದಾರ್ಹರಾಗಿರುವರು. ಅವರ ಜ್ಞಾನದಿಂದ ರಾಗರಹಿತವಾದ ಧ್ಯಾನವೂ ಉಂಟಾಗಿ ಅದರಿಂದ ಶಾಶ್ವತವಾದ ಪರಮಪದವಿಯು ಯೋಗಿಗಳಿಗೆ ಪ್ರಾಪ್ತವಾಗುವುದು.

೨೨. ಜ್ಞಾನಿಗಳು ಶಮ, ದಮ, ಸತ್ಯ, ಪಾಪರಾಹಿತ್ಯ, ಮೌನ, ಸಕಲಭೂತ ಸಮತ್ವ, ಇಂದ್ರಿಯಾತೀತವಾದಜ್ಞಾನ, ಶಾಸ್ತ್ರಜ್ಞಾನ, ರುಜುಮಾರ್ಗ ಇವುಗಳು ಬ್ರಹ್ಮಜ್ಞಾನಕ್ಕೆ ಸಾಧಕಗಳೆಂದು ಹೇಳುವರು

೨೩. ಸ್ಥಿರಚಿತ್ತನೂ, ಬ್ರಹ್ಮಪರನೂ, ಜಾಗರೂಕನೂ, ಶುಚಿಯೂ, ಆತ್ಮರತನೂ, ಜಿತೇಂದ್ರಿಯನೂ, ಬುದ್ಧಿವಂತನೂ, ಗಣ್ಯನೂ, ಅನಿಂದಿತನೂ, ಅಮಲನೂ, ನಿರ್ದೋಷಿಯೂ ಆದ ಮಹರ್ಷಿಯು ಈ ಯೋಗಾಭ್ಯಾಸದ ಫಲವನ್ನು ಪಡೆಯುವನು. ಅಂದರೆ ಇಂತಹ ಯೋಗಿಗಳು ಪರಮಪದವಿಯನ್ನು ಹೊಂದುವರು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಶೌಚಾಚಾರಲಕ್ಷಣನಿರೂಪಣ " ವೆಂಬ ಹದಿನಾರನೆಯ ಅಧ್ಯಾಯವು ಸಮಾಪ್ತವು.

# ಹದಿನಾರನೆಯ ಅಧ್ಯಾಯದ ಸಾರಾಂಶವು

ಶೌಚಾಚಾರಸ್ವರೂಪಗಳು ಇಲ್ಲಿ ನಿರೂಪಿತಗಳಾಗಿವೆ. ನದೀತಟಾಕಾದಿ ಜಲಾಶಯವಿರುವದು ಉತ್ತಮವಾದ ಆಶ್ರಮವಾಗಿದೆ. ಆ ಜಲಾಶಯಗಳಿಲ್ಲದಿದ್ದರೆ ಮುನಿಗಳಿಗೂ ಸಹ ದುಃಖವೇ ಸಂಭವಿಸುವುದು. ಅವರಿಗೆ ಮಾನಾಪಮಾನಗಳು ಅಮೃತವಿಷಪ್ರಾಯಗಳು. ಇಂತಹ ಯೋಗಿಯು ಯಮನಿಯಮಾದಿಯುಕ್ತನಾಗಿ ಒಂದು ವರ್ಷಕಾಲ ಗುರುಕುಲದಲ್ಲಿದ್ದು ಗುರುಗಳ ಸೇವೆಯನ್ನು ಮಾಡಿ ಜ್ಞಾನವನ್ನು ಸಂಪಾದಿಸಬೇಕು. ಯೋಗಿಯಾದವನು ಯಜ್ಞಯಾಗಾದಿಭೋಜನವನ್ನೂ, ಶ್ರಾದ್ಧದಭೋಜನವನ್ನೂ ಮಾಡಬಾರದು. ಎಲ್ಲರೂ ಭೋಜನಮಾಡಿದನಂತರ ಯೋಗಿಯು ಹೋಗಿ ಶ್ರಮಪಡದೆ ಪರಿಶುದ್ಧರೂ, ಉದಾರಿಗಳೂ, ಜ್ಞಾನಿಗಳೂ, ದಯಾವಂತರೂ, ಶ್ರೋತ್ರಿಯರೂ ಆದ ಗೃಹಸ್ಥರ ಮನೆಗಳಲ್ಲಿ ಭಿಕ್ಷಾನ್ನವನ್ನು ಪಡೆಯಬೇಕು. ಇದೇ ಉತ್ತಮವಾದ ಭಿಕ್ಷಾಚರ್ಯೆಯು. ಯೋಗಿಯು ಅನ್ನ, ಗಂಜಿ, ಹಾಲು, ಮಜ್ಜಿಗೆ, ಕಾಯಿ, ಪಲ್ಯ, ಗೆಡ್ಡೆಗೆಣಸು ಇವುಗಳನ್ನು ಪ್ರಾರ್ಥಿಸಬಹುದು. ಚಾಂದ್ರಾಯಣಾದಿವ್ರತಗಳನ್ನು ಮಾಡುವವನು ಉತ್ತಮನು ಯೋಗಿಗಳಿಗೆ ಅಸ್ತೇಯ, ಬ್ರಹ್ಮಚರ್ಯ, ಅಲೋಭ, ತ್ಯಾಗ ಮತ್ತು ಅಹಿಂಸಾ ಇವು ಮುಖ್ಯವಾದ ಕಾರ್ಯಗಳು. ಮದ್ದಾನೆಗಳು ಅಂಕುಶಕ್ಕೆ ವಶವಾಗುವಂತೆ ಜ್ಞಾನದಿಂದ ಅಸಾಧ್ಯವಾದ ಮುಕ್ತಿಯು ದೊರೆಯುವುದು. ಸಕಲವಾದ ಯಜ್ಞಾದಿಕರ್ಮಗಳಿಗಿಂತಲೂ ಜ್ಞಾನವೇ ಉತ್ತಮವು. ಈ ಜ್ಞಾನದಿಂದ ಪರಮಪದವಿಯು ಲಭ್ಯವಾಗುವುದು.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ಸಪ್ತದಶೋಽಧ್ಯಾಯಃ

॥ ವಾಯುರುವಾಚ ॥

ಆಶ್ರಮತ್ರಯಮುತ್ಸೃಜ್ಯ ಪ್ರಾಪ್ತಸ್ತು ಪರಮಾಶ್ರಮಂ ।
ಅತಃ ಸಂವತ್ಸರಸ್ಯಾಂತೇ ಪ್ರಾಪ್ಯ ಜ್ಞಾನಮನುತ್ತಮಂ ॥ ೧ ॥

ಅನುಜ್ಞಾಪ್ಯ ಗುರುಂ ಚೈವ ವಿಚರೇತ್ ಪೃಥಿವೀಮಿಮಾಂ ।
ಸಾರಭೂತಮುಪಾಸೀತ ಜ್ಞಾನಂ ಯತ್ ಜ್ಞೇಯಸಾಧಕಂ ॥ ೨ ॥

ಇದಂ ಜ್ಞಾನಮಿದಂ ಜ್ಞೇಯಮಿತಿ ಯಸ್ತೃಷಿತಶ್ಚರೇತ್ ।
ಅಪಿ ಕಲ್ಪಸಹಸ್ರಾಯುರ್ನೈವ ಜ್ಞೇಯಮವಾಪ್ನುಯಾತ್ ॥ ೩ ॥

---

## ಹದಿನೇಳನೆಯ ಅಧ್ಯಾಯವು

೧-೨. ಜ್ಞಾನಿಯಾದವನು ಮೂರು ಆಶ್ರಮಗಳನ್ನೂ ತ್ಯಜಿಸಿ ತುರೀಯಾಶ್ರಮವನ್ನು ಹೊಂದಿ ಗುರುಕುಲದಲ್ಲಿ ಒಂದು ವರ್ಷವಿದ್ದು ಕೊನೆಯಲ್ಲಿ ಉತ್ತಮಜ್ಞಾನವನ್ನು ಹೊಂದಿ ಗುರುಗಳ ಆಜ್ಞೆಯನ್ನು ಪಡೆದು ಭೂಸಂಚಾರ ಮಾಡಬೇಕು. ಮತ್ತು ಜ್ಞೇಯಸಾಧಕವಾದ ಜ್ಞಾನವನ್ನು ಪಡೆದು ಅದರಿಂದ ಸಾರಭೂತನಾದ ಭಗವಂತನನ್ನು ಉಪಾಸನೆಮಾಡಬೇಕು.

೩. ಇದು ಜ್ಞಾನ, ಇದು ಜ್ಞೇಯವೆಂದು ತಿಳಿದರೂ ಅವನನ್ನು ಸೇವಿಸಿ ಯಾವನು ಅವನ ಅನುಗ್ರಹಕ್ಕೆ ಪಾತ್ರನಾಗದೆಯೇ ದೇವಗಣಗತನಾಗಿ ಸಂಚರಿಸುವನೋ ಅವನು ಸಹಸ್ರಾರು ಕಲ್ಪಗಳವರೆಗೂ ಜೀವಿಸಿದರೂ ಜ್ಞೇಯನಾದ ಬ್ರಹ್ಮನನ್ನು ಹೊಂದಲಾರನು.

ತ್ಯಕ್ತಸಂಗೋ ಜಿತಕ್ರೋಧೋ ಲಘ್ವಾಹಾರೋ ಜಿತೇಂದ್ರಿಯಃ ।
ಪಿಧಾಯ ಬುದ್ಧ್ಯಾ ದ್ವಾರಾಣಿ ಧ್ಯಾನೇ ಹ್ಯೇವಂ ಮನೋ ದಧೇತ್ ॥ ೪ ॥

ಶೂನ್ಯೇಷ್ವೇವಾವಕಾಶೇಷು ಗುಹಾಸು ಚ ವನೇ ತಥಾ ।
ನದೀನಾಂ ಪುಲಿನೇ ಚೈವ ನಿತ್ಯಂ ಯುಕ್ತಃ ಸದಾ ಭವೇತ್ ॥ ೫ ॥

ವಾಗ್ದಂಡಃ ಕರ್ಮದಂಡಶ್ಚ ಮನೋದಂಡಶ್ಚ ತೇ ತ್ರಯಃ ।
ಯಸ್ಯೈತೇ ನಿಯತಾ ದಂಡಾಃ ಸ ತ್ರಿದಂಡೀ ವ್ಯವಸ್ಥಿತಃ ॥ ೬ ॥

ಅವಸ್ಥಿತೋ ಧ್ಯಾನರತಿರ್ಜಿತೇಂದ್ರಿಯಃ ।
ಶುಭಾ ಶುಭೇ ಹಿತ್ಯ ಚ ಕರ್ಮಣೀ ಉಭೇ ॥
ಇದಂ ಶರೀರಂ ಪ್ರವಿಮುಚ್ಯ ಶಾಸ್ತ್ರತೋ ।
ನ ಜಾಯತೇ ಮ್ರಿಯತೇ ವಾ ಕದಾಚಿತ್ ॥ ೭ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಪರಮಾಶ್ರಮಪ್ರಾಪ್ತಿ ಕಥನಂ" ನಾಮ ಸಪ್ತದಶೋಽಧ್ಯಾಯಃ

---

೪. ಪುರುಷನು ಸಂಗತ್ಯಾಗಿಯೂ, ಜಿತಕ್ರೋಧನೂ, ಅಲ್ಪಾಹಾರಿಯೂ, ಜಿತೇಂದ್ರಿಯನೂ ಆಗಿ ಬುದ್ಧಿಯಿಂದ ಇತರ ದ್ವಾರಗಳನ್ನು ಮುಚ್ಚಿ ನಿಶ್ಚಲವಾದ ಮನಸ್ಸಿನಿಂದ ಧ್ಯಾನಮಾಡಬೇಕು.

೫. ಯೋಗಿಯು ನಿರ್ಜನಪ್ರದೇಶಗಳಲ್ಲಿಯೂ, ಗುಹೆಗಳಲ್ಲಿಯೂ, ವನದಲ್ಲಿಯೂ, ನದಿಗಳ ಮರಳಿನಲ್ಲಿಯೂ ಕೂಡ ಸದಾ ವಿರಕ್ತನಾಗಿ ಧ್ಯಾನವನ್ನು ಮಾಡಬೇಕು.

೬. ಯಾವನು ವಾಕ್, ಕರ್ಮ, ಮನಸ್ಸು ಎಂಬ ಮೂರು ವಸ್ತುಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡಿರುತ್ತಾನೋ ಅಂದರೆ ವಾಙ್ನಿಯಮ ಮನೋನಿಯಮ, ಕಾಮನಿಯಮಗಳನ್ನು ಹೊಂದಿರುವನೋ ಅವನಿಗೆ ತ್ರಿದಂಡಿಯೆಂದು ಹೆಸರುಬಂದಿದೆ.

೭. ಯಾವ ಯೋಗಿಯು ಜಿತೇಂದ್ರಿಯನೂ, ಸ್ಥಿರಮನಸ್ಕನೂ ಆಗಿ ಶುಭಾಶುಭವೆಂಬ ಕರ್ಮಗಳೆರಡನ್ನು ತ್ಯಜಿಸಿ ಶರೀರತ್ಯಾಗಮಾಡಿ ಶಾಸ್ತ್ರರೀತಿಯಾಗಿ ಧ್ಯಾನಿಸಿ ಮುಕ್ತನಾಗುವನೋ ಅವನು ಪುನರ್ಜನನ ಮರಣವನ್ನು ಹೊಂದಲಾರನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಪರಮಾಶ್ರಮಪ್ರಾಪ್ತಿಕಥನ"ವೆಂಬ ಹದಿನೇಳನೆಯ ಅಧ್ಯಾಯವು ಸಮಾಪ್ತವು.

## ಹದಿನೇಳನೆಯ ಅಧ್ಯಾಯದ ಸಾರಾಂಶವು

ಜ್ಞಾನಿಯಾದ ಪುರುಷನು ಆಶ್ರಮತ್ರಯಗಳನ್ನು ಬಿಟ್ಟು ಸನ್ಯಾಸಾಶ್ರಮವನ್ನು ಹೊಂದಿ ಒಂದು ವರ್ಷಕಾಲ ಗುರುಕುಲದಲ್ಲಿ ವಾಸಿಸಿ, ಜ್ಞಾನವನ್ನು ಸಂಪಾದಿಸಿ, ಅವರ ಆಜ್ಞೆಯನ್ನು ಪಡೆದು ಭೂಸಂಚಾರ ಮಾಡಬೇಕು. ಹೀಗೆ ಸಂಚರಿಸುತ್ತಾ ಜ್ಞೇಯವನ್ನರಿತು ಅವನ ಅನುಗ್ರಹವನ್ನು ಸಂಪಾದಿಸಬೇಕು. ಕೇವಲ ಬರೀ ಜ್ಞಾನ ಮಾತ್ರದಿಂದ ಎಂದಿಗೂ ಮುಕ್ತನಾಗುವುದಿಲ್ಲ. ಆದುದರಿಂದ ಜಿತೇಂದ್ರಿಯನೂ, ಮಿತಹಾರಿಯೂ, ಜಿತಕ್ರೋಧನೂ, ಆಗಿ ನಿರ್ಜನ ದೇವಾಲಯಾದಿಗಳಲ್ಲಿ ಧ್ಯಾನಮಾಡಬೇಕು. ಮನೋವಾಕ್ಕರ್ಮನಿಯಮದಿಂದ ತ್ರಿದಂಡಿಯೂ, ಧ್ಯಾನಾಸಕ್ತನೂ ಆಗಿ ಶುಭಾಶುಭ ಕರ್ಮಗಳನ್ನು ತ್ಯಾಗಮಾಡಿ, ಪರಮಪುರುಷನನ್ನು ಏಕಮನಸ್ಸಿನಿಂದ ಧ್ಯಾನಮಾಡಿ ಒಲಿಸಿಕೊಂಡು ಈ ಶರೀರವನ್ನು ತ್ಯಾಗಮಾಡಿದರೆ, ಜನನ ಮರಣ ರಹಿತವಾದ ಶಾಶ್ವತ ಪದವಿಯನ್ನು ಪಡೆಯಬಹುದು.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ಅಷ್ಟಾದಶೋಽಧ್ಯಾಯಃ

॥ ವಾಯುರುವಾಚ ॥

**ಅತ ಊರ್ಧ್ವಂ ಪ್ರವಕ್ಷ್ಯಾಮಿ ಯತೀನಾಮಿಹ ನಿಶ್ಚಯಂ ।**
**ಪ್ರಾಯಶ್ಚಿತ್ತಾನಿ ತತ್ವೇನ ಯ್ಯಾನ್ಯಕಾಮ ಕೃತಾನಿತು ।**
**ಅಥಕಾಮಕೃತೇಪ್ಯಾಹುಃ ಸೂಕ್ಷ್ಮಧರ್ಮವಿದೋಜನಾಃ ॥ ೧ ॥**

**ಪಾಪಂ ಚ ತ್ರಿವಿಧಂ ಪ್ರೋಕ್ತಂ ವಾಙ್ಮನಃ ಕಾಯಸಂಭವಂ ।**
**ಸತತಂ ಹಿ ದಿವಾರಾತ್ರೌ ಯೇನೇದಂ ಬಧ್ಯತೇ ಜಗತ್ ॥ ೨ ॥**

---

## ಹದಿನೆಂಟನೆಯ ಅಧ್ಯಾಯವು

೧. ವಾಯುದೇವನು ಹೇಳಿದನು :—ಈಗ ಮನಃಪೂರ್ವಕವಾಗಲೀ ಮನಸಿಲ್ಲದಯೇ ಆಗಲೀ ಮಾಡಿದ ಪಾಪಕರ್ಮಗಳಿಗೆ ಯಾವ ಪ್ರಾಯಶ್ಚಿತ್ತವನ್ನು ಜ್ಞಾನಿಗಳು ಹೇಳಿರುವರೋ ಅಂತಹ, ಯತಿಗಳಿಗೆ, ವಿಹಿತಗಳಾದ ಪ್ರಾಯಶ್ಚಿತ್ತಗಳನ್ನು ನಿಮಗಾಗಿ ತಿಳಿಸುವೆನು ಕೇಳಿ ಎಂದನು.

೨. ಜೀವರು ಹಗಲು ರಾತ್ರಿ ಎನ್ನದೆಯೇ ಸರ್ವದಾ ಯಾವ ಪಾಪಕರ್ಮಗಳನ್ನು ಮಾಡಿ ಬದ್ಧರಾಗಿರುವರೋ, ಅಂತಹ ಕರ್ಮಗಳು ವಾಚನಿಕ, ಮಾನಸಿಕ, ಕಾಯಕಗಳೆಂದು ತ್ರಿವಿಧಗಳಾಗಿವೆ

ಸ ಕರ್ಮಾಣಿ ನ ಚಾಪ್ಯೇಷ ತಿಷ್ಠತೀತಿ ಪರಾಶ್ರುತಿಃ ।
ಕ್ಷಣಮೇವ ಪ್ರಯೋಜ್ಯಂತು ಆಯುಷಸ್ತು ವಿಧಾರಣಾತ್ ॥ ೩ ॥

ಭವೇದ್ಧೀರೋಽಪ್ರಮತ್ತಸ್ತು ಯೋಗೋಹಿ ಪರಮಂ ಬಲಂ ।
ನ ಹಿ ಯೋಗಾತ್ಪರಂ ಕಿಂಚಿತ್ ನರಾಣಾಮಿಹ ದೃಶ್ಯತೇ ।
ತಸ್ಮಾದ್ಯೋಗಂ ಪ್ರಶಂಸಂತಿ ಧರ್ಮಯುಕ್ತಾ ಮನೀಷಿಣಃ ॥ ೪ ॥

ಅವಿದ್ಯಾಂ ವಿದ್ಯಯಾ ತೀರ್ತ್ವಾ ಪ್ರಾಪ್ಯೈಶ್ವರ್ಯ ಮನುತ್ತಮಂ ।
ದೃಷ್ಟ್ವಾ ಪರಾಪರಂ ಧೀರಾಃ ಪರಂಗಚ್ಛಂತಿ ತತ್ಪದಂ ॥ ೫ ॥

ವ್ರತಾನಿ ಯಾನಿ ಭಿಕ್ಷೂಣಾಂ ತಥೈವೋಪವ್ರತಾನಿಚ ।
ಏಕೈಕಾಪಕ್ರಮೇ ತೇಷಾಂ ಪ್ರಾಯಶ್ಚಿತ್ತಂ ವಿಧೀಯತೇ ॥ ೬ ॥

---

೩. ಮನುಷ್ಯನ ಕರ್ಮಗಳು ಜೀವನ ಮತ್ತು ಆಯುಸ್ಸು ಇವುಗಳು ಸ್ಥಿರವಲ್ಲ ; ನಶ್ವರಗಳು. ಅವನ ಧರ್ಮಾಧರ್ಮಗಳು ಮಾತ್ರ ಚಿರಸ್ಥಾಯಿಗಳೆಂದು, ಸ್ಮೃತಿಗಳು ಮತ್ತು ಶ್ರುತಿಗಳು ಹೊಗಳುತ್ತವೆ.

೪. ಧೀರನಾದ ಪುರುಷನು ಜಾಗರೂಕನಾಗಿ ಯೋಗಜನ್ಯವಾದ ಬಲವೇ ಶ್ರೇಷ್ಠವಾದುದು ಎಂದು ತಿಳಿದು ಅದನ್ನೇ ಮಾಡಬೇಕು. ಮನುಷ್ಯನಿಗೆ ಆ ಯೋಗಾಭ್ಯಾಸಕ್ಕಿಂತಲೂ ಉತ್ತಮವಾದ ಕಾರ್ಯವು ಯಾವುದೂ ಇಲ್ಲ ಆದುದರಿಂದ ಧರ್ಮವನ್ನು ತಿಳಿದ ಜ್ಞಾನಿಗಳು ಯೋಗವನ್ನೇ ಬಹಳವಾಗಿ ಹೊಗಳುವರು.

೫. ಧೀರರಾದ ಜ್ಞಾನಿಗಳು ಜ್ಞಾನದಿಂದ ಅಜ್ಞಾನವನ್ನು ತೊಡೆದುಹಾಕಿ ಅತ್ಯುತ್ತಮವಾದ ಜ್ಞಾನೈಶ್ವರ್ಯವನ್ನು ಹೊಂದಿ ಉತ್ತಮಕ್ಕಿಂತಲೂ ಶ್ರೇಷ್ಠವಾದ ಪರಮಪದವಿಯನ್ನು ಹೊಂದುತ್ತಾರೆ.

೬. ಯತಿಗಳಿಗೆ ಯಾವ ವ್ರತಗಳೂ ಮತ್ತು ಅಂಗವ್ರತಗಳೂ ಶಾಸ್ತ್ರಗಳಲ್ಲಿ ನಿರೂಪಿತಗಳಾಗಿವೆಯೋ ಆವುಗಳಲ್ಲಿ ಒಂದನ್ನು ಬಿಟ್ಟರೂ ಅವರು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.

ಉಪೇತ್ಯತು ಸ್ತ್ರಿಯಂ ಕಾಮಾತ್ ಪ್ರಾಯಶ್ಚಿತ್ತಂ ವಿನಿರ್ದಿಶೇತ್ ।
ಪ್ರಾಣಾಯಾಮ ಸಮಾಯುಕ್ತಂ ಕುರ್ಯಾತ್ಸಂತಪನಂ ತಥಾ ॥ ೭ ॥

ತತಶ್ಚರತಿ ನಿರ್ದೇಶಂ ಕೃಚ್ಛ್ರಸ್ಯಾಂತೇ ಸಮಾಹಿತಃ ।
ಪುನರಾಶ್ರಮಮಾಗಮ್ಯ ಚರೇದ್ಭಿಕ್ಷು ರತಂದ್ರಿತಃ ।
ನ ಮರ್ಮ ಯುಕ್ತಂ ವಚನಂ ಹೀನಸ್ತೀತಿ ಮುನೀಷಿಣಃ ॥ ೮ ॥

ತಥಾಪಿ ಚ ನ ಕರ್ತವ್ಯಃ ಪ್ರಸಂಗೋಹ್ಯೇಷ ಧಾರುಣಃ ।
ಅಹೋರಾತ್ರ್ಯಧಿಕಃ ಕಶ್ಚಿತ್ ನಾಸ್ತ್ಯಧರ್ಮ ಇತಿ ಶ್ರುತಿಃ ॥ ೯ ॥

ಹಿಂಸಾ ಹ್ಯೇಷಾ ಪರಾಸೃಷ್ಟಾ ದೇವತೈರ್ಮುನಿಭಿಸ್ತಥಾ ।
ಯದೇತದ್ದ್ರವಿಣಂ ನಾಮ ಪ್ರಾಣಾ ಹ್ಯೇತೇ ಬಹಿಶ್ಚರಾಃ ।
ನ ತಸ್ಯ ಹರತಿ ಪ್ರಾಣಾ ಯೋ ಯಸ್ಯ ಹರತೇ ಧನಂ ॥ ೧೦ ॥

---

೭. ಯೋಗಿಯು ಕಾಮವಶದಿಂದ ಸ್ತ್ರೀ ಸಂಗಮವನ್ನು ಮಾಡಿದರೆ ಅದರ ಪ್ರಾಯಶ್ಚಿತ್ತಕ್ಕಾಗಿ ಪ್ರಾಣಾಯಾಮವನ್ನೂ ಮತ್ತು ಸಾಂತಪನವ್ರತವನ್ನೂ ಮಾಡಬೇಕು.

೮. ಯತಿಯು ಕೃಚ್ಛ್ರಾನುಷ್ಠಾನಾನಂತರ ಸಮಾಧಾನಚಿತ್ತನಾಗಿ ಗುರುಗಳ ಆಜ್ಞೆಯನ್ನು ಆಚರಿಸಬೇಕು. ಮತ್ತು ಆಶ್ರಮವನ್ನು ಪಡೆದು ಜಾಗರೂಕನಾಗಿ ಭಿಕ್ಷಾಚರ್ಯೆಯನ್ನು ಮಾಡಬೇಕು. ಮರ್ಮವಚನವು ಪರರನ್ನು ಹಿಂಸಿಸುವುದರಿಂದ ಮರ್ಮವಾಕ್ಯಗಳನ್ನು ಆಡಬಾರದೆಂದು ಜ್ಞಾನಿಗಳು ಹೇಳುವರು.

೯. ಪುನಃ ಯತಿಯು ಇಂತಹ ಭಯಂಕರವಾದ ಪಾಪಾಚರಣೆಯನ್ನು ಮಾಡಬಾರದು. ಹೀಗೆ ಪ್ರಾಯಶ್ಚಿತ್ತವನ್ನು ಮಾಡಿದರೆ ಆ ಪಾಪಗಳು ಒಂದು ಅಹೋರಾತ್ರಿಗಳು ಮಾತ್ರ ಇರುತ್ತವೆಯೆಂದು ಶ್ರುತಿಗಳು ಸಾರುತ್ತವೆ.

೧೦. ದೇವತೆಗಳು ಮತ್ತು ಮುನಿಗಳು ಇಂತಹ ಹಿಂಸಾರೂಪವಾದ ಪಾಪಗಳನ್ನು ಸೃಷ್ಟಿಸಿರುತ್ತಾರೆ. ದ್ರವ್ಯವೆಂಬುದು ಮನುಷ್ಯನ ಬಹಿಶ್ಚರವಾದ ಪ್ರಾಣಗಳು. ಯಾವನು ಮತ್ತೊಬ್ಬರ ದ್ರವ್ಯವನ್ನು ಅಪಹರಿಸುತ್ತಾನೆಯೋ ಅವನು ಅವನ ಪ್ರಾಣವನ್ನು ಅಪಹರಿಸಿದಂತೆ ಆಗುವುದು.

ಏವಂ ಕೃತ್ವಾ ಸದುಷ್ಟಾತ್ಮಾ ಭಿನ್ನವೃತ್ತೋ ವ್ರತಾಚ್ಚ್ಯುತಃ ।
ಭೂಯೋ ನಿರ್ವೇದಮಾಪನ್ನಶ್ಚರೇಚ್ಚಾಂದ್ರಾಯಣಂ ವ್ರತಂ ॥ ೧೧ ॥

ವಿಧಿನಾ ಶಾಸ್ತ್ರದೃಷ್ಟೇನ ಸಂವತ್ಸರಮಿತಿ ಶ್ರುತಿಃ ।
ತತಃ ಸಂವತ್ಸರಸ್ಯಾಂತೇ ಭೂಯಃ ಪ್ರಕ್ಷೀಣಕಲ್ಮಷಃ ।
ಭೂಯೋ ನಿರ್ವೇದಮಾಪನ್ನಶ್ಚರೇದ್ಭಿಕ್ಷುರತಂದ್ರಿತಃ ॥ ೧೨ ॥

ಅಹಿಂಸಾ ಸರ್ವಭೂತಾನಾಂ ಕರ್ಮಣಾ ಮನಸಾ ಗಿರಾ ।
ಅಕಾಮಾದಪಿ ಹಿಂಸೇತ ಯದಿ ಭಿಕ್ಷುಃ ಪಶೂನ್ ಮೃಗಾನ್ ।
ಕೃಚ್ಛ್ರಾತಿಕೃಚ್ಛ್ರಂ ಕುರ್ವೀತ ಚಾಂದ್ರಾಯಣಮಥಾಪಿ ವಾ ॥ ೧೩ ॥

ಸ್ಕಂದೇದಿಂದ್ರಿಯ ದೌರ್ಬಲ್ಯಾತ್ ಸ್ತ್ರಿಯಂ ದೃಷ್ಟ್ವಾ ಯತಿರ್ಯದಿ ।
ತೇನ ಧಾರಯಿತವ್ಯಾ ವೈ ಪ್ರಾಣಾಯಾಮಾಸ್ತು ಷೋಡಶ ॥ ೧೪ ॥

---

೧೧. ಹೀಗೆ ದುಷ್ಟಾತ್ಮನೂ, ಭಿನ್ನವೃತ್ತಿಯುಳ್ಳವನೂ, ವ್ರತಭ್ರಷ್ಟನೂ ಆದ ಪುರುಷನು ತಾನು ಮಾಡಿದ ಕೆಲಸಕ್ಕೆ ಪಶ್ಚಾತ್ತಾಪವನ್ನು ಹೊಂದಿ ಪುನಃ ತಾನು ಚಾಂದ್ರಾಯಣಾದಿವ್ರತವನ್ನು ಮಾಡಿದರೆ ಆಗ ಆ ಪಾಪಗಳಿಂದ ಮುಕ್ತನಾಗುವನು.

೧೨. ಯತಿಯು ಪಾಪಕಾರ್ಯಗಳನ್ನು ಮಾಡಿದ್ದೇ ಆದರೆ ಒಂದು ವರ್ಷಗಳವರೆಗೂ ಪ್ರಾಯಶ್ಚಿತ್ತವನ್ನು ಮಾಡಬೇಕೆಂದು ಶಾಸ್ತ್ರದಲ್ಲಿ ಉಕ್ತವಾಗಿದೆ. ಸಂವತ್ಸರದ ಕೊನೆಯಲ್ಲಿ ಪಾಪರಹಿತನೂ, ಪಶ್ಚಾತ್ತಾಪಯುಕ್ತನೂ ಆಗಿ ಜಾಗರೂಕತೆಯಿಂದ ಭಿಕ್ಷಾದಿಸ್ವಧರ್ಮನಿರತನಾದರೇ ಪಾಪಗಳಿಂದ ಮುಕ್ತನಾಗುವನು.

೧೩. ಸನ್ಯಾಸಿಯು ಮನೋವಾಕ್ಕಾಯಕರ್ಮಗಳಿಂದಲೂ ಸರ್ವಪ್ರಾಣಿಗಳಿಗೂ ಹಿಂಸೆಯನ್ನು ಮಾಡಬಾರದು. ಅಕಸ್ಮಾತ್ತಾಗಿ ಪಶುಗಳಗೂ, ಮೃಗಗಳಿಗೂ ಸಹ ಹೀಗೆ ಹಿಂಸೆಮಾಡಿದ್ದೇ ಆದರೆ ಕೃಚ್ಛ್ರ, ಅತಿಕೃಚ್ಛ್ರವೆಂಬ ವ್ರತಗಳನ್ನೂ ಅಥವಾ ಚಾಂದ್ರಾಯಣವನ್ನೂ ಮಾಡಬೇಕು. ಅದರಿಂದ ಪಾಪವು ಪರಿಹಾರವಾಗುತ್ತವೆ.

೧೪. ಸ್ತ್ರೀದರ್ಶನಮಾತ್ರದಿಂದಲೂ, ಇಂದ್ರಿಯದೌರ್ಬಲ್ಯದಿಂದಲೂ ಯತಿಗೆ ಇಂದ್ರಿಯಸ್ಖಲನವಾದರೆ ಹದಿನಾರು ಪ್ರಾಣಾಯಾಮಗಳನ್ನು ಮಾಡಿಕೊಳ್ಳಬೇಕು. ಇದರಿಂದ ಪಾಪಪರಿಹಾರವಾಗುವುದು.

ದಿವಾ ಸ್ಕನ್ನಸ್ಯ ವಿಪ್ರಸ್ಯ ಪ್ರಾಯಶ್ಚಿತ್ತಂ ವಿಧೀಯತೇ ।
ತ್ರಿರಾತ್ರಮುಪವಾಸಶ್ಚ ಪ್ರಾಣಾಯಾಮಶತಂ ತಥಾ ॥ ೧೫ ॥

ರಾತ್ರೌ ಸ್ಕನ್ನಃ ಶುಚಿಃ ಸ್ನಾತೋ ದ್ವಾದಶೈವ ತು ಧಾರಣಾಃ ।
ಪ್ರಾಣಾಯಾಮೇನ ಶುದ್ಧಾತ್ಮಾ ವಿರಜಾ ಜಾಯತೇ ದ್ವಿಜಃ ॥ ೧೬ ॥

ಏಕಾನ್ನಂ ಮಧು ಮಾಂಸಂ ವಾ ಹ್ಯಾಮಶ್ರಾದ್ಧಂ ತಥೈವ ಚ ।
ಅಭೋಜ್ಯಾನಿ ಯತೀನಾಂ ಚ ಪ್ರತ್ಯಕ್ಷ ಲವಣಾನಿ ಚ ॥ ೧೭ ॥

ಏಕೈಕಾತಿಕ್ರಮೇ ತೇಷಾಂ ಪ್ರಾಯಶ್ಚಿತ್ತಂ ವಿಧೀಯತೇ ।
ಪ್ರಾಜಾಪತ್ಯೇನ ಕೃಚ್ಛ್ರೇಣ ತತಃ ಪಾಪಾತ್ ಪ್ರಮುಚ್ಯತೇ ॥ ೧೮ ॥

ವ್ಯತಿಕ್ರಮಾಚ್ಚ ಯೇ ಕೇಚಿತ್ ವಾಙ್ಮನಃ ಕಾಯಸಂಭವಂ ।
ಸದ್ಭಿಃ ಸಹ ವಿನಿಶ್ಚಿತ್ಯ ಯದ್ಬ್ರೂಯುಸ್ತತ್ಸಮಾಚರೇತ್ ॥ ೧೯ ॥

---

೧೫. ಸ್ತ್ರೀ ದರ್ಶನಾದಿಗಳಿಂದ ಸನ್ಯಾಸಿಗೆ ಹಗಲಿನಲ್ಲಿಯೇ ಇಂದ್ರಿಯಸ್ಖಲನವಾದರೆ ತ್ರಿರಾತ್ರಿಗಳು ಉಪವಾಸವನ್ನು ಮಾಡಿ ನೂರಾರು ಪ್ರಾಣಾಯಾಮಗಳನ್ನು ಮಾಡಬೇಕು. ಇದರಿಂದ ಶುದ್ಧನಾಗುವನು.

೧೬. ರಾತ್ರಿಯಲ್ಲಿ ಸ್ವಪ್ನಾದಿಗಳಿಂದ ಇಂದ್ರಿಯಸ್ಖಲನವಾದರೆ ಸ್ನಾನಮಾಡಿ ಹನ್ನೆರಡು ಪ್ರಾಣಾಯಾಮಗಳನ್ನು ಮಾಡಿದರೆ ಯತಿಯು ಶುದ್ಧನೂ ಪಾಪದಿಂದ ಮುಕ್ತನೂ, ಆಗುವನು.

೧೭. ಯತಿಗಳು ಕೇವಲ ಒಂಟಿಯಾಗಿ ಭೋಜನ, ಮದ್ಯ, ಮಾಂಸ, ಆಮಶ್ರಾದ್ಧ, ಪ್ರತ್ಯೇಕವಾಗಿ ಲವಣಮಿಶ್ರಭೋಜನ ಇವುಗಳನ್ನು ತಿನ್ನಬಾರದು.

೧೮. ಯತಿಗಳು ಒಂದೊಂದು ಕಾರ್ಯವನ್ನು ಅತಿಕ್ರಮಿಸಿದರೂ, ಅವರಿಗೆ ಪ್ರಾಯಶ್ಚಿತ್ತಗಳು ಉಕ್ತವಾಗಿವೆ. ಹೀಗೆ ಪಾಪಮಾಡಿದರೆ ಪ್ರಾಜಾಪತ್ಯವ್ರತ, ಕೃಚ್ಛ್ರ, ಚಾಂದ್ರಾಯಣಾದಿ ವ್ರತಗಳನ್ನು ಮಾಡಿದರೆ ಪಾಪಗಳು ಪರಿಹಾರವಾಗುವುವು.

೧೯. ಯತಿಗಳು ಮನೋವಾಕ್ಕಾಯಕರ್ಮಗಳಿಂದ, ಅತಿಕ್ರಮವಾಗಿ ಯಾವುದಾದರೂ, ಪಾಪಕಾರ್ಯಗಳನ್ನು ಮಾಡಿದ್ದರೆ ಅವುಗಳನ್ನು ಸಜ್ಜನರ ಸಂಗಡ ತಿಳಿಸಬೇಕು ಮತ್ತು ಅವರು ಏನನ್ನು ಉಪದೇಶಿಸುವರೋ, ಆ ಕಾರ್ಯವನ್ನು ಮಾಡಬೇಕು.

ವಿಶುದ್ಧಬುದ್ಧಿಃ ಸಮಲೋಷ್ಟಕಾಂಚನಃ ।
ಸಮಸ್ತ ಭೂತೇಷು ಚರನ್ ಸಮಾಹಿತಃ ॥
ಸ್ಥಾನಂ ಧ್ರುವಂ ಶಾಶ್ವತಮವ್ಯಯಂ ಸತಾಂ ।
ಪರಂ ಸ ಗತ್ವಾ ನ ಪುನರ್ಹಿ ಜಾಯತೇ ॥ ೨೦ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಯತಿಪ್ರಾಯಶ್ಚಿತ್ತ ವಿಧಿರ್ನಾಮ " ಅಷ್ಟಾದಶೋಽಧ್ಯಾಯಃ

---

೨೦. ಪರಿಶುದ್ಧಮನಸ್ಕನೂ, ಹೊನ್ನು ಮಣ್ಣುಗಳಲ್ಲಿ ಸಮವಾದ ಇಚ್ಛೆಯುಳ್ಳವನೂ, ಸಮಸ್ತ ಭೂತಗಳ ಹಿತದಲ್ಲಿ ನಿರತನೂ ಆದ ಯೋಗಿಯು ಸ್ಥಿರವೂ, ನಾಶರಹಿತವೂ, ಶಾಶ್ವತವೂ, ಅವ್ಯಯವೂ, ಸತ್ಪುರುಷರಿಗೆ ಯೋಗ್ಯವೂ ಆದ ಪರಮ ಪದವಿಯನ್ನು ಹೊಂದಿ, ಪುನಃ ಜನನ ಮರಣ ರೂಪವಾದ ಸಂಸಾರವನ್ನು ಹೊಂದುವುದಿಲ್ಲ.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ಯತಿಗಳ " ಪ್ರಾಯಶ್ಚಿತ್ತ ವಿಧಾನ " ವೆಂಬ ಹದಿನೆಂಟನೆಯ ಅಧ್ಯಾಯವು ಸಮಾಪ್ತವು.

## ಹದಿನೆಂಟನೆಯ ಅಧ್ಯಾಯದ ಸಾರಾಂಶವು.

ಈ ಅಧ್ಯಾಯದಲ್ಲಿ ಯತಿಗಳು ಜ್ಞಾನಾಜ್ಞಾನದಿಂದ ಮಾಡಿದ ಅಕಾರ್ಯಗಳಿಗೆ ಪ್ರಾಯಶ್ಚಿತ್ತಗಳು ಉಕ್ತವಾಗಿವೆ. ಪಾಪವು ಕಾಯಿಕ, ಮಾನಸಿಕ, ವಾಚನಿಕವೆಂದು ಮೂರು ವಿಧಗಳಾಗಿವೆ ಯೋಗಾಭ್ಯಾಸಕ್ಕಿಂತಲೂ, ಉತ್ತಮವಾದ ಕಾರ್ಯವೇ ಇಲ್ಲವೆಂದು ಜ್ಞಾನಿಗಳು ಹೇಳುವರು. ಇದರಿಂದ ಉತ್ತಮವಾದ ಪದವಿಯನ್ನು ಪಡೆಯಬಹುದು. ಯತಿಗಳಿಗೆ ವ್ರತೋಪವಾಸಗಳೂ ಇವೆ. ಅವನ್ನು ಬಿಟ್ಟರೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಯತಿಯು ಸ್ತ್ರೀ ಸಂಗಾದಿಗಳನ್ನು ಮಾಡಿದರೆ ಪ್ರಾಣಾಯಾಮ, ಸಂತಾಪನಾದಿ, ವ್ರತಗಳನ್ನು ಆಚರಿಸಬೇಕು. ನರ್ಮವಚನಗಳನ್ನು ಆಡಬಾರದು. ಪ್ರಾಣಿಗಳ ಹಿಂಸೆಯನ್ನೂ ಕೂಡ ಮಾಡಬಾರದು. ಪರರ ದ್ರವ್ಯವನ್ನು ಇಚ್ಛಿಸಬಾರದು. ಇಂದ್ರಿಯಸ್ಖಲನಾದಿಗಳಾದರೆ ಕೃಚ್ಛ್ರ, ಚಾಂದ್ರಾಯಣಾದಿ ವ್ರತಗಳನ್ನು ಮಾಡಬೇಕು. ಮದ್ಯ, ಮಾಂಸಾದಿಗಳನ್ನು ಭಕ್ಷಿಸಬಾರದು. ತಾವು ಮಾಡಿದ ಕೆಟ್ಟಕೆಲಸಗಳನ್ನು ಸಜ್ಜನರಿಗೆ ತಿಳಿಸಿ ಅವರ ಅನುಮತಿಯಂತೆ ವರ್ತಿಸಬೇಕು. ಹೀಗೆ ಮಾಡಿದರೆ ಶುದ್ಧನಾಗಿ ಶಾಶ್ವತವಾದ ಪರಮಪದವಿಯನ್ನು ಪಡೆಯುಬಹುದು.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಏಕೋನವಿಂಶೋಽಧ್ಯಾಯಃ

॥ ಸೂತ ಉವಾಚ ॥

ಅತ ಊರ್ಧ್ವಂ ಪ್ರವಕ್ಷ್ಯಾಮಿ ಅರಿಷ್ಟಾನಿ ನಿಬೋಧತ ।
ಯೇನ ಜ್ಞಾನವಿಶೇಷೇಣ ಮೃತ್ಯುಂ ಪಶ್ಯತಿ ಚಾತ್ಮನಃ ॥ ೧ ॥

ಅರುಂಧತೀಂ ಧ್ರುವಂ ಚೈವ ಸೋಮಚ್ಛಾಯಾಂ ಮಹಾಪಥಂ ।
ಯೋ ನ ಪಶ್ಯೇತ್ಸ ನೋ ಜೀವೇನ್ನರಃ ಸಂವತ್ಸರಾತ್ಪರಂ ॥ ೨ ॥

---

## ಹತ್ತೊಂಭತ್ತನೆಯ ಅಧ್ಯಾಯವು

೧. ಈಗ ಪುರುಷರು ಯಾವುದರಿಂದ ತಮಗೆ ಮುಂದೆ ಬರಬಹುದಾದ ಅನಿಷ್ಟಗಳನ್ನು ತಿಳಿದುಕೊಳ್ಳುವರೋ, ಅಂತಹ ಅಶುಭಸೂಚನೆಗಳನ್ನು ತಿಳಿಸುವೆನು ಕೇಳಿ ಎಂದು ಸೂತರು ಹೇಳಿದರು.

೨. ಯಾವ ಪುರುಷನಿಗೆ ಅರುಂಧತೀ ಧ್ರುವನಕ್ಷತ್ರಗಳು, ಚಂದ್ರನ ಬೆಳದಿಂಗಳು, ಮಹಾಮಾರ್ಗ ಇವುಗಳು ಕಾಣುವುದಿಲ್ಲವೋ, ಅವನು ಒಂದು ವರ್ಷಕ್ಕಿಂತಲೂ ಜಾಸ್ತಿಯಾಗಿ ಬದುಕಲಾರನು. ಅವನಿಗೆ ಒಂದೇ ವರ್ಷಕಾಲ ಆಯುಷ್ಯವಿರುವುದು.

ಅರಶ್ಮಿವಂತಮಾದಿತ್ಯಂ ರಶ್ಮಿವಂತಂ ಚ ಪಾವಕಂ ।
ಯಃ ಪಶ್ಯೇನ್ನ ಚ ಜೀವೇತ ಮಾಸಾದೇಕಾದಶಾತ್ಪರಂ ॥ ೩ ॥

ವಮೇನ್ಮೂತ್ರಂ ಕರೀಷಂ ವಾ ಸುವರ್ಣಂ ರಜತಂ ತಥಾ ।
ಪ್ರತ್ಯಕ್ಷಮಥ ವಾ ಸ್ವಪ್ನೇ ದಶಮಾಸಾನ್ ಸ ಜೀವತಿ ॥ ೪ ॥

ಅಗ್ರತಃ ಪೃಷ್ಠತೋವಾಪಿ ಖಂಡಂ ಯಸ್ಯ ಪದಂ ಭವೇತ್ ।
ಪಾಂಶುಲೇ ಕರ್ದಮೇ ವಾಪಿ ಸಪ್ತಮಾಸಾನ್ ಸ ಜೀವತಿ ॥ ೫ ॥

ಕಾಕಃ ಕಪೋತೋ ಗೃದ್ಧ್ರೋವಾ ನಿಲೀಯೇದ್ಯಸ್ಯ ಮೂರ್ಧನಿ ।
ಕ್ರವ್ಯಾದೋವಾ ಖಗಃ ಕಶ್ಚಿತ್ ಷಣ್ಮಾಸಾನ್ನಾತಿವರ್ತತೇ ॥ ೬ ॥

ಬದ್ಧ್ಯೇದ್ವಾಯಸಪಂಕ್ತೀಭಿಃ ಪಾಂಶುವರ್ಷೇಣ ವಾ ಪುನಃ ।
ಛಾಯಾಂ ವಾ ವಿಕೃತಾಂ ಪಶ್ಯೇಚ್ಚತುಃ ಪಂಚ ಸಜೀವತಿ ॥ ೭ ॥

---

೩. ಯಾವನಿಗೆ ಸೂರ್ಯಕಿರಣಗಳು ಕಾಣದೆಯೇ ಅಗ್ನಿಯ ರಶ್ಮಿಗಳು ಮಾತ್ರ ಕಾಣುವುವೋ ಅವನು ಹನ್ನೊಂದು ತಿಂಗಳುಗಳಿಗಿಂತಲೂ ಅಧಿಕಕಾಲ ಬದುಕಲಾರನು. ಅವನಿಗೆ ಹನ್ನೊಂದೇ ತಿಂಗಳುಗಳು ಆಯುಷ್ಯದ ಕಾಲವು.

೪. ಯಾವನು ವಿಣ್ಮೂತ್ರಗಳನ್ನು ವಮನ ಮಾಡುತ್ತಾನೋ, ಮತ್ತು ಸ್ವಪ್ನ ದಲ್ಲಿಯಾಗಲಿ ಪ್ರತ್ಯಕ್ಷವಾಗಿಯಾಗಲಿ, ಸುವರ್ಣ ಮತ್ತು ಬೆಳ್ಳಿಯನ್ನು ಅಕಸ್ಮಾತ್ತಾಗಿ ನೋಡುತ್ತಾನೋ ಅವನು ಹತ್ತು ತಿಂಗಳು ಮಾತ್ರ ಬದುಕುವನು. ಅವನಿಗೆ ದಶ ಮಾಸವು ಆಯುಷ್ಯವಿರುವುದು.

೫. ಯಾವನ ಪಾದಗಳ ಹಿಮ್ಮಡಿ ಮುಮ್ಮಡಿಗಳು ಕೆಸರಿನಲ್ಲಿಯೂ, ಮರಳಿ ನಲ್ಲಿಯೂ, ಇಲ್ಲಿಂದಲ್ಲಿಗೆ ನಡೆಯುವಾಗ ಸಡಿಲವಾಗುತ್ತವೆಯೋ ಅವನು ಏಳು ತಿಂಗಳುಗಳು ಮಾತ್ರ ಬದುಕಬಲ್ಲನು (ಬದುಕುವನು.)

೬. ಯಾವನ ಶಿರಸ್ಸಿನಲ್ಲಿ, ಕಾಗೆ, ಪಾರಿವಾಳ, ಹದ್ದು ಮತ್ತು ಮಾಂಸ ಭಕ್ಷಕಗಳಾದ ಇತರ ಯಾವುದಾದರೂ ಒಂದು ಪಕ್ಷಿ, ಇವುಗಳು ಕೂಡುವುದೋ ಅವನು ಆರು ತಿಂಗಳ ಕಾಲ ಜೀವಿಸುವನು.

೭. ಯಾವನು ಕಾಗೆಗಳ ತಂಡಗಳಿಂದ ತಡೆಯಲ್ಪಡುವನೋ ಧೂಳಿನ ವೃಷ್ಟಿಗೆ ಸಿಕ್ಕುವನೋ ಮತ್ತು ತನ್ನ ನೆರಳನ್ನು ವಿಕಾರವನ್ನಾಗಿ ನೋಡುವನೋ ಅವನು ನಾಲ್ಕೈದು ತಿಂಗಳು ಕಾಲ ಮಾತ್ರ ಜೀವಿಸುವನು.

ಅನಭ್ರೇ ವಿದ್ಯುತಂ ಪಶ್ಯೇತ್ ದಕ್ಷಿಣಾಂ ದಿಶಮಾಶ್ರಿತಾಂ ।
ಉದಕೇಂದ್ರ ಧನುರ್ವಾಪಿ ತ್ರಯೋ ದ್ವೌ ವಾ ಸ ಜೀವತಿ ॥ ೮ ॥

ಅಪ್ಸು ವಾ ಯದಿ ವಾಽಽದರ್ಶೇ ಆತ್ಮಾನಂ ಯೋ ನ ಪಶ್ಯತಿ ।
ಅಶಿರಸ್ಕಂ ತಥಾತ್ಮಾನಂ ಮಾಸಾದೂರ್ಧ್ವಂ ನ ಜೀವತಿ ॥ ೯ ॥

ಶವಗಂಧಿ ಭವೇದ್ಗಾತ್ರಂ ವಸಾಗಂಧಿ ಹ್ಯಥಾಪಿವಾ ।
ಮೃತ್ಯುಹ್ಯುಪಸ್ಥಿತಸ್ತಸ್ಯ ಅರ್ಧಮಾಸಂ ಸ ಜೀವತಿ ॥ ೧೦ ॥

ಸಂಭಿನ್ನೋ ಮಾರುತೋ ಯಸ್ಯ ಮರ್ಮಸ್ಥಾನಾನಿ ಕೃಂತತಿ ।
ಅದ್ಭಿಃ ಸ್ಪೃಷ್ಟೋ ನ ಹೃಷ್ಯೇಚ್ಚ ತಸ್ಯ ಮೃತ್ಯುರುಪಸ್ಥಿತಃ ॥ ೧೧ ॥

ಋಕ್ಷವಾನರಯುಕ್ತೇನ ರಥೇನಾಶಾಂತು ದಕ್ಷಿಣಾಂ ।
ಗಾಯನ್ನಥ ವ್ರಜೇತ್ ಸ್ವಪ್ನೇ ವಿದ್ಯಾನ್ಮೃತ್ಯುರುಪಸ್ಥಿತಃ ॥ ೧೨ ॥

---

೮. ಯಾವನು ಮೇಘಗಳಿಲ್ಲದ ದಕ್ಷಿಣ ದಿಕ್ಕಿನಲ್ಲಿರುವ ಮಿಂಚನ್ನೂ, ನೀರಿನಲ್ಲಿ ಕಾಮನ ಬಿಲ್ಲನ್ನೂ ಕಾಣುವನೋ ಅವನು ಎರಡು ಅಥವಾ ಮೂರು ತಿಂಗಳುಗಳು ಮಾತ್ರ ಜೀವಿಸುವನು.

೯. ಯಾವನು ಜಲದಲ್ಲಿಯೂ, ಕನ್ನಡಿಯಲ್ಲಿಯೂ ತನ್ನ ಪ್ರತಿಬಿಂಬವನ್ನು ನೋಡುವುದಿಲ್ಲವೋ ಅಂದರೆ ಯಾವನಿಗೆ ತನ್ನ ಛಾಯೆಯು ಕಾಣುವುದಿಲ್ಲವೋ ಮತ್ತು ತಲೆಯಿಲ್ಲದ ತನ್ನ ಮುಂಡವನ್ನು ನೋಡುವನೋ ಅವನು ಒಂದೇ ಮಾಸವು ಮಾತ್ರ ಜೀವಿಸುವನು.

೧೦. ಯಾವನ ಶರೀರದಲ್ಲಿ ಶವಶರೀರದಂತೆಯೂ, ವಪೆಯಂತೆಯೂ ದುರ್ವಾಸನೆಯು ಉಂಟಾಗುವುದೋ ಅವನು ಅರ್ಧಮಾಸ ಮಾತ್ರ ಜೀವಿಸುವನು.

೧೧. ಯಾವನ ಶರೀರವು ವಾಯುರೋಗದಿಂದ ಮರ್ಮಸ್ಥಾನಗಳಲ್ಲಿ ಪೀಡಿತವಾಗುತ್ತದೋ ಮತ್ತು ಜಲಸ್ಪರ್ಶದಿಂದ ಹಿಂಸಿಸಲ್ಪಡುತ್ತದೆಯೋ ಅವನಿಗೆ ಮೃತ್ಯುವು ಸನ್ನಿಹಿತವಾಗಿದೆಯೆಂದು ತಿಳಿಯಬೇಕು.

೧೨. ಯಾವನಿಗೆ ಕರಡಿ ಮತ್ತು ಕಪಿಗಳಿಂದ ಕೂಡಿದ ರಥದಲ್ಲಿ ಕುಳಿತು ಕೊಂಡು ಗಾನಮಾಡುತ್ತಾ ದಕ್ಷಿಣದಿಕ್ಕಿಗೆ ಹೋಗುವಂತೆ ಕನಸು ಬೀಳುತ್ತದೆಯೋ ಅವನಿಗೆ ಮೃತ್ಯುವು ಸನ್ನಿಹಿತವಾಗಿರುವುದು.

ಕೃಷ್ಣಾಂಬರಧರಾ ಶ್ಯಾಮಾ ಗಾಯಂತೀ ವಾಥ ಚಾಂಗನಾ ।
ಯನ್ನಯೇದ್ದಕ್ಷಿಣಾಮಾಶಾಂ ಸ್ವಪ್ನೇ ಸೋಽಪಿ ನ ಜೀವತಿ ॥ ೧೩ ॥

ಛಿದ್ರಂ ವಾಸಶ್ಚ ಕೃಷ್ಣಂಚ ಸ್ವಪ್ನೇ ಯೋ ವಿಭೃಯಾನ್ನರಃ ।
ಭಗ್ನಂ ವಾ ಶ್ರವಣಂ ದೃಷ್ಟ್ವಾ ವಿದ್ಯಾನ್ಮೃತ್ಯುರುಪಸ್ಥಿತಃ ॥ ೧೪ ॥

ಆಮಸ್ತಕ ತಲಾದ್ಯಸ್ತು ನಿಮಜ್ಜೇತ್ ಪಂಕಸಾಗರೇ ।
ದೃಷ್ಟ್ವಾತು ತಾದೃಶಂ ಸ್ವಪ್ನಂ ಸದ್ಯಯೇವ ನ ಜೀವತಿ ॥ ೧೫ ॥

ಭಸ್ಮಾಂಗಾರಾಂಶ್ಚ ಕೇಶಾಂಶ್ಚ ನದೀಂ ಶುಷ್ಕಾಂ ಭುಜಂಗಮಾನ್ ।
ಪಶ್ಯೇದ್ಯೋ ದಶರಾತ್ರಂತು ನ ಸ ಜೀವೇತ ತಾದೃಶಃ ॥ ೧೬ ॥

ಕೃಷ್ಣೈಶ್ಚ ವಿಕಟೈಶ್ಚೈವ ಪರುಷೈರುದ್ಯತಾಯುಧೈಃ ।
ಪಾಷಾಣೈಸ್ತಾಡ್ಯತೇ ಸ್ವಪ್ನೇ ಯಃ ಸದ್ಯೋ ನ ಸ ಜೀವತಿ ॥ ೧೭ ॥

---

೧೩. ಕೃಷ್ಣಾಂಬರಧಾರಿಯೂ, ಕೃಷ್ಣವರ್ಣದವಳೂ ಗಾನಮಾಡುವವಳೂ ಆದ ನಾರಿಯು ಯಾವನನ್ನು ದಕ್ಷಿಣದಿಕ್ಕಿಗೆ ಕರೆದೊಯ್ಯುವಂತೆ ಕನಸು ಬೀಳುವುದೋ ಅವನಿಗೆ ಮೃತ್ಯುವು ಸಿದ್ಧವಾಗಿರುತ್ತದೆ.

೧೪. ಯಾವನು ಸ್ವಪ್ನದಲ್ಲಿ ಛಿದ್ರವೂ, ಕಪ್ಪಗೂ ಇರುವ ವಸ್ತ್ರವನ್ನು ಧರಿಸಿಕೊಂಡು ಕಿವಿಯು ಛಿದ್ರವಾಗಿರುವಂತೆ ಕಾಣುವನೋ ಅವನಿಗೆ ಮೃತ್ಯುವು ಸಮೀಪಗತವಾಗುವುದು.

೧೫. ಯಾವನಿಗೆ ಕೆಸರಿನ ಸಮುದ್ರದಲ್ಲಿ ಶಿರಸ್ಸಿನವರೆಗೂ ಸ್ನಾನಮಾಡಿದಂತೆ ಸ್ವಪ್ನವು ಬೀಳುವುದೋ ಅವನಿಗೆ ಮರಣವು ತಕ್ಷಣವೇ ಆಗುವುದು.

೧೬. ಯಾವನು ಸ್ವಪ್ನದಲ್ಲಿ, ಬೂದಿ ಮತ್ತು ಇದ್ದಿಲು, ಇವುಗಳಿಂದ ಸ್ನಾನಮಾಡಿದವನಾಗಿಯೂ, ಶುಷ್ಕವಾದ ನದಿಯಲ್ಲಿ ಸರ್ಪಗಳು ಪೂರ್ಣವಾಗಿರುವಂತೆಯೂ ಕಾಣುವನೋ ಅವನಿಗೆ ಹತ್ತು ದಿವಸಗಳು ಮಾತ್ರ ಆಯುಷ್ಯವಿರುವುದು.

೧೭. ಯಾವ ಪುರುಷನು ಕನಸಿನಲ್ಲಿ ಕೃಷ್ಣವರ್ಣವುಳ್ಳವನೂ, ಕುರೂಪಿಯೂ ಆಯುಧಪಾಣಿಯೂ, ಆದ ಯಮಪುರುಷರು ತನ್ನನ್ನು ಪಾಷಾಣಗಳಿಂದ ಹೊಡೆಯುವ ಹಾಗೆ ಕಾಣುವನೋ ಅವನಿಗೆ ಮರಣವು ಸನ್ನಿಹಿತವಾಗಿರುವುದು.

ಸೂರ್ಯೋದಯೇ ಪ್ರತ್ಯುಷಸಿ ಪ್ರತ್ಯಕ್ಷಂ ಯಸ್ಯ ವೈ ಶಿವಾ ।
ಕ್ರೋಶಂತೀ ಸಂಮುಖಾಭ್ಯೇತಿ ಸ ಗತಾಯುರ್ಭವೇನ್ನರಃ ॥ ೧೮ ॥

ಯಸ್ಯ ವೈ ಸ್ನಾತಮಾತ್ರಸ್ಯ ಹೃದಯಂ ಪೀಡ್ಯತೇ ಭೃಶಂ ।
ಜಾಯತೇ ದಂತಹರ್ಷಶ್ಚ ತಂಗತಾಯುಷಮಾದಿಶೇತ್ ॥ ೧೯ ॥

ಭೂಯೋ ಭೂಯಃ ಶ್ವಸೇದ್ಯಸ್ತು ರಾತ್ರೌ ವಾ ಯದಿ ವಾ ದಿವಾ ।
ದೀಪಗಂಧಂ ಚ ನೋ ವೇತ್ತಿ ವಿದ್ಯಾನ್ಮೃತ್ಯುಮುಪಸ್ಥಿತಂ ॥ ೨೦ ॥

ರಾತ್ರೌ ಚೇಂದ್ರಾಯುಧಂ ಪಶ್ಯೇದ್ದಿವಾ ನಕ್ಷತ್ರಮಂಡಲಂ ।
ಪರನೇತ್ರೇಷು ಚಾತ್ಮಾನಂ ನ ಪಶ್ಯೇನ್ನ ಸ ಜೀವತಿ ॥ ೨೧ ॥

ನೇತ್ರಮೇಕಂ ಸ್ರವೇದಸ್ಯ ಕರ್ಣೌ ಸ್ಥಾನಾಚ್ಚ ಭ್ರಶ್ಯತಃ ।
ನಾಸಾ ಚ ವಕ್ರಾ ಭವತಿ ಸ ಜ್ಞೇಯೋ ಗತಜೀವಿತಃ ॥ ೨೨ ॥

---

೧೮. ಉಷಃಕಾಲದಲ್ಲಿಯೂ, ಸೂರ್ಯೋದಯ ಸಮಯದಲ್ಲಿಯೂ, ಹೆಣ್ಣು ನರಿಯು ಬೊಗಳುತ್ತಾ ಯಾವನ ಅಭಿಮುಖವಾಗಿ ಬರುವುದೋ ಅವನು ಬೇಗನೆ ಸಾಯುವನು.

೧೯. ಯಾವನ ಹೃದಯವು ಸ್ನಾನಮಾಡುವುದರಿಂದ ಬಹಳವಾಗಿ ಪೀಡಿತ ವಾಗುತ್ತದೆಯೋ, ಮತ್ತು ದಂತ ಪಂಕ್ತಿಗಳು ಕಂಪಿತವಾಗುತ್ತವೆಯೋ, ಅವನಿಗೆ ಸಾವು ಸನ್ನಿಹಿತವಾಗುವುದು.

೨೦. ಯಾವನು ಹಗಲು ರಾತ್ರಿಯನ್ನದೆ ಸರ್ವದಾ ಪದೇಪದೇ ನಿಟ್ಟುಸಿರನ್ನು ಬಿಡುತ್ತಾ ದೀಪಗಂಧವನ್ನು ತಿಳಿಯುವುದಿಲ್ಲವೋ, ಅವನಿಗೆ ಮರಣವು ಸಮಿಾಪಗತ ವಾಗುವುದು.

೨೧. ಯಾವನು ರಾತ್ರಿಯಲ್ಲಿ ಕಾಮನಬಿಲ್ಲನ್ನೂ, ಹಗಲಿನಲ್ಲಿ ನಕ್ಷತ್ರಮಂಡಲ ವನ್ನೂ, ಪರರ ನೇತ್ರಗಳಲ್ಲಿ ತನ್ನ ರೂಪವನ್ನೂ ನೋಡುವನೋ, ಅವನು ಬಹುಕಾಲ ಜೀವಿಸುವುದಿಲ್ಲ.

೨೨. ಯಾವನ ಏಕನೇತ್ರದಲ್ಲಿ ನೀರು ಸುರಿಯುತ್ತದೆಯೋ, ಕಿವಿಗಳು ಸ್ಥಾನಭ್ರಷ್ಟಗಳಾಗಿ ಕೇಳುವುದಿಲ್ಲವೋ, ಮತ್ತು ಮೂಗು ಸೊಟ್ಟಗಾಗುತ್ತದೆಯೋ, ಅವನ ಆಯುಷ್ಯವು ಬೇಗನೆ ಕಳೆಯುವುದು.

**ಯಸ್ಯ ಕೃಷ್ಣಾ ಖರಾ ಜಿಹ್ವಾ ಪಂಕಭಾಸಶ್ಚ ವೈ ಮುಖಂ ।**
**ಗಂಡೇ ಚಿಪಿಟಿಕೇ ರಕ್ತೇ ತಸ್ಯ ಮೃತ್ಯುರುಪಸ್ಥಿತಃ ॥ ೨೩ ॥**

**ಮುಕ್ತಕೇಶೋ ಹಸಂಶ್ಚೈವ ಗಾಯನ್ ನೃತ್ಯಂಶ್ಚ ಯೋ ನರಃ ।**
**ಯಾನ್ಯಾಶಾಭಿಮುಖೋ ಗಚ್ಛೇತ್ ತದಂತಂ ತಸ್ಯ ಜೀವಿತಂ ॥ ೨೪ ॥**

**ಯಸ್ಯ ಸ್ವೇದ ಸಮುದ್ಭೂತಾಃ ಶ್ವೇತಸರ್ಷಪಸನ್ನಿಭಾಃ ।**
**ಸ್ವೇದಾ ಭವಂತಿ ಹ್ಯಸಕೃತ್ ತಸ್ಯ ಮೃತ್ಯುರುಪಸ್ಥಿತಃ ॥ ೨೫ ॥**

**ಉಷ್ಟ್ರಾ ವಾ ರಾಸಭಾ ವಾಪಿ ಯುಕ್ತಾಃ ಸ್ವಪ್ನೇ ರಥೇಽಶುಭಾಃ ।**
**ಯಸ್ಯ ಸೋಽಪಿ ನ ಜೀವೇತ ದಕ್ಷಿಣಾಭಿಮುಖೋ ಗತಃ ॥ ೨೬ ॥**

**ದ್ವೇ ಚಾತ್ರ ಪರಮೇಽರಿಷ್ಟೇ ಏತದ್ರೂಪಂ ಪರಂ ಭವೇತ್ ।**
**ಘೋಷಂ ನ ಶೃಣುಯಾತ್ ಕರ್ಣೇ ಜ್ಯೋತಿರ್ನೇತ್ರೇ ನ ಪಶ್ಯತಿ ॥ ೨೭ ॥**

---

೨೩. ಯಾವನ ನಾಲಿಗೆಯು ಕಪ್ಪಗೂ, ಒರಟಾಗಿಯೂ, ಮುಖವು ಕೆಸರಿನಂತೆ ಕಪ್ಪಗೂ, ಕೆನ್ನೆ, ಗಲ್ಲಗಳು ಕೆಂಪಗೂ, ಆಗುತ್ತವೆಯೋ, ಅವನಿಗೆ ಮೃತ್ಯುವು ಸಮೀಪ ವಾಗಿರುವುದು.

೨೪. ಯಾವನು ತಲೆಯನ್ನು ಕೆದರಿಕೊಂಡು ನಗುತ್ತಲೂ, ಹಾಡುತ್ತಲೂ, ಮತ್ತು ಕುಣಿಯುತ್ತಲೂ, ದಕ್ಷಿಣದಿಕ್ಕಿಗೆ ಹೋಗುವಹಾಗೆ ಕನಸ್ಸನ್ನು ಪಡೆಯು ತ್ತಾನೋ, ಅವನಿಗೆ ಆಯುಷ್ಯವು ಮುಗಿಯುತೆಂದೇ (ಮುಗಿದಿದೆಯೆಂದೇ) ಭಾವಿಸ ಬೇಕು.

೨೫. ಯಾವನ ಶರೀರದಲ್ಲಿ ಬಿಳಿ ಸಾಸುವೆಯಂತೆ, ಪದೇ ಪದೇ ಬೆವರು ಬಿಂದುಗಳು ಉಂಟಾಗುತ್ತವೆಯೋ, ಅವನಿಗೆ ಮರಣ ಕಾಲವು ಪ್ರಾಪ್ತವಾದಂತೆಯೇ ತಿಳಿಯಬೇಕು.

೨೬. ಯಾವನಿಗೆ ಒಂಟೆಗಳು, ಅಥವಾ ಕತ್ತೆಗಳು ಕಟ್ಟಿರುವ ಅಮಂಗಳಕರ ವಾದ ಗಾಡಿಯಲ್ಲಿ ಕುಳಿತುಕೊಂಡು, ದಕ್ಷಿಣ ದಿಕ್ಕಿಗೆ ಹೋಗುವಂತೆ ಕನಸು ಬೀಳು ವುದೋ, ಅವನಿಗೆ ಮರಣಕಾಲವು ಸಮೀಪವಾಗಿರುವುದು.

೨೭. ಮನುಷ್ಯನಿಗೆ ಆಗತಕ್ಕ ಅನೇಕ ಅರಿಷ್ಟಗಳಲ್ಲಿ ಕಿವಿಗೆ ಶಬ್ದವು ಕೇಳ ದಿರುವುದು, ದೃಷ್ಟಿಗೆ ರೂಪವು ಕಾಣದಿರುವುದು, ಇವೆರಡೂ ಪರಮಾರಿಷ್ಟಗಳು. ಇವು ಉಂಟಾದರೆ ಅವನು ಬಹುಕಾಲ ಜೀವಿಸಲಾರನು.

ಶ್ವಭ್ರೇ ಯೋ ನಿಪತೇತ್ ಸ್ವಪ್ನೇ ದ್ವಾರಂ ಚಾಸ್ಯ ನ ವಿದ್ಯತೇ ।
ನ ಚೋತ್ತಿಷ್ಠತಿ ಯಃ ಶ್ವಭ್ರಾತ್ ತದಂತಂ ತಸ್ಯ ಜೀವಿತಂ ॥ ೨೮ ॥

ಊರ್ಧ್ವಾ ಚ ದೃಷ್ಟಿರ್ನ ಚ ಸಂಪ್ರತಿಷ್ಠಾ ।
ರಕ್ತಾ ಪುನಃ ಸಂಪರಿವರ್ತಮಾನಾ ॥
ಮುಖಸ್ಯ ಚೋಷ್ಮಾ ಶುಷಿರಾ ಚ ನಾಭಿ ।
ರತ್ಯುಷ್ಣ ಮೂತ್ರೋ ವಿಷಮಸ್ಥ ಏವ ॥ ೨೯ ॥

ದಿವಾ ವಾ ಯದಿ ವಾ ರಾತ್ರೌ ಪ್ರತ್ಯಕ್ಷಂ ಯೋಭಿಹನ್ಯತೇ ।
ತಂ ಪಶ್ಯೇದಥ ಹಂತಾರಂ ಸ ಹತಸ್ತು ನ ಜೀವತಿ ॥ ೩೦ ॥

ಅಗ್ನಿಪ್ರವೇಶಂ ಕುರುತೇ ಸ್ವಪ್ನಾಂತೇ ಯಸ್ತು ಮಾನವಃ ।
ಸ್ಮೃತಿಂ ನೋಪಲಭೇಚ್ಚಾಪಿ ತದಂತಂ ತಸ್ಯ ಜೀವಿತಂ ॥ ೩೧ ॥

---

೨೮. ಯಾವನು ಹಳ್ಳದಲ್ಲಿ ಬಿದ್ದು ಅಲ್ಲಿಂದ ತಪ್ಪಿಸಿಕೊಳ್ಳಲು ಮಾರ್ಗವಿಲ್ಲದೇ ಅದರಲ್ಲಿಯೇ ಬಿದ್ದಿರುವನಂತೆ ಸ್ವಪ್ನವನ್ನು ಕಾಣುತ್ತಾನೆಯೋ, ಅವನಿಗೆ ಮರಣವು ಸಮೀಪವಾಗಿರುವುದು.

೨೯. ಯಾವನ ದೃಷ್ಟಿಯು ಊರ್ಧ್ವಮುಖವಾಗಿಯೂ, ಚಂಚಲವಾಗಿಯೂ, ರಕ್ತವಾಗಿಯೂ ಮತ್ತು ಭ್ರಮಿಸುತ್ತಲೂ (ತಿರುಗುತ್ತಲೂ) ಇರುತ್ತವೆಯೋ, ಮತ್ತು ಮುಖವು ಬಿಸಿಯಾಗಿಯೂ, ನಾಭಿಯು ಆಳವಾಗಿಯೂ, ಮೂತ್ರವು ಅತ್ಯುಷ್ಣವಾಗಿಯೂ ಇರುತ್ತವೆಯೋ, ಅವನು ಶೀಘ್ರದಲ್ಲಿಯೇ ಮರಣವನ್ನು ಹೊಂದುವನು.

೩೦. ಯಾವನು ಹಗಲಿನಲ್ಲಿಯಾಗಲೀ,- ರಾತ್ರಿಯಲ್ಲಾಗಲೀ, ಪ್ರತ್ಯಕ್ಷವಾಗಿ ಪರರನ್ನು ಕೊಲ್ಲುವ ಹಾಗೂ ಅಥವಾ ಇತರರಿಂದ ತಾನು ಕೊಲ್ಲಲ್ಪಡುವವನಾಗಿಯೂ, ಸ್ವಪ್ನವನ್ನು ಕಾಣುವನೋ ಅವನು ಬಹಳಕಾಲ ಜೀವಿಸಲಾರನು.

೩೧. ಯಾವನು ಕನಸಿನಲ್ಲಿ ತಾನು ಅಗ್ನಿಯನ್ನು ಪ್ರವೇಶಮಾಡಿದಂತೆ ತಿಳಿದು, ಪುನಃ ಎಚ್ಚರಗೊಳ್ಳುವುದಿಲ್ಲವೋ, ಅವನಿಗೆ ಮೃತ್ಯುವು ಸಮೀಪವಾಗಿರುವುದು.

ಯಸ್ತು ಪ್ರಾವರಣಂ ಶುಕ್ಲಂ ಸ್ವಕಂ ಪಶ್ಯತಿ ಮಾನವಃ ।
ರಕ್ತಂ ಕೃಷ್ಣಮಪಿ ಸ್ವಪ್ನೇ ತಸ್ಯ ಮೃತ್ಯುರುಪಸ್ಥಿತಃ ॥ ೩೨ ॥

ಅರಿಷ್ಟ ಸೂಚಿತೇ ದೇಹೇ ತಸ್ಮಿನ್ ಕಾಲ ಉಪಾಗತೇ ।
ತ್ಯಕ್ತ್ವಾ ಭಯವಿಷಾದಂಚ ಉದ್ಗಚ್ಛೇದ್ಬುದ್ಧಿಮಾನ್ನರಃ ॥ ೩೩ ॥

ಪ್ರಾಚೀಂ ವಾ ಯದಿ ವೋದೀಚೀಂ ದಿಶಂ ನಿಷ್ಕ್ರಮ್ಯ ವೈ ಶುಚಿಃ ।
ಸಮೇತಿಸ್ಥಾವರೇ ದೇಶೇ ವಿವಿಕ್ತೇ ಜನವರ್ಜಿತೇ ॥ ೩೪ ॥

ಉದಙ್ಮುಖಃ ಪ್ರಾಙ್ಮುಖೋ ವಾ ಸ್ವಸ್ಥಃ ಸ್ವಾಚಾಂತ ಏವ ಚ ।
ಸ್ವಸ್ತಿಕೋಪನಿವಿಷ್ಟಶ್ಚ ನಮಸ್ಕೃತ್ಯ ಮಹೇಶ್ವರಂ ॥
ಸಮಕಾಯಶಿರೋಗ್ರೀವಂ ಧಾರಯೇನ್ನಾವಲೋಕಯೇತ್ ॥ ೩೫ ॥

ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ ।
ಪ್ರಾಗುದಕ್ ಪ್ರವಣೇ ದೇಶೇ ತಸ್ಮಾತ್ ಯುಂಜೀತ ಯೋಗವಿತ್ ॥ ೩೬ ॥

---

೩೨. ಯಾವನು ಉಟ್ಟಿರುವ ಬಿಳುಪಾದ ವಸ್ತ್ರವನ್ನು, ಕನಸಿನಲ್ಲಿ ಕೆಂಪಗೂ, ಕಪ್ಪಗೂ, ಇರುವಂತೆ ಕಾಣುತ್ತಾನೋ, ಅವನಿಗೆ ಮೃತ್ಯುವು ಸಮೀಪವಾಗಿರುವುದು.

೩೩. ದೇಹದಲ್ಲಿ ಅರಿಷ್ಟ ಸೂಚನೆಗಳು ಉಂಟಾಗಿ ಮರಣಕಾಲವು ಸಮೀಪ ವಾದರೂ, ಬುದ್ಧಿವಂತನಾದ ಪುರುಷನು ಭಯ, ಮತ್ತು ದುಃಖಗಳನ್ನು ಬಿಟ್ಟು, ಧೈರ್ಯವಂತನಾಗಿ ಸ್ವಕಾರ್ಯಗಳನ್ನು ಮಾಡಿದರೆ ಮೃತ್ಯುವು ತೊಲಗುವುದು.

೩೪-೩೫ ಅಂತಹ ಕಾಲದಲ್ಲಿ ಪುರುಷನು ಶುಚಿಯಾಗಿ ಪೂರ್ವ ಅಥವಾ ಪಶ್ಚಿಮ ದಿಕ್ಕಿಗೆ ಹೋಗಿ ಸಮವಾಗಿಯೂ, ಗಿಡಮರಗಳು ಪ್ರಾಯಕವಾಗಿಯೂ, ಪ್ರತ್ಯೇಕವಾಗಿಯೂ, ನಿರ್ಜನವಾಗಿಯೂ, ಇರುವ ಪ್ರದೇಶದಲ್ಲಿ, ಉತ್ತರ ಅಥವಾ ಪೂರ್ವಾಭಿಮುಖನಾಗಿ, ಸ್ಥಿರವಾದ ಸ್ವಸ್ತಿಕಾಸನದಲ್ಲಿ ಕುಳಿತು ಪರಮೇಶ್ವರನಿಗೆ ನಮಸ್ಕರಿಸಿ ಸಮವಾದ ಶರೀರ, ಶಿರಸ್ಸು ಮತ್ತು ಕತ್ತು ಇವುಗಳುಳ್ಳವನಾಗಿ ಬಹಿರ್ಮುಖ ನಾಗದೇ ಅಂತರ್ಮುಖಿಯಾಗಿ ಧ್ಯಾನಿಸಬೇಕು.

೩೬. ನಿರ್ವಾತವಾದ ಪ್ರದೇಶದಲ್ಲಿದ್ದ ದೀಪವು ಹೇಗೆ ಅಲುಗಾಡುವುದಿಲ್ಲವೋ ಹಾಗೆಯೇ ಉತ್ತರಾಭಿಮುಖನೂ, ಅಥವಾ ಪೂರ್ವಾಭಿಮುಖನೂ ಆಗಿ ಕುಳಿತು ಕೊಂಡು, ಯೋಗಿಯು ಏಕಚಿತ್ತನಾಗಿ ಧ್ಯಾನಮಾಡಬೇಕು.

ಘ್ರಾಣೇ ಚ ರಮತೇ ನಿತ್ಯಂ ಚಕ್ಷುಷೋಃ ಸ್ಪರ್ಶನೇ ತಥಾ।
ಶ್ರೋತ್ರೇ ಮನಸಿ ಬುದ್ಧೌ ಚ ತಥಾ ವಕ್ಷಸಿ ಧಾರಯೇತ್ ॥ ೩೭ ॥

ಕಾಲಧರ್ಮಾಂಶ ವಿಜ್ಞಾಯ ಸಮೂಹಂಚೈವ ಸರ್ವಶಃ ।
ದ್ವಾದಶಾಧ್ಯಾತ್ಮಮಿತ್ಯೇವಂ ಯೋಗಧಾರಣಮುಚ್ಯತೇ ॥ ೩೮ ॥

ಶತಮಷ್ಟಶತಂವಾಪಿ ಧಾರಣಾಂ ಮೂರ್ಧ್ನಿ ಧಾರಯೇತ್ ।
ನ ತಸ್ಯ ಧಾರಣಾ ಯೋಗಾತ್ ವಾಯುಃ ಸರ್ವಂ ಪ್ರವರ್ತತೇ ॥ ೩೯ ॥

ತತಸ್ತ್ವಾಪೂರಯೇದ್ದೇಹಮೋಂಕಾರೇಣ ಸಮಾಹಿತಃ ।
ಅಥೋಂಕಾರಮಯೋ ಯೋಗೀ ನ ಕ್ಷರೇತ್ವಕ್ಷರೀ ಭವೇತ್ ॥ ೪೦ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಅರಿಷ್ಟಾನಿರೂಪಣಂ"
ನಾಮೈಕೋನ ವಿಂಶೋಽಧ್ಯಾಯಃ

---

೩೭. ಯೋಗಿಯು ಭಗವಂತನನ್ನು ಪ್ರಾಣ, ನೇತ್ರ, ಸ್ಪರ್ಶ, ಶ್ರೋತ್ರ, ಮನಸ್ಸು, ಬುದ್ಧಿ ಮತ್ತು ಹೃದಯ ಇವುಗಳಲ್ಲಿ ಸ್ಥಿರವಾಗಿ ನಿಲ್ಲಿಸಿ ಮತ್ತು ಧ್ಯಾನಿಸಿ (ಸಂತೋಷಚಿತ್ತನಾಗಬೇಕು) ರಮಿಸಬೇಕು.

೩೮. ಕಾಲಧರ್ಮಗಳನ್ನೂ, ಸಾಂಘಿಕಧರ್ಮಗಳನ್ನೂ ಸಂಪೂರ್ಣವಾಗಿ ತಿಳಿದು ದ್ವಾದಶಾಧ್ಯಾತ್ಮನನ್ನು ಧ್ಯಾನಮಾಡಿದರೆ ಯೋಗಧಾರಣೆಯಾಗುವುದು.

೩೯. ಯೋಗಿಯು ನೂರುಸಲ ಅಥವಾ ನೂರೆಂಟುಬಾರಿ ಶಿರಸ್ಸಿನಲ್ಲಿ ಈಶ್ವರ ನನ್ನು ಧ್ಯಾನಿಸಬೇಕು. ಹೀಗೆ ಧಾರಣೆಯಾಗದಿದ್ದರೆ ಪ್ರಾಣವಾಯುವು ಎಲ್ಲಾ ಕಡೆಯಲ್ಲೂ ಅಲೆದಾಡುವುದು.

೪೦. ಅನಂತರ ಜ್ಞಾನಿಯು ಓಂಕಾರದಿಂದ ತನ್ನ ಶರೀರವನ್ನು ತುಂಬಿ ಕೊಂಡು ಅಂದರೆ ಓಂಕಾರ ಶಬ್ದವಾಚ್ಯನಾದ ಭಗವಂತನನ್ನು ಧ್ಯಾನಿಸಿ ಶಾಂತಚಿತ್ತನಾಗಿ ಓಂಕಾರ ಪ್ರಚುರನಾಗಿ ಧ್ಯಾನಿಸಿದರೆ ಸ್ಥಿರವೂ, ಅಕ್ಷಯವೂ ಆದ ಪರಮಪದವಿಯನ್ನು ಹೊಂದುವನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಅರಿಷ್ಟಕಥನ"ವೆಂಬ
ಹತ್ತೊಂಭತ್ತನೆಯ ಅಧ್ಯಾಯವು ಸಮಾಪ್ತವಾದುದು.

# ಹತ್ತೊಂಭತ್ತನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಮರಣಸೂಚಕಗಳಾದ ಅಪಶಕುನಗಳೂ, ಚಿಹ್ನೆಗಳೂ, ಉಕ್ತವಾಗಿವೆ. ಪುರುಷನು ಏತರಿಂದ ತನ್ನ ಮರಣವನ್ನು ಮುಂಚಿತವಾಗಿ ತಿಳಿಯುವನೋ ಆ ವಿಷಯಗಳು ಉಕ್ತವಾಗಿವೆ. ಅರುಂಧತೀ, ಧ್ರುವ, ಚಂದ್ರಚ್ಛಾಯೆ ಇವುಗಳನ್ನು ನೋಡಿದವನಿಗೆ ಒಂದು ವರ್ಷವೂ, ಸೂರ್ಯಕಿರಣಾದಿ ಜ್ಞಾನವಿಲ್ಲದವನಿಗೆ ಹನ್ನೊಂದು ತಿಂಗಳೂ. ಮಲಮೂತ್ರಗಳನ್ನು ವಮನ ಮಾಡಿದವನಿಗೆ ಹತ್ತು ತಿಂಗಳೂ, ಮರಳು ಕೆಸರುಗಳಲ್ಲಿ ಸಂಚರಿಸಿದರೂ ಕಾಲುಪೀಡಿತನಾದವನಿಗೆ ಸಪ್ತ ಮಾಸವೂ, ಕಾಗೆ, ಹದ್ದು, ಮೊದಲಾದುವುಗಳ ಸಂಬಂಧದಿಂದ ಷಣ್ಮಾಸವೂ, ವಿಕೃತ ಛಾಯಾದರ್ಶಿಗಳಿಗೆ ಮೂರು ನಾಲ್ಕು ತಿಂಗಳೂ, ಆಯುಷ್ಯವಿರುವುದು. ಮೋಡವಿಲ್ಲದ ದಿಕ್ಕಿನಲ್ಲಿ ಮಿಂಚು ಮೊದಲಾದುವನ್ನು ನೋಡುವವನಿಗೆ ಎರಡು ಮೂರು ತಿಂಗಳೂ, ಕನ್ನಡಿ ಜಲಾದಿಗಳಲ್ಲಿ ತನ್ನ ಛಾಯೆಯನ್ನು ಕಾಣದವನಿಗೆ ಒಂದು ತಿಂಗಳೂ, ಶರೀರದಲ್ಲಿ ಶವದುರ್ಗಂಧ ಬಂದವನಿಗೆ ಹದಿನೈದು ದಿವಸಗಳೂ, ಕಪಿ ಮೊದಲಾದುವುಗಳೊಡನೆ ರಥದಲ್ಲಿ ಕುಳಿತು ದಕ್ಷಿಣ ದಿಕ್ಕಿಗೆ ಹೋದಂತೆ ಸ್ವಪ್ನ ಕಂಡವನಿಗೆ ಒಂದು ದಿವಸ ಮಾತ್ರವೂ ಆಯುರ್ಮಾನವೆಂದು ತಿಳಿಯಬೇಕು. ಕೃಷ್ಣಾಂಬರಧಾರಿಯಾಗಿ ದಕ್ಷಿಣ ದಿಕ್ಕಿಗೆ ಹೋದಂತೆ ಕನಸು ಬಿದ್ದವನಿಗೂ, ಸ್ವಪ್ನದಲ್ಲಿ ಕೆಸರಿನಲ್ಲಿ ಮುಳುಗಿದವನಿಗೂ ನಿರ್ಜಲ ನದಿಯಲ್ಲಿ ಸರ್ಪರಾಶಿಯನ್ನು ನೋಡಿದವನಿಗೂ, ರಾತ್ರಿಯಲ್ಲಿ ಕಾಮನಬಿಲ್ಲನ್ನೂ, ಹಗಲಿನಲ್ಲಿ ನಕ್ಷತ್ರಮಂಡಲವನ್ನೂ ನೋಡಿದವನಿಗೂ ಕತ್ತೆಯ ಗಾಡಿಯಲ್ಲಿ ಕುಳಿತು ದಕ್ಷಿಣ ದಿಕ್ಕಿಗೆ ಪ್ರಯಾಣಮಾಡಿದವನಿಗೂ, ಹಳ್ಳದಲ್ಲಿ ಬಿದ್ದು ಏಳದೆ ಇರುವವನಿಗೂ, ರಕ್ತಕೃಷ್ಣಾಂಬರಧಾರಿಗೂ, ಮೃತ್ಯುವು ಸಮೀಪಗತವೆಂದು ತಿಳಿಯಬೇಕು. ಇಂತಹ ತಿಳಿವಳಿಕೆಯುಳ್ಳ ಪುರುಷನು ಧೈರ್ಯವಂತನೂ, ಸ್ಥಿರಚಿತ್ತನೂ ಆಗಿ ಧ್ಯಾನವನ್ನು ಮಾಡಿ ಮೃತ್ಯುವನ್ನು ಮೀರಿ ಶಾಶ್ವತವಾದ ಪರಮಪದವಿಯನ್ನು ಪಡೆಯುವನು.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ವಿಂಶೋಽಧ್ಯಾಯಃ

॥ ವಾಯುರುವಾಚ ॥

**ಅತ ಊರ್ಧ್ವಂ ಪ್ರವಕ್ಷ್ಯಾಮಿ ಓಂಕಾರಪ್ರಾಪ್ತಿಲಕ್ಷಣಂ ।**
**ಏಷ ತ್ರಿಮಾತ್ರೋ ವಿಜ್ಞೇಯೋ ವ್ಯಂಜನಂ ಚಾತ್ರ ಸಸ್ವರಂ ॥ ೧ ॥**

**ಪ್ರಥಮಾ ವೈದ್ಯುತೀ ಮಾತ್ರಾ ದ್ವಿತೀಯಾ ತಾಮಸೀ ಸ್ಮೃತಾ ।**
**ತೃತೀಯಾ ನಿರ್ಗುಣೀ ವಿದ್ಯಾತ್ ಮಾತ್ರಾಮಕ್ಷರಗಾಮಿನೀಂ ॥ ೨ ॥**

**ಗಾಂಧರ್ವೀತಿ ಚ ವಿಜ್ಞೇಯಾ ಗಾಂಧಾರಸ್ವರಸಂಭವಾ ।**
**ಪಿಪೀಲಿಕಾ ಸಮಸ್ಪರ್ಶಾ ಪ್ರಯುಕ್ತಾ ಮೂರ್ಧ್ನಿ ಲಕ್ಷ್ಯತೇ ॥ ೩ ॥**

---

## ಇಪ್ಪತ್ತನೆಯ ಅಧ್ಯಾಯವು

೧. ವಾಯುದೇವನು ಹೇಳಿದನು :—ಈಗ ಅಕಾರ, ಉಕಾರ, ಮಕಾರಾತ್ಮಕವಾದ ಸ್ವರಗಳಿಂದ ಕೂಡಿದ ವ್ಯಂಜನರೂಪವಾದ ಓಂಕಾರಸ್ವರೂಪವನ್ನು ವಿಶದವಾಗಿ ತಿಳಿಸುವೆನು, ಕೇಳಿ ಎಂದನು.

೨. ಪ್ರಥಮ ಮಾತ್ರೆಗೆ ವೈದ್ಯುತೀ ಎಂದೂ, ದ್ವಿತೀಯ ಮಾತ್ರೆಗೆ ತಾಮಸೀ ಎಂದೂ, ತೃತೀಯ ಮಾತ್ರೆಗೆ ನಿರ್ಗುಣೀ ಎಂದೂ, ಸಂಜ್ಞೆಯು ಪ್ರಾಪ್ತವಾಗಿದೆ.

೩. ಈ ಓಂಕಾರವು ಗಾಂಧಾರಸ್ವರದಿಂದ ಜನ್ಯವಾದುದರಿಂದ "ಗಾಂಧರ್ವೀ" ಎಂಬುದಾಗಿ ಪ್ರಖ್ಯಾತವಾಗಿದೆ. ಇದನ್ನು ಉಚ್ಚರಿಸಿದರೆ ಪಿಪೀಲಿಕಾ ಸ್ಪರ್ಶದಂತೆ ಶಿರಸ್ಸಿನಲ್ಲಿ ಜ್ಞಾನೋದಯವಾಗುವುದು.

ತಥಾ ಪ್ರಯುಕ್ತವೋಂಕಾರಂ ಪ್ರತಿನಿರ್ವಾತಿ ಮೂರ್ದ್ಧನಿ ।
ತಥೋಂಕಾರ ಮಯೋಯೋಗೀ ಹ್ಯಕ್ಷರೇ ತ್ವಕ್ಷರೀ ಭವೇತ್ ॥ ೪ ॥

ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।
ಅಪ್ರಮತ್ತೇನ ಚೇದ್ವದ್ಧ್ಯಂ ಶರವತ್ತನ್ಮಯೋ ಭವೇತ್ ॥ ೫ ॥

ಓಮಿತ್ಯೇಕಾಕ್ಷರಂ ಬ್ರಹ್ಮ ಗುಹಾಯಾಂ ನಿಹಿತಂ ಪದಂ ।
ಓಮಿತ್ಯೇತತ್ರಯೋವೇದಾ ಸ್ತ್ರಯೋ ಲೋಕಾಸ್ತ್ರಯೋಗ್ನಯಃ ॥ ೬ ॥

ವಿಷ್ಣುಕ್ರಮಾಸ್ತ್ರಯಸ್ತ್ವೇತೇ ಋಕ್ಸಾಮಾನಿ ಯಜೂಂಷಿ ಚ ।
ಮಾತ್ರಾಶ್ಚಾತ್ರ ಚತುಸ್ರಸ್ತು ವಿಜ್ಞೇಯಾಃ ಪರಮಾರ್ಥತಃ ।
ತತ್ರ ಯುಕ್ತಶ್ಚ ಯೋ ಯೋಗೀ ತಸ್ಯ ಸಾಲೋಕ್ಯತಾಂ ವ್ರಜೇತ್ ॥ ೭ ॥

---

೪. ಓಂಕಾರವನ್ನು ಶಿರಸ್ಸಿನಲ್ಲಿ ಧಾರಣೆಮಾಡಿ ಆವರ್ತನೆಯನ್ನು ಮಾಡುವ ಯೋಗಿಯು ಓಂಕಾರಮಯನೂ ನಾಶರಹಿತನೂ ಆದ ಪರಮವಸ್ತುವಿನಲ್ಲಿ ಸೇರಿ ಅಕ್ಷಯಸುಖವನ್ನು ಪಡೆಯುವನು.

೫. ಪ್ರಣವವೇ ಧನುಸ್ಸು, ಜೀವವೇ ಬಾಣವು, ಇದಕ್ಕೆ ಬ್ರಹ್ಮನೇ ಲಕ್ಷ್ಯವು, ಆದುದರಿಂದ ಯೋಗಿಯು ಅಪ್ರಮತ್ತನಾಗದೆ ಲಕ್ಷ್ಯವನ್ನು ಪಡೆದು (ಅದನ್ನೇ) ಬ್ರಹ್ಮನನ್ನೇ ಸರ್ವದಾ ಧ್ಯಾನಮಾಡಬೇಕು. ಅಂದರೆ ಜೀವಾತ್ಮನು ಓಂಕಾರದಿಂದ ಪರಮಾತ್ಮನನ್ನು ಹೊಂದಿ ಇಷ್ಟಾರ್ಥಗಳನ್ನು ಪಡೆಯಬೇಕು.

೬. ಓಂಕಾರ ಶಬ್ದವಾಚ್ಯನಾದ ಪರಬ್ರಹ್ಮನು ಹೃದಯಗುಹೆಯಲ್ಲಿ ವಾಸಿಸುವನು. ಅಂತಹ ಓಂಕಾರರೂಪನಾದ ಬ್ರಹ್ಮನೇ ವೇದತ್ರಯವೇದ್ಯನೂ ಮೂರುಲೋಕವ್ಯಾಪ್ತನೂ ಅಗ್ನಿತ್ರಯನೂ ಆಗಿರುತ್ತಾನೆ. ಋಗ್ವೇದ ಯಜುರ್ವೇದ ಸಾಮವೇದಗಳೆಂಬ ಮೂರು ವೇದಗಳೂ ವಿಷ್ಣುವಿನ ಗುಣವನ್ನೇ ಹೊಗಳುತ್ತವೆ.

೭ ನಿಜವಾಗಿಯೂ ಓಂಕಾರವನ್ನು ವಿಚಾರಮಾಡಿದರೆ ಅದರಲ್ಲಿ ನಾಲ್ಕು ಮಾತ್ರೆಗಳಿವೆಯೆಂದು ತಿಳಿಯಬೇಕು. ಆ ಓಂಕಾರದಲ್ಲಿ ಆಸಕ್ತನಾದ ಯೋಗಿಯು ಪರಮಪುರುಷನ ಸಾಲೋಕ್ಯಮೋಕ್ಷವನ್ನು ಪಡೆಯುವನು.

ಅಕಾರಸ್ತ್ವಕ್ಷರೋ ಜ್ಞೇಯ ಉಕಾರಃ ಸ್ವರಿತಃ ಸ್ಮೃತಃ ।
ಮಕಾರಸ್ತು ಪ್ಲುತೋ ಜ್ಞೇಯಸ್ತ್ರಿಮಾತ್ರ ಇತಿ ಸಂಜ್ಞಿತಃ ॥ ೮ ॥

ಅಕಾರಸ್ತ್ವಥ ಭೂರ್ಲೋಕ ಉಕಾರೋ ಭುವರುಚ್ಯತೇ ।
ಸವ್ಯಂಜನೋ ಮಕಾರಶ್ಚ ಸ್ವರ್ಲೋಕಶ್ಚ ವಿಧೀಯತೇ ॥ ೯ ॥

ಓಂಕಾರಸ್ತು ತ್ರಯೋ ಲೋಕಾಃ ಶಿರಸ್ತಸ್ಯ ತ್ರಿವಿಷ್ಟಪಂ ।
ಭುವನಾಂತಂಚ ತತ್ಸರ್ವಂ ಬ್ರಾಹ್ಮಂ ತತ್ಪದಮುಚ್ಯತೇ ॥ ೧೦ ॥

ಮಾತ್ರಾ ಪದಂ ರುದ್ರಲೋಕೋ ಹ್ಯಮಾತ್ರಸ್ತು ಶಿವಂ ಪದಂ ।
ಏವಂ ಧ್ಯಾನವಿಶೇಷೇಣ ತತ್ಪದಂ ಸಮುಪಾಸತೇ ॥ ೧೧ ॥

---

೮. ಅಕಾರಕ್ಕೆ ಅಕ್ಷರವೆಂದೂ, ಉಕಾರಕ್ಕೆ ಸ್ವರಿತವೆಂದೂ, ಮಕಾರಕ್ಕೆ ಪ್ಲುತವೆಂದೂ, ಸಂಜ್ಞೆಯುಂಟಾಗಿದೆ. ಈ ರೀತಿಯಾಗಿ ಓಂಕಾರವು ತ್ರಿಮಾತ್ರಾರೂಪವಾಗಿದೆ.

೯. ಅಕಾರಕ್ಕೆ ಭೂಲೋಕವೆಂದೂ, ಉಕಾರಕ್ಕೆ ಭುವರ್ಲೋಕವೆಂದೂ, ವ್ಯಂಜನವಾದ ಮಕಾರಕ್ಕೆ ಸ್ವರ್ಗಲೋಕವೆಂದೂ ಸಂಜ್ಞೆಯು ಪ್ರಾಪ್ತವಾಗಿದೆ. ಈ ಓಂಕಾರಸಿದ್ಧಿಯಿಂದ ಭೂರ್ಭುವಃಸ್ವರಗಳೆಂಬ ಲೋಕತ್ರಯಗಳನ್ನು ಪಡೆಯಬಹುದು.

೧೦. ಓಂಕಾರವು ಲೋಕತ್ರಯಾತ್ಮಕವಾಗಿದೆ. ಇದಕ್ಕೆ ಸ್ವರ್ಗವೇ ಶಿರಸ್ಸು, ಇತರ ಲೋಕಗಳೇ ಓಂಕಾರಶಬ್ದವಾಚ್ಯನಾದ ಬ್ರಹ್ಮನ ಪಾದಗಳಾಗಿವೆ.

೧೧. ಕೇವಲ ಮಾತ್ರಾರೂಪನೆಂದು ಧ್ಯಾನಮಾಡಿದರೆ ರುದ್ರಲೋಕಪ್ರಾಪ್ತಿಯೂ, ಅಮಾತ್ರಾರೂಪದಿಂದ ಧ್ಯಾನಿಸಿದರೆ ಶಿವಪದಪ್ರಾಪ್ತಿಯೂ, ಆಗುವುದು. ಹೀಗೆ ಉಭಯರೀತಿಯಾದ, ಓಂಕಾರ ಧ್ಯಾನದಿಂದ ಈಶ್ವರನ ಪರಮಪದವಾದ ಕೈಲಾಸಲೋಕಪ್ರಾಪ್ತಿಯು ಆಗುವುದು.

ತಸ್ಮಾದ್ಧ್ಯಾನರತಿರ್ನಿತ್ಯಮಮಾತ್ರಂ ಹಿ ತದಕ್ಷರಂ ।
ಉಪಾಸ್ಯಂ ಹಿ ಪ್ರಯತ್ನೇನ ಶಾಶ್ವತಂ ಪದಮಿಚ್ಛತಾ ॥ ೧೨ ॥

ಹ್ರಸ್ವಾ ತು ಪ್ರಥಮಾ ಮಾತ್ರಾ ತತೋ ದೀರ್ಘಾ ತ್ವನಂತರಂ ।
ತತಃ ಪ್ಲುತವತೀ ಚೈವ ತೃತೀಯಾ ಉಪದಿಶ್ಯತೇ ॥ ೧೩ ॥

ಏತಾಸ್ತು ಮಾತ್ರಾ ವಿಜ್ಞೇಯಾ ಯಥಾವದನುಪೂರ್ವಶಃ ।
ಯಾವಚ್ಚೈವತು ಶಕ್ಯಂತೇ ಧಾರ್ಯಂತೇ ತಾವದೇವ ಹಿ ॥ ೧೪ ॥

ಇಂದ್ರಿಯಾಣಿ ಮನೋ ಬುದ್ಧಿಂ ಧ್ಯಾಯನ್ನಾತ್ಮನಿ ಯಃ ಸದಾ ।
ಅತ್ರಾಪ್ಯಷ್ಟಮಾತ್ರಮಪಿ ಚೇಚ್ಛೃಣುಯಾತ್ ಫಲಮಾಪ್ನುಯಾತ್ ॥ ೧೫ ॥

---

೧೨. ಆದುದರಿಂದ ಅಮಾತ್ರವೆಂದರೆ ನಾಶರಹಿತವಾದ ಪದವೆಂದು ಅರ್ಥವಾಗುವುದು. ಇದರಿಂದ ಧ್ಯಾನಾಸಕ್ತನಾದ ಯೋಗಿಯು ಪ್ರಯತ್ನಪೂರ್ವಕವಾಗಿ ಶಾಶ್ವತಪದದ ಆಕಾಂಕ್ಷೆಯಿಂದ ಧ್ಯಾನಿಸಬೇಕು.

೧೩. ಅಕಾರವು ಹ್ರಸ್ವವಾದ ಪ್ರಥಮಮಾತ್ರೆಯಾಗಿಯೂ, ಊಕಾರವು ದ್ವಿಮಾತ್ರೆಯಾಗಿಯೂ, ಮೂರನೆಯದು ಪ್ಲುತವಾಗಿಯೂ ಇರುವುದರಿಂದ ಓಂಕಾರವು ತ್ರಿಮಾತ್ರಾರೂಪವಾಗಿದೆ.

೧೪. ಈ ಮಾತ್ರೆಗಳನ್ನು ಕ್ರಮವಾಗಿಯೂ, ಆನುಪೂರ್ವಿಯಾಗಿಯೂ, ತಿಳಿದು ತನಗೆ ಧ್ಯಾನಮಾಡಲು ಎಷ್ಟು ಸಾಧ್ಯವೋ, ಅಷ್ಟನ್ನು ಮಾತ್ರ ಧ್ಯಾನಿಸಬೇಕು.

೧೫. ಯಾವನು ಮನಸ್ಸಿನಲ್ಲಿ ಇಂದ್ರಿಯ, ಬುದ್ಧಿ, ಮನಸ್ಸು, ಇವುಗಳ ಅಭಿಮಾನಿದೇವತೆಗಳನ್ನು ಮತ್ತು ಓಂ ನಮೋ, ನಾರಾಯಣಾಯ, ಎಂಬ ಅಷ್ಟಾಕ್ಷರ ಮಂತ್ರವನ್ನೂ, ಧ್ಯಾನಮಾಡುವವನೂ ಮತ್ತು ಆ ಮಂತ್ರವನ್ನು ಕೇಳಿದವನೂ ಕೂಡ ಸಂಪೂರ್ಣಫಲವನ್ನು ಹೊಂದುವನು.

ಮಾಸೇ ಮಾಸೇಽಶ್ವಮೇಧೇನ ಯೋ ಯಜೇತ ಶತಂ ಸಮಾಃ ।
ನ ಸ ತತ್ ಪ್ರಾಪ್ನುಯಾತ್ಪುಣ್ಯಂ ಮಾತ್ರಯಾ ಯದವಾಪ್ನುಯಾತ್ ॥

ಅಬ್ಬಿಂದುಂ ಯಃ ಕುಶಾಗ್ರೇಣ ಮಾಸೇ ಮಾಸೇ ಪಿಬೇನ್ನರಃ ।
ಸಂವತ್ಸರಶತಂ ಪೂರ್ಣಂ ಮಾತ್ರಯಾ ತದವಾಪ್ನುಯಾತ್ ॥ ೧೭ ॥

ಇಷ್ಟಾಪೂರ್ತಸ್ಯ ಯಜ್ಞಸ್ಯ ಸತ್ಯವಾಕ್ಯೇಚ ಯತ್ಫಲಂ ।
ಅಭಕ್ಷಣೇಚ ಮಾಂಸಸ್ಯ ಮಾತ್ರಯಾ ತದವಾಪ್ನುಯಾತ್ ॥ ೧೮ ॥

ಸ್ವಾಮ್ಯರ್ಥೇ ಯುಧ್ಯಮಾನಾನಾಂ ಶೂರಾಣಾಮನಿವರ್ತಿನಾಂ ।
ಯದ್ಭವೇತ್ತತ್ಫಲಂ ದೃಷ್ಟಂ ಮಾತ್ರಯಾ ತದವಾಪ್ನುಯಾತ್ ॥ ೧೯ ॥

---

೧೬. ಪ್ರತಿಮಾಸದಲ್ಲಿಯೂ ಅಶ್ವಮೇಧಯಾಗವನ್ನು ಮಾಡುವ ಕ್ರಮದಲ್ಲಿ ನೂರುವರ್ಷಗಳು ಈ ಯಾಗವನ್ನು ಮಾಡಿದರೆ ಯಾವ ಫಲವು ದೊರೆಯುವುದೋ ಅಂತಹ ಫಲವು. ಈಮಾತ್ರಗಳ ಧ್ಯಾನದಿಂದ ಉದ್ಭವಿಸುವುದು. ಈ ಓಂಕಾರವು ಯಾಗಕ್ಕಿಂತಲೂ ಅಧಿಕ ಫಲಪ್ರದವಾಗುವುದು.

೧೭. ಯೋಗಿಯು ಮಾಸಕ್ಕೆ ಒಂದು ಸಲದಂತೆಯೇ ಕುಶಾಗ್ರದಿಂದ ಬೀಳುವ ಜಲಬಿಂದುವನ್ನು ಪಾನಮಾಡಿ, ನೂರು ವರ್ಷಗಳು ತಪಸ್ಸನ್ನು ಮಾಡಿದರೆ ಯಾವ ಫಲವನ್ನು ಹೊಂದುವನೋ ಅಂತಹ ಫಲವು ಈ ಓಂಕಾರಸಿದ್ಧಿಯಿಂದಲೇ ಆಗುವುದು.

೧೮. ಇಷ್ಟಾಪೂರ್ತವೆಂಬ ಯಾಗ ಮತ್ತು ಸತ್ಯವಚನ ಇವುಗಳಿಂದ ಯಾವ ಫಲವು ಪ್ರಾಪ್ತಿಯಾಗುವುದೋ, ಮತ್ತು ಮಾಂಸ ಭಕ್ಷಣ ಮಾಡದೇ ಇರುವುದರಿಂದ ಯಾವ ಫಲವು ಬರುವುದೋ ಆ ಫಲಗಳು ಓಂಕಾರದಿಂದಲೇ ಸಿದ್ಧವಾಗುವುವು.

೧೯. ಯಜಮಾನನಿಗೋಸ್ಕರ ಯಾವನು ಸ್ವಾರ್ಥತ್ಯಾಗವನ್ನು ಮಾಡಿ, ಹಿಂದಕ್ಕೆ ಹೋಗದೇ ಯುದ್ಧವನ್ನು ಮಾಡುವನೋ, ಅವನಿಗೆ ಯಾವ ಫಲವು ಬರುವುದೋ ಅಂತಹ ಫಲವು ಈ ಓಂಕಾರ ಮಾತ್ರೋಚ್ಚಾರಣೆಯಿಂದ ಸಂಭವಿಸುವುದು.

ನ ತಥಾ ತಪಸೋಗ್ರೇಣ ನ ಯಜ್ಞೈರ್ಭೂರಿದಕ್ಷಿಣೈಃ ।
ಯತ್ಫಲಂ ಪ್ರಾಪ್ನುಯಾತ್ಸಮ್ಯಕ್ ಮಾತ್ರಯಾ ತದವಾಪ್ನುಯಾತ್॥ ೨೦ ॥

ತತ್ರ ವೈ ಯೋರ್ದ್ಧಮಾತ್ರೇ ಯಃ ಪ್ಲುತೋ ನಾಮೋಪದಿಶ್ಯತೇ ।
ಏಷಾ ಏವ ಭವೇತ್ಕಾರ್ಯಾ ಗೃಹಸ್ಥಾನಾಂ ತು ಯೋಗಿನಾಂ ॥ ೨೧ ॥

ಏಷಾ ಚೈವ ವಿಶೇಷೇಣ ಐಶ್ವರ್ಯಸಮಲಕ್ಷಣಾ ।
ಯೋಗಿನಾಂತು ವಿಶೇಷೇಣ ಐಶ್ವರ್ಯೇ ಹ್ಯಷ್ಟಲಕ್ಷಣೇ ।
ಅಣಿಮಾದ್ಯೇತಿ ವಿಜ್ಞೇಯಾ ತಸ್ಮಾದ್ಯುಂಜೀತ ತಾಂ ದ್ವಿಜಃ ॥ ೨೨ ॥

ಏವಂ ಹಿ ಯೋಗೀ ಸಂಯುಕ್ತಃ ಶುಚಿರ್ದಾಂತೋ ಜಿತೇಂದ್ರಿಯಃ ।
ಆತ್ಮಾನಂ ವಿಂದತೇ ಯಸ್ತು ಸ ಸರ್ವಂ ವಿಂದತೇ ದ್ವಿಜಃ ॥ ೨೩ ॥

ಋಚೋ ಯಜೂಂಷಿ ಸಾಮಾನಿ ವೇದೋಪನಿಷದಸ್ತಥಾ ।
ಯೋಗಜ್ಞಾನಾದವಾಪ್ನೋತಿ ಬ್ರಾಹ್ಮಣೋ ಧ್ಯಾನಚಿಂತಕಃ ॥ ೨೪ ॥

---

೨೦. ಓಂಕಾರಸಿದ್ಧಿಯಿಂದ ಎಂತಹ ಫಲವು ಬರುವುದೋ ಅಂತಹ ಫಲವು ಉಗ್ರವಾದ ತಪಸ್ಸಿನಿಂದಲೂ, ಭೂರಿ ದಕ್ಷಿಣೆಯುಳ್ಳ ಯಜ್ಞಗಳಿಂದಲೂ ಕೂಡ ಉಂಟಾಗುವುದಿಲ್ಲ.

೨೧. ಆ ಓಂಕಾರದಲ್ಲಿ ಅರ್ಧಮಾತ್ರೆಯೆಂದೂ, ಪ್ಲುತವೆಂದೂ ಸಂಜ್ಞೆಯುಳ್ಳ ಯಾವ ವರ್ಣವು ಇರುತ್ತದೆಯೋ ಅದೇ ವರ್ಣವೇ ಗೃಹಸ್ಥರಿಗೂ, ಯತಿಗಳಿಗೂ, ತಾರಕವಾಗಿರುತ್ತದೆ.

೨೨. ಈ ಪ್ರಣವಮಂತ್ರದಿಂದ ಗೃಹಸ್ಥರಿಗೆ ಐಶ್ವರ್ಯಸಿದ್ಧಿಯೂ, ಯೋಗಿಗಳಿಗೆ ಅಣಿಮಾದಿಸಿದ್ಧಿಯೂ, ಆಗುವುವು. ಇದರಿಂದ ವಿಪ್ರನು ಸರ್ವದಾ ಯೋಗದಲ್ಲಿ ಆಸಕ್ತನಾಗಬೇಕು.

೨೩. ಯೋಗಿಯು ಶುಚಿಯೂ, ದಾಂತನೂ, ಜಿತೇಂದ್ರಿಯನೂ, ಆಗಿ ಧ್ಯಾನಮಾಡಿದರೆ ಯಾವ ಸಿದ್ಧಿಯನ್ನೂ ಮತ್ತು ಪರಮಾತ್ಮನನ್ನೂ ಹೊಂದುವನೋ ಅಂತಹ ಸಿದ್ಧಿಗಳನ್ನು ದ್ವಿಜನು ಯೋಗಾಭ್ಯಾಸದಿಂದಲೇ ಪಡೆಯಬಹುದು.

೨೪. ಬ್ರಾಹ್ಮಣನು ಯೋಗಾಭ್ಯಾಸದ ಮಹಿಮೆಯಿಂದ ಋಗ್ವೇದ, ಯಜುರ್ವೇದ ಸಾಮವೇದ ಮತ್ತು ಉಪನಿಷತ್ತು ಇವೇ ಮೊದಲಾದುವನ್ನು ಸಂಪೂರ್ಣವಾಗಿ ತಿಳಿಯುತ್ತಾನೆ.

ಸರ್ವಭೂತಲಯೋ ಭೂತ್ವಾ ಅಭೂತಃ ಸ ತು ಜಾಯತೇ ।
ಯೋಗೀ ಸಂಕ್ರಮಣಂ ಕೃತ್ವಾ ಯಾತಿ ವೈ ಶಾಶ್ವತಂ ಪದಂ ॥ ೨೫ ॥

ಅಪಿ ಚಾತ್ರ ಚತುರ್ಹಸ್ತಾಂ ಧ್ಯಾಯಮಾನಶ್ಚತುರ್ಮುಖೀಂ ।
ಪ್ರಕೃತಿಂ ವಿಶ್ವರೂಪಾಖ್ಯಾಂ ದೃಷ್ಟ್ವಾ ದಿವ್ಯೇನ ಚಕ್ಷುಷಾ ॥ ೨೬ ॥

ಅಜಾ ಮೇತಾಂ ಲೋಹಿತ ಶುಕ್ಲಕೃಷ್ಣಾಂ ।
ಬಹ್ವೀಃ ಪ್ರಜಾಃ ಸೃಜಮಾನಾಂ ಸ್ವರೂಪಾಂ ॥
ಅಜೋಹ್ಯೇಕೋಜುಷಮಾಣೋನುಶೇತೇ ।
ಜಹಾತ್ಯೇನಾಂ ಭುಕ್ತಭೋಗಾಮಜೋನ್ಯಃ ॥ ೨೭ ॥

ಅಷ್ಟಾಕ್ಷರಾಂ ಷೋಡಶಪಾಣಿಪಾದಾಂ ।
ಚತುರ್ಮುಖೀಂ ತ್ರಿಶಿಖಾಮೇಕ ಶೃಂಗಾಂ ॥
ಆದ್ಯಾಮಜಾಂ ವಿಶ್ವಸೃಜಾಂ ಸ್ವರೂಪಾಂ ।

---

೨೫. ಪ್ರಲಯಕಾಲದಲ್ಲಿ ಸರ್ವಭೂತಗಳು ಲಯವಾದರೂ ಕೂಡ ಯೋಗಿಯು ಮಾತ್ರ ಲಯವಾಗದೇ ಪ್ರಣವಮಂತ್ರಸಿದ್ಧಿಯಿಂದ ಲಯರಹಿತವೂ, ಶಾಶ್ವತವೂ ಆದ ಪರಮಪದವಿಯನ್ನು ಹೊಂದುವನು.

೨೬. ಯೋಗಿಯು ನಾಲ್ಕುಕೈಗಳು, ನಾಲ್ಕುಮುಖಗಳು ಇವುಗಳುಳ್ಳದ್ದೂ ವಿಶ್ವರೂಪನಾಮಕವೂ, ಆದ ಪ್ರಕೃತಿಯನ್ನು ಧ್ಯಾನಿಸಿ, ದಿವ್ಯದೃಷ್ಟಿಯನ್ನು ಪಡೆದು ಆನಂತರ ಶಾಶ್ವತವಾದ ಪರಮಪದವಿಯನ್ನು ಹೊಂದುವನು.

೨೭ ಉತ್ಪತ್ತಿ ಶೂನ್ಯವೂ, ಕರಿದು, ಬಿಳಿದು, ಕೆಂಪು ಬಣ್ಣಗಳು ಉಳ್ಳದ್ದೂ ಅನೇಕ ಪ್ರಜೆಗಳನ್ನು ಸೃಷ್ಟಿಸುವುದೂ, ಸುಖರೂಪವೂ ಆದ ಪ್ರಕೃತಿಯನ್ನು **ಅಜನು** (ಬ್ರಹ್ಮನಿಂದ ಹುಟ್ಟಿದ ಜೀವನು) ಸೇವಿಸುವನು. ಮತ್ತೊಬ್ಬ ಬ್ರಹ್ಮನಾದರೋ ಭುಕ್ತ ಭೋಗನಾಗಿ ಪ್ರಕೃತಿಸಂಬಂಧ ಶೂನ್ಯನಾಗಿರುವನು, ಅಂದರೆ ಜೀವನು ಪ್ರಕೃತಿಬದ್ಧ ನಾಗಿರುವನು. ಬ್ರಹ್ಮನು ಪ್ರಕೃತಿಬಂಧ ಶೂನ್ಯನಾಗುವನು.

ಜ್ಞಾನಿಗಳು ಅಷ್ಟಾಕ್ಷರರೂಪಿಯೂ, ಹದಿನಾರು ಹಸ್ತಪಾದಗಳಿಂದ ಕೂಡಿದುದೂ ಚತುರ್ಮುಖಿಯೂ, ತ್ರಿಶಿರಸ್ಕವೂ, ಏಕಶೃಂಗಿಯೂ, ಆದಿಯೂ, ಉತ್ಪತ್ತಿರಹಿತವೂ, ಜಗತ್ಕರ್ತೃವೂ, ಸರೂಪಿಯೂ ಆದ ಪ್ರಕೃತಿಯನ್ನು ತಿಳಿದು ಮುಕ್ತರಾಗುವರು ಮತ್ತು

ಜ್ಞಾತ್ವಾ ಬುಧಾಸ್ತ್ವಮೃತತ್ವಂ ವ್ರಜಂತಿ ॥
ಯೇ ಬ್ರಾಹ್ಮಣಾಃ ಪ್ರಣವಂ ವೇದಯಂತಿ ।
ನ ತೇ ಪುನಃ ಸಂಸರತೀಹ ಭೂಯಃ ॥

ಇತ್ಯೇತದಕ್ಷರಂ ಬ್ರಹ್ಮ ಪರಮೋಂಕಾರ ಸಂಜ್ಞಿತಂ ।
ಯಸ್ತು ವೇದಯತೇ ಸಮ್ಯಕ್ ತಥಾ ಧ್ಯಾಯತಿ ವಾ ಪುನಃ ॥ ೨೮ ॥

ಸಂಸಾರಚಕ್ರಮುತ್ಸೃಜ್ಯ ಮುಕ್ತಬಂಧನ ಬಂಧನಃ ।
ಅಚಲಂ ನಿರ್ಗುಣಂ ಸ್ಥಾನಂ ಶಿವಂ ಪ್ರಾಪ್ನೋತ್ಯಸಂಶಯಃ ।
ಇತ್ಯೇತದ್ವೈ ಮಯಾ ಪ್ರೋಕ್ತಮೋಂಕಾರ ಪ್ರಾಪ್ತಿಲಕ್ಷಣಂ ॥ ೨೯ ॥

ನಮೋ ಲೋಕೇಶ್ವರಾಯ ಸಂಕಲ್ಪಕಲ್ಪಗ್ರಹಣಾಯ ಮಹಾಂತಮುಪತಿಷ್ಠತೇ ತದ್ಧ್ಯೋ ಹಿತಂ ಯದ್ಬ್ರಹ್ಮಣೇ ನಮಃ । ಸರ್ವತ್ರ ಸ್ಥಾನಿನೇ ನಿರ್ಗುಣಾಯ ಸಂಭಕ್ತ ಯೋಗೀಶ್ವರಾಯ ಚ । ಪುಷ್ಕರಪರ್ಣಮಿವಾದ್ಭಿರ್ವಿಶುದ್ಧಮಿವ ಬ್ರಹ್ಮ

---

ಯಾವ ಬ್ರಾಹ್ಮಣರು ಪ್ರಣವಸ್ವರೂಪವಾದ ಓಂಕಾರದ ಅರ್ಥವನ್ನು ಸರಿಯಾಗಿ ತಿಳಿಯುತ್ತಾರೋ, ಅಂತಹ ವಿಪ್ರರು ಪುನಃ ಈ ಸಂಸಾರದಲ್ಲಿ ಜನನ ಮರಣ ಕ್ಲೇಶವನ್ನು ಪಡೆಯದೇ ಮುಕ್ತರಾಗುವರು.

೨೮-೨೯. ಯಾವನು ಪೂರ್ವೋಕ್ತಲಕ್ಷಣಗಳುಳ್ಳವನೂ ಉತ್ತಮನೂ ಓಂಕಾರ ನಾಮಕನೂ ಆದ ಬ್ರಹ್ಮನನ್ನು ಮನಃಪೂರ್ವಕವಾಗಿ ಧ್ಯಾನಿಸಿ ಸರಿಯಾಗಿ ತಿಳಿಯುತ್ತಾನೆಯೋ ಅವನು ಈ ಸಂಸಾರ ಚಕ್ರವನ್ನು ಬಿಟ್ಟು ಮುಕ್ತಬಂಧನಾಗಿ ನಿಶ್ಚಲನೂ ಪ್ರಾಕೃತಗುಣರಹಿತನೂ ಸ್ಥಿರನೂ ಮಂಗಳಪ್ರದನೂ ಆದ ಪರಬ್ರಹ್ಮನ ಪದವಿಯನ್ನು ನಿಶ್ಚಯವಾಗಿಯೂ ಹೊಂದುವನು. ಹೀಗೆ ಓಂಕಾರಸ್ವರೂಪ ಅದರ ಪ್ರಾಪ್ತ್ಯುಪಾಯ ಇವುಗಳನ್ನು ನಿಮಗಾಗಿ ತಿಳಿಸಿರುವೆನು.

ಲೋಕೇಶ್ವರನ ಸಂಕಲ್ಪಕ್ಕೆ ಸಮವಾದ ಜ್ಞಾನವುಳ್ಳವನೂ ಮಹಾತ್ಮರನ್ನು ಸೇವಿಸುವವನೂ ಆದ ಪರಮೇಶ್ವರನಿಗೆ ನಮಸ್ಕಾರವು, ಅವನೇ ನಿಮಗೆ ಹಿತಕರನಾಗಿರುವನು. ಅಂತಹ ಸರ್ವಗತನೂ, ನಿರ್ಗುಣನೂ, ಅತ್ಯಂತ ಭಕ್ತರಾದ ಯೋಗಿಗಳಿಗೆ ಈಶ್ವರನೂ, ಆದ ಬ್ರಹ್ಮನಿಗೆ ನಮಸ್ಕಾರಗಳು.

**ಮುಪತಿಷ್ಠೇತ್ ಪವಿತ್ರಂ ಪವಿತ್ರಾಣಾಂ ಪವಿತ್ರಂ ಪವಿತ್ರೇಣ ಪರಿಪೂತೇನ ಪವಿತ್ರೇಣ ಹ್ರಸ್ವಂ ದೀರ್ಘಪ್ಲುತಮಿತಿ ತದೇತ ಮೋಂಕಾರಮಶಬ್ದಮಸ್ಪರ್ಶಮರೂಪಮರಸಮಗಂಧಂ ಪರ್ಯು ಪಾಸೇತ ಅವಿದ್ಯೇಶಾನಾಯ ವಿಶ್ವರೂಪೋ ನ ತಸ್ಯ ಅವಿದ್ಯೇ ಶಾನಾಯ ನಮೋ ಯೋಗೀಶ್ವರಾಯೇತಿ ಚ ಯೇನ ದ್ಯೌರುಗ್ರಾ ಪೃಥಿವೀ ಚ ದೃಢಾ ಯೇನ ಸ್ವಸ್ತನಿತಂ ಯೇನ ನಾಕಸ್ತ್ರಯೋ ರಂತರಿಕ್ಷಮಿಮೋ ವರೀಯಸೋ ದೇವಾನಾಂ ಹೃದಯಂ ವಿಶ್ವ ರೂಪೋ ನ ತಸ್ಯ ಪ್ರಾಣಾಪಾನೌಪಮ್ಯಂ ಚಾಸ್ತಿ ಓಂಕಾರೋ ವಿಶ್ವವಿಶ್ವಾ ವೈ ಯಜ್ಞಃ ಯಜ್ಞೋ ವೈ ವೇದಃ ವೇದೋ ವೈ ನಮಸ್ಕಾರಃ ನಮಸ್ಕಾರೋ ರುದ್ರಃ ನಮೋ ರುದ್ರಾಯ ಯೋಗೇಶ್ವರಾಧಿಪತಯೇ ನಮಃ ॥ ಇತಿ ಸಿದ್ಧಿಪ್ರತ್ಯುಪಸ್ಥಾನಂ ಸಾಯಂಪ್ರಾತರ್ಮಧ್ಯಾಹ್ನೇ ನಮಃ ಇತಿ । ಸರ್ವಕಾಮಫಲೋ ರುದ್ರಃ ॥**

---

ಕಮಲದ ಪತ್ರಗಳು ಜಲದಲ್ಲಿ ವಾಸಿಸುತ್ತಿದ್ದರೂ ಜಲಸಂಪರ್ಕವಿಲ್ಲದೆಯೇ ಇರುವಂತೆ ಪವಿತ್ರವಸ್ತುಗಳಿಗೂ ಪವಿತ್ರನೂ, ವಿಶುದ್ಧನೂ, ಅತ್ಯಂತ ಪೂತನೂ, ಹ್ರಸ್ವ, ದೀರ್ಘ ಪ್ಲುತರೂಪನೂ, ಓಂಕಾರಶಬ್ದವಾಚ್ಯನೂ, ಪ್ರಾಕೃತವಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧರಹಿತನೂ, ಆಗಿರುವುದರಿಂದ ಬ್ರಹ್ಮನು ಸೇವ್ಯನಾಗಿರುವನು, ಆ ಪರಮೇಶ್ವರನು ಅವಿದ್ಯಾನಿಯಾಮಕನೂ, ವಿಶ್ವರೂಪನೂ, ಯೋಗೀಶ್ವರನೂ, ಆಗಿರು ವನು. ಆದರಿಂದ ಇಂತಹ ಬ್ರಹ್ಮನಿಗೆ ನಮಸ್ಕಾರವು, ಆ ಪರಮೇಶ್ವರನೇ ಆಕಾಶ ಪೃಥಿವೀ, ಪರ್ವತ, ಗುಡುಗು, ಮಿಂಚು, ಸ್ವರ್ಗ, ಅಂತರಿಕ್ಷ, ಉತ್ತಮವಾದ ಲೋಕ ಗಳು ದೇವತೆಗಳು ಹೃದಯ ಮತ್ತು ವಿಶ್ವರೂಪ, ಇವುಗಳನ್ನು ಸೃಷ್ಟಿಮಾಡಿರುವನು, ಅಂತಹವನಿಗೆ ಪ್ರಾಣಾಪಾನಾದಿ ಸಾಮ್ಯವೂ ಇರುವುದಿಲ್ಲ. ಇವುಗಳಿಗಿಂತಲೂ ಉತ್ತಮ ನಾಗಿರುವನು ಓಂಕಾರವು ಸಕಲವಿಶ್ವಸ್ವರೂಪವಾಗಿರುವುದು, ಓಂಕಾರವೇ ಯಜ್ಞವು, ಈ ಯಜ್ಞವು ವೇದಮಯವಾಗಿದೆ, ಆ ವೇದಗಳೇ ನಮಸ್ಕಾರರೂಪವು, ಅಂತಹ ನಮಸ್ಕಾರರೂಪನೇ ರುದ್ರನು, ಅಂತಹ ನಮಸ್ಕಾರರೂಪನೂ, ರುದ್ರರೂಪಿಯೂ, ಯೋಗೀಶ್ವರನೂ, ಸಕಲ ಲೋಕಾಧಿಪತಿಯೂ, ಆದ ರುದ್ರದೇವನಿಗೆ ಅನಂತಾನಂತ ನಮಸ್ಕಾರಗಳು. ಹೀಗೆ ಸಕಲಸಿದ್ಧಿಪ್ರದನಾದ ಪರಮೇಶ್ವರನಿಗೆ ಪ್ರಾತಃಕಾಲ ಮಧ್ಯಾಹ್ನ, ಸಾಯಾನ್ಹಗಳೆಂಬ ತ್ರಿಕಾಲಗಳಲ್ಲಿಯೂ ನಮಸ್ಕಾರಗಳನ್ನು ಮಾಡಬೇಕು ಇಂತಹ ರುದ್ರನು ಸಕಲ ಇಷ್ಟಾರ್ಥಗಳನ್ನೂ ಕೊಡುವನು.

ಯಥಾ ವೃಂತಾತ್ಫಲಂ ಪಕ್ವಂ ಪವನೇನ ಸಮೀರಿತಂ ।
ನಮಸ್ಕಾರೇಣ ರುದ್ರಸ್ಯ ತಥಾ ಪಾಪಂ ಪ್ರಣಶ್ಯತಿ ॥ ೩೦ ॥

ಯಥಾ ರುದ್ರನಮಸ್ಕಾರಃ ಸರ್ವಧರ್ಮಫಲೋ ಧ್ರುವಃ ।
ಅನ್ಯದೇವನಮಸ್ಕಾರೋ ನ ತತ್ಫಲಮವಾಪ್ನುಯಾತ್ ॥ ೩೧ ॥

ತಸ್ಮಾತ್ ತ್ರಿಷವಣಂ ಯೋಗೀ ಉಪಾಸೀತ ಮಹೇಶ್ವರಂ ।
ದಶವಿಸ್ತಾರಕಂ ಬ್ರಹ್ಮ ತಥಾ ಚ ಬ್ರಹ್ಮವಿಸ್ತರಂ ॥ ೩೨ ॥

ಓಂಕಾರಂ ಸರ್ವತಃ ಕಾಲೇ ಸರ್ವಂ ವಿಹಿತವಾನ್ ಪ್ರಭುಃ ।
ತೇನ ತೇನ ತು ವಿಷ್ಣುತ್ವಂ ನಮಸ್ಕಾರಂ ಮಹಾಯಶಾಃ ॥ ೩೩ ॥

ನಮಸ್ಕಾರಸ್ತಥಾ ಚೈವ ಪ್ರಣವಸ್ತುವತೇ ಪ್ರಭುಂ ।
ಪ್ರಣವಂ ಸ್ತುವತೇ ಯಜ್ಞೋ ಯಜ್ಞಃ ಸಂಸ್ತುವತೇ ನಮಃ ।
ನಮಸ್ತುವತಿ ವೈ ರುದ್ರಸ್ತಸ್ಮಾದ್ರುದ್ರಪದಂ ಶಿವಂ ॥ ೩೪ ॥

---

೩೦. ಗಾಳಿಯು ಬೀಸುವುದರಿಂದ ಪಕ್ವವಾದ ಫಲವು ಹೇಗೆ ಕೆಳಗೆ ಬೀಳುವುದೋ ಹಾಗೆಯೇ ರುದ್ರದೇವನ ನಮಸ್ಕಾರದಿಂದ ಸಕಲ ಪಾಪಗಳೂ ಪರಿಹೃತವಾಗಿ ಉತ್ತಮಫಲ ಪ್ರಾಪ್ತಿಯಾಗುವುದು.

೩೧. ಹೇಗೆ ರುದ್ರದೇವನ ನಮಸ್ಕಾರವು ಸಕಲ ಧರ್ಮಗಳ ಫಲವನ್ನು ಕೊಡುತ್ತದೆಯೋ, ಹಾಗೆ ಅನ್ಯದೇವತೆಗಳ ನಮಸ್ಕಾರವು ಅಂತಹ ಫಲಪ್ರದವಲ್ಲ.

೩೨. ಆದುದರಿಂದ ಯೋಗಿಯಾದವನು ತ್ರಿಕಾಲದಲ್ಲಿಯೂ, ಪರಮೇಶ್ವರನನ್ನು ಧ್ಯಾನಿಸಬೇಕು. ಹೀಗೆ ಸೇವೆಮಾಡುವ ಯೋಗಿಗೆ ಈಶ್ವರನು ಹತ್ತರಷ್ಟು ಅಧಿಕವಾಗಿ ಫಲಗಳನ್ನು ಕೊಡುವನು, ಹೀಗೆ ಬ್ರಹ್ಮನು ತಾನು ಪೂರ್ಣನಾಗಿ, ವಿಸ್ತಾರವಾಗಿರುವುದರಿಂದ, ವಿಸ್ತಾರವಾದ ಫಲವನ್ನು ಕೊಡುವನು.

೩೩ ಸ್ವಾಮಿಯಾದ ಭಗವಂತನು ಓಂಕಾರವನ್ನು ಸರ್ವಕಾಲದಲ್ಲಿಯೂ, ಸರ್ವದೇಶಗಳಲ್ಲಿಯೂ, ಇರುವಂತೆ ಮಾಡಿರುವನು. ಇದರಿಂದ ಭಗವಂತನ ರೂಪವು ಎಲ್ಲೆಲ್ಲಿಯೂ ವ್ಯಾಪ್ತವಾಗಿರುವುದು, ಆದುದರಿಂದ ಯಾರಿಗೆ ನಮಸ್ಕಾರಮಾಡಿದರೂ, ಅದು ಆ ಭಗವಂತನಿಗೇ ಸೇರುತ್ತದೆಯೆಂದು ಮಹಾತ್ಮರು ಹೇಳುವರು.

೩೪. ನಮಸ್ಕಾರ ಪ್ರಣವಗಳು ಸ್ವಾಮಿಯನ್ನು ವರ್ಣಿಸುತ್ತವೆ ಅಂತಹ ಪ್ರಣವವನ್ನು ಯಜ್ಞವೂ, ಆ ಯಜ್ಞವನ್ನು ನಮಸ್ಕಾರವೂ, ಅಂತಹ ನಮಸ್ಕಾರವನ್ನು ರುದ್ರನೂ, ಹೊಗಳುವರು. ಆದುದರಿಂದ ರುದ್ರಪದವಿಯೇ ಮಂಗಳಪ್ರದವಾಗಿದೆ.

**ಇತ್ಯೇತಾನಿ ರಹಸ್ಯಾನಿ ಯತೀನಾಂ ವೈ ಯಥಾಕ್ರಮಂ ।**
**ಯಸ್ತು ವೇದಯತೇ ಧ್ಯಾನಂ ಸ ಪರಂ ಪ್ರಾಪ್ನುಯಾತ್ಫಲಂ ॥ ೩೫ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಓಂಕಾರಪ್ರಾಪ್ತಿಲಕ್ಷಣಂ" ನಾಮ ವಿಂಶೋಽಧ್ಯಾಯಃ**

---

೩೫. ಈ ರೀತಿಯಲ್ಲಿ ಯತಿಗಳ ರಹಸ್ಯವಾದ ಪ್ರಣವವು ಯಥಾಕ್ರಮವಾಗಿ ನಿರೂಪಿತವಾಗಿದೆ. ಯಾವನು ಸರಿಯಾಗಿ ತಿಳಿದು ಹೀಗೆ ಧ್ಯಾನಮಾಡುತ್ತಾನೋ, ಅವನು ಉತ್ತಮವಾದ ಪರಮಪದವಿಯನ್ನು ಹೊಂದುವನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಓಂಕಾರಪ್ರಾಪ್ತಿ"ಯೆಂಬ ಇಪ್ಪತ್ತನೆಯ ಅಧ್ಯಾಯವು ಸಮಾಪ್ತವಾದುದು.

## ಇಪ್ಪತ್ತನೆಯ ಅಧ್ಯಾಯದ ಸಾರಾಂಶವು

ಓಂಕಾರವು ಅಕಾರ, ಉಕಾರ, ಮಕಾರರೂಪ ತ್ರಿಮಾತ್ರೆಯುಳ್ಳದ್ದಾಗಿಯೂ, ವೈದ್ಯುತೀ, ತಾಮಸೀ, ನಿರ್ಗುಣೀ, ಎಂಬ ನಾಮತ್ರಯವುಳ್ಳದ್ದಾಗಿಯೂ, ಬ್ರಹ್ಮ ಪ್ರಾಪ್ತಿಗೆ ಸಾಧಕವಾಗಿಯೂ, ಋಗ್ಯಜುಸ್ಸಾಮ ರೂಪವಾಗಿಯೂ, ಭೂರ್ಭುವಸ್ವರ ವೆಂಬ ಲೋಕತ್ರಯ ರೂಪವಾಗಿಯೂ ಇರುತ್ತದೆ. ಇಂತಹ ಓಂಕಾರ ರೂಪವಾದ ಪ್ರಣ ವೋಪಾಸನೆಯಿಂದ ಯೋಗಿಗಳಿಗೆ ಅಶ್ವಮೇಧ, ದರ್ಶಪೂರ್ಣಮಾಸೀ, ಇಷ್ಟಾಪೂರ್ತ, ಇವೇ ಮೊದಲಾದ ಸಮಸ್ತ ಯಜ್ಞಗಳ ಫಲವೂ, ಯಜಮಾನನಿಗಾಗಿ ಪ್ರಾಣವನ್ನು ಕೊಟ್ಟ ಭೃತ್ಯನಿಗೆ ಉಂಟಾಗುವ ಫಲವೂ, ಭೂರಿದಕ್ಷಿಣೆಯುಳ್ಳ ಯಾಗದ ಫಲವೂ, ಅಣಿಮಾದಿ ಅಷ್ಟೈಶ್ವರ್ಯ ಸಿದ್ಧಿಯೂ ಆಗುವುವು. ಮಹರ್ಷಿಗಳು ದಿವ್ಯಜ್ಞಾನದಿಂದ ಅಷ್ಟಾಕ್ಷರರೂಪನೂ, ಪಂಚಭೂತಪ್ರೇರಕನೂ, ಯಜ್ಞಭೋಕ್ತೃವೂ, ವೇದ ವೇದ್ಯನೂ, ಆದ ಪರಮೇಶ್ವರನ ಶಾಶ್ವತವಾದ ಪರಮಪದವಿಯನ್ನು ಹೊಂದುವರು.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀ ಮ ದ್ವಾ ಯು ಪು ರಾ ಣಂ

## ಏಕವಿಂಶೋಽಧ್ಯಾಯಃ

॥ ಸೂತ ಉವಾಚ ॥

**ಋಷೀಣಾಮಗ್ನಿಕಲ್ಪಾನಾಂ ನೈಮಿಷಾರಣ್ಯವಾಸಿನಾಂ ।**
**ಋಷಿಃ ಶ್ರುತಿಧರಃ ಪ್ರಾಜ್ಞಃ ಸಾವರ್ಣಿರ್ನಾಮ ನಾಮತಃ ॥ ೧ ॥**

**ತೇಷಾಂ ಸೋಽಪ್ಯಗ್ರತೋ ಭೂತ್ವಾ ವಾಯುಂ ವಾಕ್ಯವಿಶಾರದಃ ।**
**ಸಾತತ್ಯಂ ತತ್ರ ಕುರ್ವಂತಂ ಪ್ರಿಯಾರ್ಥೇ ಸತ್ರಯಾಜಿನಾಂ**
**ವಿನಯೇನೋಪಸಂಗಮ್ಯ ಪ್ರಪಚ್ಛ ಸ ಮಹಾದ್ಯುತಿಂ ॥ ೨ ॥**

---

## ಇಪ್ಪತ್ತೊಂದನೆಯ ಅಧ್ಯಾಯವು

೧-೨. ಸೂತನು ಹೇಳಿದನು :—ನೈಮಿಷಾರಣ್ಯವಾಸಿಗಳೂ, ಅಗ್ನಿಸಮರೂ ಆದ, ಮಹರ್ಷಿಗಳ ಮಧ್ಯದಲ್ಲಿ, ಶಾಸ್ತ್ರಜ್ಞನೂ, ಪ್ರಾಜ್ಞನೂ, ಮಾತಿನಲ್ಲಿ ಕುಶಲನೂ ಆದ ಸಾವರ್ಣಿನಾಮಕ ಋಷಿಯು, ಆ ಮಹರ್ಷಿಗಳಿಗೆ ಮುಂದಾಳಾಗಿ, ಮಾತಿನಲ್ಲಿ ಕುಶಲನೂ, ಸತ್ರಯಾಗದಲ್ಲಿ ಆಸಕ್ತರಾದ ಮಹರ್ಷಿಗಳಿಗೆ ಹಿತಚಿಂತಕನೂ, ಮಹಾತೇಜಸ್ವಿಯೂ, ಆದ ವಾಯುದೇವನ ಬಳಿಗೆ ಹೋಗಿ, ನಮ್ರತೆಯಿಂದ ಬೇಡಿದನು.

॥ ಸಾವರ್ಣಿರುವಾಚ ॥

ವಿಭೋ ಪುರಾಣಸಂಬದ್ಧಾಂ ಕಥಾಂ ವೈ ವೇದಸಂಮಿತಾಂ ।
ಶ್ರೋತುಮಿಚ್ಛಾಮಹೇ ಸಮ್ಯಕ್ ಪ್ರಸಾದಾತ್ಸರ್ವದರ್ಶಿನಃ ॥ ೩ ॥

ಹಿರಣ್ಯಗರ್ಭೋ ಭಗವಾನ್ ಲಲಾಟಾನ್ನೀಲಲೋಹಿತಂ ।
ಕಥಂ ತತ್ತೇಜಸಂ ದೇವಂ ಲಬ್ಧವಾನ್ ಪುತ್ರಮಾತ್ಮನಃ ॥ ೪ ॥

ಕಥಂ ಚ ಭಗವಾನ್ ಜಜ್ಞೇ ಬ್ರಹ್ಮಾ ಕಮಲಸಂಭವಃ ।
ರುದ್ರತ್ವಂ ಚೈವ ಶರ್ವಸ್ಯ ಸ್ವಾತ್ಮಜಸ್ಯ ಕಥಂ ಪುನಃ ॥ ೫ ॥

ಕಥಂ ಚ ವಿಷ್ಣೋ ರುದ್ರೇಣ ಸಾರ್ಧಂ ಪ್ರೀತಿರನುತ್ತಮಾ ।
ಸರ್ವೇ ವಿಷ್ಣುಮಯಾ ದೇವಾ ಸರ್ವೇ ವಿಷ್ಣುಮಯಾ ಗಣಾಃ ॥ ೬ ॥

---

೩. ಸಾವರ್ಣಿಯು ಹೇಳಿದನು :—ಎಲೈ, ಸ್ವಾಮಿಯೇ ವೇದಸಮವೂ, ಪುರಾಣಸಂಬದ್ಧವೂ ಸರ್ವಜ್ಞನಾದ ಭಗವಂತನವಿಷಯಕವೂ, ಆದ ಪುರಾಣಕಥೆಗಳನ್ನು ತಮ್ಮಿಂದ ಕ್ರಮವಾಗಿ ಕೇಳಬೇಕೆಂಬ ಆಶೆಯು ನಮಗೆ ಉಂಟಾಗಿದೆ.

೪. ಎಲೈ, ವಾಯುದೇವನೇ ಹಿರಣ್ಯಗರ್ಭನೂ, ಪೂಜ್ಯನೂ ಆದ ಬ್ರಹ್ಮನು ತನ್ನ ಹಣೆಯಿಂದ ಮಹಾತೇಜಸ್ವಿಯೂ, ದೇವನೂ, ಆದ ಪರಮೇಶ್ವರನನ್ನು ಪುತ್ರನನ್ನಾಗಿ ಹೇಗೆ ಪಡೆದನು ? ಇದನ್ನು ತಿಳಿಸಬೇಕು ಎಂದನು.

೫. ಪೂಜ್ಯನಾದ ಬ್ರಹ್ಮದೇವನು ಕಮಲದಿಂದ ಹೇಗೆ ಹುಟ್ಟಿದನು ? ಬ್ರಹ್ಮಪುತ್ರನಾದ ಶರ್ವನಿಗೆ ರುದ್ರನೆಂದು ನಾಮ ಬರಲು ಕಾರಣವೇನು ? ಇವುಗಳನ್ನು ತಿಳಿಸಬೇಕೆಂದು ಬೇಡಿಕೊಂಡನು.

೬-೭. ಅಂತಹ ವಿಷ್ಣುವಿಗೆ ರುದ್ರದೇವನ ಸಂಗಡ ಅತ್ಯುತ್ತಮವಾದ ಪ್ರೀತಿಯು ಉಂಟಾಗಲು ಕಾರಣವೇನು ? ಸಮಸ್ತ ದೇವತೆಗಳೂ, ವಿಷ್ಣುಮಯರಾಗಿ ಇರುವರು. ಮತ್ತು ಸಮಸ್ತವಾದ ಗುಣಗಳೂ ಸಹ, ವಿಷ್ಣುಮಯವಾಗಿಯೇ ಇವೆ, ಆದುದರಿಂದ ಅವನಿಗೆ ಸಮನಾದ ಗತಿದಾಯಕರು ಯಾರೂ ಇಲ್ಲ. ಹೀಗೆ ಸರ್ವಕಾಲದಲ್ಲಿಯೂ,

ನ ಚ ವಿಷ್ಣುಸಮಾ ಕಾಚಿತ್ ಗತಿರನ್ಯಾ ವಿಧೀಯತೇ ।
ಇತ್ಯೇವಂ ಸತತಂ ದೇವಾ ಗಾಯಂತೇ ನಾತ್ರ ಸಂಶಯಃ ।
ಭವಸ್ಯ ಸ ಕಥಂ ನಿತ್ಯಂ ಪ್ರಣಾಮಂ ಕುರುತೇ ಹರಿಃ ॥ ೭ ॥

॥ ಸೂತ ಉವಾಚ ॥

ಏವಮುಕ್ತೇ ತು ಭಗವಾನ್ ವಾಯುಃ ಸಾವರ್ಣಿಮಬ್ರವೀತ್ ।
ಅಹೋ ಸಾಧು ತ್ವಯಾ ಸಾಧೋ ಪೃಷ್ಟಃ ಪ್ರಶ್ನೋ ಹ್ಯನುತ್ತಮಃ ॥ ೮ ॥

ಭವಸ್ಯ ಪುತ್ರಜನ್ಮತ್ವಂ ಬ್ರಹ್ಮಣಃ ಸೋಽಭವದ್ಯಥಾ ।
ಬ್ರಹ್ಮಣಃ ಪದ್ಮಯೋನಿತ್ವಂ ರುದ್ರತ್ವಂ ಶಂಕರಸ್ಯ ಚ ॥ ೯ ॥

ದ್ವಾಭ್ಯಾಮಪಿ ಚ ಸಂಪ್ರೀತಿರ್ವಿಷ್ಣೋಶ್ಚೈವ ಭವಸ್ಯ ಚ ।
ಯಚ್ಚಾಪಿ ಕುರುತೇನಿತ್ಯಂ ಪ್ರಣಾಮಂ ಶಂಕರಸ್ಯ ಚ ।
ವಿಸ್ತರೇಣಾನುಪೂರ್ವ್ಯಾಚ್ಚ ಶೃಣುತ ಬ್ರುವತೋ ಮಮ ॥ ೧೦ ॥

---

ದೇವತೆಗಳು ಅವನನ್ನು ಹೊಗಳುತ್ತಾರೆ. ಇದರಲ್ಲಿ ಸಂದೇಹವಿಲ್ಲ. ಇಂತಹ ಹರಿಯು, ಈಶ್ವರನಿಗೇ ಸರ್ವದಾ ಏತಕ್ಕಾಗಿ ನಮಸ್ಕಾರಮಾಡುತ್ತಾನೆ ? ಇದನ್ನು ದಯವಿಟ್ಟು ತಿಳಿಸಬೇಕೆಂದು, ಕೇಳಿದನು.

೮. ಸೂತನು ಹೇಳಿದನು:—ಹೀಗೆ ಸಾವರ್ಣಿಯು ಕೇಳಲಾಗಿ, ವಾಯು ದೇವನು ಹೇಳಿದ್ದೇನೆಂದರೆ, " ಎಲೈ ಸಾರ್ವಣಿಯೇ ನೀನು ಕೇಳಿರುವುದು ಬಹಳ ಉತ್ತಮವಾಗಿದೆ. ಇಂತಹ ಶ್ರೇಷ್ಠವಾದ ಪ್ರಶ್ನೆಯನ್ನು ಇದುವರೆಗೂ ಯಾರೂ ಕೇಳಿರಲಿಲ್ಲವು "

೯-೧೦. ಎಲೈ, ಮುನಿಯೇ ಈಶ್ವರನು ಬ್ರಹ್ಮದೇವನಿಗೆ ಹೇಗೆ ಮಗನಾಗಿ ಹುಟ್ಟಿದನು. ಬ್ರಹ್ಮದೇವನು ಪದ್ಮದಲ್ಲಿ ಹೇಗೆ ಜನಿಸಿದನು. ಅದರ ಕಾರಣವೇನು ಈಶ್ವರನಿಗೆ ರುದ್ರನೆಂಬ ನಾಮವು ಬರಲು ಕಾರಣವಾವುದು ಹರಿಹರರಿಬ್ಬರಿಗೂ ಹೇಗೆ ಪ್ರೀತಿಯು ಉಂಟಾಯಿತು. ಹರಿಯು ಆ ಶಂಕರನಿಗೆ ಸರ್ವದಾ ನಮಸ್ಕಾರ ಮಾಡಲು ಕಾರಣವೇನು ಇವೆಲ್ಲವನ್ನೂ ವಿಸ್ತಾರವಾಗಿಯೂ ಕ್ರಮವಾಗಿಯೂ ಹೇಳುವ ನನ್ನ ಮಾತುಗಳನ್ನು ಕೇಳುವವನಾಗು ಎಂದು ಸಾವರ್ಣಿಗೆ ವಾಯು ದೇವನು ಹೇಳಿದನು.

ಮನ್ವಂತರಸ್ಯ ಸಂಹಾರೇ ಪಶ್ಚಿಮಸ್ಯ ಮಹಾತ್ಮನಃ ।
ಆಸೀತ್ತು ಸಪ್ತಮಃ ಕಲ್ಪಃ ಪದ್ಮೋ ನಾಮ ದ್ವಿಜೋತ್ತಮ ।
ವರಾಹಃ ಸಾಂಪ್ರತಸ್ತೇಷಾಂ ತಸ್ಯ ವಕ್ಷ್ಯಾಮಿ ವಿಸ್ತರಂ ॥ ೧೧ ॥

॥ ಸಾವರ್ಣಿರುವಾಚ ॥

ಕಿಯತಾ ಚೈವ ಕಾಲೇನ ಕಲ್ಪಃ ಸಂಭವತೇ ಕಥಂ ।
ಕಿಂಚ ಪ್ರಮಾಣಂ ಕಲ್ಪಸ್ಯ ತತ್ರ ಪ್ರಬ್ರೂಹಿ ಪೃಚ್ಛತಾಂ ॥ ೧೨ ॥

॥ ವಾಯುರುವಾಚ ॥

ಮನ್ವಂತರಾಣಾಂ ಸಪ್ತಾನಾಂ ಕಾಲಸಂಖ್ಯಾ ಯಥಾಕ್ರಮಂ ।
ಪ್ರವಕ್ಷ್ಯಾಮಿ ಸಮಾಸೇನ ಬ್ರುವತೋ ಮೇ ನಿಬೋಧತ ॥ ೧೩ ॥

ಕೋಟೀನಾಂ ದ್ವೇ ಸಹಸ್ರೇ ವೈ ಅಷ್ಟೌ ಕೋಟಿಶತಾನಿ ಚ ।
ದ್ವಿಷಷ್ಟಿಶ್ಚ ತಥಾ ಕೋಟ್ಯೋ ನಿಯುತಾನಿ ಚ ಸಪ್ತತಿಃ ।
ಕಲ್ಪಾರ್ಧಸ್ಯ ತು ಸಂಖ್ಯಾಯಾಮೇ ತತ್ಸರ್ವಮುದಾಹೃತಂ ॥ ೧೪ ॥

---

೧೧. ಎಲೈ ಋಷಿಯೇ, ಮಹಾತ್ಮನೂ ಪಶ್ಚಿಮನೂ ಆದ ಮನುವಿನ ಮನ್ವಂತರವು ಕಳೆಯಲು, ತರುವಾಯ ಬಂದ ಏಳನೆಯ ಕಲ್ಪಕ್ಕೆ ಪದ್ಮಕಲ್ಪವೆಂದು ಸಂಜ್ಞೆಯು ಉಂಟಾಗಿದೆ. ಮಹತ್ತಾದ ಆ ಪದ್ಮಕಲ್ಪವು ಕಳೆಯಲು ಈಗ ನಡೆಯತಕ್ಕ ಕಲ್ಪವು ವರಾಹ ಕಲ್ಪವಾಗಿದೆ. ಇವೆಲ್ಲವನ್ನೂ ವಿಸ್ತಾರವಾಗಿ ನಿರೂಪಿಸುವೆನು ಕೇಳು ಎಂದನು.

೧೨. ಸಾವರ್ಣಿಯು ಹೇಳಿದನು :—ಎಲೈ ಮಹರ್ಷಿಯೇ, ಎಷ್ಟುಕಾಲವಾದ ಬಳಿಕ, ಬೇರೊಂದು ಕಲ್ಪವು ಹೇಗೆ ಉಂಟಾಗುವುದು? ಮತ್ತು ಆ ಕಲ್ಪದ ಪ್ರಮಾಣವು ಎಷ್ಟು ? ಇವುಗಳನ್ನು ವಿಸ್ತಾರವಾಗಿ ನಮಗೆ ನಿರೂಪಿಸಬೇಕೆಂಬುದಾಗಿ ಪ್ರಾರ್ಥಿಸಿದನು.

೧೩. ವಾಯುದೇವನು ಹೇಳಿದನು :—ಎಲೈ ಮುನಿಯೇ, ಸಪ್ತಮನ್ವಂತರಗಳನ್ನೂ, ಅವುಗಳ ಸಂಖ್ಯಾ ಪರಿಮಾಣಗಳನ್ನೂ ಕ್ರಮವಾಗಿಯೂ, ಸಂಕ್ಷೇಪವಾಗಿಯೂ ಹೇಳುವ ನನ್ನ ಮಾತನ್ನು ಕೇಳು ಎಂದನು.

೧೪. ಎಲೈ ಮಹರ್ಷಿಯೇ, ಎರಡುಸಾವಿರದ ಎಂಟನೂರ ಅರವತ್ತೆರಡು ಕೋಟಿಯು ಎಪ್ಪತ್ತುಲಕ್ಷ ವರ್ಷಗಳು ಕಲ್ಪಾರ್ಧದ ಪ್ರಮಾಣವೆಂದು ತಿಳಿಯಬೇಕು.

ಪೂರ್ವೋಕ್ತ್ಯಾ ಚ ಗುಣಚ್ಛೇದೌ ವರ್ಷಾಗ್ರಂ ಲಬ್ಧಮಾದಿಶೇತ್ ।
ಶತಂ ಚೈವ ತು ಕೋಟೀನಾಂ ಕೋಟೀನಾಮಷ್ಟಸಪ್ತತಿಃ ।
ದ್ವೇ ಚ ಶತಸಹಸ್ರೇತು ನವತಿರ್ನಿಯುತಾನಿ ಚ ॥ ೧೫ ॥

ಮಾನುಷೇಣ ಪ್ರಮಾಣೇನ ಯಾವದ್ವೈವಸ್ವತಾಂತರಂ ।
ಏಷ ಕಲ್ಪಸ್ತು ವಿಜ್ಞೇಯಃ ಕಲ್ಪಾರ್ಧದ್ವಿಗುಣೀ ಕೃತಃ ॥ ೧೬ ॥

ಅನಾಗತಾನಾಂ ಸಪ್ತಾನಾಮೇತದೇವ ಯಥಾಕ್ರಮಂ ।
ಪ್ರಮಾಣಂ ಕಾಲಸಂಖ್ಯಾಯಾ ವಿಜ್ಞೇಯಂ ಮತಮೈಶ್ವರಂ ॥ ೧೭ ॥

ನಿಯುತಾನ್ಯಷ್ಟಪಂಚಾಶತ್ತಥಾಶೀತಿಶತಾನಿ ಚ ।
ಚತುರಶೀತಿ ಶ್ಚಾನ್ಯಾನಿ ಪ್ರಯುತಾನಿ ಪ್ರಮಾಣತಃ ॥ ೧೮ ॥

ಸಪ್ತರ್ಷಯೋ ಮನುಶ್ಚೈವ ದೇವಾಶ್ಚೇಂದ್ರಪುರೋಗಮಾಃ ।
ಏತತ್ಕಾಲಸ್ಯ ವಿಜ್ಞೇಯಂ ವರ್ಷಾಗ್ರಂತು ಪ್ರಮಾಣತಃ ॥ ೧೯ ॥

---

೧೫. ಪೂರ್ವೋಕ್ತಗಳಾದ ವರ್ಷಾಗ್ರವನ್ನು ಗುಣಚ್ಛೇದಮಾಡಿದರೆ, ಒಂದ ನೂರ ಎಪ್ಪತ್ತಾರುಕೋಟಿ, ಎರಡುಲಕ್ಷದ ತೊಂಭತ್ತುಸಹಸ್ರ ವರ್ಷಗಳು ಆಗುತ್ತವೆ.

೧೬. ಮಾನುಷಪ್ರಮಾಣಾನುಸಾರವಾಗಿವೈವಸ್ವತ ಮನುವಿನ ಕಾಲವು ಎಷ್ಟು ಸಂಖ್ಯೆಯೆಂದು ಹೇಳಿದೆಯೋ, ಅಂದರೆ ಮನ್ವಂತರಾರ್ಧಕ್ಕೆ ಯಾವ ಲಕ್ಷಣವನ್ನು ಹೇಳಿದೆಯೋ ಅದನ್ನು ದ್ವಿಗುಣಮಾಡಿದರೆ ಕಲ್ಪವಾಗುತ್ತದೆ. ಇದೇ ಕಲ್ಪದ ಸಂಖ್ಯೆಯು.

೧೭. ಮುಂದೆ ಬರತಕ್ಕ ಕಲ್ಪಗಳಿಗೂ ಕೂಡ ಇದೇ ಲಕ್ಷಣವನ್ನೇ ಕ್ರಮವಾಗಿ ತಿಳಿಯಬೇಕು. ಅವುಗಳ ಸಂಖ್ಯಾಪ್ರಮಾಣಗಳೂ ಕೂಡ ಹೀಗೆಯೇ ಇರುತ್ತವೆ. ಇದೇ ಜ್ಞಾನಿಗಳಿಗೆ ಸಮ್ಮತವಾದ ಕಾಲಪ್ರಮಾಣವಾಗಿದೆ.

೧೮. ಮುಂದೆ ಬರತಕ್ಕ ಕಲ್ಪದ ಪ್ರಮಾಣವು ಒಂದು ಲಕ್ಷದ ಐವತ್ತನಾಲ್ಕು ಸಾವಿರದ ಎಂಟನೂರ ಎಂಬತ್ತನಾಲ್ಕು ವರ್ಷಗಳೆಂದು ಜ್ಞಾನಿಗಳು ಪ್ರಮಾಣಾನು ಸಾರವಾಗಿ ಹೇಳುವರು.

೧೯. ಸಪ್ತರ್ಷಿಗಳೂ, ಮನುಗಳೂ, ಇಂದ್ರಾದಿ ದೇವತೆಗಳೂ, ಇವರು ಕಲ್ಪದ ವರೆಗೂ ಇರುವರು. ಅವರ ಕಾಲಪ್ರಮಾಣವನ್ನು ಹೀಗೆಯೇ ತಿಳಿಯಬೇಕು.

ಏವಂ ಮನ್ವಂತರಂ ತೇಷಾಂ ಮಾನುಷಾಂತಃ ಪ್ರಕೀರ್ತಿತಃ ।
ಪ್ರಣವಾಂತಾಶ್ಚ ಯೇ ದೇವಾಃ ಸಾಧ್ಯಾ ದೇವಗಣಾಶ್ಚ ಯೇ ।
ವಿಶ್ವೇದೇವಾಶ್ಚ ಯೇ ನಿತ್ಯಾಃ ಕಲ್ಪಂ ಜೀವಂತಿ ತೇ ಗಣಾಃ ॥ ೨೦ ॥

ಅಯಂ ಯೋ ವರ್ತತೇ ಕಲ್ಪೋ ವಾರಾಹಃ ಸ ತು ಕೀರ್ತ್ಯತೇ ।
ಯಸ್ಮಿನ್ ಸ್ವಾಯಂಭುವಾದ್ಯಾಶ್ಚ ಮನವಶ್ಚ ಚತುರ್ದಶ ॥ ೨೧ ॥

॥ ಋಷಯ ಊಚುಃ ॥

ಕಸ್ಮಾದ್ವಾರಾಹಕಲ್ಪೋಽಯಂ ನಾಮತಃ ಪರಿಕೀರ್ತಿತಃ ।
ಕಸ್ಮಾಚ್ಚ ಕಾರಣಾದ್ದೇವೋ ವಾರಾಹ ಇತಿ ಕೀರ್ತ್ಯತೇ ॥ ೨೨ ॥

ಕೋ ವಾ ವರಾಹೋ ಭಗವಾನ್ ಕಸ್ಯ ಯೋನಿಃ ಕಿಮಾತ್ಮಕಃ ।
ವರಾಹಃ ಕಥಮುತ್ಪನ್ನ ಏತದಿಚ್ಛಾಮ ವೇದಿತುಂ ॥ ೨೩ ॥

---

೨೦. ಹೀಗೆ ಮನ್ವಂತರಗಳು ಮಾನುಷಾಂತವಾಗಿ ನಿರೂಪಿತವಾಗಿವೆ. ಪ್ರಣವಾಂತರಾದ ದೇವತೆಗಳೂ, ಸಾಧ್ಯರಗಣವೂ, ಶ್ವೇದೇವತೆಗಳೂ, ಮನುಷ್ಯಾಂತರಾದ ಎಲ್ಲರೂ ಕಲ್ಪದವರೆಗೂ ಜೀವಿಸುವರು.

೨೧. ಯಾವ ಕಲ್ಪದಲ್ಲಿ ಸ್ವಾಯಂಭುವಾದಿ ಹದಿನಾಲ್ಕುಜನ ಮನುಗಳು ಹುಟ್ಟಿ, ರಾಜ್ಯವನ್ನು ಪಾಲಿಸುವರೋ, ಅಂತಹ ಈಗ ಇರುವ ಕಲ್ಪಕ್ಕೆ ವಾರಾಹಕಲ್ಪವೆಂಬ ಸಂಜ್ಞೆಯು ಪ್ರಾಪ್ತವಾಗಿದೆ.

೨೨. ಋಷಿಯು ಹೇಳಿದನು :—ಎಲೈ ಸೂತರೇ, ಈ ಕಲ್ಪಕ್ಕೆ ವಾರಾಹಕಲ್ಪವೆಂದು ನಾಮಬರಲು ಕಾರಣವೇನು ? ಮತ್ತು ದೇವತೆಗಳು ಆ ಭಗವಂತನನ್ನು ವರಾಹನೆಂದು ಹೇಳಲು ಕಾರಣವೇನು ?

೨೩ ವರಾಹನಾಮಕನಾದ ಭಗವಂತನು ಯಾರು ? ಅವನು ಯಾರ ಗರ್ಭದಲ್ಲಿ ಜನಿಸಿದನು ? ಅವನ ಸ್ವರೂಪವು ಎಂತಹದು ? ಅವನು ಹೇಗೆ ಹುಟ್ಟಿದನು ? ಇವುಗಳನ್ನು ಕೇಳಲು ನಮಗೆ ಬಹಳ ಕುತೂಹಲವಿರುತ್ತದೆ. ಅದನ್ನು ತಿಳಿಸಬೇಕೆಂದು ಕೇಳಿದರು.

॥ ವಾಯುರುವಾಚ ॥

ವರಾಹಸ್ತು ಯಥೋತ್ಪನ್ನೋ ಯಸ್ಮಿನ್ನರ್ಥೇ ಚ ಕಲ್ಪಿತಃ ।
ವಾರಾಹಶ್ಚ ಯಥಾಕಲ್ಪಃ ಕಲ್ಪತ್ವಂ ಕಲ್ಪನಾ ಚ ಯಾ ॥ ೨೪ ॥

ಕಲ್ಪಯೋರಂತರಂ ಯಚ್ಚ ತಸ್ಯ ಚಾಸ್ಯ ಚ ಕಲ್ಪಿತಂ ।
ತತ್ಸರ್ವಂ ಸಂಪ್ರವಕ್ಷ್ಯಾಮಿ ಯಥಾ ದೃಷ್ಟಂ ಯಥಾಶ್ರುತಂ ॥ ೨೫ ॥

ಭವಸ್ತು ಪ್ರಥಮಃಕಲ್ಪೋ ಲೋಕಾದೌ ಪ್ರಥಿತಃ ಪುರಾ ।
ಜ್ಞಾತವ್ಯೋ ಭಗವಾನತ್ರ ಹ್ಯಾನಂದಃ ಸಾಂಪ್ರತಃ ಸ್ವಯಂ ॥ ೨೬ ॥

ಬ್ರಹ್ಮಸ್ಥಾನಮಿದಂ ದಿವ್ಯಂ ಪ್ರಾಪ್ತಂ ವಾ ದಿವ್ಯಸಂಭವಂ ।
ದ್ವಿತೀಯಸ್ತು ಭುವಃ ಕಲ್ಪಸ್ತೃತೀಯಸ್ತಪ ಉಚ್ಯತೇ ॥ ೨೭ ॥

ಭವಶ್ಚತುರ್ಥೋ ವಿಜ್ಞೇಯಃ ಪಂಚಮೋ ರಂಭ ಏವ ಚ ।
ಋತುಕಲ್ಪಸ್ತಥಾ ಷಷ್ಠಃಸಪ್ತಮಸ್ತು ಕ್ರತುಃ ಸ್ಮೃತಃ ॥ ೨೮ ॥

ಅಷ್ಟಮಸ್ತು ಭವೇದ್ವಹ್ನಿ ರ್ನವಮೋ ಹವ್ಯವಾಹನಃ ।
ಸಾವಿತ್ರೋ ದಶಮಃ ಕಲ್ಪೋ ಭುವಸ್ತ್ವೇಕಾದಶಸ್ಮೃತಃ ॥ ೨೯ ॥

---

೨೪-೨೫. ವಾಯುದೇವನು ಹೇಳಿದನು :—ವರಾಹಾವತಾರವು ಹೇಗೆ ಆಯಿತು ? ಏತಕ್ಕಾಗಿ ಆ ಅವತಾರವನ್ನು ಮಾಡಿದನು ? ಈ ಹೆಸರು ಬರಲು ಕಾರಣ ವಾದರೂ ಯಾವುದು ? ಆ ಕಲ್ಪಕ್ಕೂ ಅದರ ಹಿಂದಿನ ಕಲ್ಪಕ್ಕೂ ಇರುವ ಮಧ್ಯಕಾಲವು ಎಷ್ಟು ? ಹಿಂದಿನ ಮತ್ತು ಮುಂದಿನ ಕಲ್ಪಗಳು ಯಾವುವು ? ಇವೆಲ್ಲವನ್ನೂ ನನಗೆ ತಿಳಿದಿರುವಹಾಗೆ ಮತ್ತು ನಾನು ಕೇಳಿರುವಹಾಗೆ ತಿಳಿಸುವೆನು ಎಂದನು.

೨೬. ಅವುಗಳಲ್ಲಿ ಭವವೆಂಬ ಕಲ್ಪವೇ ಪ್ರಥಮ ಕಲ್ಪವಾಗಿದೆ. ಈ ಕಲ್ಪವು ಬಹುಕಾಲದಿಂದಲೂ ಪ್ರಖ್ಯಾತವಾಗಿದೆ. ಆ ಕಲ್ಪದಲ್ಲಿ ಆನಂದನಾಮಕನಾದ ಪರಮಾತ್ಮನು ಪ್ರಸಿದ್ಧನಾಗಿಯೂ, ರಕ್ಷಕನಾಗಿಯೂ ಇರುವನು.

೨೭-೩೪. ಎರಡನೆಯ ಕಲ್ಪಕ್ಕೆ ಭುವಕಲ್ಪವೆಂದು ಸಂಜ್ಞೆಯು ಪ್ರಾಪ್ತವಾಗಿದೆ. ಇದೇ ದಿವ್ಯಸ್ಥಾನವು. ಈ ಕಲ್ಪದಲ್ಲಿ ಅನೇಕ ದೇವತೆಗಳು ಉದ್ಭವಿಸಿರುವರು. ಮೂರನೆಯ ಕಲ್ಪವು ತಪವೆಂದೂ, ನಾಲ್ಕನೆಯದು ಭವವೆಂದೂ, ಐದನೆಯದು ರಂಭ

ಉಶಿಕೋ ದ್ವಾದಶ ಸ್ತತ್ರ ಕುಶಿಕಸ್ತು ತ್ರಯೋದಶಃ
ಚತುರ್ದಶಸ್ತು ಗಂಧರ್ವೋ ಗಾಂಧರ್ವೋ ಯತ್ರ ವೈ ಸ್ವರಃ ।
ಉತ್ಪನ್ನಸ್ತು ಯಥಾನಾದೋ ಗಂಧರ್ವಾ ಯತ್ರ ಚೋತ್ಥಿತಾಃ ॥ ೩೦ ॥

ಋಷಭಸ್ತು ತತಃ ಕಲ್ಪೋ ಜ್ಞೇಯಃ ಪಂಚದಶೋದ್ವಿಜಾಃ ।
ಋಷಯೋ ಯತ್ರ ಸಂಭೂತಾಃ ಸ್ವರೋ ಲೋಕಮನೋಹರಃ ॥ ೩೧ ॥

ಷಡ್ಜಸ್ತು ಷೋಡಶಃ ಕಲ್ಪಃ ಷಡ್ ಜನಾ ಯತ್ರ ಚರ್ಷಯಃ ।
ಶಿಶಿರಶ್ಚ ವಸಂತಶ್ಚ ನಿದಾಘೋ ವರ್ಷ ಏವ ಚ ॥ ೩೨ ॥

ಶರದ್ಧೇಮಂತ ಇತ್ಯೇತೇ ಮಾನಸಾ ಬ್ರಹ್ಮಣಃ ಸುತಾಃ ।
ಉತ್ಪನ್ನಾಃ ಷಡ್ಜಸಂಸಿದ್ಧಾಃ ಪುತ್ರಾಃ ಕಲ್ಪೇ ತು ಷೋಡಶೇ ॥ ೩೩ ॥

ಯಸ್ಮಾಜ್ಜಾತೈಶ್ಚ ತೈಃ ಷಡ್ಭಿಃ ಸದ್ಯೋ ಜಾತೋ ಮಹೇಶ್ವರಃ ।
ತಸ್ಮಾತ್ಸಮುತ್ಥಿತಃ ಷಡ್ಜಃ ಸ್ವರಸ್ತೂದಧಿಸನ್ನಿಭಃ ॥ ೩೪ ॥

---

ವೆಂದೂ, ಆರನೆಯದು ಋತುಕಲ್ಪವೆಂದೂ, ಏಳನೆಯದು ಕ್ರತುವೆಂದೂ ಎಂಟ ನೆಯದು ವಹ್ನಿಯೆಂದೂ, ಒಂಬತ್ತನೆಯದು ಹವ್ಯವಾಹನವೆಂದೂ, ಹತ್ತನೆಯದು ಸಾವಿತ್ರವೆಂದೂ, ಹನ್ನೊಂದನೆಯದು ಭವವೆಂದೂ, ಹನ್ನೆರಡನೆಯದು ಉಶಿಕ ವೆಂದೂ, ಹದಿಮೂರನೆಯದು ಕುಶಿಕವೆಂದೂ, ಹದಿನಾಲ್ಕನೆಯದು ಗಂಧರ್ವವೆಂದೂ ಸಂಜ್ಞೆಯನ್ನೂ ಪಡೆದಿವೆ. ಈ ಗಂಧರ್ವಕಲ್ಪವು ಹುಟ್ಟಿದಾಗ ಗಾಂಧರ್ವಸ್ವರವೂ ಗಂಧರ್ವರೂ ಕೂಡ ಜನಿಸಿದರು.

ಅನಂತರ ಹುಟ್ಟಿದ ಹದಿನೈದನೆಯ ಕಲ್ಪಕ್ಕೆ ಋಷಭವೆಂಬ ನಾಮವು ಸಂಭವಿ ಸಿದೆ. ಈ ಯುಗದಲ್ಲಿ ಋಷಿಗಳೂ ಲೋಕಾನಂದಕರನಾದ ಸ್ವರಗಳೂ ಸಹ ಜನಿಸಿ ದುವು. ಹದಿನಾರನೆಯ ಕಲ್ಪವು ಷಡ್ಜಕಲ್ಪವಾಗಿದೆ. ಇದರಲ್ಲಿ ಶಿಶಿರ, ವಸಂತ, ನಿದಾಘ, ವರ್ಷ, ಶರತ್, ಹೇಮಂತರೆಂಬ ಆರುಜನ ಬ್ರಹ್ಮದೇವನ ಮಾನಸಪುತ್ರರೂ ಅವರಿಂದ ಮಹೇಶ್ವರನೂ ಹುಟ್ಟಿದರು. ಆಗ ಸಮುದ್ರಘೋಷಕ್ಕೆ ಸಮವಾದ ಷಡ್ಜ ಸ್ವರವೂ ಉಂಟಾಯಿತು.

ತತಃ ಸಪ್ತದಶಃ ಕಲ್ಪೋ ಮಾರ್ಜಾಲೀಯ ಇತಿ ಸ್ಮೃತಃ ।
ಮಾರ್ಜಾಲೀಯಂ ತು ತತ್ಕರ್ಮ ಯಸ್ಮಾದ್ಬ್ರಹ್ಮಕಲ್ಪಯೇತ್ ॥೩೫॥

ತತಸ್ತು ಮಧ್ಯಮೋ ನಾಮ ಕಲ್ಪೋಽಷ್ಟಾದಶ ಉಚ್ಯತೇ ।
ಯಸ್ಮಿಂಸ್ತು ಮಧ್ಯಮೋ ನಾಮ ಸ್ವರೋ ದೈವತ ಪೂಜಿತಃ ।
ಉತ್ಪನ್ನಃ ಸರ್ವ ಭೂತೇಷು ಮಧ್ಯಮೋ ವೈ ಸ್ವಯಂಭುವಃ ॥ ೩೬ ॥

ತತಸ್ತ್ವೇಕೋನವಿಂಶಸ್ತು ಕಲ್ಪೋ ವೈರಾಜಿಕಃ ಸ್ಮೃತಃ ।
ವೈರಾಜೋ ಯತ್ರ ಭಗವಾನ್ ಮನುರ್ವೈ ಬ್ರಹ್ಮಣಃ ಸುತಃ ॥ ೩೭ ॥

ತಸ್ಯ ಪುತ್ರಸ್ತು ಧರ್ಮಾತ್ಮಾ ದಧೀಚಿರ್ನಾಮ ಧಾರ್ಮಿಕಃ ।
ಪ್ರಜಾಪತಿರ್ಮಹಾತೇಜಾ ಬಭೂವ ತ್ರಿದಿವೇಶ್ವರಃ ॥ ೩೮ ॥

ಅಕಾಮಯತ ಗಾಯತ್ರೀ ಯಜಮಾನಂ ಪ್ರಜಾಪತಿಂ ।
ತಸ್ಮಾಜ್ಜಜ್ಞೇ ಸ್ವರಃ ಸ್ನಿಗ್ಧಃ ಪುತ್ರಸ್ತಸ್ಯ ದಧೀಚಿನಃ ॥ ೩೯ ॥

---

೩೫. ಅನಂತರ ಹದಿನೇಳನೆಯ ಕಲ್ಪವು ಮಾರ್ಜಾಲೀಯಕಲ್ಪವೆಂದು ಪ್ರಖ್ಯಾತವಾಗಿದೆ. ಆಗ ಹುಟ್ಟಿದ ಪುರುಷರು ಮಾರ್ಜಾಲದಂತೆ ಕಾರ್ಯಗಳನ್ನು ಮಾಡಿದ್ದರಿಂದ ಆ ನಾಮವು ಪ್ರಾಪ್ತವಾಗಿದೆ.

೩೬. ಅನಂತರ ಹುಟ್ಟಿದ ಹದಿನೆಂಟನೆಯ ಕಲ್ಪಕ್ಕೆ ಮಧ್ಯಮಕಲ್ಪವೆಂದು ನಾಮವು ಉಂಟಾಗಿದೆ. ಈ ಕಲ್ಪದಲ್ಲಿ ಸರ್ವಭೂತಗಳಲ್ಲಿ ಮಧ್ಯಮವೂ, ದೇವ ಪೂಜಿತವೂ ಆದ ಮಧ್ಯಮಸ್ವರವು ಬ್ರಹ್ಮನಿಂದ ಸೃಷ್ಟವಾಗಿದೆ.

೩೭-೩೯. ಅನಂತರ ಹತ್ತೊಂಬತ್ತನೆಯ ಯುಗವು ವೈರಾಜಕನಾಮಕವಾಗಿದೆ. ಈ ಯುಗದಲ್ಲಿ ವೈರಾಜನಾಮಕವಾದ ಮನುವು ಬ್ರಹ್ಮದೇವನ ಮಾನಸಪುತ್ರನಾಗಿ ಜನಿಸಿದನು. ಅವನಿಗೆ, ಧಾರ್ಮಿಕನೂ ಮಹಾತೇಜಸ್ವಿಯೂ ತ್ರಿದಿವೇಶ್ವರನೂ ಆದ ದಧೀಚಿ ಎಂಬ ಮಗನು ಹುಟ್ಟಿದನು. ಅವನು ಪ್ರಜಾಪತಿಯಾಗಿದ್ದನು. ಗಾಯತ್ರೀ ದೇವಿಯು ಅವನನ್ನು ವರಿಸಿದಳು. ಅವನಿಂದ ಮನೋಹರವಾದ ಸ್ವರವೂ ಕೂಡ ಹುಟ್ಟಿತು.

ತತೋ ವಿಂಶತಿಮಃ ಕಲ್ಪೋ ನಿಷಾದಃ ಪರಿಕೀರ್ತಿತಃ ।
ಪ್ರಜಾಪತಿಸ್ತು ತಂ ದೃಷ್ಟ್ವಾ ಸ್ವಯಂಭೂ ಪ್ರಭವಂ ತದಾ ।
ವಿರರಾಮ ಪ್ರಜಾಃ ಸ್ರಷ್ಟುಂ ನಿಷಾದಸ್ತು ತಪೋತಪತ್ ॥ ೪೦ ॥

ದಿವ್ಯಂ ವರ್ಷಸಹಸ್ರಂ ತು ನಿರಾಹಾರೋ ಜಿತೇಂದ್ರಿಯಃ ।
ತಮುವಾಚ ಮಹಾತೇಜಾ ಬ್ರಹ್ಮಾ ಲೋಕಪಿತಾಮಹಃ ॥ ೪೧ ॥

ಊರ್ಧ್ವಬಾಹುಂ ತಪೋಗ್ಲಾನಂ ದುಃಖಿತಂ ಕ್ಷುತ್ಪಿಪಾಸಿತಂ ।
ನಿಷೀದೇತ್ಯಬ್ರವೀದೇನಂ ಪುತ್ರಂ ಶಾಂತಂ ಪಿತಾಮಹಃ ।
ತಸ್ಮಾನ್ನಿಷಾದಃ ಸಂಭೂತಃ ಸ್ವರಸ್ತು ಸ ನಿಷಾದವಾನ್ ॥ ೪೨ ॥

ಏಕವಿಂಶತಿಮಃ ಕಲ್ಪೋ ವಿಜ್ಞೇಯಃ ಪಂಚಮೋ ದ್ವಿಜಾಃ ।
ಪ್ರಾಣೋಪಾನಃ ಸಮಾನಶ್ಚ ಉದಾನೋ ವ್ಯಾನ ಏವ ಚ ॥ ೪೩ ॥

ಬ್ರಹ್ಮಣೋ ಮಾನಸಾಃ ಪುತ್ರಾಃ ಪಂಚೈತೇ ಬ್ರಹ್ಮಣಃ ಸಮಾಃ ।
ತೈಸ್ತ್ವರ್ಥವಾದಿಭಿರ್ಯುಕ್ತೈಃ ವಾಗ್ಭಿರಿಷ್ಟೋ ಮಹೇಶ್ವರಃ ॥ ೪೪ ॥

---

೪೦. ಅನಂತರ ಇಪ್ಪತ್ತನೆಯ ನಿಷಾದನಾಮಕ ಕಲ್ಪವು ಹುಟ್ಟಲಾಗಿ ಬ್ರಹ್ಮದೇವನು ನಿಷಾದನಾಮಕ ಮಾನಸಿಕಪುತ್ರನನ್ನು ಸೃಷ್ಟಿಸಿದನು. ಉಳಿದ ಪ್ರಜಾಸೃಷ್ಟಿಯು ಆಗದೇ ಸ್ತಬ್ಧವಾಯಿತು. ಆಗ ನಿಷಾದನು ಘೋರವಾದ ತಪಸ್ಸನ್ನು ಮಾಡಿದನು

೪೧–೪೨. ಆ ಪುತ್ರನು ದಿವ್ಯಯುಗಸಹಸ್ರವರ್ಷಗಳವರೆಗೂ ನಿರಾಹಾರಿಯೂ ಜಿತೇಂದ್ರಿಯನೂ ಆಗಿ ಘೋರವಾದ ತಪಸ್ಸನ್ನು ಮಾಡಿದನು. ಅನಂತರ ಲೋಕಪಿತಾಮಹನಾದ ಬ್ರಹ್ಮನು ಊರ್ಧ್ವಬಾಹುವೂ, ತಪೋನಿಷ್ಠನೂ, ಜ್ಞಾನಿಯೂ, ದುಃಖಿಯೂ, ಕ್ಷುತ್ಪಿಪಾಸಾಪೀಡಿತನೂ, ಶಾಂತನೂ ಆದ, ಪುತ್ರನನ್ನು ನೋಡಿ, " ಎಲೈ ಕುಮಾರನೇ, ನೀನು ತಪಸ್ಸನ್ನು ಮಾಡಬೇಡ. ಸುಮ್ಮನೆ ಕುಳಿತುಕೋ " ಎಂದು ಹೇಳಿದನು. ಇದರಿಂದ ಅವನಿಗೆ ನಿಷಾದನೆಂಬ ನಾಮವು ಪ್ರಾಪ್ತವಾಗಿರುವುದಲ್ಲದೇ ನಿಷಾದನಾಮಕಸ್ವರವೂ ಸಹ ಅವನಿಂದಲೇ ಜನಿಸಿದೆ.

೪೪. ಎಲೈ ವಿಪ್ರರೇ, ಇಪ್ಪತ್ತೊಂದನೆಯ ಕಲ್ಪವು ಪಂಚಮಕಲ್ಪವೆಂದು ಪ್ರಸಿದ್ಧವಾಗಿದೆ ಏಕೆಂದರೆ ಆ ಕಲ್ಪದಲ್ಲಿ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನರೆಂಬ ಐದುಜನ ಮಾನಸಪುತ್ರರು ಬ್ರಹ್ಮನಿಗೆ ಹುಟ್ಟಿ, ಅರ್ಥಗರ್ಭಿತಗಳಾದ ಸ್ತೋತ್ರಗಳಿಂದ ಆ ಮಹೇಶ್ವರನನ್ನು ಹೊಗಳಿದುದರಿಂದ ಈ ನಾಮವು ಸಂಭವಿಸಿದೆ.

ಯಸ್ಮಾತ್ಪರಿಗತೈರ್ಗೀತಃ ಪಂಚಭಿಸ್ತೈರ್ಮಹಾತ್ಮಭಿಃ ।
ಸ್ವರಸ್ತು ಪಂಚಮಃ ಸ್ನಿಗ್ಧಃ ತಸ್ಮಾತ್ಕಲ್ಪಸ್ತು ಪಂಚಮಃ ॥ ೪೫ ॥

ದ್ವಾವಿಂಶಶ್ಚ ತಥಾ ಕಲ್ಪೋ ವಿಜ್ಞೇಯೋ ಮೇಘವಾಹನಃ ।
ಯತ್ರ ವಿಷ್ಣುರ್ಮಹಾಬಾಹು ರ್ಮೇಘೋಭೂತ್ವಾ ಮಹೇಶ್ವರಂ ।
ದಿವ್ಯಂ ವರ್ಷಸಹಸ್ರಂತು ಅವಹತ್ಕೃತ್ತಿವಾಸಸಂ ॥ ೪೬ ॥

ತಸ್ಯ ನಿಶ್ವಸಮಾನಸ್ಯ ಭಾರಾಕ್ರಾಂತಸ್ಯ ವೈ ಮುಖಾತ್ ।
ನಿರ್ಜಗಾಮ ಮಹಾಕಾಯಃ ಕಾಲೋ ಲೋಕಪ್ರಕಾಶನಃ ।
ಯಸ್ತ್ವಯಂ ಪಠ್ಯತೇ ವಿಪ್ರೈರ್ವಿಷ್ಣುರ್ವೈ ಕಶ್ಯಪಾತ್ಮಜಃ ॥ ೪೭ ॥

ತ್ರಯೋ ವಿಂಶತಿಮಃಕಲ್ಪೋ ವಿಜ್ಞೇಯಶ್ಚಿಂತಕಸ್ತಥಾ ।
ಪ್ರಜಾಪತಿಸುತಃ ಶ್ರೀರ್ಮಾ ಚಿತಿಶ್ಚ ಮಿಥುನಂ ಚ ತೌ ॥ ೪೮ ॥

---

೪೫. ಮಹಾತ್ಮರಾದ ಆ ಮಕ್ಕಳು, ಪಂಚಮಸ್ವರಗಳಿಂದ ಸಂಪೂರ್ಣವಾಗಿ ಭಗವಂತನನ್ನು ಹೊಗಳಿದರು. ಆಗ ಸರ್ವರ ಮನೋರಂಜಕವಾದ ಪಂಚಮ ಸ್ವರವು, ಉತ್ಪನ್ನವಾಯಿತು, ಇದರಿಂದ ಆ ಕಲ್ಪಕ್ಕೆ, ಪಂಚಮಕಲ್ಪವೆಂಬ ನಾಮವು ಸಂಭವಿಸಿರುತ್ತದೆ.

೪೬. ಇಪ್ಪತ್ತೆರಡನೆಯ ಕಲ್ಪಕ್ಕೆ, ಮೇಘನಾದಕಲ್ಪವೆಂಬ ನಾಮವು ಬಂದಿದೆ. ಆ ಕಲ್ಪದಲ್ಲಿ ಮಹಾಬಲಶಾಲಿಯಾದ ಶ್ರೀ ಹರಿಯು ಮೇಘರೂಪವನ್ನು ಹೊಂದಿ ಪರಮೇಶ್ವರನನ್ನು ದಿವ್ಯವರ್ಷಸಹಸ್ರಗಳವರೆಗೂ, ಧರಿಸಿದ್ದನು. ಇದರಿಂದ ಈ ಕಲ್ಪಕ್ಕೆ ಮೇಘನಾದವೆಂಬ ನಾಮವು ಸಂಭವಿಸಿರುತ್ತದೆ.

೪೭. ಭಾರಪೀಡಿತನೂ, ನಿಟ್ಟುಸಿರನ್ನು ಬಿಡುವವನೂ ಆದ ಆ ವಿಷ್ಣುವಿನ ಮುಖದಿಂದ ಮಹಾತ್ಮನೂ, ಮಹಾಕಾಯನೂ, ಲೋಕಪ್ರಕಾಶಕನೂ, ಕಾಲ ರೂಪಿಯೂ, ಆದ ಭಗವಂತನು ಆವಿರ್ಭೂತನಾದನು. ಆ ಮಹಾಪುರುಷನನ್ನೇ ಬ್ರಾಹ್ಮಣರು ಕಶ್ಯಪರ ಪುತ್ರನಾದ ವಿಷ್ಣುವೆಂದು ಕರೆಯುವರು.

೪೮-೪೯. ಇಪ್ಪತ್ತಮೂರನೆಯ ಕಲ್ಪವು, ಚಿಂತಕ ಕಲ್ಪವಾಗಿದೆ. ಏಕೆಂದರೆ, ಬ್ರಹ್ಮನಿಗೆ ಗುರುವೂ, ಕಾಂತಿಯುತವೂ ಆದ ಚಿತಿ ಎಂಬ ಮಿಥುನವು ಉತ್ಪನ್ನ

ಧ್ಯಾಯತೋ ಬ್ರಹ್ಮಣಶ್ಚೈವ ಯಸ್ಮಾಚ್ಚಿಂತಾ ಸಮುತ್ಥಿತಾ ।
ತಸ್ಮಾತ್ತು ಚಿಂತಕಃ ಸೋ ವೈ ಕಲ್ಪಃ ಪ್ರೋಕ್ತಃ ಸ್ವಯಂಭುವಾ ॥ ೪೯ ॥

ಚತುರ್ವಿಂಶತಿಮಶ್ಚಾಪಿ ಹ್ಯಾಕೂತಿಃ ಕಲ್ಪ ಉಚ್ಯತೇ ।
ಆಕೂತಿಶ್ಚ ತಥಾ ದೇವೀ ಮಿಥುನಂ ಸಂಬಭೂವ ಹ ॥ ೫೦ ॥

ಪ್ರಜಾಃ ಸ್ರಷ್ಟುಂ ತಥಾಕೂತಿಂ ಯಸ್ಮಾದಾಹ ಪ್ರಜಾಪತಿಃ ।
ತಸ್ಮಾತ್ ಸ ಪುರುಷೋ ಜ್ಞೇಯ ಆಕೂತಿಃ ಕಲ್ಪಸಂಜ್ಞಿತಃ ॥ ೫೧ ॥

ಪಂಚ ವಿಂಶತಿಮಃ ಕಲ್ಪೋ ವಿಜ್ಞಾತಿಃ ಪರಿಕೀರ್ತಿತಃ ।
ವಿಜ್ಞಾತಿಶ್ಚ ತಥಾ ದೇವೀ ಮಿಥುನಂ ಸಂಪ್ರಸೂಯತೇ ॥ ೫೨ ॥

ಧ್ಯಾಯತಃ ಪುತ್ರಕಾಮಸ್ಯ ಮನಸ್ಯಧ್ಯಾತ್ಮಸಂಜ್ಞಿತಂ ।
ವಿಜ್ಞಾತಂ ವೈ ಸಮಾಸೇನ ವಿಜ್ಞಾತಿಸ್ತು ತತಃ ಸ್ಮೃತಃ ॥ ೫೩ ॥

---

ವಾಗಿದೆ. ಅನಂತರ ಧ್ಯಾನಮಾಡುವ ಬ್ರಹ್ಮನಿಗೆ ಚಿಂತೆಯು ಉಂಟಾಯಿತು. ಇದರಿಂದ ಆ ಕಲ್ಪಕ್ಕೆ ಚಿಂತಾಕಲ್ಪವೆಂದು ನಾಮವು ಪ್ರಾಪ್ತವಾಗಿದೆ.

೫೦. ಇಪ್ಪತ್ತನಾಲ್ಕನೆಯ ಕಲ್ಪಕ್ಕೆ ಆಕೂತಿಕಲ್ಪವೆಂದು ಸಂಜ್ಞೆಯು ಉಂಟಾಗಿದೆ. ಆ ಕಲ್ಪದಲ್ಲಿ ಆಕೂತಿನಾಮಕರಾದ ದಂಪತಿಗಳು ಜನಿಸಿದುದರಿಂದ ಈ ಹೆಸರು ಬಂದಿದೆ.

೫೧. ಬ್ರಹ್ಮದೇವನು ಪ್ರಜೆಗಳನ್ನು ಸೃಷ್ಟಿಮಾಡುವಂತೆ ಆಕೂತಿಗೆ ಆಜ್ಞಾಪಿಸಿದನು. ಅದರಂತೆಯೇ ಪ್ರಜಾಸೃಷ್ಟಿಯು ಉಂಟಾಯಿತು. ಆದುದರಿಂದ ಆ ಕಲ್ಪಕ್ಕೆ ಆಕೂತಿಕಲ್ಪವೆಂಬ ನಾಮವು ಉಂಟಾಗಿದೆ.

೫೨-೫೩. ಇಪ್ಪತ್ತೈದನೆಯ ಕಲ್ಪವು ವಿಜ್ಞಾತಿನಾಮಕವಾಗಿದೆ. ವಿಜ್ಞಾತಿ ದೇವನು ಅವನ ಪತ್ನೀ, ಇವರಿಬ್ಬರು ಈ ಯುಗದಲ್ಲಿ ಜನಿಸಿದರು ಪುತ್ರಾಕಾಂಕ್ಷೆಯುಳ್ಳ ಆ ವಿಜ್ಞಾತಿಯು ಧ್ಯಾನಮಾಡಲು, ಆಧ್ಯಾತ್ಮ ವಿಚಾರವು ಹೊರಗೆ ಬಂದದ್ದರಿಂದ ಆ ಕಲ್ಪಕ್ಕೆ ವಿಜ್ಞಾತಿ ಎಂಬುದಾಗಿ ನಾಮವು ಬಂದಿರುತ್ತದೆ. ಯಾವ ಕಲ್ಪದಲ್ಲಿ ಆತ್ಮವಿಚಾರವು ವಿಜ್ಞಾತವಾಯಿತೋ ಆ ಕಲ್ಪಕ್ಕೆ ವಿಜ್ಞಾತಕಲ್ಪವೆಂದು ನಾಮವು ಪ್ರಾಪ್ತವಾಗಿದೆ.

ಷಡ್ವಿಂಶಸ್ತು ತತಃ ಕಲ್ಪೋ ಮನ ಇತ್ಯಭಿಧೀಯತೇ ।
ದೇವೀ ಚ ಶಾಂಕರೀ ನಾಮ ಮಿಥುನಂ ಸಂಪ್ರಸೂಯತೇ ॥ ೫೪ ॥

ಪ್ರಜಾ ವೈ ಚಿಂತಮಾನಸ್ಯ ಸ್ರಷ್ಟುಕಾಮಸ್ಯ ವೈ ತದಾ ।
ಯಸ್ಮಾತ್ಪ್ರಜಾಸಂಭಾವನಾದುತ್ಪನ್ನಸ್ತು ಸ್ವಯಂ ಭುವಾ ।
ತಸ್ಮಾತ್ ಪ್ರಜಾಸಂಭವನಾದ್ಭಾವನಾ ಸಂಭವಃ ಸ್ಮೃತಃ ॥ ೫೫ ॥

ಸಪ್ತವಿಂಶತಿಮಃ ಕಲ್ಪೋ ಭಾವೋ ವೈ ಕಲ್ಪಸಂಜ್ಞಿತಃ ।
ಪೌರ್ಣಮಾಸೀ ತಥಾ ದೇವೀ ಮಿಥುನಂ ಸಮುಪದ್ಯತ ॥ ೫೬ ॥

ಪ್ರಜಾವೈ ಸ್ರಷ್ಟುಕಾಮಸ್ಯ ಬ್ರಹ್ಮಣಃ ಪರಮೇಷ್ಠಿನಃ ।
ಧ್ಯಾಯತಸ್ತು ಪರಂ ಧ್ಯಾನಂ ಪರಮಾತ್ಮನಮೀಶ್ವರಂ ॥ ೫೭ ॥

ಅಗ್ನಿಸ್ತು ಮಂಡಲೀ ಭೂತ್ವಾ ರಶ್ಮಿ ಜಾಲಸಮಾವೃತಃ ।
ಭುವಂ ದಿವಂ ಚ ವಿಷ್ಟಭ್ಯ ದೀಪ್ಯತೇ ಸ ಮಹಾವಪುಃ ॥ ೫೮ ॥

---

೫೪. ಇಪ್ಪತ್ತಾರನೆಯ ಕಲ್ಪವು ಮನನಾಮಕವಾಗಿದೆ. ಆ ಕಲ್ಪದಲ್ಲಿ ಶಾಂಕರೀ ದೇವಿಯು ದಂಪತಿಗಳನ್ನು ಸೃಷ್ಟಿಸಿದಳು.

೫೫. ಪ್ರಜೆಗಳನ್ನು ಸೃಷ್ಟಿಸಬೇಕೆಂದು ಇಚ್ಛೆಯುಳ್ಳ ಬ್ರಹ್ಮದೇವನು ಪ್ರಜಾ ಸಂಭಾವನೆಯಿಂದ ಕೂಡಿ, ಸೃಷ್ಟಿಮಾಡಿರುವದರಿಂದ ಆ ಕಲ್ಪಕ್ಕೆ ಪ್ರಜಾಸಂಭಾವನೆ ಎಂಬ ನಾಮವು ಬಂದಿದೆ.

೫೬. ಇಪ್ಪತ್ತೇಳನೆಯ ಕಲ್ಪವು ಭಾವನಾಮಕವಾಗಿದೆ. ಅದರಲ್ಲಿ ಪೌರ್ಣ ಮಾಸೀ ದೇವಿಯು ಅವಳ ಪತಿಯು ದಂಪತಿಗಳಾಗಿ ಉದ್ಭವಿಸಿದರು.

೫೭-೫೮. ಪ್ರಜೆಗಳನ್ನು ಸೃಷ್ಟಿಸಲಿಚ್ಛೆಯುಳ್ಳ ಪರಮೇಷ್ಠಿಯಾದ ಬ್ರಹ್ಮನು ಪರಮಪುರುಷನೂ, ಉತ್ತಮನೂ ಆದ ಈಶ್ವರನನ್ನು ಧ್ಯಾನಮಾಡಿದನು. ಆಗ ಕಿರಣಗಳ ಮಂಡಲಗಳಿಂದ ಆವೃತನಾದ ಯಜ್ಞಪುರುಷನು, ಭೂಮಂಡಲದಿಂದ ಸ್ವರ್ಗದವರೆಗೆ ವ್ಯಾಪ್ತವೂ ದಿವ್ಯವೂ ಆದ ಶರೀರದಿಂದ ಪ್ರಕಾಶಿಸಿದನು.

ತತೋ ವರ್ಷಸಹಸ್ರಾಂತೇ ಸಂಪೂರ್ಣೇ ಜ್ಯೋತಿಮಂಡಲೇ ।
ಆವಿಷ್ಟಯಾ ಸಹೋತ್ಪನ್ನಮಪಶ್ಯತ್ಸೂರ್ಯಮಂಡಲಂ ॥ ೫೯ ॥

ಯಸ್ಮಾದದೃಶ್ಯೋಭೂತಾನಾಂ ಬ್ರಹ್ಮಣಾ ಪರಮೇಷ್ಠಿನಾ ।
ದೃಷ್ಟಸ್ತು ಭಗವಾನ್ ದೇವಃ ಸೂರ್ಯಃ ಸಂಪೂರ್ಣಮಂಡಲಃ ॥ ೬೦ ॥

ಸರ್ವೇಯೋಗಾಶ್ಚ ಮಂತ್ರಾಶ್ಚ ಮಂಡಲೇನ ಸಹೋತ್ಥಿತಾಃ ।
ಯಸ್ಮಾತ್ ಕಲ್ಪೋ ಹ್ಯಯಂ ದೃಷ್ಟ ಸ್ತಸ್ಮಾತ್ತಂ ದರ್ಶಮುಚ್ಯತೇ ॥ ೬೧ ॥

ಯಸ್ಮಾನ್ಮನಸಿ ಸಂಪೂರ್ಣೋ ಬ್ರಹ್ಮಣಃ ಪರಮೇಷ್ಠಿನಃ ।
ಪುರಾ ವೈ ಭಗವಾನ್ ಸೋಮಃ ಪೌರ್ಣಮಾಸೀ ತತಃ ಸ್ಮೃತಾ ॥ ೬೨ ॥

ತಸ್ಮಾತ್ತು ಪರ್ವದರ್ಶೇ ವೈ ಪೌರ್ಣಮಾಸಂಚ ಯೋಗಿಭಿಃ ।
ಉಭಯೋಃ ಪಕ್ಷಯೋರ್ಜ್ಯೇಷ್ಠಮಾತ್ಮನೋ ಹಿತಕಾಮ್ಯಯಾ ॥ ೬೩ ॥

---

೫೯. ಅನಂತರ ಒಂದು ಸಹಸ್ರವರ್ಷಗಳಾದಮೇಲೆ ಸಂಪೂರ್ಣವಾದ ಜ್ಯೋತಿ ಮಂಡಲದಿಂದ ಉತ್ಪನ್ನವಾದ ಸೂರ್ಯನ ದಿವ್ಯತೇಜಸ್ಸನ್ನು ನೋಡಿದನು.

೬೦. ಸರ್ವಭೂತಗಳಿಗೆ ಅದೃಶ್ಯನೂ ಪೂಜ್ಯನೂ ಸಂಪೂರ್ಣಮಂಡಲನೂ ಆದ ಸೂರ್ಯದೇವನು ಪರಮಪದವಿಯಲ್ಲಿರುವ ಬ್ರಹ್ಮದೇವನಿಂದ ನೋಡಲ್ಪಟ್ಟನು.

೬೧. ಆಗ ಸೂರ್ಯಮಂಡಲದೊಡನೆ ಸಮಸ್ತವಾದ ಯೋಗಗಳೂ ಮಂತ್ರಗಳೂ ಕೂಡ ಉತ್ಪನ್ನವಾದುವು. ಯಾವ ಕಲ್ಪದಲ್ಲಿ ಸೂರ್ಯನೊಡನೆ ಮಂತ್ರಾದಿಗಳು ದೃಷ್ಟವಾದುವೋ ಆ ಕಲ್ಪಕ್ಕೆ "ದರ್ಶಕಲ್ಪ"ವೆಂಬುದಾಗಿ ನಾಮವು ಪ್ರಾಪ್ತವಾಗಿದೆ.

೬೨. ಯಾವಾಗ ಪರಮೇಷ್ಠಿಯಾದ ಬ್ರಹ್ಮದೇವನ ಮನಸ್ಸಿನಲ್ಲಿ ಸಂಪೂರ್ಣನೂ ಪೂಜ್ಯನೂ ಆದ ಚಂದ್ರನು ಹೊಳೆದನೋ ಅದಕ್ಕೆ " ಪೌರ್ಣಮಾಸೀ " ಎಂಬ ನಾಮವು ಉಂಟಾಯಿತು.

೬೩. ಯೋಗಿಗಳು ಮೊದಲು ಪರ್ವಕಾಲಗಳಲ್ಲಿ ದರ್ಶನವನ್ನೂ ಅನಂತರ ಪೌರ್ಣಮಾಸವನ್ನೂ ತಮ್ಮ ಹಿತಕಾಂಕ್ಷೆಯಿಂದ ತಿಳಿಸಿದರು.

ದರ್ಶಂ ಚ ಪೌರ್ಣಮಾಸಂ ಚ ಯೇ ಯಜಂತಿ ದ್ವಿಜಾತಯಃ ।
ನ ತೇಷಾಂ ಪುನರಾವೃತ್ತಿರ್ಬ್ರಹ್ಮಲೋಕಾತ್ಕದಾಚನ ॥ ೬೪ ॥

ಯೋ ನಾಹಿತಾಗ್ನಿಃ ಪ್ರಯತೋ ವೀರಾಧ್ವಾನಂ ಗತೋಽಪಿ ವಾ ।
ಸಮಾಧಾಯ ಮನ ಸ್ತೀವ್ರಂ ಮಂತ್ರಮುಚ್ಚಾರಯೇಚ್ಛನೈಃ ॥ ೬೫ ॥

ತ್ವಮಗ್ನೇ ರುದ್ರೋ ಅಸುರೋ ಮಹೀ ದಿವಸ್ತ್ವಂ ಶರ್ವೋ ಮಾರುತಂ
ಪೃಷ್ಟ ಈಶಿಷೆ ತ್ವಂ ಪಾಶಗಂಧರ್ವಶಿಷಂ ಪೂಷಾ ವಿಧತ್ತಪಾಸಿನಾ

ಇತ್ಯೇವ ಮಂತ್ರಂ ಮನಸಾ ಸಮ್ಯಗುಚ್ಚಾರಯೇತ್ ದ್ವಿಜಃ ।
ಅಗ್ನಿಂ ಪ್ರವಿಶತೇ ಯಸ್ತು ರುದ್ರಲೋಕಂ ಸ ಗಚ್ಛತಿ ॥ ೬೬ ॥

ಸೋಮಶ್ಚಾಗ್ನಿಸ್ತು ಭಗವಾನ್ ಕಾಲೋ ರುದ್ರ ಇತಿ ಶ್ರುತಿಃ ।
ತಸ್ಮಾದ್ಯಃ ಪ್ರವಿಶೇದಗ್ನಿಂ ಸ ರುದ್ರಾನ್ನ ನಿವರ್ತತೇ ॥ ೬೭ ॥

---

೬೪. ಬ್ರಾಹ್ಮಣಾದಿ ಯಾವ ಮನುಷ್ಯರು ದರ್ಶಪೌರ್ಣಮಾಸಗಳಲ್ಲಿ ಭಗವದಾರಾಧನಾದಿಗಳನ್ನು ಮಾಡುವರೋ ಅವರು ಪುನರಾವೃತ್ತಿರಹಿತವಾದ ಬ್ರಹ್ಮದೇವನ ಪರಮಪದವಿಯನ್ನು ಹೊಂದುವರು.

೬೫. ಯಾವನು ಆಹಿತಾಗ್ನಿಯಾಗದೆಯೇ ಜಿತೇಂದ್ರಿಯನಾಗಿರುವನೋ ಮತ್ತು ವೀರಮಾರ್ಗವನ್ನು ಹಿಡಿದಿರುವನೋ ಅವನು ಶುಚಿಯಾಗಿ ಸಮಾಧಾನಚಿತ್ತದಿಂದ ಮಂತ್ರವನ್ನು ಮೆಲ್ಲಗೆ ಉಚ್ಚರಿಸಬೇಕು.

ಎಲೈ ಅಗ್ನಿದೇವನೇ, ನೀನು ರುದ್ರನೂ ಅಸುರನೂ ಭೂಮಿಯೂ ಸ್ವರ್ಗವೂ ಶರ್ವನೂ ಮಾರುತನೂ ಸೂರ್ಯನೂ ಸ್ವರ್ಗಗತನೂ ಸರ್ವಪಾಪ ಪರಿಹಾರಕನೂ ಆಗಿರುತ್ತೀಯೆ.

೬೬ ಬ್ರಾಹ್ಮಣನು ಪೂರ್ವೋಕ್ತವಾದ ಮಂತ್ರವನ್ನು ಭಕ್ತಿಯಿಂದ ಉಚ್ಚರಿಸಿ ಅಗ್ನಿಯನ್ನು ಪ್ರವೇಶಮಾಡಿದರೆ ಶಾಶ್ವತವಾದ ಕೈಲಾಸಲೋಕಕ್ಕೆ ಹೋಗುವನು.

೬೭. ಪೂಜ್ಯನಾದ ರುದ್ರದೇವನೇ, " ನೀನು ಚಂದ್ರನೂ ಅಗ್ನಿಯೂ ಯಮನೂ ರುದ್ರನೂ ಆಗಿರುತ್ತೀಯೆ" ಎಂದು ಧ್ಯಾನಿಸಿ, ಅಗ್ನಿಯನ್ನು ಪ್ರವೇಶಿಸಿದರೆ ಪುನರಾವೃತ್ತಿರಹಿತವಾದ ರುದ್ರಪದವಿಯನ್ನು ಹೊಂದುವನು.

ಅಷ್ಟಾವಿಂಶತಿಮಃ ಕಲ್ಪೋ ಬೃಹದಿತ್ಯಭಿಸಂಜ್ಞಿತಃ ।
ಬ್ರಹ್ಮಣಃ ಪುತ್ರಕಾಮಸ್ಯ ಸ್ರಷ್ಟುಕಾಮಸ್ಯ ವೈ ಪ್ರಜಾಃ ॥
ಧ್ಯಾಯಮಾನಸ್ಯಮನಸಾ ಬೃಹತ್ಸಾಮ ರಥಂತರಂ ॥ ೬೮ ॥

ಯಸ್ಮಾತ್ತತ್ರ ಸಮುತ್ಪನ್ನೋ ಬೃಹತಃ ಸರ್ವತೋ ಮುಖಃ ।
ತಸ್ಮಾತ್ತು ಬೃಹತಃ ಕಲ್ಪೋ ವಿಜ್ಞೇಯಸ್ತತ್ವಚಿಂತಕೈಃ ॥ ೬೯ ॥

ಅಷ್ಟಾಶೀತಿಸಹಸ್ರಾಣಾಂ ಯೋಜನಾನಾಂ ಪ್ರಮಾಣತಃ ।
ರಥಂತರಂ ತು ವಿಜ್ಞೇಯಂ ಪರಮಂ ಸೂರ್ಯಮಂಡಲಂ ।
ತಸ್ಮಾದಂಡಂತು ವಿಜ್ಞೇಯಮಭೇದ್ಯಂ ಸೂರ್ಯಮಂಡಲಂ ॥ ೭೦ ॥

ಯತ್ಸೂರ್ಯಮಂಡಲಂ ಚಾಪಿ ಬೃಹತ್ಸಾಮ ತು ಭಿದ್ಯತೇ ।
ಭಿತ್ವಾಚೈನಂ ದ್ವಿಜಾ ಯಾಂತಿ ಯೋಗಾತ್ಮಾನೋ ದೃಢವ್ರತಾಃ ।
ಸಂಘಾತಮುಪನೀತಾಶ್ಚ ಅನ್ಯೇ ಕಲ್ಪಾ ರಥಂತರೇ ॥ ೭೧ ॥

---

೬೮-೬೯. ಇಪ್ಪತ್ತೆಂಟನೆಯ ಕಲ್ಪಕ್ಕೆ ಬೃಹತ್ಕಲ್ಪವೆಂದು ನಾಮವು ಬಂದಿದೆ. ಏಕೆಂದರೆ ಬ್ರಹ್ಮದೇವನು ಪ್ರಜಾಕಾಮದಿಂದ ಸೃಷ್ಟಿಮಾಡಲಿಚ್ಛಿಸಿ ಮನಸ್ಸಿನಲ್ಲಿ ಧ್ಯಾನ ಮಾಡಲಾಗಿ ಬೃಹತ್ಸಾಮ ರಥಂತರವೆಂಬ ಸರ್ವತೋಮುಖವಾದ ಮಂತ್ರಗಳು ಉತ್ಪನ್ನ ಗಳಾದವು. ಆದುದರಿಂದ ಆ ಕಲ್ಪಕ್ಕೆ ಬೃಹತ್ಕಲ್ಪವೆಂದು ನಾಮವು ಉಂಟಾಗಿದೆ.

೭೦. ರಥಂತರನಾಮಕವೂ, ಉತ್ತಮವೂ, ಆದ ಸೂರ್ಯಮಂಡಲವು ಎಂಬ ತ್ತೆಂಟುಸಹಸ್ರ ಯೋಜನಗಳ ದೂರದಲ್ಲಿದೆ. ತದನಂತರ ಬ್ರಹ್ಮಾಂಡವು ಇರುತ್ತದೆ. ಆದುದರಿಂದ ಬ್ರಹ್ಮಾಂಡವು ಅಭೇದ್ಯವಾಗಿದೆ

೭೧. ಬೃಹತ್ಸಾಮವು ಸೂರ್ಯಮಂಡಲವನ್ನು ಭೇದಿಸಿರುತ್ತದೆ ದೃಢವ್ರತ ವುಳ್ಳ ಯೋಗಿಗಳು ಸೂರ್ಯಮಂಡಲವನ್ನು ಭೇದಿಸಿ ಪರಮಪದವಿಯನ್ನು ಹೊಂದು ವರು. ಸಾಂಖ್ಯಿಕರಾದರೋ ಇತರ ಕಲ್ಪಗಳಲ್ಲಿ ರಥಂತರದ ಮೂಲಕ ಪರಮಪದವಿ ಯನ್ನು ಹೊಂದುವರು.

**ಇತ್ಯೇತತ್ತು ಮಯಾ ಪ್ರೋಕ್ತಂ ಚಿತ್ರಮಧ್ಯಾತ್ಮ ದರ್ಶನಂ ।**
**ಅತಃ ಪರಂ ಪ್ರವಕ್ಷ್ಯಾಮಿ ಕಲ್ಪಾನಾಂ ವಿಸ್ತರಂ ಶುಭಂ ॥ ೭೨ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಕಲ್ಪನಿರೂಪಣಂ" ನಾಮ ಏಕವಿಂಶೋಽಧ್ಯಾಯಃ**

---

೭೨. ಹೀಗೆ ಅತ್ಯದ್ಭುತಗಳೂ, ಆಧ್ಯಾತ್ಮವಿಷಯಕಗಳೂ, ಅಮೋಘಗಳೂ ಆದ ವಿಷಯಗಳನ್ನು ನಿಮಗಾಗಿ ಹೇಳಿರುತ್ತೇನೆ. ಇನ್ನು ಮುಂದೆ ಪರಮಮಂಗಳ ಕರವಾದ ಕಲ್ಪಗಳ ವಿಸ್ತಾರವನ್ನು ಹೇಳುವೆನು ಕೇಳಿ ಎಂದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಕಲ್ಪಗಳ ಸ್ವರೂಪ ಕಥನ" ವೆಂಬ ಇಪ್ಪತ್ತೊಂದನೆಯ ಅಧ್ಯಾಯವು ಸಮಾಪ್ತವು.

# ಇಪ್ಪತ್ತೊಂದನೆಯ ಅಧ್ಯಾಯದ ಸಾರಾಂಶವು

ಈಶ್ವರನು ಬ್ರಹ್ಮನ ಪುತ್ರನಾಗಿ ಹುಟ್ಟಿದ ವಿಷಯವೂ, ಬ್ರಹ್ಮನು ಕಮಲದಲ್ಲಿ ಜನಿಸಿದ ವಿಚಾರವೂ, ಈಶ್ವರನಿಗೆ ರುದ್ರನೆಂದು ನಾಮ ಬರಲು ಕಾರಣವೂ, ಹರಿಹರರಿಗೆ ಪರಸ್ಪರ ಪ್ರೀತಿಯೂ, ಬ್ರಹ್ಮಾದಿ ವಂದಿತನಾದ ವಿಷ್ಣುವು ಈಶ್ವರನನ್ನು ಸ್ತುತಿಸುವ ಸಂಗತಿಯೂ ವರ್ಣಿತವಾಗಿವೆ.

ಆರು ಮನುಕಲ್ಪಗಳು ಕಳೆಯಲು ಏಳನೆಯ ಕಲ್ಪವು ಪಾದ್ಮಕಲ್ಪವು. ಒಂದು ಚತುರ್ಯುಗದ ಕಾಲವು, ಹನ್ನೆರಡು ಸಹಸ್ರ ವರ್ಷಗಳು. ಇಂತಹ ಎಪ್ಪತ್ತೊಂದು ದಿವ್ಯಸಹಸ್ರವರ್ಷಗಳಾದರೆ ಒಂದು ಮನುಕಲ್ಪವು. ಈ ಕಾಲದಲ್ಲಿ ದಾನವಾದಿಗಳೂ ಸಪ್ತರ್ಷಿಗಳೂ ಮನುಷ್ಯರೂ ಜನಿಸಿ ಲಯವಾಗುವರು. ಸ್ವಾಯಂಭುವಾದಿ ಹದಿನಾಲ್ಕು ಮನುಗಳು ರಾಜ್ಯವಾಳಿದ ಕಾಲಕ್ಕೆ ವರಾಹಕಲ್ಪವೆಂದು ಹೆಸರು.

ಇದರಲ್ಲಿ ಭವ, ಭುವ, ತಪ, ಸಂಭವ, ರಂಭ, ಋತು, ಕ್ರತು, ವಹ್ನಿ, ಹವ್ಯವಾಹನ, ಸಾವಿತ್ರ, ಉಶಿಕ, ಕುಶಿಕ, ಗಂಧರ್ವ, ಋಷಭ, ಷಡ್ಜ, ಮಾರ್ಜಾಲೀಯ, ವೈರಾಜಿಕ, ನಿಷಾದ, ಪಂಚಮ, ಮೇಘವಾಹನ, ಚಿತಪ, ಆಕೂತಿ, ವಿಜ್ಞಾತಿ, ಮನ, ಭಾವ, ಮತ್ತು ಬೃಹತ್ ಎಂಬ ಇಪ್ಪತ್ತೆಂಟು ಕಲ್ಪಗಳು ಇರುವುವು. ಆಯಾ ಕಲ್ಪಗಳಲ್ಲಿ ಪ್ರಖ್ಯಾತರಾದ ಪುರುಷರೂ ಆಗ ನಡೆದ ಕಾರ್ಯವಿಶೇಷಗಳೂ, ನಾಮಗಳ ಕಾರಣಗಳೂ ಕೂಡ ನಿರೂಪಿತವಾಗಿವೆ. ಹೀಗೆ ಆಯಾ ಕಲ್ಪಗಳ ಮಹಿಮಾತಿಶಯಗಳನ್ನು ತಿಳಿದ ಜ್ಞಾನಿಗಳು ಈ ಸಂಸಾರದಿಂದ ಬಿಡುಗಡೆಯನ್ನು ಪಡೆದು, ಪರಮಪದವಿಯನ್ನು ಹೊಂದುವರು.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ದ್ವಾವಿಂಶೋಽಧ್ಯಾಯಃ

॥ ಋಷಯ ಊಚುಃ ॥

**ಅತ್ಯದ್ಭುತಮಿದಂ ಸರ್ವಂ ಕಲ್ಪಾನಾಂತೇ ಮಹಾಮುನೇ ।**
**ರಹಸ್ಯಂ ವೈ ಸಮಾಖ್ಯಾತಂ ಮಂತ್ರಾಣಾಂ ಚ ಪ್ರಕಲ್ಪನಂ ॥ ೧ ॥**

**ನ ತವಾವಿದಿತಂ ಕಿಂಚಿತ್ ತ್ರಿಷು ಲೋಕೇಷು ವಿದ್ಯತೇ ।**
**ತಸ್ಮಾದ್ವಿಸ್ತರತಃ ಸರ್ವಾಃ ಕಲ್ಪಸಂಖ್ಯಾ ಬ್ರವೀಹಿ ನಃ ॥ ೨ ॥**

---

## ಇಪ್ಪತ್ತೆರಡನೆಯ ಅಧ್ಯಾಯವು

೧-೨ ಋಷಿಗಳು ಹೇಳಿದರು:— ಮಹರ್ಷಿಗಳು ಸೂತಪುರಾಣಿಕನನ್ನು ಕುರಿತು ಎಲೈ ಜ್ಞಾನಿಯೇ “ ನೀನು ನಮಗಾಗಿ ಕಲ್ಪಗಳು ಮತ್ತು ಮಂತ್ರಗಳು ಇವುಗಳ ರಹಸ್ಯ ವೃತ್ತಾಂತಗಳನ್ನು ತಿಳಿಸಿರುವುದು ಬಹಳ ಆಶ್ಚರ್ಯಕರಗಳಾಗಿವೆ. ಎಷ್ಟು ಕೇಳಿದರೂ ನಮಗೆ ತೃಪ್ತಿಯಿಲ್ಲ. ನಿಮಗೆ ಈ ಮೂರು ಲೋಕಗಳಲ್ಲಿಯೂ ತಿಳಿಯದ ವಿಷಯಗಳೇ ಇಲ್ಲ. ಆದುದರಿಂದ ದಯವಿಟ್ಟು ಸಮಸ್ತ ಕಲ್ಪಗಳ ಸಂಖ್ಯೆಗಳನ್ನು ವಿಸ್ತಾರವಾಗಿ ತಿಳಿಸಬೇಕೆಂದು ” ಬೇಡಿಕೊಂಡರು.

॥ ವಾಯುರುವಾಚ ॥

ಅತ್ರ ವಃ ಕಥಯಿಷ್ಯಾಮಿ ಕಲ್ಪಸಂಖ್ಯಾಂ ಯಥಾ ತಥಾ ।
ಯುಗಾಗ್ರಂಚ ವರ್ಷಾಗ್ರಂ ತು ಬ್ರಹ್ಮಣಃ ಪರಮೇಷ್ಠಿನಃ ॥ ೩ ॥

ಏವಂ ಕಲ್ಪಸಹಸ್ರಂ ತು ಬ್ರಹ್ಮಣೋಽಬ್ದಃ ಪ್ರಕೀರ್ತಿತಃ ।
ಏತದಷ್ಟಸಹಸ್ರಂ ತು ಬ್ರಹ್ಮಣಸ್ತದ್ಯುಗಂ ಸ್ಮೃತಂ ॥ ೪ ॥

ಏಕಂ ಯುಗಸಹಸ್ರಂ ತು ಸವನಂ ತತ್ ಪ್ರಜಾಪತೇಃ ।
ಸವನಾನಾಂ ಸಹಸ್ರಂ ತು ದ್ವಿಗುಣಂ ತ್ರಿವೃತಂ ತಥಾ ॥ ೫ ॥

ಬ್ರಹ್ಮಣಃ ಸ್ಥಿತಿಕಾಲಸ್ಯ ಚೈತತ್ಸರ್ವಂ ಪ್ರಕೀರ್ತಿತಂ ।
ತಸ್ಯ ಸಂಖ್ಯಾಂ ಪ್ರವಕ್ಷ್ಯಾಮಿ ಪುರಸ್ತಾದ್ವೈ ಯಥಾಕ್ರಮಂ ॥ ೬ ॥

---

೩. ವಾಯುದೇವನು ಹೇಳಿದನು:—ಎಲೈ ಮುನಿಗಳೇ, "ಈಗ ನಿಮಗೆ ಯಥಾಕ್ರಮವಾಗಿ ಕಲ್ಪಗಳ ಸಂಖ್ಯೆಯನ್ನೂ ಮತ್ತು ದೇವೋತ್ತಮನಾದ ಬ್ರಹ್ಮನ ಯುಗ, ವರ್ಷಾಗ್ರ, ಇವುಗಳ ವಿಷಯಗಳನ್ನೂ ತಿಳಿಸುವೆನು," ಕೇಳಿ ಎಂದು ವಾಯು ದೇವನು ಹೇಳಿದನು.

೪. ಹೀಗೆ ಒಂದು ಸಹಸ್ರಕಲ್ಪಗಳಾದರೆ, ಬ್ರಹ್ಮದೇವನಿಗೆ ಒಂದು ವರ್ಷವೂ, ಅಂತಹ ಎಂಟು ಸಹಸ್ರ ವರ್ಷಗಳು ಬ್ರಹ್ಮದೇವನ ಒಂದು ಯುಗವೆಂದೂ ವ್ಯಕ್ತವಾಗಿವೆ.

೫. ಒಂದು ಸಹಸ್ರ ವರ್ಷಗಳು ಬ್ರಹ್ಮನಿಗೆ ಸವನಕಾಲವು. ಅಂತಹ ಸವನ ಗಳ ಸಹಸ್ರವು ಎರಡು ಮೂರರಿಂದ ಗುಣಿತವಾದರೆ ಎಷ್ಟೋ ಅಷ್ಟು ಕಾಲವು ಬ್ರಹ್ಮ ದೇವನ ಸ್ಥಿತಿಕಾಲವಾಗಿದೆ.

೬. ಬ್ರಹ್ಮದೇವನ ಸ್ಥಿತಿಕಾಲವು ಎಷ್ಟೆಂಬ ವಿಷಯವನ್ನು ತಿಳಿಸಿರುತ್ತೇನೆ. ಅದರ ಸಂಖ್ಯೆಯೇ ಮೊದಲಾದ ವಿಷಯಗಳನ್ನು ಮುಂದೆ ಕ್ರಮವಾಗಿಯೂ, ವಿಶದ ವಾಗಿಯೂ ತಿಳಿಸುವೆನು, ಎಂದನು.

**ಅಷ್ಟಾವಿಂಶತಿರ್ಯೇ ಕಲ್ಪಾ ನಾಮತಃ ಪರಿಕೀರ್ತಿತಾಃ ।**
**ತೇಷಾಂ ಪುರಸ್ತಾತ್ ವಕ್ಷ್ಯಾಮಿ ಕಲ್ಪಸಂಜ್ಞಾಂ ಯಥಾಕ್ರಮಂ ॥ ೭ ॥**

**ರಥಂತರಸ್ಯ ಸಾಮ್ನಸ್ತು ಉಪರಿಷ್ಟಾನ್ ನಿಬೋಧತ ।**
**ಕಲ್ಪಾಂತೇ ನಾಮಧೇಯಾನಿ ಮಂತ್ರೋತ್ಪತ್ತಿಶ್ಚ ಯಸ್ಯ ಯಾ ॥ ೮ ॥**

**ಏಕೋನ ವಿಂಶಕಃ ಕಲ್ಪೋ ವಿಜ್ಞೇಯಃ ಶ್ವೇತಲೋಹಿತಃ ।**
**ಯಸ್ಮಿಂಸ್ತತ್ ಪರಮಧ್ಯಾನಂ ಧ್ಯಾಯತೋ ಬ್ರಹ್ಮಣಸ್ತಥಾ ॥ ೯ ॥**

**ಶ್ವೇತೋಷ್ಣೀಷಃ ಶ್ವೇತಮಾಲ್ಯಃ ಶ್ವೇತಾಂಬರಧರಃ ಶಿಖೀ ।**
**ಉತ್ಪನ್ನಸ್ತು ಮಹಾತೇಜಾಃ ಕುಮಾರಃ ಪಾವಕೋಪಮಃ ॥ ೧೦ ॥**

**ಭೀಮಂ ಮುಖಂ ಮಹಾರೌದ್ರಂ ಸುಘೋರಂ ಶ್ವೇತಲೋಹಿತಂ ।**
**ದೀಪ್ತಂ ದೀಪ್ತೇನ ವಪುಷಾ ಮಹಾಸ್ಯಂ ಶ್ವೇತವರ್ಚಸಂ ॥ ೧೧ ॥**

---

೭. ಪೂರ್ವದಲ್ಲಿಯೇ ಇಪ್ಪತ್ತೆಂಟು ಕಲ್ಪಗಳ ನಾಮಗಳನ್ನು ತಿಳಿಸಿರುತ್ತೇನೆ. ಅವುಗಳ ಕಲ್ಪಸಂಖ್ಯೆಯನ್ನೂ ಸಹ ಮುಂದೆ ಕ್ರಮವಾಗಿ ಹೇಳುವೆನು.

೮. ರಥಂತರವೆಂಬ ಸಾಮದ ವಿಚಾರವನ್ನು ಮುಂದೆ ತಿಳಿಸುವೆನು. ಆಗ ಆ ವಿಷಯಗಳನ್ನು ತಿಳಿಯಿರಿ. ಮತ್ತು ಕಲ್ಪದ ಕೊನೆಯಲ್ಲಿ ಯಾವ ಯಾವ ನಾಮಗಳು ಬಂದಿವೆಯೋ ಮತ್ತು ಏತರಿಂದ ಯಾವ ಯಾವ ಮಂತ್ರಗಳು ಹುಟ್ಟಿವೆಯೋ ಅವೆಲ್ಲವನ್ನೂ ನಿಮಗಾಗಿ ಮುಂದೆ ತಿಳಿಸುವೆನು.

೯. ಹತ್ತೊಂಬತ್ತನೆಯ ಕಲ್ಪವನ್ನು ಶ್ವೇತಲೋಹಿತಕಲ್ಪವೆಂದು ತಿಳಿಯಬೇಕು. ಆ ಕಲ್ಪದಲ್ಲಿ ಧ್ಯಾನಮಾಡತಕ್ಕ ಬ್ರಹ್ಮದೇವನಿಗೆ ಧ್ಯಾನಾನುಗುಣವಾದ ಫಲವು ಉಂಟಾಗಿರುವುದು.

೧೦. ಬ್ರಹ್ಮದೇವನು ಶ್ವೇತಲೋಹಿತಕಲ್ಪದಲ್ಲಿ ಧ್ಯಾನಮಾಡಲು ಅವನಿಗೆ ಶುಭ್ರವಾದ ರುಮಾಲು, ಹಾರ, ವಸ್ತ್ರ ಮತ್ತು ಕೇಶ ಇವುಗಳುಳ್ಳವನೂ, ಮಹಾತೇಜಸ್ವಿಯೂ, ಅಗ್ನಿಗೆ ಸಮಾನನೂ ಆದ ಕುಮಾರನು ಜನಿಸಿದನು.

೧೧-೧೩. ಚತುರ್ಮುಖನೂ, ಲೋಕಪಿತಾಮಹನೂ, ಮಹದೈಶ್ವರ್ಯವಂತನೂ, ಪುರಾಣಪುರುಷನೂ ಆದ ಬ್ರಹ್ಮದೇವನು, ಭಯಂಕರಮುಖಿಯೂ

ತಂ ದೃಷ್ಟ್ವಾ ಪುರುಷಃ ಶ್ರೀಮಾನ್ ಬ್ರಹ್ಮಾ ವೈ ವಿಶ್ವತೋ ಮುಖಃ ।
ಕುಮಾರಂ ಲೋಕಧಾತಾರಂ ವಿಶ್ವರೂಪಂ ಮಹೇಶ್ವರಂ ॥ ೧೨ ॥

ಪುರಾಣಪುರುಷಂ ದೇವಂ ವಿಶ್ವಾತ್ಮಾ ಯೋಗಿನಾಂ ಚಿರಂ ।
ವವಂದೇ ದೇವ ದೇವೇಶಂ ಬ್ರಹ್ಮಾ ಲೋಕಪಿತಾಮಹಃ ॥ ೧೩ ॥

ಹೃದಿ ಕೃತ್ವಾ ಮಹಾದೇವಂ ಪರಮಾತ್ಮಾನಮೀಶ್ವರಂ ।
ಸದ್ಯೋಜಾತಂ ತತೋ ಬ್ರಹ್ಮ ಬ್ರಹ್ಮಾ ವೈ ಸಮಚಿಂತಯತ್ ॥
ಜ್ಞಾತ್ವಾ ಮುಮೋಚ ದೇವೇಶೋ ಹೃಷ್ಟೋ ಹಾಸಂ ಜಗತ್ಪತಿಃ ॥ ೧೪ ॥

ತತೋಸ್ಯ ಪಾರ್ಶ್ವತಃ ಶ್ವೇತಾ ಋಷಯೋ ಬ್ರಹ್ಮವರ್ಚಸಃ ।
ಪ್ರಾದುರ್ಭೂತಾ ಮಹಾತ್ಮಾನಃ ಶ್ವೇತಮಾಲ್ಯಾನುಲೇಪನಾಃ ॥ ೧೫ ॥

ಸುನಂದೋ ನಂದಕಶ್ಚೈವ ವಿಶ್ವನಂದೋಥ ನಂದನಃ ।
ಶಿಷ್ಯಾಸ್ತೇ ವೈ ಮಹಾತ್ಮಾನೋ ಯೈಸ್ತು ಬ್ರಹ್ಮ ತತೋ ವೃತಂ ॥ ೧೬ ॥

---

ಭಯಂಕರರೂಪಿಯೂ, ಘೋರಾಕಾರನೂ, ಬಿಳುಪು ಮತ್ತು ಕೆಂಪುಮಿಶ್ರವಾದ ಬಣ್ಣವುಳ್ಳವನೂ, ದಿವ್ಯತೇಜಸ್ಸಿನಿಂದ ಪ್ರಕಾಶಿಸುವವನೂ, ವಿಶಾಲಮುಖಿಯೂ, ಲೋಕಾಧಾರಕನೂ, ವಿಶ್ವರೂಪಿಯೂ , ಪುರಾಣಪುರುಷನೂ, ಯೋಗಿಗಮ್ಯನೂ, ದೇವದೇವೇಶನೂ ಆದ ಪುತ್ರನನ್ನು ನೋಡಿ ಆನಂದದಿಂದ ಅವನಿಗೆ ನಮಸ್ಕಾರ ಮಾಡಿದನು.

೧೪. ಅನಂತರ ಬ್ರಹ್ಮನು ಪರಮಾತ್ಮನೂ, ಐಶ್ವರ್ಯವಂತನೂ, ಮಹಾದೇವನೂ ಆದ ಪುತ್ರನನ್ನು ಹೃದಯದಲ್ಲಿ ಆಲಿಂಗಿಸಿ ಯೋಚನೆಮಾಡಿದನು. ಹೀಗೆ ಯೋಚಿಸಿ ಪುತ್ರನನ್ನು ಕೆಳಗೆ ಬಿಟ್ಟು ಸಂತೋಷವನ್ನು ಹೊಂದಿದನು.

೧೫. ಹೀಗೆ ಬ್ರಹ್ಮದೇವನು ಸುತನನ್ನು ಕೆಳಗೆ ಬಿಡಲು ಕೂಡಲೇ ಅವನ ಇಷ್ಟಾನುಸಾರವಾಗಿ ಅವನ ಪಾರ್ಶ್ವಗಳಿಂದ ಅನುಲೇಪನ, ಶ್ವೇತರೂಪು, ಬ್ರಹ್ಮ ತೇಜಸ್ಸು, ಶುಕ್ಲವಾದಮಾಲೆ, ಇವುಗಳುಳ್ಳವರೂ, ಮಹಾತ್ಮರೂ ಆದ ಮಹರ್ಷಿಗಳು ಜನಿಸಿದರು.

೧೬. ಅನಂತರ ಸುನಂದ, ನಂದಕ, ವಿಶ್ವನಂದ, ನಂದನರೆಂಬ ಮಹಾತ್ಮರಾದ ಶಿಷ್ಯರು ಜನಿಸಿ ಆ ಬ್ರಹ್ಮದೇವನನ್ನು ಆವರಿಸಿಕೊಂಡು ಕುಳಿತರು.

ತಸ್ಯಾಗ್ರೇ ಶ್ವೇತವರ್ಣಾಭಃ ಶ್ವೇತನಾಮಾ ಮಹಾಮುನಿಃ ।
ವಿಜಜ್ಞೇಥ ಮಹಾತೇಜಾ ಯಸ್ಮಾಜ್ಜಜ್ಞೇ ನರಸ್ತ್ವಸೌ ॥ ೧೭ ॥

ತತ್ರ ತೇ ಋಷಯಃ ಸರ್ವೇ ಸದ್ಯೋಜಾತಂ ಮಹೇಶ್ವರಂ ।
ತಸ್ಮಾದ್ವಿಶ್ವೇಶ್ವರಂ ದೇವಂ ಯೇ ಪ್ರಪಶ್ಯಂತಿ ವೈ ದ್ವಿಜಾಃ ॥
ಪ್ರಾಣಾಯಾಮಪರಾ ಯುಕ್ತಾ ಬ್ರಹ್ಮಣಿ ವ್ಯವಸಾಯಿನಃ ॥ ೧೮ ॥

ತೇ ಸರ್ವೇ ಪಾಪನಿರ್ಮುಕ್ತಾ ವಿಮಲಾ ಬ್ರಹ್ಮವರ್ಚಸಃ ।
ಬ್ರಹಲೋಕಮತಿಕ್ರಮ್ಯ ಬ್ರಹ್ಮಲೋಕಂ ವ್ರಜಂತಿ ಚ ॥ ೧೯ ॥

॥ ವಾಯುರುವಾಚ ॥

ತತಸ್ತ್ರಿಂಶತ್ತಮಃ ಕಲ್ಪೋ ರಕ್ತೋ ನಾಮ ಪ್ರಕೀರ್ತಿತಃ ।
ರಕ್ತೋ ಯತ್ರ ಮಹಾತೇಜಾ ರಕ್ತವರ್ಣಮಧಾರಯತ್ ॥ ೨೦ ॥

---

೧೭. ಆ ಈಶ್ವರನ ಅಗ್ರದಲ್ಲಿಯೇ ಶುಕ್ಲವರ್ಣನೂ, ಶ್ವೇತನಾಮಕನೂ ಆದ ಮಹರ್ಷಿಯು ಜನಿಸಿದನು. ಆ ಮುನಿಯಿಂದ ಲೋಕವಿಖ್ಯಾತನಾದ ನರನಾಮಕ ಪುರುಷನು ಹುಟ್ಟಿದನು.

೧೮. ಅನಂತರ ಪ್ರಾಣಾಯಾಮನಿರತರೂ, ಬ್ರಹ್ಮವಿಚಾರಪರರೂ ಆದ ಬ್ರಾಹ್ಮಣರು ಮತ್ತು ಋಷಿಗಳು ಆಗಲೇ ಜನಿಸಿದ ದೇವದೇವೇಶನಾದ ಪರಮೇಶ್ವರನನ್ನು ನೋಡಿ ಪರಮಭಕ್ತಿಯಿಂದ ಹೊಗಳಿದರು.

೧೯. ಹೀಗೆ ಸ್ತೋತ್ರಮಾಡಿದ ಬ್ರಹ್ಮಜ್ಞಾನಿಗಳೆಲ್ಲರೂ ಪಾಪಗಳಿಂದ ಮುಕ್ತರೂ, ವಿಮಲರೂ ಆಗಿ ಚತುರ್ಮುಖಬ್ರಹ್ಮಲೋಕವನ್ನು ಅತಿಕ್ರಮಿಸಿ ಶಾಶ್ವತವಾದ ಪರಮಪದವಿಯನ್ನು ಪಡೆದರು.

೨೦. ವಾಯುದೇವನು ಹೇಳಿದನು:—ಅನಂತರ ಮೂವತ್ತನೆಯ ರಕ್ತನಾಮಕಕಲ್ಪವು ಉಂಟಾಗಲು ರಕ್ತನಾಮಕನೂ, ಮಹಾತೇಜಸ್ವಿಯೂ ಆದ ಭಗವಂತನು ಉದ್ಭವಿಸಿ ರಕ್ತಮಯವಾದ ಕಾಂತಿಯನ್ನು ಪಡೆದನು.

ಧ್ಯಾಯತಃ ಪುತ್ರಕಾಮಸ್ಯ ಬ್ರಹ್ಮಣಃ ಪರಮೇಷ್ಠಿನಃ ।
ಪ್ರಾದುರ್ಭೂತೋ ಮಹಾತೇಜಾಃ ಕುಮಾರೋ ರಕ್ತವಿಗ್ರಹಃ ॥
ರಕ್ತಮಾಲ್ಯಾಂಬರಧರೋ ರಕ್ತನೇತ್ರಃ ಪ್ರತಾಪವಾನ್ ॥ ೨೧ ॥

ಸ ತಂ ದೃಷ್ಟ್ವಾ ಮಹಾದೇವಂ ಕುಮಾರಂ ರಕ್ತವಾಸಸಂ ।
ಧ್ಯಾನಯೋಗಂ ಪರಂಗತ್ವಾ ಬುಬುಧೇ ವಿಶ್ವಮಾಶ್ವರಂ ॥ ೨೨ ॥

ಸ ತಂ ಪ್ರಣಮ್ಯ ಭಗವಾನ್ ಬ್ರಹ್ಮಾ ಪರಮಯಂತ್ರಿತಃ ।
ವಾಮದೇವಂ ತತೋ ಬ್ರಹ್ಮಾ ಬ್ರಹ್ಮಾತ್ಮಕಂ ವ್ಯಚಿಂತಯತ್ ॥ ೨೩ ॥

ಏವಂ ಧ್ಯಾತೋ ಮಹಾದೇವೋ ಬ್ರಹ್ಮಣಾ ಪರಮೇಷ್ಠಿನಾ ।
ಮನಸಾ ಪ್ರೀತಿಯುಕ್ತೇನ ಪಿತಾಮಹಮಥಾಬ್ರವೀತ್ ॥ ೨೪ ॥

ಧ್ಯಾಯತಾ ಪುತ್ರಕಾಮೇನ ಯಸ್ಮಾತ್ತೇಹಂ ಪಿತಾಮಹ ।
ದೃಷ್ಟಃ ಪರಮಯಾ ಭಕ್ತ್ಯಾ ಧ್ಯಾನಯೋಗೇನ ಸತ್ತಮ ॥ ೨೫ ॥

---

೨೧. ಪುತ್ರಾಪೇಕ್ಷೆಯಿಂದ ಧ್ಯಾನಮಾಡಿದ ಬ್ರಹ್ಮದೇವನಿಗೆ ಮಹಾ ತೇಜಸ್ವಿಯೂ, ರಕ್ತವಾದ ಶರೀರ, ಮಾಲೆ, ವಸ್ತ್ರ, ನೇತ್ರ ಇವುಗಳುಳ್ಳವನೂ ಮತ್ತು ಪರಾಕ್ರಮಿಯೂ ಆದ ಪುತ್ರನು ಜನಿಸಿದನು.

೨೨. ಆಗ ಬ್ರಹ್ಮನು ರಕ್ತವಸ್ತ್ರಧಾರಿಯೂ ಮಹಾದೇವನೂ ಆದ ಕುಮಾರನನ್ನು ನೋಡಿ, ಧ್ಯಾನಯೋಗದಿಂದ ಆ ವಿಶ್ವೇಶ್ವರನೇ ಪುತ್ರರೂಪದಿಂದ ಅವತರಿಸಿರುವನೆಂದು ತಿಳಿದನು.

೨೩. ಅನಂತರ ಪೂಜ್ಯನಾದ ಬ್ರಹ್ಮದೇವನು ಪರಮಭಕ್ತಿಯಿಂದ ಅವನಿಗೆ ನಮಸ್ಕರಿಸಿ ಅವನನ್ನು ವಾಮದೇವನಾಮಕನಾದ ಸಾಕ್ಷಾತ್ ಪರಬ್ರಹ್ಮನೆಂದು ಭಾವಿಸಿ. ಧ್ಯಾನಮಾಡಿದನು.

೨೪. ಬ್ರಹ್ಮದೇವನು ಹೀಗೆ ಈಶ್ವರನನ್ನು ಧ್ಯಾನಮಾಡಲಾಗಿ ಆ ಪರಮೇಶ್ವರನು ಪ್ರೀತಿಯುಕ್ತನಾಗಿ ಪಿತಾಮಹನನ್ನು ಕುರಿತು ಇಂತೆಂದನು.

೨೫. ಎಲೈ ಬ್ರಹ್ಮದೇವನೇ, ಪುತ್ರಕಾಮನಾದ ನೀನು ಪರಮಭಕ್ತಿಯಿಂದ ನನ್ನನ್ನು ಧ್ಯಾನಮಾಡಿರುತ್ತೀಯೆ, ನಿನ್ನ ಧ್ಯಾನಕ್ಕೆ ಮೆಚ್ಚಿದ ನಾನು ಅವತರಿಸಿರುತ್ತೇನೆ. ನನ್ನ ವಚನವನ್ನು ಕೇಳು ಎಂದನು

ತಸ್ಮಾದ್ಧ್ಯಾನಂ ಪರಂ ಪ್ರಾಪ್ಯ ಕಲ್ಪೇ ಕಲ್ಪೇ ಮಹಾತಪಾಃ ।
ವೇತ್ಸ್ಯಸೇ ಮಾಂ ಮಹಾಸತ್ವ ಲೋಕಧಾತಾರಮೀಶ್ವರಂ ॥
ಏವಮುಕ್ತ್ವಾ ತತಃ ಶರ್ವಃ ಅಟ್ಟಹಾಸಂ ಮುಮೋಚ ಹ ॥ ೨೬ ॥

ತತಸ್ತಸ್ಯ ಮಹಾತ್ಮಾನ ಶ್ಚತ್ವಾರಶ್ಚ ಕುಮಾರಕಾಃ ।
ಸಂಬಭೂವು ರ್ಮಹಾತ್ಮಾನೋ ವಿರೇಜುಃ ಶುದ್ಧಬುದ್ಧಯಃ ॥ ೨೭ ॥

ವಿರಜಶ್ಚ ವಿವಾಹಶ್ಚ ವಿಶೋಕೋ ವಿಶ್ವಭಾವನಃ ।
ಬ್ರಹ್ಮಣ್ಯಾ ಬ್ರಹ್ಮಣಃ ಸ್ತುಲ್ಯಾ ವೀರಾ ಅಧ್ಯವಸಾಯಿನಃ ॥ ೨೮ ॥

ರಕ್ತಾಂಬರಧರಾಃ ಸರ್ವೇ ರಕ್ತಮಾಲ್ಯಾನುಲೇಪನಾಃ ।
ರಕ್ತ ಭಸ್ಮಾನುಲಿಪ್ತಾಂಗಾ ರಕ್ತಾಸ್ಯಾ ರಕ್ತಲೋಚನಾಃ ॥ ೨೯ ॥

ತತೋ ವರ್ಷ ಸಹಸ್ರಾಂತೇ ಬ್ರಹ್ಮಣ್ಯಾ ವ್ಯವಸಾಯಿನಃ ।
ಗೃಣಂತಶ್ಚ ಮಹಾತ್ಮಾನೋ ಬ್ರಹ್ಮ ತದ್ವಾಮದೈವಕಂ ॥ ೩೦ ॥

---

೨೬. "ಆದುದರಿಂದ ನೀನು ಪ್ರತಿಕಲ್ಪದಲ್ಲಿಯೂ, ಮಹಾತಪಸ್ವಿಯಾಗಿ" ಧ್ಯಾನವನ್ನು ಮಾಡಿ ಲೋಕಾಧಾರನೂ, ಈಶ್ವರನೂ ಆದ ನನ್ನನ್ನು ತಿಳಿಯುವನಾಗು ಎಂದು ಹೇಳಿ ಈಶ್ವರನು ಅಟ್ಟಹಾಸಮಾಡಿದನು.

೨೭-೨೮. ಅನಂತರ ಬ್ರಹ್ಮದೇವನಿಗೆ ಮಹಾತ್ಮರೂ, ಪರಮಶುದ್ಧಬುದ್ಧಿಯುಳ್ಳವರೂ, ಬ್ರಹ್ಮನಿಗೆ ಸಮರೂ, ಶೂರರೂ, ಧ್ಯಾನಪರಾಯಣರೂ ಆದ ವಿರಜ, ವಿವಾಹ, ವಿಶೋಕ, ವಿಶ್ವಭಾವನರೆಂಬ ನಾಲ್ಕುಜನ ಮಕ್ಕಳು ಹುಟ್ಟಿದರು.

೨೯. ಅವರೆಲ್ಲರೂ ರಕ್ತಾಂಬರಧಾರಿಗಳೂ, ರಕ್ತವಾದ ಗಂಧಪುಷ್ಪಮಾಲೆಗಳುಳ್ಳವರೂ, ರಕ್ತಭಸ್ಮದಿಂದ ಲಿಪ್ತವಾದ ಶರೀರವುಳ್ಳವರೂ, ರಕ್ತವಾದ ಮುಖನೇತ್ರಗಳುಳ್ಳವರೂ, ಆಗಿದ್ದರು.

೩೦. ಅನಂತರ ಒಂದು ಸಹಸ್ರವರ್ಷಗಳಾದ ತರುವಾಯ ಬ್ರಹ್ಮಜ್ಞಾನಿಗಳೂ ಧ್ಯಾನಿಗಳೂ ಆದ ಮಹಾತ್ಮರು ಆ ವಾಮದೇವನನ್ನು ಹೊಗಳುತ್ತಾ ಧ್ಯಾನ ಮಾಡಿದರು.

**ಅನುಗ್ರಹಾರ್ಥಂ ಲೋಕಾನಾಂ ಶಿಷ್ಯಾಣಾಂ ಹಿತಕಾಮ್ಯಯಾ ।**
**ಧರ್ಮೋಪದೇಶಮಖಿಲಂ ಕೃತ್ವಾ ತೇ ಬ್ರಾಹ್ಮಣಾಃ ಸ್ವಯಂ ॥**
**ಪುನರೇವ ಮಹಾದೇವಂ ಪ್ರವಿಷ್ಟಾರುದ್ರಮವ್ಯಯಂ ॥ ೩೧ ॥**

**ಯೇಽಪಿ ಚಾನ್ಯೇ ದ್ವಿಜಶ್ರೇಷ್ಠಾ ಯುಂಜಾನಾ ವಾಮಮೀಶ್ವರಂ ।**
**ಪ್ರಪದ್ಯಂತಿ ಮಹಾದೇವಂ ತದ್ಭಕ್ತಾಸ್ತತ್ಪರಾಯಣಾಃ ॥ ೩೨ ॥**

**ತೇ ಸರ್ವೇ ಪಾಪನಿರ್ಮುಕ್ತಾ ವಿಮಲಾ ಬ್ರಹ್ಮವರ್ಚಸಃ ।**
**ರುದ್ರಲೋಕಂ ಗಮಿಷ್ಯಂತಿ ಪುನರಾವೃತ್ತಿದುರ್ಲಭಂ ॥ ೩೩ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಕಲ್ಪಸಂಖ್ಯಾ ನಿರೂಪಣಂ" ನಾಮ ದ್ವಾವಿಂಶೋಽಧ್ಯಾಯಃ**

---

೩೧. ಆ ಮಹರ್ಷಿಗಳು ಲೋಕಕಲ್ಯಾಣಕ್ಕಾಗಿಯೂ, ಶಿಷ್ಯಹಿತಕ್ಕಾಗಿಯೂ, ಸಮಸ್ತವಾದ ಧರ್ಮೋಪದೇಶಗಳನ್ನು ಕೇಳಿ, ದೇವನೂ ನಾಶರಹಿತನೂ ಆದ ಮಹಾ ದೇವನನ್ನು ಹೊಂದಿದರು.

೩೨. ಅನ್ಯರಾದ ಬ್ರಾಹ್ಮಣರೂ ಕೂಡ ಯೋಗಾಭ್ಯಾಸದಿಂದ ಆ ವಾಮದೇವ ನನ್ನು ಧ್ಯಾನಿಸಿ ಅವನ ಭಕ್ತರೂ, ಅವನಲ್ಲಿ ಆಸಕ್ತಿಯುಳ್ಳವರೂ, ಆಗಿ ಅವನನ್ನೇ ಹೊಂದುವರು.

೩೩. ಹೀಗೆ ಧ್ಯಾನಮಾಡಿದ ಭಕ್ತರೆಲ್ಲರೂ. ಪಾಪಮುಕ್ತರೂ, ದೋಷರಹಿ ತರೂ, ಬ್ರಹ್ಮವರ್ಚಸ್ವಿಗಳೂ, ಆಗಿ ಪುನರಾವೃತ್ತಿರಹಿತವಾದ ರುದ್ರಲೋಕವನ್ನು ಹೊಂದುವರು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಕಲ್ಪಸಂಖ್ಯಾ ನಿರೂಪಣ"ವೆಂಬ ಇಪ್ಪತ್ತೆರಡನೆಯ ಅಧ್ಯಾಯವು ಸಮಾಪ್ತವು.

## ಇಪ್ಪತ್ತೆರಡನೆಯ ಅಧ್ಯಾಯದ ಸಾರಾಂಶವು

ಕಲ್ಪಗಳ ವಿವರ, ಬ್ರಹ್ಮನ ಕಾಲಪರಿಮಾಣ, ಈ ವಿಷಯಗಳು ಉಕ್ತವಾಗಿವೆ. ಮನುಷ್ಯರ ಒಂದು ಸಹಸ್ರವರ್ಷಗಳು (ಕಲ್ಪಗಳು) ಬ್ರಹ್ಮನಿಗೆ ಒಂದು ವರ್ಷವು. ಅದು ಎಂಟು ಸಹಸ್ರಗಳಾದರೆ ಬ್ರಹ್ಮನಿಗೆ ಒಂದು ಯುಗವು. ಅಂತಹ ಸಹಸ್ರ ಯುಗಗಳಾದರೆ ಸವನವಾಗುವುದು. ಅಂತಹ ಸವನ ಸಹಸ್ರವು ಎರಡು ಮೂರರಿಂದ ಗುಣಿತವಾದರೆ ಅದು ಬ್ರಹ್ಮನ ಸ್ಥಿತಿಕಾಲವು. ಹತ್ತೊಂಬತ್ತು ಕಲ್ಪಗಳು ಶ್ವೇತಲೋಹಿತ ಕಲ್ಪಗಳು. ಆಗ ಬ್ರಹ್ಮನು ಧ್ಯಾನಮಾಡಲು ಶ್ವೇತಮಾಲಾದಿಗಳನ್ನು ಧರಿಸಿರುವವರೂ, ಅಗ್ನಿಗೆ ಸಮಾನರೂ ಆದ ಕುಮಾರರನ್ನು ನೋಡಿ ನಾನಾರೀತಿಯಾಗಿ ಹೊಗಳಿ ನಮಸ್ಕಾರ ಮಾಡಿದನು. ಆಗ ಅವನು ಅಟ್ಟಹಾಸಮಾಡಲಾಗಿ ಮಹಾನುಭಾವರಾದ ಮಹರ್ಷಿಗಳು ಸುನಂದಾದಿನಾಮಗಳಿಂದ ಜನಿಸಿ ಬ್ರಹ್ಮನನ್ನು ಹೊಗಳಿದರು. ಅವರು ಲೋಕಕರ್ತನಾದ ವಿಶ್ವೇಶ್ವರನನ್ನು ಭಜನೆಮಾಡಿ ಪಾಪಗಳಿಂದ ವಿಮುಕ್ತರಾಗಿ ಶಾಶ್ವತ ಪದವಿಯನ್ನು ಹೊಂದಿದರು. ಮೂವತ್ತನೆಯ ಕಲ್ಪವು ರಕ್ತನಾಮಕ ಕಲ್ಪವಾಗಿದೆ. ಆಗ ರಕ್ತರೂಪಿಯಾದ ಪರಮೇಶ್ವರನು ಅವತರಿಸಿದನು. ಅವನನ್ನು ಬ್ರಹ್ಮದೇವನು ಸ್ತೋತ್ರಮಾಡಿದನು. ಆಗ ಅಟ್ಟಹಾಸವಾಗಲು ವಿರಜಾದಿನಾಮಕಕುಮಾರರು ಜನಿಸಿದರು. ಅವರೆಲ್ಲರೂ ರಕ್ತಮಯಗಳಾದ ವಸ್ತ್ರಭೂಷಣಾದಿಗಳುಳ್ಳವರಾಗಿ ಪರಮಾತ್ಮನನ್ನು ಪರಮಯೋಗದಿಂದ ಧ್ಯಾನಿಸಿ ಪಾಪಗಳಿಂದ ಮುಕ್ತರಾಗಿ ಪುನರಾವೃತ್ತಿರಹಿತವಾದ ರುದ್ರದೇವನ ಲೋಕವನ್ನು ಹೊಂದುವರು ಎಂಬ ವಿಷಯಗಳು ಈ ಅಧ್ಯಾಯದಲ್ಲಿ ಉಕ್ತವಾಗಿವೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ತ್ರಯೋವಿಂಶೋಽಧ್ಯಾಯಃ

॥ ವಾಯುರುವಾಚ ॥

ಏಕತ್ರಿಂಶತ್ತಮಃ ಕಲ್ಪಃ ಪೀತವಾಸಾ ಇತಿ ಸ್ಮೃತಃ ।
ಬ್ರಹ್ಮಾ ಯತ್ರ ಮಹಾತೇಜಾಃ ಪೀತವರ್ಣತ್ವಮಾಗತಃ ॥ ೧ ॥

ಧ್ಯಾಯತಃ ಪುತ್ರಕಾಮಸ್ಯ ಬ್ರಹ್ಮಣಃ ಪರಮೇಷ್ಠಿನಃ ।
ಪ್ರಾದುರ್ಭೂತೋ ಮಹಾತೇಜಾಃ ಕುಮಾರಃ ಪೀತವಸ್ತ್ರವಾನ್ ॥ ೨ ॥

---

## ಇಪ್ಪತ್ತಮೂರನೆಯ ಅಧ್ಯಾಯವು

೧. ವಾಯುದೇವನು ಹೇಳಿದನು:—ಮೂವತ್ತೊಂದನೆಯ ಕಲ್ಪಕ್ಕೆ "ಪೀತವಾಸಸ" ಎಂಬ ನಾಮವು ಪ್ರಾಪ್ತವಾಗಿದೆ. ಏಕೆಂದರೆ ಆ ಕಲ್ಪದಲ್ಲಿ ಮಹಾತೇಜಸ್ವಿಯಾದ ಬ್ರಹ್ಮದೇವನು ಹಳದೀವರ್ಣದ ಶರೀರವನ್ನು ಹೊಂದಿರುವನು, ಇದರಿಂದ ಈ ಕಲ್ಪಕ್ಕೆ ಈ ಹೆಸರು ಬಂದಿದೆ.

೨. ಆ ಕಲ್ಪದಲ್ಲಿಯೂ ಪುತ್ರಾಪೇಕ್ಷೆಯಿಂದ ಧ್ಯಾನಮಾಡತಕ್ಕ ಪರಮಪುರುಷನಾದ ಬ್ರಹ್ಮದೇವನಿಗೆ ಅತಿ ತೇಜಸ್ವಿಯೂ ಪೀತಾಂಬರಧಾರಿಯೂ ಆದ ಕುಮಾರನು ಜನಿಸಿದನು.

ಪೀತಗಂಧಾನುಲಿಪ್ತಾಂಗಃ ಪೀತಮಾಲ್ಯಧರೋ ಯುವಾ ।
ಪೀತ ಯಜ್ಞೋಪವೀತಶ್ಚ ಪೀತೋಷ್ಣೀಷೋ ಮಹಾಭುಜಃ ॥ ೩ ॥

ತಂ ದೃಷ್ಟ್ವಾ ಧ್ಯಾನಸಂಯುಕ್ತಂ ಬ್ರಹ್ಮಾ ಲೋಕೇಶ್ವರಂ ಪ್ರಭುಂ ।
ಮನಸಾ ಲೋಕ ಧಾತಾರಂ ವವಂದೇ ಪರಮೇಶ್ವರಂ ॥ ೪ ॥

ತತೋ ಧ್ಯಾನಗತಸ್ತತ್ರ ಬ್ರಹ್ಮಾ ಮಾಹೇಶ್ವರೀಂ ಪರಾಂ ।
ಅಪಶ್ಯತ್ ಗಾಂ ವಿರೂಪಾಂ ಚ ಮಹೇಶ್ವರಮುಖಚ್ಯುತಾಂ ॥ ೫ ॥

ಚತುಷ್ಪಾದಾಂ ಚತುರ್ವಕ್ತ್ರಾಂ ಚತುರ್ಹಸ್ತಾಂ ಚತುಃಸ್ತನೀಂ ।
ಚತುರ್ನೇತ್ರಾಂ ಚತುಃಶೃಂಗೀಂ ಚತುರ್ದಂಷ್ಟ್ರಾಂ ಚತುರ್ಮುಖೀಂ ॥
ದ್ವಾತ್ರಿಂಶಲ್ಲೋಕ ಸಂಯುಕ್ತಾಮೀಶ್ವರೀಂ ಸರ್ವತೋ ಮುಖೀಂ ॥ ೬ ॥

ಸ ತಾಂ ದೃಷ್ಟ್ವಾ ಮಹಾತೇಜಾಃ ಮಹಾದೇವೀಂ ಮಹೇಶ್ವರೀಂ ।
ಪುನರಾಹ ಮಹಾದೇವಃ ಸರ್ವದೇವ ನಮಸ್ಕೃತಃ ॥ ೭ ॥

---

೩. ಮತ್ತು ಆ ಕುಮಾರನು ಹಳದಿಯಾದ ಗಂಧ, ಹಾರ, ಯಜ್ಞೋಪವೀತ ಮತ್ತು ರುಮಾಲು ಇವುಗಳುಳ್ಳವನೂ, ಯುವಕನೂ, ಆಜಾನುಬಾಹುವೂ, ಆಗಿದ್ದನು. ಆದುದರಿಂದ ಆ ಯುಗಕ್ಕೆ " ಪೀತಕಲ್ಪ "ವೆಂಬ ಸಂಜ್ಞೆಯು ಉಂಟಾಗಿದೆ.

೪. ಆಗ ಬ್ರಹ್ಮದೇವನು ಧ್ಯಾನಾಸಕ್ತನೂ, ಲೋಕನಾಥನೂ, ಸ್ವಾಮಿಯೂ ಆದ ಆ ಕುಮಾರನನ್ನು ನೋಡಿ, ಮನಸ್ಸಿನಲ್ಲಿ ಇವನೇ ಲೋಕಧಾರಕನಾದ ಪರಮೇಶ್ವರನೆಂದು ತಿಳಿದು ಅವನಿಗೆ ನಮಸ್ಕಾರ ಮಾಡಿದನು.

೫-೬. ಅನಂತರ ಬ್ರಹ್ಮದೇವನು ಧ್ಯಾನಮಾಡಲಾಗಿ, ಆ ಪರಮೇಶ್ವರನ ಮುಖದಿಂದ ಹೊರಟ ಮಾತನ್ನು ಕೇಳಿದನು. ತರುವಾಯ ಉತ್ತಮಳೂ, ವಿರೂಪಳೂ, ನಾಲ್ಕಾದ ಹಸ್ತ, ಪಾದ, ಮುಖ, ನೇತ್ರ, ಸ್ತನ, ಶೃಂಗ, ದಂತ, ಇವುಗಳುಳ್ಳವಳೂ ಸರ್ವತೋಮುಖಿಯೂ ಆದ ಈಶ್ವರನ ರಾಣಿಯನ್ನು ನೋಡಿ ಇಂತೆಂದನು.

೭. ಆಗ ಮಹಾತೇಜಸ್ವಿಯೂ, ಸಮಸ್ತದೇವವಂದಿತನೂ, ಆದ ಮಹಾದೇವನು, ಮಹಾದೇವಿಯಾದ ತನ್ನ ರಾಣಿಯನ್ನು ನೋಡಿ ಇಂತೆಂದನು.

ಮತಿಃ ಸ್ಮೃತಿರ್ಬುದ್ಧಿರಿತಿ ಗಾಯಮಾನಃ ಪುನಃ ಪುನಃ ।
ಏಹ್ಯೇಹೀತಿ ಮಹಾದೇವೀ ಸೋತ್ತಿಷ್ಠತ್ ಪ್ರಾಂಜಲಿರ್ಭೃಶಂ ॥ ೮ ॥

ವಿಶ್ವಮಾವೃತ್ಯ ಯೋಗೇನ ಜಗತ್ಸರ್ವಂ ವಶೀಕುರು ।
ಅಥವಾ ಮಹಾದೇವೇನ ರುದ್ರಾಣೀ ತ್ವಂ ಭವಿಷ್ಯಸಿ ॥
ಬ್ರಾಹ್ಮಣಾನಾಂ ಹಿತಾರ್ಥಾಯ ಪರಮಾರ್ಥಂ ಭವಿಷ್ಯಸಿ ॥ ೯ ॥

ಅಥೈನಾಂ ಪುತ್ರಕಾಮಸ್ಯ ಧ್ಯಾಯತಃ ಪರಮೇಷ್ಠಿನಃ ।
ಪ್ರದದೌ ದೇವದೇವೇಶಶ್ಚತುಷ್ಪಾದಾಂ ಮಹೇಶ್ವರೀಂ ॥
ತತಸ್ತಾಂ ಧ್ಯಾನಯೋಗೇನ ವಿದಿತ್ವಾ ಪರಮೇಶ್ವರೀಂ ॥ ೧೦ ॥

ಬ್ರಹ್ಮಾ ಲೋಕನಮಸ್ಕಾರ್ಯಃ ಪ್ರಪದ್ಯ ತಾಂ ಮಹೇಶ್ವರೀಂ ।
ಗಾಯತ್ರೀಂ ತು ತತೋ ರೌದ್ರೀಂ ಧ್ಯಾತ್ವಾ ಬ್ರಹ್ಮಾ ಸುಯಂತ್ರಿತಃ॥ ೧೧ ॥

---

೮. ಆಗ ಬ್ರಹ್ಮನು ಆ ದೇವಿಯನ್ನು ಮತಿ, ಸ್ಮೃತಿ, ಬುದ್ಧಿಯೆಂಬುದಾಗಿ ಪದೇ ಪದೇ ಸ್ತೋತ್ರಮಾಡಿದನು. ಆಗ ಆ ಮಹಾದೇವಿಯು, " ಪುತ್ರನೇ ಬಾ" ಎಂದು ಹೇಳಿ ಎದ್ದು ನಿಂತಳು. ಆಗ ಅವನು ಕೈಗಳನ್ನು ಮುಗಿದುಕೊಂಡು ಇಂತೆಂದನು.

೯. ನೀನು ಯೋಗಾಭ್ಯಾಸದಿಂದ ವ್ಯಾಪ್ತಳಾಗಿ ಜಗತ್ತೆಲ್ಲವನ್ನೂ ವಶ ಮಾಡಿಕೋ. ಅಥವಾ ಮಹಾದೇವನಿಂದ ವರಿಸಲ್ಪಟ್ಟವಳಾಗಿ ರುದ್ರಾಣಿಯಾಗು ಮತ್ತು ಬ್ರಾಹ್ಮಣರ ಹಿತಕ್ಕಾಗಿ ಅವರಿಂದ ಧ್ಯಾನಿಸಲ್ಪಟ್ಟು ಅವರಿಗೆ ಪರಮ ಕಲ್ಯಾಣ ವನ್ನು ಉಂಟುಮಾಡು ಎಂದು ಪ್ರಾರ್ಥಿಸಿದನು.

೧೦. ಅನಂತರ ಬ್ರಹ್ಮದೇವನು ಪುನಃ ಪುತ್ರಾಕಾಂಕ್ಷೆಯಿಂದ ಆಕೆಯನ್ನು ಧ್ಯಾನಮಾಡಲು ಸಂತುಷ್ಟನಾದ ಈಶ್ವರನು ಚತುಷ್ಪಾದಗಳಿಂದ ಕೂಡಿದ ಗಾಯತ್ರೀ ಮಂತ್ರವನ್ನು ಉಪದೇಶಿಸಿದನು. ತರುವಾಯ ಅವಳನ್ನು ಧ್ಯಾನಿಸಿ ತದರ್ಥವನ್ನು ತಿಳಿದು ಜಗದುದ್ಧಾರಕ್ಕಾಗಿ ಗಾಯತ್ರಿಯನ್ನು ಜನರಿಗೆ ಉಪದೇಶಿಸಿದನು.

೧೧. ಲೋಕವಂದಿತನಾದ, ಬ್ರಹ್ಮದೇವನು, ಮಹೇಶ್ವರೋಪದಿಷ್ಟವಾದ ಆ ಗಾಯತ್ರಿಯನ್ನು ನಮಸ್ಕರಿಸಿ, ಇದು ರುದ್ರಸಂಬಂಧಿಯಾದ ಗಾಯತ್ರಿಯೆಂದು ತಿಳಿದು ನಿಯಮದಿಂದ ಧ್ಯಾನಮಾಡಿದನು.

ಇತ್ಯೇತಾಂ ವೈದಿಕೀಂ ವಿದ್ಯಾಂ ರೌದ್ರೀಂ ಗಾಯತ್ರೀಮರ್ಪಿತಾಂ ।
ಜಪಿತ್ವಾ ತು ಮಹಾದೇವೀಂ ರುದ್ರಲೋಕನಮಸ್ಕೃತಾಂ ॥
ಪ್ರಪನ್ನಸ್ತು ಮಹಾದೇವಂ ಧ್ಯಾನಯುಕ್ತೇನ ಚೇತಸಾ ॥ ೧೨ ॥

ತತಸ್ತಸ್ಯ ಮಹಾದೇವೋ ದಿವ್ಯಂ ಯೋಗಂ ಪುನಃಸ್ಮೃತಃ ।
ಐಶ್ವರ್ಯಂ ಜ್ಞಾನಸಂಪತ್ತಿಂ ವೈರಾಗ್ಯಂ ಚ ದದೌ ಪುನಃ ॥ ೧೩ ॥

ಅಥಾಟ್ಟಹಾಸಂ ಮುಮುಚೇ ಭೀಷಣಂ ದೀಪ್ತಮೀಶ್ವರಃ ।
ತತೋ ಸ್ಯ ಸರ್ವತೋ ದೀಪ್ತಾಃ ಪ್ರಾದುರ್ಭೂತಾಃ ಕುಮಾರಕಾಃ ॥ ೧೪ ॥

ಪೀತಮಾಲ್ಯಾಂಬರಧರಾಃ ಪೀತಗಂಧವಿಲೇಪನಾಃ ।
ಪೀತೋಷ್ಣೀಷ ಶಿರಸ್ಕಾಶ್ಚ ಪೀತಾಸ್ಯಾಃ ಪೀತಮೂರ್ಧಜಾಃ ॥ ೧೫ ॥

ತತೋ ವರ್ಷ ಸಹಸ್ರಾಂತೇ ಉಷಿತ್ವಾ ವಿಮಲೌಜಸಃ ।
ಯೋಗಾತ್ಮಾನಸ್ತತಃ ಸ್ನಾತಾ ಬ್ರಾಹ್ಮಣಾನಾಂ ಹಿತೈಷಿಣಃ ॥ ೧೬ ॥

---

೧೨. ಭಕ್ತರು ಪೂರ್ವೋಕ್ತವೂ, ವೇದೋಕ್ತವೂ, ರುದ್ರೋಕ್ತವೂ, ಆದ ಗಾಯತ್ರೀ ಮಂತ್ರವನ್ನು ನಿರ್ಮಲವಾದ ಮನಸ್ಸಿನಿಂದಲೂ, ಭಕ್ತಿಯಿಂದಲೂ, ಜಪಿಸಿ, ಮಹಾದೇವಿಯನ್ನೂ ಮಹಾದೇವನನ್ನೂ ಪ್ರಸನ್ನೀಕರಿಸಿಕೊಂಡು, ಪರಮಪದವಿಯನ್ನು ಹೊಂದುವರು.

೧೩. ಅನಂತರ ಧ್ಯಾನಮಾಡತಕ್ಕ ಬ್ರಹ್ಮನಿಗೆ ಮಹಾದೇವನು ಪುನಃ ದಿವ್ಯ ಯೋಗವನ್ನು, ಪರಮೈಶ್ವರ್ಯವನ್ನು, ಜ್ಞಾನಸಂಪತ್ತಿಯನ್ನು ಮತ್ತು ವೈರಾಗ್ಯವನ್ನು ಉಪದೇಶಿಸಿದನು.

೧೪. ಅನಂತರ ಪರಮೇಶ್ವರನು ಪ್ರೀತನಾಗಿ ಬಹಳ ಭಯಂಕರವಾದ ಅಟ್ಟಹಾಸವನ್ನು ಮಾಡಿದನು. ಅನಂತರ ಪ್ರಕಾಶಮಾನರಾದ ಕುಮಾರರು ಜನಿಸಿದರು.

೧೫. ಆಗ ಜನಿಸಿದ ಕುಮಾರರು ಹಳದಿಯಾದ ವಸ್ತ್ರ, ಮಾಲ್ಯ, ಗಂಧ, ರುಮಾಲು, ಮುಖ ಮತ್ತು ಕೇಶ ಇವುಗಳುಳ್ಳವರಾಗಿ ಪ್ರಕಾಶಿಸಿದರು.

೧೬–೧೭. ತರುವಾಯ ಆ ಕುಮಾರರು ಒಂದು ಸಹಸ್ರವರ್ಷಗಳ ವರೆಗೂ ವಾಸಮಾಡಿ, ನಿರ್ಮಲವಾದ ಕಾಂತಿಯುತರೂ, ಯೋಗಿಗಳೂ, ಬ್ರಾಹ್ಮಣಹಿತೈಷಿ

ಧರ್ಮಯೋಗಬಲೋಪೇತಾ ಋಷೀಣಾಂ ದೀರ್ಘಸತ್ರಿಣಾಂ ।
ಉಪದಿಶ್ಯ ತು ತೇ ಯೋಗಂ ಪ್ರವಿಷ್ಟಾ ರುದ್ರಮೀಶ್ವರಂ ॥ ೧೭ ॥

ಏವಮೇತೇನ ವಿಧಿನಾ ಪ್ರಪನ್ನಾ ಯೇ ಮಹೇಶ್ವರಂ ।
ಅನ್ಯೇಪಿ ನಿಯತಾತ್ಮಾನೋ ಧ್ಯಾನಯುಕ್ತಾ ಜಿತೇಂದ್ರಿಯಾಃ ॥ ೧೮ ॥

ತೇ ಸರ್ವೇ ಪಾಪಮುತ್ಸೃಜ್ಯ ವಿರಜಾ ಬ್ರಹ್ಮವರ್ಚಸಃ ।
ಪ್ರವಿಶಂತಿ ಮಹಾದೇವಂ ರುದ್ರಂ ತೇ ತ್ವಪುನರ್ಭವಃ ॥ ೧೯ ॥

॥ ವಾಯುರುವಾಚ ॥

ತತಸ್ತಸ್ಮಿನ್ ಗತೇ ಕಲ್ಪೇ ಪೀತವರ್ಣೇ ಸ್ವಯಂಭುವಃ ।
ಪುನರನ್ಯಃ ಪ್ರವೃತ್ತಸ್ತು ಸಿತಕಲ್ಪೋ ಹಿ ನಾಮತಃ ॥ ೨೦ ॥

ಏಕಾರ್ಣವೇ ತದಾ ವೃತ್ತೇ ದಿವ್ಯೇ ವರ್ಷಸಹಸ್ರಕೇ ।
ಸ್ರಷ್ಟುಕಾಮಃ ಪ್ರಜಾ ಬ್ರಹ್ಮಾ ಚಿಂತಯಾಮಾಸ ದುಃಖಿತಃ ॥ ೨೧ ॥

---

ಗಳೂ, ಧರ್ಮ, ಯೋಗ, ಬಲ, ಇವುಗಳುಳ್ಳವರೂ ಆಗಿ ದೀರ್ಘಕಾಲದವರೆಗೂ ಸತ್ರಯಾಗವನ್ನು ಮಾಡಿದ ಮಹರ್ಷಿಗಳಿಗೆ ಯೋಗವನ್ನು ಉಪದೇಶಮಾಡಿ ರುದ್ರಪದವಿಯನ್ನು ಹೊಂದಿದರು.

೧೮-೧೯. ಹೀಗೆ ಯಾವ ಪುರುಷರು ಈ ರೀತಿಯಾಗಿ ಈಶ್ವರನ ಭಕ್ತರೂ, ಜಿತೇಂದ್ರಿಯರೂ, ನಿಯಮ ಮತ್ತು ಧ್ಯಾನ ಇವುಗಳುಳ್ಳವರೂ, ವಿರಜರೂ, ಬ್ರಹ್ಮವರ್ಚಸ್ವಿಗಳೂ ಆಗಿರುವರೋ ಅವರೆಲ್ಲರೂ ಪುನರಾವೃತ್ತಿರಹಿತವಾದ ಮಹಾದೇವನ ಪರಮಪದವಿಯನ್ನು ಹೊಂದುವರು.

೨೦. ವಾಯುದೇವನು ಹೇಳಿದನು :—ಅನಂತರ ಬ್ರಹ್ಮದೇವನು ಸೃಷ್ಟಿಸಿದ ಪೀತವರ್ಣವೆಂಬ ಕಲ್ಪವು ಕಳೆಯಲು "ಸಿತಕಲ್ಪ" ವೆಂಬ ಬೇರೊಂದು ಕಲ್ಪವು ಪ್ರಾರಂಭವಾಯಿತು.

೨೧. ಆಗ ಪ್ರಲಯೋದಕದಲ್ಲಿ ಒಂದು ದಿವ್ಯ ಸಹಸ್ರವರ್ಷಗಳವರೆಗೂ ಮಲಗಿದ್ದ ಬ್ರಹ್ಮನು ಪ್ರಜೆಗಳನ್ನು ಸೃಷ್ಟಿಸಲಿಚ್ಛೆಯಿಂದ ದುಃಖಿತನೂ, ಚಿಂತಾಕ್ರಾಂತನೂ ಆದನು.

**ತಸ್ಯ ಚಿಂತಯಮಾನಸ್ಯ ಪುತ್ರಕಾಮಸ್ಯ ವೈ ಪ್ರಭೋಃ ।**
**ಕೃಷ್ಣಃ ಸಮಭವದ್ವರ್ಣೋ ಧ್ಯಾಯತಃ ಪರಮೇಷ್ಠಿನಃ ॥ ೨೨ ॥**

**ಅಥಾಪಶ್ಯನ್ಮಹಾತೇಜಾಃ ಪ್ರಾದುರ್ಭೂತಂ ಕುಮಾರಕಂ ।**
**ಕೃಷ್ಣವರ್ಣಂ ಮಹಾವೀರ್ಯಂ ದೀಪ್ಯಮಾನಂ ಸ್ವತೇಜಸಾ ॥ ೨೩ ॥**

**ಕೃಷ್ಣಾಂಬರಧರೋಷ್ಣೀಷಂ ಕೃಷ್ಣಯಜ್ಞೋಪವೀತಿನಂ ।**
**ಕೃಷ್ಣೇನ ಮೌಲಿನಾ ಯುಕ್ತಂ ಕೃಷ್ಣಸ್ರಗನುಲೇಪನಂ ॥ ೨೪ ॥**

**ಸತಂ ದೃಷ್ಟ್ವಾ ಮಹಾತ್ಮಾನಮಮರಂ ಘೋರಮಂತ್ರಿಣಂ ।**
**ವವಂದೇ ದೇವ ದೇವೇಶಂ ವಿಶ್ವೇಶಂ ಕೃಷ್ಣಪಿಂಗಲಂ ॥ ೨೫ ॥**

**ಪ್ರಾಣಾಯಾಮ ಪರಃ ಶ್ರೀಮಾನ್ ಹೃದಿ ಕೃತ್ವಾ ಮಹೇಶ್ವರಂ ।**
**ಮನಸಾ ಧ್ಯಾನಸಂಯುಕ್ತಂ ಪ್ರಪನ್ನಸ್ತು ಯತೀಶ್ವರಂ ॥**
**ಅಘೋರೇತಿ ತತೋ ಬ್ರಹ್ಮಾ ಬ್ರಹ್ಮ ಏವಾನುಚಿಂತಯನ್ ॥ ೨೬ ॥**

---

೨೨. ಹೀಗೆ ಚಿಂತಿಸುವವನೂ, ಪುತ್ರಾಪೇಕ್ಷೆಯುಳ್ಳವನೂ, ಪ್ರಭುವೂ, ಧ್ಯಾನಾಸಕ್ತನೂ, ಆದ ಬ್ರಹ್ಮದೇವನಿಗೆ ಕೃಷ್ಣವರ್ಣವು ಪ್ರಾಪ್ತವಾಯಿತು.

೨೩. ಅನಂತರ ತೇಜಸ್ವಿಯಾದ ಬ್ರಹ್ಮದೇವನು ಜನಿಸಿದವನೂ ಕೃಷ್ಣವರ್ಣವುಳ್ಳವನೂ, ಮಹಾವೀರ್ಯವಂತನೂ, ದಿವ್ಯತೇಜಸ್ವಿಯೂ, ಆತ್ಮಸಮಾನನೂ, ಆದ ಕುಮಾರನನ್ನು ನೋಡಿದನು.

೨೪-೨೫. ಅನಂತರ ಬ್ರಹ್ಮದೇವನು ಕಪ್ಪಾದ ವಸ್ತ್ರ, ರುಮಾಲು, ಯಜ್ಞೋಪವೀತ, ಶಿರಸ್ಸು, ಗಂಧ, ಮಾಲ್ಯ, ಇವುಗಳುಳ್ಳವನೂ, ಮಹಾತ್ಮನೂ, ನಾಶರಹಿತನೂ, ಭಯಂಕರನೂ, ದೇವೋತ್ತಮನೂ, ಕೃಷ್ಣಪಿಂಗಳವರ್ಣವುಳ್ಳವನೂ, ಆದ ವಿಶ್ವೇಶ್ವರನನ್ನು ನಮಸ್ಕರಿಸಿದನು.

೨೬. ಪ್ರಾಣಾಯಾಮಾಸಕ್ತನೂ, ಕಾಂತಿಯುತನೂ, ಆದ ಬ್ರಹ್ಮದೇವನು ಆ ಭಗವಂತನನ್ನು ಹೃದಯದಲ್ಲಿ ಧರಿಸಿ, ನಮ್ರನಾಗಿ, ಮನಸ್ಸಿನಲ್ಲಿ ಧ್ಯಾನಮಾಡುತ್ತಾ ಆ ಘೋರರೂಪನಾದ ಪರಬ್ರಹ್ಮನನ್ನು ಚಿಂತಿಸಿದನು.

ಏವಂ ವೈ ಧ್ಯಾಯತಸ್ತಸ್ಯ ಬ್ರಹ್ಮಣಃ ಪರಮೇಷ್ಠಿನಃ ।
ಮುಮೋಚ ಭಗವಾನ್ ರುದ್ರಃ ಅಟ್ಟಹಾಸಂ ಮಹಾಸ್ವನಂ ॥ ೨೭ ॥

ಅಥಾಸ್ಯ ಪಾರ್ಶ್ವತಃ ಕೃಷ್ಣಾಃ ಕೃಷ್ಣಸ್ರಗನುಲೇಪನಾಃ ।
ಚತ್ವಾರಸ್ತು ಮಹಾತ್ಮಾನಃ ಸಂಬಭೂವುಃ ಕುಮಾರಕಾಃ ॥
ಕೃಷ್ಣಾಃ ಕೃಷ್ಣಾಂಬರೋಷ್ಣೀಷಾಃ ಕೃಷ್ಣಾಸ್ಯಾಃ ಕೃಷ್ಣವಾಸಸಃ ॥ ೨೮ ॥

ತೈಶ್ಚಾಟ್ಟಹಾಸಃ ಸುಮಹಾನ್ ಹೂಂಕಾರಶ್ಚೈವ ಪುಷ್ಕಲಃ ।
ನಮಸ್ಕಾರಶ್ಚ ಸುಮಹಾನ್ ಪುನಃ ಪುನರುದೀರಿತಃ ॥ ೨೯ ॥

ತತೋ ವರ್ಷಸಹಸ್ರಾಂತೇ ಯೋಗಾತ್ತತ್ಪರಮೇಶ್ವರಂ ।
ಉಪಾಸಿತ್ವಾ ಮಹಾಭಾಗಾಃ ಶಿಷ್ಯೇಭ್ಯಃ ಪ್ರದದುಸ್ತತಃ ॥ ೩೦ ॥

ಯೋಗೇನ ಯೋಗಸಂಪನ್ನಾಃ ಪ್ರವಿಶ್ಯ ಮನಸಾ ಶಿವಂ ।
ಅಮಲಂ ನಿರ್ಗುಣಂ ಸ್ಥಾನಂ ಪ್ರವಿಷ್ಟಾ ವಿಶ್ವಮೀಶ್ವರಂ ॥ ೩೧ ॥

---

೨೭. ಹೀಗೆ ಪರಮಪದವಿಯಲ್ಲಿರತಕ್ಕ ಬ್ರಹ್ಮದೇವನು ಧ್ಯಾನಮಾಡಲಾಗಿ ಪೂಜ್ಯನಾದ ರುದ್ರದೇವನು ಉಚ್ಚಧ್ವನಿಯಿಂದ ಕೂಡಿದ ಅಟ್ಟಹಾಸವನ್ನು ಮಾಡಿದನು.

೨೮-೨೯. ಅನಂತರ ರುದ್ರದೇವನ ಪಾರ್ಶ್ವಗಳಿಂದ ಕೃಷ್ಣರೂಪಿಗಳೂ, ಕೃಷ್ಣ ವರ್ಣದ ಗಂಧ, ಪುಷ್ಪ, ವಸ್ತ್ರ, ಮಾಲ್ಯ, ರುಮಾಲು, ಮುಖ, ಇವುಗಳುಳ್ಳವರೂ, ಮಹಾತ್ಮರೂ, ಆದ ನಾಲ್ವರು ಕುಮಾರರು ಜನಿಸಿ, ಮಹಾಟ್ಟಹಾಸಗಳನ್ನೂ ಹುಂಕಾರ ಗಳನ್ನೂ ಮಾಡುತ್ತಾ ಭಗವಂತನಿಗೆ ಪುನಃ ಪುನಃ ನಮಸ್ಕರಿಸಿದರು.

೩೦. ಮಹಾತ್ಮರಾದ ಅವರು ಒಂದು ಸಹಸ್ರವರ್ಷಗಳವರೆಗೂ ತಪಸ್ಸನ್ನು ಮಾಡಿ ಕೊನೆಗೆ ಆ ಪರಮೇಶ್ವರನನ್ನು ಧ್ಯಾನಿಸಿ ಶಿಷ್ಯರಿಗೆ ಆ ಉಪದೇಶಿಸಿದರು.

೩೧. ಯೋಗಸಿದ್ಧಿಯುಳ್ಳ ಆ ಮಹಾತ್ಮರು ತಮ್ಮ ಯೋಗಬಲದಿಂದ ಮನಸ್ಸಿನಲ್ಲಿ ಈಶ್ವರನನ್ನು ಧ್ಯಾನಿಸಿ, ದೋಷರಹಿತನೂ, ನಿರ್ಗುಣನೂ, ಆದ ಭಗವಂತನ ಶಾಶ್ವತವಾದ ರುದ್ರಲೋಕವನ್ನು ಹೊಂದಿದರು.

**ಏವಮೇತೇನ ಯೋಗೇನ ಯೇಚಾಪ್ಯನ್ಯೇ ದ್ವಿಜಾತಯಃ ।**
**ಸ್ಮರಿಷ್ಯಂತಿ ವಿಧಾನಜ್ಞಾ ಗಂತಾರೋ ರುದ್ರಮವ್ಯಯಂ ॥ ೩೨ ॥**

**ತತಸ್ತಸ್ಮಿನ್ ಗತೇ ಕಲ್ಪೇ ಕೃಷ್ಣರೂಪೇ ಭಯಾನಕೇ ।**
**ಅನ್ಯಃ ಪ್ರವರ್ತಿತಃ ಕಲ್ಪೋ ವಿಶ್ವರೂಪಸ್ತು ನಾಮತಃ ॥ ೩೩ ॥**

**ವಿನಿವೃತ್ತೇ ತು ಸಂಹಾರೇ ಪುನಃ ಸೃಷ್ಟೇ ಚರಾಚರೇ ।**
**ಬ್ರಹ್ಮಣಃ ಪುತ್ರಕಾಮಸ್ಯ ಧ್ಯಾಯತಃ ಪರಮೇಷ್ಠಿನಃ ॥**
**ಪ್ರಾದುರ್ಭೂತಾ ಮಹಾನಾದಾ ವಿಶ್ವರೂಪಾ ಸರಸ್ವತೀ ॥ ೩೪ ॥**

**ವಿಶ್ವಮಾಲ್ಯಾಂಬರಧರಂ ವಿಶ್ವಯಜ್ಞೋಪವೀತಿನಂ ।**
**ವಿಶ್ವೋಷ್ಣೀಷಂ ವಿಶ್ವಗಂಧಂ ವಿಶ್ವಸ್ಥಾನಂ ಮಹಾಭುಜಂ ॥ ೩೫ ॥**

**ಅಥ ತಂ ಮನಸಾ ಧ್ಯಾತ್ವಾ ಯುಕ್ತಾತ್ಮಾ ವೈ ಪಿತಾಮಹಃ ।**
**ವವಂದೇ ದೇವಮೀಶಾನಂ ಸರ್ವೇಶಂ ಸರ್ವಗಂ ಪ್ರಭುಂ ॥ ೩೬ ॥**

---

೩೨ ಹೀಗೆ ಬ್ರಾಹ್ಮಣರೇ ಮೊದಲಾದ ಮಹಾತ್ಮರೂ ಸಹ ಈ ವಿಧವಾದ ಯೋಗಾಭ್ಯಾಸದಿಂದ ಆ ಪರಮಪುರುಷನನ್ನು ಧ್ಯಾನಿಸಿದರೆ ಶಾಶ್ವತವಾದ ರುದ್ರದೇವನ ಪರಮಪದವಿಯನ್ನು ಹೊಂದುವರು.

೩೩. ಅನಂತರ ಭಯಂಕರವಾದ ಕೃಷ್ಣರೂಪವೆಂಬ ಕಲ್ಪವು ಕಳೆಯಲಾಗಿ "ವಿಶ್ವರೂಪನಾಮಕ"ವಾದ ಬೇರೊಂದು ಕಲ್ಪವು ಪ್ರಾಪ್ತವಾಗುವುದು.

೩೪. ಹೀಗೆ ಸಂಹಾರಕಾರ್ಯವು ನಿಂತುಹೋಗಿ ಚರಾಚರಾತ್ಮಕವಾದ ಸೃಷ್ಟಿಗೆ ಪುನಃ ಉಪಕ್ರಮವಾಗಲು ಪುತ್ರಕಾಮಿಯಾದ ಬ್ರಹ್ಮನು ಧ್ಯಾನಮಾಡಿದನು. ಆಗ ಭಗವತ್ಸಂಬಂಧಿಯೂ, ಗಂಭೀರವೂ ಆದ ವಾಣಿಯು ಉಂಟಾಯಿತು.

೩೫-೩೬. ಅನಂತರ ಬ್ರಹ್ಮದೇವನು ವಿಶ್ವಾಕಾರವಾದ ಹಾರ, ವಸ್ತ್ರ, ಯಜ್ಞೋಪವೀತ, ಗಂಧ, ಮಾಲ್ಯ, ರುಮಾಲು, ಮಹಾಭುಜ ಮತ್ತು ಸ್ಥಾನ ಇವುಗಳುಳ್ಳವನೂ, ಸರ್ವವ್ಯಾಪಿಯೂ, ಸರ್ವೇಶನೂ, ಭಗವಂತನೂ ಆದ ರುದ್ರ ದೇವನನ್ನು ಮನಸ್ಸಿನಲ್ಲಿ ಧ್ಯಾನಮಾಡಿ ನಮಸ್ಕರಿಸಿದನು.

ಓಮೀಶಾನ ನಮಸ್ತೇಽಸ್ತು ಮಹಾದೇವ ನಮೋಽಸ್ತು ತೇ ।
ಏವಂ ಧ್ಯಾನಗತಂ ತತ್ರ ಪ್ರಣಮಂತಂ ಪಿತಾಮಹಂ ॥
ಉವಾಚ ಭಗವಾನೀಶಃ ಪ್ರೀತೋಽಹಂ ತೇ ಕಿಮಿಚ್ಛಸಿ ॥ ೩೭ ॥

ತತಸ್ತು ಪ್ರಣತೋ ಭೂತ್ವಾ ವಾಗ್ಭಿಃ ಸ್ತುತ್ವಾ ಮಹೇಶ್ವರಂ ।
ಉವಾಚ ಭಗವಾನ್ ಬ್ರಹ್ಮಾ ಪ್ರೀತಃ ಪ್ರೀತೇನ ಚೇತಸಾ ॥ ೩೮ ॥

ಯದಿದಂ ವಿಶ್ವರೂಪಂ ತೇ ವಿಶ್ವಗಂ ವಿಶ್ವಮೀಶ್ವರಂ ।
ಏತದ್ವೇದಿತುಮಿಚ್ಛಾಮಿ ಕಶ್ಚಾಯಂ ಪರಮೇಶ್ವರಃ ॥ ೩೯ ॥

ಕೈಷಾ ಭಗವತೀ ದೇವೀ ಚತುಷ್ಪಾದಾ ಚತುರ್ಮುಖೀ
ಚತುಃಶೃಂಗೀ ಚತುರ್ವಕ್ತ್ರಾ ಚತುರ್ದಂತಾ ಚತುಃಸ್ತನೀ ॥ ೪೦ ॥

ಚತುರ್ಹಸ್ತಾ ಚತುರ್ನೇತ್ರಾ ವಿಶ್ವರೂಪಾ ಕಥಂ ಸ್ಮೃತಾ ।
ಕಿನ್ನಾಮಧೇಯಾ ಕೋ ಸ್ಯಾತ್ಮಾ ಕಿಂವೀರ್ಯಾ ವಾಪಿ ಕರ್ಮತಃ ॥ ೪೧ ॥

---

೩೭. ಎಲೈ ಈಶಾನನಾಮಕನಾದ ಮಹದೇವನೇ, ನಿನಗೆ ನಮಸ್ಕಾರವು ಎಂದು ಧ್ಯಾನಿಸಿ ಪುನಃ ಪುನಃ ನಮಸ್ಕಾರವನ್ನು ಮಾಡಿದ ಬ್ರಹ್ಮನನ್ನು ಪೂಜ್ಯನಾದ ಈಶ್ವರನು "ನಿನ್ನ ಭಕ್ತಿಗೆ ಪ್ರೀತನಾಗಿರುತ್ತೇನೆ. ನಿನಗೆ ಯಾವ ವರವು ಬೇಕಾಗಿರುವುದು, ಬೇಡಿಕೋ" ಎಂದನು.

೩೮. ಅನಂತರ ಬ್ರಹ್ಮದೇವನು ಪ್ರೀತನಾಗಿ ಮಹೇಶ್ವರನನ್ನು ಹೊಗಳಿ ನಮಸ್ಕರಿಸಲು ತುಷ್ಟನಾದ ಭಗವಂತನು ಪ್ರೀತಿಯೊಡನೆ ಇಂತೆಂದನು.

೩೯-೪೧. ಆಗ ಬ್ರಹ್ಮದೇವನು ಈಶ್ವರನನ್ನು ಕುರಿತು ಎಲೈ ಮಹಾದೇವನೇ, ನಿನ್ನ ಸರ್ವವ್ಯಾಪಿಯಾದ ವಿಶ್ವರೂಪವು ಯಾವುದು ಇದೆಯೋ ಅದನ್ನು ತಿಳಿಯ ಬೇಕೆಂದು ಇಚ್ಛಿಸುತ್ತೇನೆ. ಮತ್ತು ಆ ಈಶ್ವರನು ಯಾರು ? ಪೂಜ್ಯಳೂ, ನಾಲ್ಕಾದ ಮುಖ, ಹಸ್ತಪಾದ, ದಂತ, ನೇತ್ರ, ಸ್ತನ, ಶೃಂಗ ಇವುಗಳುಳ್ಳವಳೂ ಆದ ವಿಶ್ವ ರೂಪಿಯು ಯಾರು ? ಆಕೆಯನ್ನು ನೀನು ಏಕೆ ಸ್ಮರಿಸಿದೆ ? ಅವಳ ನಾಮಧೇಯವು ಯಾವುದು, ಅವಳ ಸ್ವರೂಪವು ಎಂತಹುದು ? ಅವಳ ಶಕ್ತಿಯು ಎಷ್ಟು ? ಅವಳ ಕಾರ್ಯವು ಆವುದು ? ಇವುಗಳನ್ನು ತಿಳಿಸಬೇಕೆಂದು ಈಶ್ವರನನ್ನು ಬೇಡಿದನು.

॥ ಮಹೇಶ್ವರ ಉವಾಚ ॥

ರಹಸ್ಯಂ ಸರ್ವ ಮಂತ್ರಾಣಾಂ ಪಾವನಂ ಪುಷ್ಟಿವರ್ಧನಂ ।
ಶೃಣುಷ್ವೈತತ್ಪರಂ ಗುಹ್ಯಮಾದಿಸರ್ಗೇ ಯಥಾತಥಂ ॥ ೪೨ ॥

ಅಯಂ ಯೋ ವರ್ತತೇ ಕಲ್ಪೋ ವಿಶ್ವರೂಪಸ್ತ್ವಸೌ ಸ್ಮೃತಃ ।
ಯಸ್ಮಿನ್ ಭವಾದಯೋ ದೇವಾಃ ಷಡ್ವಿಂಶನ್ಮನವಃ ಸ್ಮೃತಾಃ ॥ ೪೩ ॥

ಬ್ರಹ್ಮಸ್ಥಾನಮಿದಂ ಚಾಪಿ ಯದಾ ಪ್ರಾಪ್ತಂ ತ್ವಯಾ ವಿಭೋ ।
ತದಾ ಪ್ರಭೃತಿ ಕಲ್ಪಶ್ಚ ತ್ರಯಸ್ತ್ರಿಂಶತ್ತಮೋ ಹ್ಯಯಂ ॥ ೪೪ ॥

ಶತಂ ಶತಸಹಸ್ರಾಣಾಮತೀತಾ ಯೇ ಸ್ವಯಂಭುವಃ ।
ಪುರಸ್ತಾತ್ತವ ದೇವೇಶ ತಾನ್ ಶೃಣುಷ್ವ ಮಹಾಮುನೇ ॥ ೪೫ ॥

ಆನಂದಸ್ತು ಸ ವಿಜ್ಞೇಯ ಆನಂದಸ್ತೇ ಮಹಾಲಯಃ ।
ಗಾಲವ್ಯ ಗೋತ್ರ ತಪಸಾ ಮಮ ಪುತ್ರಸ್ತ್ವಮಾಗತಃ ॥ ೪೬ ॥

---

೪೨-೪೩. ಈಶ್ವರನು ಹೇಳಿದನು:—ಸರ್ವಮಂತ್ರಗಳ ರಹಸ್ಯವೂ, ಪಾವನವೂ, ಪುಷ್ಟಿಕರವೂ ಆದ ವಿಷಯುಗಳನ್ನು ಆದಿಕಲ್ಪದಲ್ಲಿ ನಡೆದಂತೆಯೇ ಹೇಳುವೆನು ಕೇಳು. ಯಾವ ಭವಾದಿ ಮೂವತ್ತೆರಡು ಸರ್ಗಗಳಲ್ಲಿ ಇಪ್ಪತ್ತಾರು ಮನುಗಳು ಉಕ್ತವಾಗಿರುವರೋ ಅಂತಹ ವಿಶ್ವರೂಪನಾಮಕವಾದ ಈ ಕಲ್ಪವು ಈಗ ನಡೆಯುತ್ತಿರುವುದು. ಇದನ್ನು ತಿಳಿಸುವೆನು ಕೇಳು ಎಂದನು.

೪೪. ಎಲೈ ಪ್ರಭುವೇ, ನೀನೂ ಸಹ ಈ ಕಲ್ಪದಲ್ಲಿ ಯಾವಾಗ ಬ್ರಹ್ಮಪದವಿಯನ್ನು ಹೊಂದಿದೆಯೋ ಆ ದಿವಸದಿಂದಲೇ ಈ ಕಲ್ಪವು ಆರಂಭವಾಗಿದೆ. ಈಗ ನಡೆಯುತ್ತಿರುವ ಕಲ್ಪವು ಮೂವತ್ತಮೂರನೆಯ ಕಲ್ಪವಾಗಿದೆ ಎಂದನು.

೪೫. ದೇವೋತ್ತಮನೂ, ಮಹಾಜ್ಞಾನಿಯೂ ಆದ ಎಲೈ ಬ್ರಹ್ಮನೇ, ಒಂದು ಲಕ್ಷದ ನೂರುವರ್ಷಗಳು ಇರುವ ಯಾವ ಯುಗವು ಕಳೆದುಹೋಗಿದೆಯೋ ಅದರ ವಿಚಾರಗಳನ್ನು ನಿನಗೋಸ್ಕರ ತಿಳಿಸುವೆನು ಕೇಳು ಎಂದನು.

೪೬. ಈ ಕಲ್ಪಕ್ಕೆ ಆನಂದಕಲ್ಪವೆಂದು ಸಂಜ್ಞೆಯು ಪ್ರಾಪ್ತವಾಗಿದೆ. ಅದರಲ್ಲಿ ಆಗತಕ್ಕ ಮಹಾಲಯವು ಸಂತೋಷಕರವಾಗಿದೆ. ಇದರಲ್ಲಿ ಗಾಲವ್ಯ, ಗೋತ್ರಜನಾದ ನೀನು ತಪಸ್ಸನ್ನು ಮಾಡಿ ನನಗೆ ಪುತ್ರನಾಗಿ ಜನಿಸುತ್ತೀಯೇ ಎಂದು ಹೇಳಿದನು.

ತ್ವಯಿ ಯೋಗಶ್ಚ ಸಾಂಖ್ಯಶ್ಚ ತಪೋ ವಿದ್ಯಾ ವಿಧಿಃ ಕ್ರಿಯಾ ।
ಋತಂ ಸತ್ಯಂ ಚ ಯದ್ಬ್ರಹ್ಮ ಅಹಿಂಸಾ ಸಂತತಿ ಕ್ರಮಾಃ ॥ ೪೭ ॥

ಧ್ಯಾನಂ ಧ್ಯಾನವಪುಃ ಶಾಂತಿರ್ವಿದ್ಯಾಽವಿದ್ಯಾಮತಿರ್ಧೃತಿಃ ।
ಕಾಂತಿಃ ಶಾಂತಿಃ ಸ್ಮೃತಿರ್ಮೇಧಾ ಲಜ್ಜಾ ಬುದ್ಧಿಃ ಸರಸ್ವತೀ ॥ ೪೮ ॥

ತುಷ್ಟಿಃ ಪುಷ್ಟಿಃ ಕ್ರಿಯಾ ಚೈವ ಲಜ್ಜಾ ಕ್ಷಾಂತಿಃ ಪ್ರತಿಷ್ಠಿತಾ ।
ಷಡ್ವಿಂಶತ್ತದ್ಗುಣಾ ಹ್ಯೇಷಾ ದ್ವಾತ್ರಿಂಶಾಕ್ಷರಸಂಜ್ಞಿತಾ ॥ ॥ ೪೯ ॥

ಪ್ರಕೃತಿಂ ವಿದ್ಧಿ ತಾಂ ಬ್ರಹ್ಮನ್ ತ್ವತ್ಪ್ರಸೂತಿಂ ಮಹೇಶ್ವರೀಂ
ಸೈಷಾ ಭಗವತೀ ದೇವೀ ತತ್ಪ್ರಸೂತಿಃ ಸ್ವಯಂಭುವಃ ।
ಚತುರ್ಮುಖೀ ಜಗದ್ಯೋನಿಃ ಪ್ರಕೃತಿರ್ಗೌಃ ಪ್ರಕೀರ್ತಿತಾ ।
ಪ್ರಧಾನಂ ಪ್ರಕೃತಿಂ ಚೈವ ಯದಾಹುಸ್ತತ್ವಚಿಂತಕಾಃ ॥ ೫೦ ॥

ಅಜಾ ಮೇತಾಂ ಲೋಹಿತಾಂ ಶುಕ್ಲಕೃಷ್ಣಾಂ
ವಿಶ್ವಂ ಸಂಪ್ರಸೃಜಮಾನಾಂ ಸುರೂಪಾಂ ।

---

೪೭-೫೦. ಎಲೈ ಬ್ರಹ್ಮದೇವನೇ, ನಿನ್ನಲ್ಲಿ ಯಾವ ಯೋಗ, ಸಾಂಖ್ಯ, ತಪ, ವಿದ್ಯಾ, ವಿಧಿ, ಕ್ರಿಯಾ, ಜ್ಞಾನ, ಸತ್ಯ, ಅಹಿಂಸಾ, ಸಂತತಿ, ಕ್ರಮ, ಧ್ಯಾನ, ಧ್ಯಾನ ಶರೀರ, ಶಾಂತಿ, ವಿದ್ಯಾ, ಮತಿ, ಧೃತಿ, ಕಾಂತಿ, ಶಾಂತಿ, ಸ್ಮೃತಿ, ಮೇಧಾ, ಲಜ್ಜಾ, ಸರಸ್ವತೀ, ತುಷ್ಟಿ, ಪುಷ್ಟಿ, ಕ್ರಿಯಾ, ಕ್ಷಾಂತಿ, ಪ್ರತಿಷ್ಠಾ ಇವೇ ಮೊದಲಾದ ಮೂವತ್ತಾರು ಗುಣಗಳಿವೆಯೋ ಅಂತಹ ಮೂವತ್ತೆರಡು ಅಕ್ಷರಗಳಿಂದ ಕೂಡಿದ ಇದನ್ನು ಪ್ರಕೃತಿಯೆಂದೂ, ಮಹೇಶ್ವರಸಂಬಂಧಿಯಾದ ನಿನ್ನ ಪುತ್ರಿಯೆಂದೂ ತಿಳಿ ಯುವನಾಗು. ಈ ಪೂಜ್ಯಳಾದ ದೇವಿಯು ಬ್ರಹ್ಮನಾದ ನಿನ್ನ ಮಗಳಾಗಿರುವಳು. ಅವಳನ್ನು ತತ್ವಜ್ಞಾನಿಗಳು ಬ್ರಹ್ಮಸಂಬಂಧಿಯೂ, ಜಗತ್ಕಾರಣವೂ ಕಾಮಧೇನು ವಂತಿರುವ ಪ್ರಕೃತಿಯೆಂಬುದಾಗಿಯೂ ಹೇಳುತ್ತಾರೆ. ಕೆಲವರು ಪ್ರಧಾನವೆಂದೂ ಇತರರು ಪ್ರಕೃತಿಯೆಂದೂ ಇದನ್ನು ಹೇಳುತ್ತಾರೆ.

೫೧. ಅಜನಾದ ನಾನು ಈ ಪ್ರಕೃತಿಯನ್ನು ಉತ್ಪತ್ತಿಶೂನ್ಯವೂ, ಕೆಂಪು, ಬಿಳುಪು, ಕಪ್ಪು ಈ ಬಣ್ಣವುಳ್ಳದ್ದೂ, ಸೃಷ್ಟಿಕರ್ತೃವೂ, ಸುರೂಪಿಯೂ, ಪ್ರಪಂಚದ

ಅಜೋಽಹಂ ವೈ ಬುದ್ಧಿಮರ್ತಾ ವಿಶ್ವರೂಪಾಂ
ಗಾಯತ್ರೀಂ ಗಾಂ ವಿಶ್ವರೂಪಾಂ ಹಿ ಬುಧ್ವಾ ॥ ೫೦ ॥

ಏವಮುಕ್ತ್ವಾ ಮಹಾದೇವಃ ಅಟ್ಟಹಾಸಮಥಾಕರೋತ್ ।
ವಲಿತಾಸ್ಫೋಟಿತರವಂ ಕಹಾಕಹನದಂ ತಥಾ ॥ ೫೨ ॥

ತತೋಽಸ್ಯ ಪಾರ್ಶ್ವತೋ ದಿವ್ಯಾಃ ಸರ್ವರೂಪಾಃ ಕುಮಾರಕಾಃ ।
ಜಟೀ ಮುಂಡೀ ಶಿಖಂಡೀ ಚ ಅರ್ಧಮುಂಡಶ್ಚ ಜಜ್ಞಿರೇ ॥ ೫೩ ॥

ತತಸ್ತೇ ತು ಯಥೋಕ್ತೇನ ಯೋಗೇನ ಸುಮಹೌಜಸಃ ।
ದಿವ್ಯಂ ವರ್ಷಸಹಸ್ರಂ ತು ಉಪಾಸಿತ್ವಾ ಮಹೇಶ್ವರಂ ॥ ೫೪ ॥

ಧರ್ಮೋಪದೇಶನಿಯತಂ ಕೃತ್ವಾ ಯೋಗಮಯಂ ದೃಢಂ ।
ಶಿಷ್ಯಾನಾಂ ನಿಯತಾತ್ಮಾನಃ ಪ್ರವಿಷ್ಟಾ ರುದ್ರಮೀಶ್ವರಂ ॥ ೫೫ ॥

---

ರೂಪಧಾರಿಯೂ, ಗಾಯತ್ರೀರೂಪಿಯೂ ಆಗಿರುತ್ತದೆ ಎಂದು ತಿಳಿಯುತ್ತೇನೆ. ಇದು ಸತ್ವ, ರಜ, ತಮಸ್ಸೆಂಬ ಗುಣತ್ರಯಾತ್ಮಕವಾದಕಾರಣ ಜಗತ್ತಿಗೆ ಮೂಲ ಕಾರಣವಾಗಿರುತ್ತಿದೆ ಎಂದು ತಿಳಿಯಬೇಕು.

೫೨. ಮಹಾದೇವನು ಹೀಗೆ ಹೇಳಿ ಅಟ್ಟಹಾಸವನ್ನು ಮಾಡಿದನು. ದೇಶವೆಲ್ಲವನ್ನೂ ಒಡದುಹೋಗುವಂತಹ ಕಹಾಕಹನವೆಂಬ ಧ್ವನಿಯನ್ನು ಮಾಡಿದನು.

೫೩. ಅನಂತರ ಈಶ್ವರನ ಪಾರ್ಶ್ವಗಳಿಂದ ದಿವ್ಯರೂ, ಸರ್ವರೂಪಿಗಳೂ, ಜಟಾಧಾರಿಗಳೂ, ಮುಂಡಧಾರಿಗಳೂ, ಶಿಖಂಡಿಗಳೂ, ಅರ್ಧಮುಂಡವುಳ್ಳವರೂ ಆದ ಕುಮಾರರು ಉತ್ಪನ್ನರಾದರು.

೫೪-೫೫. ಅನಂತರ ಮಹಾತೇಜಸ್ವಿಗಳೂ, ಜಿತೇಂದ್ರಿಯರೂ ಆದ ಆ ಮಕ್ಕಳು ಪೂರ್ವೋಕ್ತವಾದ ಯೋಗಾಭ್ಯಾಸದಿಂದ ಒಂದು ದಿವ್ಯಸಹಸ್ರವರ್ಷಗಳವರೆಗೂ, ಈಶ್ವರನನ್ನು ಸೇವಿಸಿ, ಮಹಾತ್ಮರಿಗೆ ದೃಢವೂ, ಯೋಗದ ವಿಷಯಕವೂ ಆದ ಧರ್ಮೋಪದೇಶವನ್ನು ಮಾಡಿ, ಕೊನೆಯಲ್ಲಿ ಮಹದೈಶ್ವರ್ಯರೂಪವಾದ ರುದ್ರದೇವನ ಪದವಿಯನ್ನು ಹೊಂದಿದರು.

॥ ವಾಯುರುವಾಚ ॥

ತತೋ ವಿಸ್ಮಯಮಾಪನ್ನೋ ಬ್ರಹ್ಮಾ ಲೋಕಪಿತಾಮಹಃ ।
ಪ್ರಪನ್ನಸ್ತು ಮಹಾದೇವಂ ಭಕ್ತಿಯುಕ್ತೇನ ಚೇತಸಾ ॥
ಉವಾಚ ವಚನಂ ಶರ್ವಂ ಶ್ವೇತತ್ವಂ ತೇ ಕಥಂ ವಿಭೋ ॥ ೫೬ ॥

॥ ಭಗವಾನುವಾಚ ॥

ಶ್ವೇತಕಲ್ಪೋ ಯದಾಹ್ಯಾಸೀದಹಂ ಶ್ವೇತಸ್ತತೋಽಭವಂ ।
ಶ್ವೇತೋಷ್ಣೀಷಃ ಶ್ವೇತಮಾಲ್ಯಃ ಶ್ವೇತಾಂಬರಧರಃ ಶಿವಃ ॥ ೫೭ ॥

ಶ್ವೇತಾಸ್ಥಿಮಾಂಸರೋಮಾ ಚ ಶ್ವೇತತ್ವಕ್ ಶ್ವೇತಲೋಹಿತಃ ।
ತೇನ ನಾಮ್ನಾ ಚ ವಿಖ್ಯಾತಃ ಶ್ವೇತಕಲ್ಪಸ್ತದಾ ಹ್ಯಸೌ ॥ ೫೮ ॥

ಮತ್ಪ್ರಸಾದಾಚ್ಚ ದೇವೇಶಃ ಶ್ವೇತಾಂಗಃ ಶ್ವೇತಲೋಹಿತಃ ।
ಶ್ವೇತವರ್ಣಾ ತದಾ ಹ್ಯಾಸೀತ್ ಗಾಯತ್ರೀ ಬ್ರಹ್ಮ ಸಂಜ್ಞಿತಾ ॥ ೫೯ ॥

---

೫೬. ವಾಯುದೇವನು ಹೇಳಿದನು :—ಅನಂತರ ಈ ಭಾಷಣದಿಂದ ಆಶ್ಚರ್ಯ ಗೊಂಡ ಲೋಕಪಿತಾಮಹನಾದ ಬ್ರಹ್ಮದೇವನು ಭಕ್ತಿಯುಕ್ತವಾದ ಮನಸ್ಸಿನಿಂದ ವಿಧೇಯನಾಗಿ ಮಂಗಳಧಾಯಕನೂ, ಮಹಾದೇವನೂ ಆದ ಸ್ವಾಮಿಯೇ, " ಶ್ವೇತ ಕಲ್ಪವು ಕಳೆದುಹೋದಬಳಿಕ ಯಾವ ಕಾರ್ಯವು ಉಂಟಾಯಿತು. " ಇದನ್ನು ತಿಳಿಸ ಬೇಕೆಂದು ಕೇಳಿದನು.

೫೭-೫೮. ಮಹಾದೇವನು ಹೇಳಿದನು :–ಶ್ವೇತಕಲ್ಪವು ಯಾವಾಗ ಉತ್ಪನ್ನ ವಾಯಿತೋ ಆಗ ನಾನು ಶ್ವೇತರೂಪಿಯೂ, ಶ್ವೇತವಾದ ರುಮಾಲು, ಗಂಧ, ಮಾಲ್ಯ ಅಂಬರ, ಅಸ್ಥಿ, ಮಾಂಸ, ಚರ್ಮ, ರೋಮ ಇವುಗಳುಳ್ಳವನೂ ಆದೆನು. ಆದುದ ರಿಂದ ಆ ಕಲ್ಪಕ್ಕೆ ಶ್ವೇತಕಲ್ಪವೆಂಬ ನಾಮವು ಅನ್ವರ್ಥವಾಗಿರುತ್ತದೆ ಎಂದನು.

೫೯. ಶ್ವೇತಾಂಗನೂ, ಕೆಂಪು, ಬಿಳುಪು ಮಿಶ್ರವಾದ ವರ್ಣವುಳ್ಳವನೂ ಆದನು. ಬ್ರಹ್ಮನನ್ನು ಪ್ರತಿಪಾದಿಸುವ ಗಾಯಿತ್ರೀದೇವಿಯೂ ಕೂಡ ಶ್ವೇತರೂಪಿ ಯಾದಳು.

ಯಸ್ಮಾದಹಂ ಚ ದೇವೇಶ ತ್ವಯಾ ಗುಹ್ಯೇ ಪದೇ ಸ್ಥಿತಃ ।
ವಿಜ್ಞಾತಃ ಸ್ವೇನ ತಪಸಾ ಸದ್ಯೋಜಾತಃ ಸನಾತನಃ ॥
ಸದ್ಯೋ ಜಾತೇತಿ ಬ್ರಹ್ಮೇತದ್ ಗುಹ್ಯಂ ಚೈವ ಪ್ರಕೀರ್ತಿತಂ ॥ ೬೦ ॥

ತಸ್ಮಾದ್ಗುಹ್ಯತ್ವಮಾಪನ್ನಂ ಯೇ ವೇತ್ಸ್ಯಂತಿ ದ್ವಿಜಾತಯಃ ।
ತತ್ಸಮೀಪಂ ಗಮಿಷ್ಯಂತಿ ಪುನರಾವೃತ್ತಿದುರ್ಲಭಂ ॥ ೬೧ ॥

ಯದಾಹಂ ಚ ಪುನಸ್ತ್ವಾಸಂ ಲೋಹಿತೋ ನಾಮ ನಾಮತಃ ।
ಮಮಕೃತೇನ ವರ್ಣೇನ ಕಲ್ಪೋ ವೈ ಲೋಹಿತಃ ಸ್ಮೃತಃ ॥ ೬೨ ॥

ತದಾ ಲೋಹಿತಮಾಂಸಾಸ್ಥಿ ಲೋಹಿತಕ್ಷೀರಸನ್ನಿಭಾ ।
ಲೋಹಿತಾಕ್ಷಸ್ತನವತೀ ಗಾಯತ್ರೀ ಗೌಃ ಪ್ರಕೀರ್ತಿತಾ ॥ ೬೩ ॥

ತತೋಽಸ್ಯ ಲೋಹಿತತ್ವೇನ ವರ್ಣಸ್ಯ ಚ ವಿಪರ್ಯಯೇ ।
ವಾಮತ್ವಾಚ್ಚೈವ ಯೋಗಸ್ಯ ವಾಮದೇವತ್ವಮಾಗತಃ ॥ ೬೪ ॥

---

೬೦. ಎಲೈ ದೇವೇಶನಾದ ಬ್ರಹ್ಮನೇ, ನಾನು ರಹಸ್ಯವಾಗಿದ್ದರೂ ನೀನು ಮಹಾತಪಸ್ಸನ್ನು ಮಾಡಿ ನನ್ನನ್ನು ತಿಳಿದಿರುತ್ತೀಯೇ. ನಾನು ಸನಾತನನಾಗಿದ್ದರೂ ಸದ್ಯೋಜಾತನೆಂದು ತಿಳಿಯಲ್ಪಟ್ಟಿರುತ್ತೇನೆ. ಅದುದರಿಂದ ಬ್ರಹ್ಮರೂಪಿಯಾದ ಈ ನನಗೆ ಸದ್ಯೋಜಾತನೆಂದೂ, ಗುಹ್ಯನೆಂದೂ ಎರಡು ನಾಮಗಳು ಪ್ರಖ್ಯಾತವಾಗಿವೆ ಎಂದನು.

೬೧. ಆದುದರಿಂದ ರಹಸ್ಯನಾದ ನನ್ನನ್ನು ಯಾರು ತಿಳಿಯುತ್ತಾರೆಯೋ ಅಂತಹ ಬ್ರಾಹ್ಮಣರೇ ಮೊದಲಾದವರು ಪುನರಾವೃತ್ತಿರಹಿತವೂ, ಅತ್ಯಂತದುರ್ಲಭವೂ ಆದ ನನ್ನ ಸಮೀಪವನ್ನು ಹೊಂದುವರು.

೬೨. ನಾನು ಯಾವಾಗ ಲೋಹಿತನಾಮದಿಂದ ಪ್ರಖ್ಯಾತನಾಗಿದ್ದೆನೋ ಅಂತಹ ವರ್ಣದಿಂದ ಈ ಕಲ್ಪವೂ ಸಹ ಅದೇ ನಾಮವನ್ನು ಪಡೆದು ಪ್ರಖ್ಯಾತವಾಗಲಿ ಎಂದನು.

೬೩. ಆಗ ಕೆಂಪಾದ ಮಾಂಸ, ಮೂಳೆ, ರಕ್ತ, ನೇತ್ರ, ಸ್ತನ, ಹಸ್ತ ಮತ್ತು ಕ್ಷೀರ ಇವುಗಳುಳ್ಳ ಗಾಯತ್ರೀದೇವಿಯು ಕಾಮಧೇನುವೆಂದು ಪ್ರಖ್ಯಾತಳಾದಳು.

೬೪. ಆಗ ಬಿಳುಪಾದ ವರ್ಣವು ಕೆಂಪಾದುದರಿಂದಲೂ, ಯೋಗವು ಬದಲಾವಣೆಯಾದುದರಿಂದಲೂ ವಾಮದೇವನೆಂದು ಪ್ರಸಿದ್ಧನಾದನು.

ತಥಾಪಿ ಹಿ ಮಹಾಸತ್ವ ತ್ವಯಾಹಂ ನಿಯತಾತ್ಮನಾ ।
ವಿಜ್ಞಾತಃ ಶ್ವೇತವರ್ಣೇನ ತಸ್ಮಾದ್ವರ್ಣೋತ್ತಮಃ ಸ್ಮೃತಃ ॥
ತತೋಽಹಂ ವಾಮದೇವೇತಿ ಖ್ಯಾತಿಂ ಯಾತೋ ಮಹೀತಲೇ ॥ ೬೫ ॥

ಯೇ ಚಾಪಿ ವಾಮದೇವತ್ವಂ ಜ್ಞಾಸ್ಯಂತೀಹ ದ್ವಿಜಾತಯಃ ।
ವಿಜ್ಞಾಯ ಚೇಮಾಂ ರುದ್ರಾಣೀಂ ಗಾಯತ್ರೀಂ ಮಾತರಂ ವಿಭೋ ॥ ೬೬ ॥

ಸರ್ವಪಾಪವಿನಿರ್ಮುಕ್ತಾ ವಿರಜಾ ಬ್ರಹ್ಮವರ್ಚಸಃ ।
ರುದ್ರಲೋಕಂ ಗಮಿಷ್ಯಂತಿ ಪುನರಾವೃತ್ತಿದುರ್ಲಭಂ ॥ ೬೭ ॥

ಯದಾ ತು ಪುನರೇವಾಯಂ ಕೃಷ್ಣವರ್ಣೋ ಭಯಾನಕಃ ।
ಮತ್ಕೃತೇನ ಚ ವರ್ಣೇನ ಮತ್ಕಲ್ಪಃ ಕೃಷ್ಣ ಉಚ್ಯತೇ ॥ ೬೮ ॥

ತತ್ರಾಹಂ ಕಾಲಸಂಕಾಶಃ ಕಾಲೋ ಲೋಕಪ್ರಕಾಶನಃ ।
ವಿಜ್ಞಾತೋಽಹಂ ತ್ವಯಾ ಬ್ರಹ್ಮನ್ ಘೋರೋ ಘೋರಪರಾಕ್ರಮಃ ॥ ೬೯ ॥

---

೬೫. ಎಲೈ ಜಿತೇಂದ್ರಿಯನೂ ಮಹಾತ್ಮನೂ ಆದ ಬ್ರಹ್ಮನೇ, ನೀನು ನನ್ನನ್ನು ಶ್ವೇತವರ್ಣನೆಂದು ತಿಳಿದುದರಿಂದ ಈ ಕಲ್ಪಕ್ಕೆ ಈ ನಾಮವು ಪ್ರಾಪ್ತವಾಗಿದೆ. ಈ ನಾಮದಿಂದಲೇ ನಾನೂ ಸಹ ವಾಮದೇವನೆಂಬುದಾಗಿ ಪ್ರಖ್ಯಾತನಾಗಿರುವೆನು.

೬೬-೬೭. ಎಲೈ ಪ್ರಭುವಾದ ಬ್ರಹ್ಮದೇವನೇ, ಯಾವ ಬ್ರಾಹ್ಮಣಾದಿ ವರ್ಣದವರು ನನ್ನ ವಾಮದೇವತನವನ್ನೂ ಮತ್ತು ತಾಯಿಯಂತಿರುವ ಗಾಯತ್ರೀನಾಮಕಳಾದ ರುದ್ರಾಣಿಯನ್ನೂ ತಿಳಿಯುತ್ತಾರೋ ಅವರು ಸರ್ವಪಾಪಗಳಿಂದ ಮುಕ್ತರೂ ವಿರಜಸ್ಕರೂ ಬ್ರಹ್ಮವರ್ಚಸ್ವಿಗಳೂ ಆಗಿ ಪುನರಾವೃತ್ತಿರಹಿತವಾದ ರುದ್ರದೇವನ ಲೋಕವನ್ನು ಹೊಂದುವರು.

೬೮. ಯಾವಾಗ ನಾನು ಕಪ್ಪುವರ್ಣದವನೂ ಭಯಂಕರನೂ ಆಗುವೆನೋ ಆಗ ಆ ಕಲ್ಪಕ್ಕೂ ಕೂಡ ಕೃಷ್ಣಕಲ್ಪವೆಂದೇ ನಾಮವು ಬರುವುದು. ಈ ನಾಮದಿಂದಲೇ ಇದು ಪ್ರಸಿದ್ಧಿಯಾಗುವುದು.

೬೯. ನಾನು ಕಾಲಾನುಗುಣವಾದ ರೂಪ, ಆಕಾರ ಇವೇ ಮೊದಲಾದವುಗಳನ್ನು ಹೊಂದಿರುತ್ತೇನೆ. ಕಾಲವಾದರೋ ಲೋಕಕ್ಕೆ ಅನುಗುಣವಾಗಿ ನಡೆಯುತ್ತದೆ. ಆದುದರಿಂದ ಬ್ರಹ್ಮನೇ ನೀನು ನನ್ನನ್ನು ಘೋರರೂಪಿಯನ್ನಾಗಿಯೂ, ಘೋರಪರಾಕ್ರಮಿಯನ್ನಾಗಿಯೂ, ತಿಳಿಯುವನಾಗು ಎಂದು ಹೇಳಿದನು.

ತಸ್ಮಾತ್ ಘೋರತ್ವಮಾಪನ್ನಂ ಯೇ ಮಾಂ ಪಶ್ಯಂತಿ ಭೂತಲೇ ।
ತೇಷಾಮಘೋರಃ ಶಾಂತಶ್ಚ ಭವಿಷ್ಯಾಮ್ಯಹಮವ್ಯಯಃ ॥ ೭೦ ॥

ತಸ್ಮಾದ್ವಿಶ್ವತ್ವಮಾಪನ್ನಂ ಯೇ ಮಾಂ ಪಶ್ಯಂತಿ ಭೂತಲೇ ।
ತೇಷಾಂ ಶಿವಶ್ಚ ಸೌಮ್ಯಶ್ಚ ಭವಿಷ್ಯಾಮಿ ಸದೈವ ತು ॥ ೭೧ ॥

ತಸ್ಮಾಚ್ಚ ವಿಶ್ವರೂಪೋ ವೈ ಕಲ್ಪೋಽಯಂ ಸಮುದಾಹೃತಃ ।
ವಿಶ್ವರೂಪಾ ತಥಾ ಚೇಯಂ ಸಾವಿತ್ರೀ ಸಮುದಾಹೃತಾ ॥ ೭೨ ॥

ಸರ್ವರೂಪಾಸ್ತಥಾ ಚೈಮೇ ಸಂವೃತ್ತಾ ಮಮ ಪುತ್ರಕಾಃ ।
ಚತ್ವಾರಸ್ತೇ ಸಮಾಖ್ಯಾತಾಃ ಪಾದಾ ವೈ ಲೋಕಸಮ್ಮತಾಃ ॥ ೭೩ ॥

ತಸ್ಮಾಚ್ಚ ಸರ್ವವರ್ಣತ್ವಂ ಪ್ರಜಾತ್ವಂ ಮೇ ಭವಿಷ್ಯತಿ ।
ಸರ್ವಭಕ್ಷ್ಯಾ ಚ ಮೇಧ್ಯಾ ಚ ವರ್ಣತಶ್ಚ ಭವಿಷ್ಯತಿ ॥ ೭೪ ॥

---

೭೦ ಆದುದರಿಂದ ಈ ಭೂಲೋಕದಲ್ಲಿ ಯಾವನು ನನ್ನ ಘೋರರೂಪವನ್ನು ತಿಳಿಯುವನೋ ಅವನಿಗೆ ನಾನು ಶಾಂತನೂ, ದಾಂತನೂ, ಅವ್ಯಯನೂ ಆಗಿ ಪ್ರೀತನಾಗುವೆನು.

೭೧. ಆದುದರಿಂದ ಈ ಲೋಕದಲ್ಲಿ ಯಾರು ನನ್ನ ಈ ವಿಶ್ವರೂಪವನ್ನು ನೋಡುತ್ತಾರೋ ಅವರಿಗೆ ನಾನು ಯಾವಾಗಲೂ ಮಂಗಳಕರನೂ, ಸೌಮ್ಯನೂ ಆಗುವೆನು.

೭೨. ಆದುದರಿಂದ ಜನರು ಯಾವ ಕಲ್ಪವನ್ನು ವಿಶ್ವರೂಪಕಲ್ಪವೆಂಬುದಾಗಿ ಕರೆಯುತ್ತಾರೋ ಆ ಕಲ್ಪದಲ್ಲಿ ಸಾವಿತ್ರೀದೇವಿಯು ವಿಶ್ವರೂಪಿಯೆಂದು ಪ್ರಖ್ಯಾತಳಾಗಿರುವಳು.

೭೩-೭೪. ಈ ನನ್ನ ನಾಲ್ಕುಜನ ಮಕ್ಕಳೂ, ಸಮಸ್ತ ರೂಪವುಳ್ಳವರೂ, ಸರ್ವಲೋಕಪ್ರಿಯರೂ, ನಾಲ್ಕು ಪಾದಗಳಂತೆ ಪ್ರಖ್ಯಾತರೂ ಆಗಿರುವರು. ಆದುದರಿಂದ ಅವರು ಸಮಸ್ತವರ್ಣದವರೂ, ಮೇಧಾವಿಗಳೂ, ಸರ್ವಭಕ್ಷಕರೂ, ಸರ್ವಜಾತಿಯವರೂ ಆಗಿ ಪ್ರಸಿದ್ಧರಿರುವರು.

ಮೋಕ್ಷೋ ಧರ್ಮಸ್ತಥಾರ್ಥಶ್ಚ ಕಾಮಶ್ಚೇತಿ ಚತುಷ್ಟಯಂ ।
ತಸ್ಮಾದ್ವೇತ್ತಾ ಚ ವೇದ್ಯಂ ಚ ಚತುರ್ಧಾ ವೈ ಭವಿಷ್ಯತಿ ॥ ೨೫ ॥

ಭೂತಗ್ರಾಮಾಶ್ಚ ಚತ್ವಾರಶ್ಚತ್ವಾರಶ್ಚಾಶ್ರಮಾಃ ಸ್ಮೃತಾಃ ।
ಧರ್ಮಸ್ಯ ಪಾದಾಶ್ಚತ್ವಾರಶ್ಚತ್ವಾರೋ ಮಮ ಪುತ್ರಕಾಃ ॥ ೨೬ ॥

ತಸ್ಮಾಚ್ಚತುರ್ಯುಗಾವಸ್ಥಂ ಜಗದ್ವೈ ಸ ಚರಾಚರಂ ।
ಚತುರ್ಧಾವಸ್ಥಿತಂ ಚೈವ ಚತುಷ್ಪಾದಂ ಭವಿಷ್ಯತಿ ॥ ೨೭ ॥

ಭೂರ್ಲೋಕೋಥ ಭುವರ್ಲೋಕಃ ಸ್ವರ್ಲೋಕೋಥ ಮಹಸ್ತಥಾ ।
ಜನಸ್ತಪಶ್ಚ ಶಾಂತಶ್ಚ ರುದ್ರಲೋಕಸ್ತತಃ ಪರಂ ॥ ೨೮ ॥

ಸ್ವರ್ಲೋಕೋ ಹಿ ತೃತೀಯಸ್ತು ಚತುರ್ಥಸ್ತು ಮಹಃ ಸ್ಮೃತಃ ।
ತತ್ರ ಲೋಕಃ ಪರಂ ಸ್ಥಾನಂ ಪರಂ ತದ್ಯೋಗಿನಾಂ ಸ್ಮೃತಂ ॥ ೨೯ ॥

---

೨೫. ಈ ಲೋಕದಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳು ಇರುವುವು. ಇವುಗಳನ್ನು ತಿಳಿಯುವ ಪುರುಷನು ವೇದ್ಯನಾದ ಭಗವಂತನ ಅನುಗ್ರಹದಿಂದ ಆ ನಾಲ್ಕುವಿಧಗಳಾದ ಪುರುಷಾರ್ಥಗಳನ್ನೂ ಪಡೆಯುವನು.

೨೬. ಈ ಲೋಕದಲ್ಲಿ ನಾಲ್ಕು ಭೂತಗಳೂ, ನಾಲ್ಕು ಆಶ್ರಮಗಳೂ, ನಾಲ್ಕು ಧರ್ಮಗಳೂ ಮತ್ತು ನನ್ನ ನಾಲ್ಕುಜನ ಪುತ್ರರೂ ಪ್ರಸಿದ್ಧರಾಗಿ ಇರುವರು.

೨೭. ಆದುದರಿಂದ ಚರಚರಾತ್ಮಕವಾದ ಈ ಲೋಕವು ಕೃತ, ತ್ರೇತಾ, ದ್ವಾಪರ, ಕಲಿ ಎಂಬುದಾಗಿ ನಾಲ್ಕು ಯುಗವುಳ್ಳದ್ದಾಗಿಯೂ, ನಾಲ್ಕು ಧರ್ಮಗಳು ಮತ್ತು ನಾಲ್ಕು ಪಾವಗಳುಳ್ಳದ್ದಾಗಿಯೂ ಇರುವುದು.

೨೮. ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹೋಲೋಕ, ಜನೋಲೋಕ, ತಪೋಲೋಕ ಶಾಂತವಾದ ರುದ್ರಲೋಕವೆಂಬುದಾಗಿ ಸಪ್ತಲೋಕಗಳು ಪ್ರಖ್ಯಾತಗಳಾಗಿವೆ.

೨೯. ಆ ಲೋಕಗಳಲ್ಲಿ ಮೂರನೆಯ ಲೋಕವು ಸ್ವರ್ಗಲೋಕವಾಗಿಯೂ, ನಾಲ್ಕನೆಯದು ಮಹರ್ಲೋಕವಾಗಿಯೂ ಇವೆ. ಅವುಗಳಲ್ಲಿ ಯೋಗಿಗಳಿಗೆ ಉತ್ತರೋತ್ತರ ಲೋಕಗಳು ಶ್ರೇಷ್ಠಗಳಾಗಿವೆ. ಅಂದರೆ ಯೋಗಿಗಳು ತಂತಮ್ಮ ಯೋಗ್ಯತಾನುಸಾರವಾಗಿ ಉತ್ತಮೋತ್ತಮಗಳಾದ ಲೋಕಗಳನ್ನು ಪಡೆಯುವರು.

ನಿರ್ಮಮಾ ನಿರಹಂಕಾರಾಃ ಕಾಮಕ್ರೋಧ ವಿವರ್ಜಿತಾಃ ।
ದ್ರಕ್ಷ್ಯಂತೇ ತದ್ವಿದೋಯುಕ್ತಾ ಧ್ಯಾನತತ್ಪರಯುಂಜಕಾಃ ॥ ೮೦ ॥

ಯಸ್ಮಾಚ್ಚತುಷ್ಪದಾ ಹ್ಯೇಷಾ ತ್ವಯಾ ದೃಷ್ಟಾ ಸರಸ್ವತೀ ।
ತಸ್ಮಾಚ್ಚ ಪಶವಃ ಸರ್ವೇ ಭವಿಷ್ಯಂತಿ ಚತುಷ್ಪದಾಃ ॥
ತಸ್ಮಾಚ್ಚ ತೇಷಾಂ ಭವಿಷ್ಯಂತಿ ಚತ್ವಾರೋ ವೈ ಪಯೋಧರಾಃ ॥ ೮೧ ॥

ಸೋಮಶ್ಚ ಮಂತ್ರ ಸಂಯುಕ್ತೋ ಯಸ್ಮಾನ್ಮಮ ಮುಖಾಚ್ಚ್ಯುತಃ ।
ಜೀವಃ ಪ್ರಾಣಭೃತಾಂ ಬ್ರಹ್ಮನ್ ಸರ್ವಃ ಪೀತ್ವಾ ಸ್ತನೈರ್ಧೃತಂ ॥ ೮೨ ॥

ತಸ್ಮಾತ್ ಸೋಮಮಯಾಚ್ಚೈತ ದಮೃತಂ ಚೈವ ಸಂಜ್ಞಿತಂ ।
ಚತುಷ್ಪದಾ ಭವಿಷ್ಯಂತಿ ಶ್ವೇತತ್ವಂ ಚಾಸ್ಯ ತೇನ ತತ್ ॥ ೮೩ ॥

---

೮೦. ಅಭಿಮಾನರಹಿತರೂ, ಅಹಂಕಾರವಿಲ್ಲದವರೂ, ಕ್ರಾಮಕ್ರೋಧವರ್ಜಿತರೂ, ಧ್ಯಾನಪರರೂ ಆದ ಮಹಾಯೋಗಿಗಳು ಅಂತಹ ಲೋಕಗಳನ್ನು ಹೊಂದುವರು.

೮೧. ಎಲೈ ಬ್ರಹ್ಮದೇವನೇ, ನೀನು ನೋಡಿರುವ ಸರಸ್ವತಿಗೆ ನಾಲ್ಕು ಪಾದಗಳು ಇವೆಯಲ್ಲವೆ? ಆದುದರಿಂದಲೇ ಸಕಲ ಪಶುಗಳಿಗೂ ನಾಲ್ಕು ಪಾದಗಳೂ ಮತ್ತು ನಾಲ್ಕು ಸ್ತನಗಳೂ ಕೂಡ ಸಂಭವಿಸಿರುತ್ತವೆ.

೮೨. ಮಂತ್ರಸಹಿತನಾದ ಚಂದ್ರನು ನನ್ನ ಮುಖದಿಂದ ಹುಟ್ಟಿರುವನು. ಎಲೈ ಬ್ರಹ್ಮನೇ, ಸರ್ವಪ್ರಾಣಿಗಳಿಗೂ ಜೀವಾಧಾರಕವಾದ ಕ್ಷೀರವನ್ನು ಕಾಮಧೇನುಗಳು ತಮ್ಮ ಕೆಚ್ಚಲುಗಳಲ್ಲಿ ಧರಿಸಿರುತ್ತವೆ. ಅದನ್ನು ಸರ್ವಪ್ರಾಣಿಗಳೂ ಪಾನ ಮಾಡಿ ಜೀವಿಸುತ್ತವೆ ಎಂದನು.

೮೩. ಆದುದರಿಂದ ಈ ಕ್ಷೀರವು ಚಂದ್ರನಿಂದ ಉತ್ಪನ್ನವಾಗಿರುವುದು. ಆದುದರಿಂದ ಅದಕ್ಕೆ ಅಮೃತವೆಂಬ ಸಂಜ್ಞೆಯು ಉಂಟಾಗಿದೆ. ಆ ಕ್ಷೀರವು ಚತುಷ್ಪಾದವಿರುವ ಪ್ರಾಣಿಗಳಿಂದ ಉತ್ಪನ್ನವಾಗಿಯೂ, ಶುಭ್ರವಾಗಿಯೂ ಇರುತ್ತದೆ.

ಯಸ್ಮಾಚ್ಚೈವಂ ಕ್ರಿಯಾಭೂತ್ವಾ ದ್ವಿಪದಾ ವೈ ಮಹೇಶ್ವರೀ ।
ದೃಷ್ಟಾ ಪುನಸ್ತ್ವಯಾ ಚೈಷಾ ಸಾವಿತ್ರೀ ಲೋಕಭಾವಿನೀ ॥
ತಸ್ಮಾದ್ವೈ ದ್ವಿಪದಾಃ ಸರ್ವೇ ದ್ವಿಸ್ತನಾಶ್ಚ ನರಾಃ ಸ್ಮೃತಾಃ ॥ ೮೪ ॥

ಯಸ್ಮಾಚ್ಚೈವಮಜಾ ಭೂತ್ವಾ ಸರ್ವವರ್ಣಾ ಮಹೇಶ್ವರೀ ।
ದೃಷ್ಟಾ ತ್ವಯಾ ಮಹಾಸತ್ವಾ ಸರ್ವಭೂತಧರಾ ವರಾ ॥
ತಸ್ಮಾತ್ತು ವಿಶ್ವರೂಪಾತ್ವಮಜಾನಾಂ ವೈ ಭವಿಷ್ಯತಿ ॥ ೮೫ ॥

ಅಜಶ್ಚೈವ ಮಹಾತೇಜಾ ವಿಶ್ವರೂಪೋ ಭವಿಷ್ಯತಿ ।
ಅಮೋಘರೇತಾಃ ಸರ್ವತ್ರ ಮುಖೇ ಚಾಸ್ಯ ಹುತಾಶನಃ ॥
ತಸ್ಮಾತ್ ಸರ್ವಗತೋ ಮೇಧ್ಯಃ ವಿಶ್ವರೂಪೀ ಹುತಾಶನಃ ॥ ೮೬ ॥

ತಪಸಾ ಭಾವಿತಾತ್ಮಾನೋ ಯೇ ವೈ ದ್ರಕ್ಷ್ಯಂತಿ ವೈ ದ್ವಿಜಾಃ ।
ಈಶತ್ವೇ ಚ ಶಿವತ್ವೇ ಚ ಸರ್ವಗಂ ಸರ್ವತಃ ಸ್ಥಿರಂ ॥ ೮೭ ॥

---

೮೪. ಈ ರೀತಿಯಾದ ವ್ಯಾಪಾರವುಳ್ಳವಳೂ, ದ್ವಿಪಾದಗಳಿರುವವಳೂ ಆದ ಯಾವ ಮಹೇಶ್ವರಿಯು ಉತ್ಪನ್ನಳಾದಳೋ ಅಂತಹ ಲೋಕಪಾವನೆಯಾದ ಸರಸ್ವತಿಯನ್ನು ನೀನು ನೋಡಿರುತ್ತೀಯೆ. ಆಕೆಯಿಂದ ದ್ವಿಸ್ತನಪ್ರಾಣಿಗಳೂ ಮತ್ತು ಮನುಷ್ಯರೂ ಉತ್ಪನ್ನರಾಗಿರುವರು. ಆಕೆಯ ಅನುಗ್ರಹದಿಂದಲೇ ಸ್ತ್ರೀಯರಿಗೂ ಕೆಲವು ಪ್ರಾಣಿಗಳಿಗೂ ದ್ವಿಸ್ತನಗಳು ಉಂಟಾಗಿವೆ.

೮೫. ಎಲೈ ಬ್ರಹ್ಮನೇ, ಯಾರಿಂದ ಉತ್ಪತ್ತಿಶೂನ್ಯಳೂ, ಸರ್ವವರ್ಣಮಯಳೂ ಆದ ಮಹೇಶ್ವರಿಯೂ, ವ್ಯಕ್ತಳೂ, ಮಹಾಸತ್ಯವತಿಯೂ, ದಯಾಪರಳೂ ಆಗಿ ದೃಷ್ಟಳಾದಳೋ ಅವಳಿಂದಲೇ ಅಜಗಳಿಗೆ ವಿಶ್ವರೂಪತನವು ಸಂಭವಿಸುವುದು.

೮೬. ಬ್ರಹ್ಮನೂ ಸಹ ಮಹಾತೇಜಸ್ವಿಯಾದ ವಿಶ್ವರೂಪಿಯಾಗುವನು ಮತ್ತು ಸರ್ವತ್ರ ಅಮೋಘವೀರ್ಯವುಳ್ಳವನೂ, ಅಗ್ನಿಮುಖನೂ ಆಗುವನು. ಇದರಿಂದ ವಿಶ್ವರೂಪಿಯಾದ ಅಗ್ನಿಯು ಪರಿಶುದ್ಧವೂ, ಸರ್ವಗತವೂ ಆಗಿರುವುದು.

೮೭-೮೮. ಯಾವ ಬ್ರಾಹ್ಮಣನು ತಪಸ್ಸಿನಿಂದ ನಿರ್ಮಲಾಂತಃಕರಣನಾಗಿ ಈಶನೂ, ಸ್ವತಂತ್ರನೂ, ಸರ್ವಾಂತರ್ಯಾಮಿಯೂ, ಸರ್ವವ್ಯಾಪಿಯೂ ಆದ ನನ್ನನ್ನು

ರಜಸ್ತಮೋವಿನಿರ್ಮುಕ್ತಾಸ್ತ್ಯಕ್ತ್ವಾ ಮಾನುಷ್ಯಕಂ ಭುವಿ ।
ಮತ್ಸಮೀಪಂ ಗಮಿಷ್ಯಂತಿ ಪುನರಾವೃತ್ತಿದುರ್ಲಭಂ ॥ ೮೮ ॥

ಇತ್ಯೇವ ಮುಕ್ತೋ ಭಗವಾನ್ ಬ್ರಹ್ಮಾ ರುದ್ರೇಣ ವೈ ದ್ವಿಜಾಃ ।
ಪ್ರಣಮ್ಯ ಪ್ರಯತೋ ಭೂತ್ವಾ ಪುನರಾಹ ಪಿತಾಮಹಃ ॥ ೮೯ ॥

॥ ಬ್ರಹ್ಮೋವಾಚ ॥

ಭಗವನ್ ದೇವ ದೇವೇಶ ವಿಶ್ವರೂಪೀ ಮಹೇಶ್ವರಃ ।
ಇಮಾಸ್ತವ ಮಹಾದೇವ ತನವೋ ಲೋಕವಂದಿತಾಃ ॥ ೯೦ ॥

ವಿಶ್ವರೂಪ ಮಹಾಸತ್ವ ಕಸ್ಮಿನ್ ಕಾಲೇ ಮಹಾಭುಜ ।
ಕಸ್ಯಾಂ ವಾ ಯುಗಸಂಭೂತ್ಯಾಂ ದ್ರಕ್ಷ್ಯಂತಿ ತ್ವಾಂ ದ್ವಿಜಾತಯಃ ॥ ೯೧ ॥

ಕೇನ ವಾ ತತ್ವಯೋಗೇನ ಧ್ಯಾನಯೋಗೇನ ಕೇನ ವಾ ।
ತನವಸ್ತೇ ಮಹಾದೇವ ಶಕ್ಯಾ ದ್ರಷ್ಟುಂ ದ್ವಿಜಾತಿಭಿಃ ॥ ೯೨ ॥

---

ತಿಳಿಯುತ್ತಾನೆಯೋ ಅವನು ರಜಸ್ತಮೋಗುಣಗಳಿಂದ ರಹಿತನೂ, ಕೇವಲ ಸತ್ವ ಗುಣವಂತನೂ ಆಗಿ ಈ ಭೂತಶರೀರವನ್ನು ಬಿಟ್ಟು ಪುನರಾವೃತ್ತಿರಹಿತವೂ ದುರ್ಲಭವೂ ಆದ ನನ್ನ ಸಮೀಪವನ್ನು ಹೊಂದುವನು.

೮೯. ಎಲೈ ವಿಪ್ರರೇ, ಪೂಜ್ಯನಾದ ರುದ್ರದೇವನು ಹೀಗೆ ಹೇಳಲಾಗಿ ಪಿತಾಮಹನಾದ ಬ್ರಹ್ಮದೇವನು ಅವನನ್ನು ನಮಸ್ಕರಿಸಿ ವಿಧೇಯನಾಗಿ ಇಂತೆಂದನು.

೯೦. ಬ್ರಹ್ಮದೇವನು ಹೇಳಿದನು ;—ಎಲೈ ಈಶ್ವರನೇ ಪೂಜ್ಯನೂ, ದೇವತೆಗಳಿಗೆ ಒಡೆಯನೂ, ವಿಶ್ವರೂಪಿಯೂ ಆದ ಮಹಾದೇವನೇ, ನಿನ್ನ ಈ ವ್ಯಾಪ್ತವಾದ ಮೂರ್ತಿಗಳು ಲೋಕವಂದಿತಗಳಾಗಿವೆ.

೯೧-೯೨. ವಿಶ್ವರೂಪನೂ, ಮಹಾಭುಜವುಳ್ಳವನೂ, ಮಹಾಬಲಿಷ್ಟನೂ ಆದ ಮಹಾದೇವನೇ ಬ್ರಾಹ್ಮಣಾದಿಜನರು ಯಾವ ಯುಗದಲ್ಲಿ ಮತ್ತು ಯಾವ ಕಾಲದಲ್ಲಿ ಯಾವ ಯಾವ ಧ್ಯಾನಯೋಗದಿಂದಲೂ ತತ್ವಯೋಗದಿಂದಲೂ ನಿನ್ನ ಆ ವಿಶ್ವರೂಪಗಳನ್ನು ನೋಡಲು ಶಕ್ತರಾಗುವರು ? ಎಂದು ಕೇಳಿದನು.

॥ ಭಗವಾನುವಾಚ ॥

ತಪಸಾ ನೈವ ಯೋಗೇನ ದಾನಧರ್ಮಫಲೇನ ವಾ ।
ನ ತೀರ್ಥಫಲಯೋಗೇನ ಕ್ರತುಭಿರ್ವಾ ಸದಕ್ಷಿಣೈಃ ॥ ೯೩ ॥

ನ ವೇದಾಧ್ಯಾಪನೈರ್ವಾಪಿ ನ ಚಿತ್ತೇನ ನಿವೇದನೈಃ ।
ಶಕ್ಯೋ ಹಂ ಮಾನುಷೈರ್ದ್ರಷ್ಟುಂ ಋತೇ ಧ್ಯಾನಾತ್ಪರಂ ನ ಹಿ ॥ ೯೪ ॥

ಸಾಧ್ಯೋ ನಾರಾಯಣಶ್ಚೈವ ವಿಷ್ಣುಸ್ತ್ರಿಭುವನೇಶ್ವರಃ ।
ಭವಿಷ್ಯತೀಹ ನಾಮ್ನಾ ತು ವಾರಾಹೋ ನಾಮ ವಿಶ್ರುತಃ ॥ ೯೫ ॥

ಚತುರ್ಬಾಹುಶ್ಚತುಷ್ಪಾದಶ್ಚತುರ್ನೇತ್ರಶ್ಚತುರ್ಮುಖಃ ।
ತದಾ ಸಂವತ್ಸರೋ ಭೂತ್ವಾ ಯಜ್ಞರೂಪೀ ಭವಿಷ್ಯತಿ ॥
ಷಡಂಗಶ್ಚ ತ್ರಿಶೀರ್ಷಶ್ಚ ತ್ರಿಸ್ಥಾನೇ ತ್ರಿಶರೀರವಾನ್ ॥ ೯೬ ॥

ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚೈವ ಚತುರ್ಯುಗಂ ।
ಏತಸ್ಯ ಪಾದಾಶ್ಚತ್ವಾರಃ ಅಂಗಾನಿ ಕ್ರತವಸ್ತಥಾ ॥ ೯೭ ॥

---

೯೩-೯೪. ಭಗವಂತನು ಹೇಳಿದನು:—ಎಲೈ ಬ್ರಹ್ಮದೇವನೇ, ಮನುಷ್ಯರು ಧ್ಯಾನವನ್ನು ಬಿಟ್ಟರೆ ಉಳಿದ ತಪಸ್ಸು, ಯೋಗ, ದಾನಧರ್ಮ, ತೀರ್ಥಯಾತ್ರೆ, ಸತ್ಕರ್ಮಾನುಷ್ಠಾನ, ದಕ್ಷಿಣೆಗಳಿಂದ ಸಹಿತವಾದ ಯಾಗ, ವೇದಾಧ್ಯಯನ, ಅಧ್ಯಾಪನ, ಮನೋನಿವೇದನ ಇವುಗಳಿಂದ ನನ್ನ ಮೂರ್ತಿಗಳನ್ನು ನೋಡಲು ಶಕ್ತರಾಗುವುದಿಲ್ಲ ಎಂದನು.

೯೫. ಎಲೈ ಬ್ರಹ್ಮನೇ, ಮೂರು ಲೋಕಗಳಿಗೆ ಈಶ್ವರನೂ, ಸಾಧ್ಯನೂ, ನಾರಾಯಣನಾಮಕನೂ ಆದ ಮಹಾವಿಷ್ಣುವು ವರಾಹರೂಪವನ್ನು ಪಡೆದು ಲೋಕ ವಿಖ್ಯಾತನಾಗಿ ಈ ಭೂಮಿಯನ್ನು ಅವತರಿಸುವನು.

೯೬. ಶ್ರೀಹರಿಯು ನಾಲ್ಕಾದ ತೋಳು, ಪಾದ, ನೇತ್ರ, ಮುಖ ಇವುಗಳುಳ್ಳವನೂ, ಸಂವತ್ಸರ ಮತ್ತು ಯಜ್ಞನಾಮಕನೂ ಆಗುವನು. ಮತ್ತು ಷಡಂಗವುಳ್ಳವನೂ, ತ್ರಿಶೀರ್ಷನೂ ಆಗಿ ಮೂರು ಲೋಕಗಳಲ್ಲಿಯೂ ಮೂರು ರೂಪಗಳಿಂದ ಅವತರಿಸುವನು.

೯೭-೧೦೦. ಕಾಲರೂಪಿಯಾದ ಭಗವಂತನಿಗೆ ಕೃತ, ತ್ರೇತಾ, ದ್ವಾಪರ, ಕಲಿ ಎಂಬುದಾಗಿ ನಾಲ್ಕು ಯುಗಗಳು ಇವೆ. ಅವುಗಳಿಗೆ ನಾಲ್ಕುನಾಲ್ಕು ಪಾದಗಳು

ಭುಜಾಶ್ಚ ವೇದಾಶ್ಚತ್ವಾರೋ ಋತುಃ ಸಂಧಿ ಮುಖಾನಿ ಚ ।
ದ್ವೇ ಮುಖೇ ದ್ವೇ ಚ ಅಯನೇ ನೇತ್ರಾಶ್ಚ ಚತುರಸ್ತಥಾ ॥ ೯೮ ॥

ಶಿರಾಂಸಿ ತ್ರೀಣಿ ಪರ್ವಾಣಿ ಫಾಲ್ಗುನ್ಯಾಷಾಢಕೃತ್ತಿಕಾಃ ।
ದಿವ್ಯಂತರಿಕ್ಷಭೌಮಾನಿ ತ್ರೀಣಿ ಸ್ಥಾನಾನಿ ಯಾನಿ ತು ॥
ಸಂಭವಃ ಪ್ರಲಯಶ್ಚೈವ ಆಶ್ರಮೌ ದ್ವೌ ಪ್ರಕೀರ್ತಿತೌ ॥ ೯೯ ॥

ಸ ಯದಾ ಕಾಲರೂಪಾಭೋ ವರಾಹತ್ವೇ ವ್ಯವಸ್ಥಿತಃ ।
ಭವಿಷ್ಯತಿ ಯದಾ ಸಾಧ್ಯೋ ವಿಷ್ಣುರ್ನಾರಾಯಣಃ ಪ್ರಭುಃ ॥ ೧೦೦ ॥

ತದಾ ತ್ವಮಪಿ ದೇವೇಶ ಚತುರ್ವಕ್ತ್ರೋ ಭವಿಷ್ಯಸಿ ।
ಬ್ರಹ್ಮಲೋಕನಮಸ್ಕಾರ್ಯೋ ವಿಷ್ಣುರ್ನಾರಾಯಣಃ ಪ್ರಭುಃ ॥ ೧೦೧ ॥

ಏಕಾರ್ಣವೇ ಪ್ಲವೇ ಚೈವ ಶಯಾನಂ ಪುರುಷಂ ಹರಿಂ ।
ಯದಾ ದ್ರಕ್ಷ್ಯಸಿ ದೇವೇಶಂ ಧ್ಯಾನಯುಕ್ತಂ ಮಹಾಮುನಿಂ ॥ ೧೦೨ ॥

---

ಇರುತ್ತವೆ. ಅಂಗಗಳೇ ಕ್ರತುಗಳಾಗಿವೆ. ನಾಲ್ಕು ವೇದಗಳೇ ನಾಲ್ಕು ಭುಜಗಳಾಗಿವೆ. ಋತುಗಳೇ ಸಂಧಿಮುಖಗಳಾಗಿವೆ. ಎರಡು ಮುಖಗಳೂ, ಎರಡು ಅಯನಗಳೂ, ನಾಲ್ಕು ನೇತ್ರಗಳೂ ಇವೆ. ಫಾಲ್ಗುಣೀ, ಆಷಾಢ, ಕೃತ್ತಿಕೆ ಎಂಬ ಮೂರು ಪರ್ವಗಳೇ ಶಿರಸ್ಸುಗಳಾಗಿವೆ. ಭೌಮ, ದಿವ್ಯ, ಅಂತರಿಕ್ಷಗಳೆಂಬ ಮೂರು ಸ್ಥಾನಗಳೂ, ಉತ್ಪತ್ತಿಲಯಗಳೆಂಬ ಎರಡು ಆಶ್ರಮಗಳೂ ಇರುತ್ತವೆ. ಹೀಗೆ ಸಾಧ್ಯನೂ, ಸರ್ವತ್ರವ್ಯಾಪ್ತನೂ, ಪ್ರಭುವೂ ಆದ ನಾರಾಯಣನು ಯಾವಾಗ ಕಾಲರೂಪಿಯಾಗುವನೋ ಆಗ ನಾನುವರಾಹರೂಪಿಯಾಗಿ ಅವತರಿಸಲು ಇಚ್ಛಿಸುವೆನು.

೧೦೧. ಓ, ದೇವೇಶನಾದ ಬ್ರಹ್ಮನೇ ಆಗ ನೀನೂ ಕೂಡ ನಾಲ್ಕು ಮುಖಗಳುಳ್ಳವನಾಗಿರುವಿ. ಆಗ ಸತ್ಯಲೋಕವಾಸಿಗಳಾದ ಜನಗಳು, ಸ್ವಾಮಿಯೂ ವ್ಯಾಪ್ತನೂ ಆದ ನಾರಾಯಣನನ್ನು ನಮಸ್ಕರಿಸುವರು

೧೦೨-೧೦೪. ಆ ಪ್ರಲಯೋದಕದ ದೋಣಿಯಲ್ಲಿ ಯೋಗನಿದ್ರೆಯನ್ನು ಅನುಭವಿಸುವವನೂ, ದೇವೇಶನೂ, ಧ್ಯಾನಾಸಕ್ತನೂ, ಮಹಾಮುನಿಯೂ ಆದ

**ತದಾವಾಂ ಮಮ ಯೋಗೇನ ಮೋಹಿತೌ ನಷ್ಟಚೇತಸೌ ।**
**ಅನ್ಯೋನ್ಯಸ್ಪರ್ಧಿನೌ ರಾತ್ರಾವವಿಜ್ಞಾಯ ಪರಸ್ಪರಂ ॥ ೧೦೩ ॥**

**ಏಕೈಕಸ್ಯೋದರಸ್ಥಾಂಸ್ತು ದೃಷ್ಟ್ವಾ ಲೋಕಾಂಶ್ಚ ರಾಜರ್ಷ ।**
**ವಿಸ್ಮಯಂ ಪರಮಂ ಗತ್ವಾ ಧ್ಯಾನಾದ್ಬುದ್ಧ್ವಾ ತು ಮಾನುಷೌ ॥ ೧೦೪ ॥**

**ತತಸ್ತ್ವಂ ಪದ್ಮಸಂಭೂತಃ ಪದ್ಮನಾಭಃ ಸನಾತನಃ ।**
**ಪದ್ಮಾಂಕಿತಸ್ತದಾ ಕಲ್ಪೇ ಖ್ಯಾತಿಂ ಯಾಸ್ಯಸಿ ಪುಷ್ಕಲಾಂ ॥ ೧೦೫ ॥**

**ತತಸ್ತಸ್ಮಿನ್ ಸ್ತದಾಕಲ್ಪೇ ವಾರಾಹೇ ಸಪ್ತಮೇ ಪ್ರಭೋಃ ।**
**ಪುನರ್ವಿಷ್ಣುರ್ಮಹಾತೇಜಾಃ ಕಾಲೋ ಲೋಕ ಪ್ರಕಾಲನಃ ॥**
**ಮನು ರ್ವೈವಸ್ವತೋನಾಮ ತವ ಪುತ್ರೋ ಭವಿಷ್ಯತಿ ॥ ೧೦೬ ॥**

**ತದಾ ಚತುರ್ಯುಗಾವಸ್ಥೇ ಕಲ್ಪೇ ತಸ್ಮಿನ್ ಯುಗಾಂತಕೇ ।**
**ಭವಿಷ್ಯಾಮಿ ಶಿಖಾಯುಕ್ತಃ ಶ್ವೇತೋ ನಾಮ ಮಹಾಮುನಿಃ ॥ ೧೦೭ ॥**

---

ಶ್ರೀಹರಿಯನ್ನು ಯಾವಾಗ ನಾವು ನೋಡುವೆವೋ, ಆಗ ನಾವಿಬ್ಬರೂ ನನ್ನ ಯೋಗದಿಂದ ಮೋಹಿತರೂ, ನಷ್ಟಚೇತನರೂ, ಆಗುವೆವು. ಮತ್ತು ರಾತ್ರಿಯಕಾಲದಲ್ಲಿ ಒಬ್ಬರನ್ನೊಬ್ಬರು ತಿಳಿಯದೇ ಸ್ಪರ್ಧೆಯುಳ್ಳವರೂ, ಪರಸ್ಪರ ಉದರಗತವಾದ ಲೋಕಗಳನ್ನು ನೋಡಿ ಜ್ಞಾನೋದಯವುಳ್ಳವರೂ, ಒಬ್ಬರನ್ನೊಬ್ಬರು ನೋಡಿ ಪರಮಾಶ್ಚರ್ಯವುಳ್ಳವರೂ ಆಗುವೆವು ಎಂದು ಹೇಳಿದನು.

೧೦೫ ಆಗ ನೀನು ಪದ್ಮದಲ್ಲಿ ಜನಿಸಿರುವುದರಿಂದ ಪದ್ಮಸಂಭೂತನೆಂದೂ ಪದ್ಮನಾಭನೆಂದೂ ಸನಾತನನೆಂದೂ ಪದ್ಮಾಂಕಿತನೆಂದೂ ಆ ಕಲ್ಪದಲ್ಲಿ ಬಹಳವಾಗಿ ಪ್ರಖ್ಯಾತಿಯನ್ನು ಹೊಂದುವಿ.

೧೦೬. ಅನಂತರ ಸ್ವಾಮಿಯಾದ ನಾರಾಯಣನು ಆ ವರಾಹಾವತಾರವನ್ನು ಧರಿಸಿದ್ದ ಏಳನೆಯ ಕಲ್ಪದಲ್ಲಿ ಪುನಃ ಮಹಾತೇಜಸ್ವಿಯೂ, ಲೋಕಸಂಹಾರಕನೂ ಆಗಿ ವೈವಸ್ವತಮನುವೆಂಬ ನಾಮದಿಂದ ನಿನಗೆ ಪುತ್ರನಾಗಿ ಜನಿಸುವನು.

೧೦೭. ನಾಲ್ಕು ಯುಗಗಳ ಅವಸ್ಥೆಯುಳ್ಳ ಯುಗಾಂತಕವಾದ ಆ ಕಲ್ಪದಲ್ಲಿ ನಾನು ಶಿಖಾಯುಕ್ತನಾದ ಶ್ವೇತನಾಮಕಮಹಾಮುನಿಯಾಗಿ ಅವತರಿಸುವೆನು.

ಹಿಮವಚ್ಛಿಕರೇ ರಮ್ಯೇ ಛಾಗಲೇ ಪರ್ವತೋತ್ತಮೇ ।
ಚತುಃಶಿಷ್ಯಾಃ ಶಿವೇ ಯುಕ್ತಾ ಭವಿಷ್ಯಂತಿ ತದಾ ಮಮ ॥ ೧೦೮ ॥

ಶ್ವೇತಶ್ಚೈವ ಶಿಖಶ್ಚೈವ ಶ್ವೇತಾಶ್ವಃ ಶ್ವೇತಲೋಹಿತಃ ।
ಚತ್ವಾರಸ್ತೇ ಮಹಾತ್ಮಾನೋ ಬ್ರಾಹ್ಮಣಾ ವೇದಪಾರಗಾಃ ॥ ೧೦೯ ॥

ತತಸ್ತೇ ಬ್ರಹ್ಮಭೂಯಿಷ್ಠಾ ದೃಷ್ಟ್ವಾ ಬ್ರಹ್ಮಗತಿಂ ಪರಾಂ ।
ತತ್ಸಮೀಪಂ ಗಮಿಷ್ಯಂತಿ ಪುನರಾವೃತ್ತಿದುರ್ಲಭಂ ॥ ೧೧೦ ॥

ಪುನಸ್ತು ಮಮ ದೇವೇಶೋ ದ್ವಿತೀಯ ದ್ವಾಪರೇ ಪ್ರಭುಃ ।
ಪ್ರಜಾಪತಿರ್ಯದಾ ವ್ಯಾಸಃ ಸತ್ಯೋ ನಾಮ ಭವಿಷ್ಯತಿ ॥ ೧೧೧ ॥

ತದಾ ಲೋಕಹಿತಾರ್ಥಾಯ ಸುತಾರೋ ನಾಮ ನಾಮತಃ ।
ಭವಿಷ್ಯಾಮಿ ಕಲೌ ತಸ್ಮಿನ್ ಲೋಕಾನುಗ್ರಹಕಾರಣಾತ್ ॥ ೧೧೨ ॥

---

೧೦೮. ಆಗ ಮನೋಹರವಾದ ಹಿಮವಚ್ಛಿಖರದಲ್ಲಿರುವ ಛಾಗಲಿನಾಮಕವಾದ ಪರ್ವತೋತ್ತಮದಲ್ಲಿ ಕಲ್ಯಾಣಾಸಕ್ತರೂ, ಶಿವಭಕ್ತರೂ ಆದ ನಾಲ್ವರು ಶಿಷ್ಯರು ನನ್ನನ್ನು ಹೊಂದುವರು.

೧೦೯. ಬಿಳುಪಾದ ವರ್ಣ, ಶಿಖ, ಅಶ್ವ ಇವಗಳುಳ್ಳವನೂ, ಕೆಂಪು, ಬಿಳುಪು, ಮಿಶ್ರವಾದ (ಶ್ವೇತಲೋಹಿತನಾದ) ನನಗೆ ವೇದಪಾರಂಗತರೂ, ಮಹಾತ್ಮರೂ, ಬ್ರಾಹ್ಮಣರೂ ಆದ ನಾಲ್ವರು ಶಿಷ್ಯರು ಇರುವರು.

೧೧೦. ಅನಂತರ ಬ್ರಹ್ಮಜ್ಞಾನಿಗಳಾದ ಆ ಶಿಷ್ಯರು ಬ್ರಹ್ಮಪದವಿಯನ್ನು ಅತ್ಯುತ್ತಮವೆಂದು ತಿಳಿದು ಪುನರಾವೃತ್ತಿರಹಿತವಾದ ಬ್ರಹ್ಮಪದವಿಯನ್ನು ಹೊಂದುವರು.

೧೧೧. ಮತ್ತು ಎರಡನೆಯ ದ್ವಾಪರಯುಗದಲ್ಲಿ ನನಗೆ ಸ್ವಾಮಿಯೂ, ಪ್ರಭುವೂ ಆದ ಪರಬ್ರಹ್ಮನು ವ್ಯಾಸಾವತಾರವನ್ನು ಮಾಡಿ ಸತ್ಯವೆಂಬ ನಾಮದಿಂದ ಪ್ರಖ್ಯಾತನಾಗುವನು.

೧೧೨. ಆಗ ನಾನು ಲೋಕಹಿತಕ್ಕಾಗಿ ಸುತಾರವೆಂಬ ನಾಮದಿಂದ ಪ್ರಖ್ಯಾತನಾಗಿ ಪ್ರಜೆಗಳ ಹಿತಕ್ಕಾಗಿ ಆ ಕಲಿಯುಗದಲ್ಲಿ ಅವತರಿಸುವೆನು.

**ತತ್ರಾಪಿ ಮಮ ತೇ ಪುತ್ರಾ ಭವಿಷ್ಯಾ ನಾಮ ನಾಮತಃ ।**
**ದುಂದುಭಿಃ ಶತರೂಪಶ್ಚ ಋಚೀಕಃ ಕ್ರತುಮಾಂಸ್ತಥಾ ॥ ೧೧೩ ॥**

**ಪ್ರಾಪ್ಯ ಯೋಗಂ ತಥಾ ಜ್ಞಾನಂ ಬ್ರಹ್ಮ ಚೈವ ಸನಾತನಂ ।**
**ರುದ್ರಲೋಕಂ ಗಮಿಷ್ಯಂತಿ ಪುನರಾವೃತ್ತಿದುರ್ಲಭಂ ॥ ೧೧೪ ॥**

**ತೃತೀಯೇ ದ್ವಾಪರೇ ಚೈವ ಯದಾ ವ್ಯಾಸಸ್ತು ಭಾರ್ಗವಃ ।**
**ತದಾ ಹ್ಯಹಂ ಭವಿಷ್ಯಾಮಿ ದಮನಸ್ತು ಯುಗಾಂತಿಕೇ ॥ ೧೧೫ ॥**

**ತತ್ರಾಪಿ ಚ ಭವಿಷ್ಯಂತಿ ಚತ್ವಾರೋ ಮಮ ಪುತ್ರಕಾಃ ।**
**ವಿಶೋಕಶ್ಚ ವಿಕೇಶಶ್ಚ ವಿಶಾಪಃ ಶಾಪನಾಶನಃ ॥ ೧೧೬ ॥**

**ತೇಪಿ ತೇನೈವ ಮಾರ್ಗೇಣ ಯೋಗೋಕ್ತೇನ ಮಹೌಜಸಃ ।**
**ರುದ್ರಲೋಕಂ ಗಮಿಷ್ಯಂತಿ ಪುನರಾವೃತ್ತಿ ದುರ್ಲಭಂ ॥ ೧೧೭ ॥**

---

೧೧೩-೧೧೪. ಅಲ್ಲಿಯೂ ಕೂಡ ನನಗೆ ಭವಿಷ್ಯನಾಮಕರಾದ ದುಂದುಭಿ, ಶತರೂಪ, ಋಚೀಕ, ಕ್ರತು ಎಂಬ ನಾಲ್ವರು ಮಕ್ಕಳು ಉದ್ಭವಿಸಿ ಯೋಗಾಭ್ಯಾಸವನ್ನೂ ಜ್ಞಾನವನ್ನೂ ಪಡೆದು, ಸನಾತನ ಬ್ರಹ್ಮನನ್ನೂ ಕೂಡ, ಹೊಂದಿ ಪುನರಾವೃತ್ತಿ ರಹಿತವಾದ ರುದ್ರಲೋಕವನ್ನು ಹೊಂದುವರು.

೧೧೫. ಮೂರನೆಯ ದ್ವಾಪರಯುಗದಲ್ಲಿ ಯಾವಾಗ ವ್ಯಾಸರು ಭೃಗು ವಂಶದಲ್ಲಿ ಭಾರ್ಗವನಾಮಕರಾಗಿ ಜನಿಸುವರೋ, ಆಗ ನಾನೂ ಸಹ ದಮನ ನಾಮದಿಂದ ಆ ಯುಗಾಂತದಲ್ಲಿ ಜನಿಸುವೆನು.

೧೧೬. ಆಗಲೂ ಸಹ ನನಗೆ ವಿಶೋಕ, ವಿಕೇತ, ವಿಶಾಪ, ಪಾಪನಾಶನರೆಂಬ ನಾಲ್ಕು ಜನ ಪ್ರಖ್ಯಾತರಾದ ಪುತ್ರರು ಜನಿಸುವರು

೧೧೭. ಆ ಮಹಾತ್ಮರಾದ ನಾಲ್ವರು ಕುಮಾರರು ಅದೇ ಯೋಗಮಾರ್ಗದಿಂದ ಪುನರಾವೃತ್ತಿಶೂನ್ಯವಾದ ರುದ್ರಲೋಕವನ್ನು ಹೊಂದುವರು.

ಚತುರ್ಥೇ ದ್ವಾಪರೇ ಚೈವ ಯದಾ ವ್ಯಾಸೋಂಗಿರಾಃ ಸ್ಮೃತಃ ।
ತದಾಪ್ಯಹಂ ಭವಿಷ್ಯಾಮಿ ಸುಹೋತ್ರೋ ನಾಮ ನಾಮತಃ ॥ ೧೧೮ ॥

ತತ್ರಾಪಿ ಮಮ ಸತ್ಪುತ್ರಾಶ್ಚತ್ವಾರಶ್ಚ ತಪೋಧನಾಃ ।
ಭವಿಷ್ಯಂತಿ ದ್ವಿಜಶ್ರೇಷ್ಠಾ ಯೋಗಾತ್ಮಾನೋ ದೃಢವ್ರತಾಃ ॥ ೧೧೯ ॥
ಸುಮುಖೋ ದುರ್ಮುಖಶ್ಚೈವ ದುರ್ದಮೋ ದುರತಿಕ್ರಮಃ ।

ಪ್ರಾಪ್ಯ ಯೋಗಗತಿಂ ಸೂಕ್ಷ್ಮಾಂ ವಿಮಲಾ ದಗ್ಧಕಿಲ್ಬಿಷಾಃ ॥
ತೇಪಿ ತೇನೈವ ಮಾರ್ಗೇಣ ಗಮಿಷ್ಯಂತಿ ನ ಸಂಶಯಃ ॥ ೧೨೦ ॥

ಪಂಚಮೇ ದ್ವಾಪರೇ ಚೈವ ವ್ಯಾಸಸ್ತು ಸವಿತಾ ಯದಾ ।
ತದಾ ಚಾಪಿ ಭವಿಷ್ಯಾಮಿ ಕಂಗೋ ನಾಮ ಮಹಾತಪಾಃ ॥
ಅನುಗ್ರಹಾರ್ಥಂ ಲೋಕಾನಾಂ ಯೋಗಾತ್ಮಾ ನೈಕಕರ್ಮಕೃತ್ ॥ ೧೨೧ ॥

ಚತ್ವಾರಸ್ತು ಮಹಾಭಾಗಾ ವಿರಜಾಃ ಶುದ್ಧಯೋನಯಃ ।
ಪುತ್ರಾ ಮಮ ಭವಿಷ್ಯಂತಿ ಯೋಗಾತ್ಮಾನೋ ದೃಢವ್ರತಾಃ ॥ ೧೨೨ ॥

---

೧೧೮. ನಾಲ್ಕನೆಯ ದ್ವಾಪರಯುಗವು ಪ್ರಾಪ್ತವಾಗಲು ವ್ಯಾಸಮಹರ್ಷಿಯು ಅಂಗಿರಸನೆಂಬ ನಾಮಕನಾಗಿ ಜನಿಸುವನು. ಆಗ ನಾನೂ ಸಹ ಸುಹೋತ್ರನೆಂಬ ನಾಮದಿಂದ ಉದ್ಭವಿಸುವೆನು.

೧೧೯-೧೨೦. ಆ ಯುಗದಲ್ಲಿಯೂ ಕೂಡ ತಪೋಧನರೂ, ಯೋಗಯುಕ್ತರೂ, ದೃಢವ್ರತಿಗಳೂ, ನಿರ್ದೋಷಿಗಳೂ, ವಿಮಲರೂ ಆದ ಸುಮುಖ, ದುರ್ಮುಖ, ದುರ್ದಮ, ದುರತಿಕ್ರಮರೆಂಬ ನಾಲ್ವರು ಪುತ್ರರು ಜನಿಸಿ, ಸೂಕ್ಷ್ಮರೂಪವಾದ ಯೋಗ ಮಾರ್ಗವನ್ನು ಹಿಡಿದು ನಿಷ್ಕಲ್ಮಿಷರಾಗಿ, ಅದೇ ಮಾರ್ಗದಿಂದಲೇ ನಿಸ್ಸಂದೇಹವಾಗಿ ಶಾಶ್ವತವಾದ ರುದ್ರಪದವಿಯನ್ನು ಹೊಂದುವರು.

೧೨೧. ಐದನೆಯ ದ್ವಾಪರಯುಗವು ಬರಲು ವ್ಯಾಸರು ಸವಿತಾನಾಮಕರಾಗಿ ಹುಟ್ಟುವರು. ಆಗ ನಾನೂ ಸಹ ಲೋಕಾನುಗ್ರಹಕ್ಕಾಗಿ ಕಂಗನೆಂಬ ಮಹಾತಪಸ್ವಿಯು ಅವತಾರಮಾಡಿ ಅನೇಕವಾದ ಮಹಾಕಾರ್ಯಗಳನ್ನು ಮಾಡುವೆನು.

೧೨೨. ಆಗಲೂ ಸಹ ನನಗೆ ಮಹಾನುಭಾವರೂ, ಪಾಪರಹಿತರೂ ಸದ್ವಂಶೀಕರೂ ಯೋಗನಿರತರೂ ದೃಢವ್ರತಿಗಳೂ ಆದ ನಾಲ್ವರು ಮಕ್ಕಳು ಹುಟ್ಟುವರು.

ಸನಃ ಸನಂದನಶ್ಚೈವ ಪ್ರಭುರ್ಯಶ್ಚ ಸನಾತನಃ ।
ಋತುಃ ಸನತ್ಕುಮಾರಶ್ಚ ನಿರ್ಮಮಾ ನಿರಹಂಕೃತಾಃ ॥
ಮತ್ಸಮೀಪಂ ಗಮಿಷ್ಯಂತಿ ಪುನರಾವೃತ್ತಿದುರ್ಲಭಂ ॥ ೧೨೩ ॥

ಪರಿವೃತ್ತೇ ಪುನಃ ಷಷ್ಠೇ ಮೃತ್ಯುರ್ವ್ಯಾಸೋ ಯದಾ ವಿಭುಃ ।
ತದಾಪ್ಯಹಂ ಭವಿಷ್ಯಾಮಿ ಲೋಕಾಕ್ಷಿರ್ನಾಮ ನಾಮತಃ ॥ ೧೨೪ ॥

ಶಿಷ್ಯಾಶ್ಚ ಮಮ ತೇ ದಿವ್ಯಾ ಯೋಗಾತ್ಮಾನೋ ದೃಢವ್ರತಾಃ ।
ಭವಿಷ್ಯಂತಿ ಮಹಾಭಾಗಾಶ್ಚತ್ವಾರೋ ಲೋಕಸಂಮತಾಃ ॥ ೧೨೫ ॥
ಸುಧಾಮಾ ವಿರಜಶ್ಚೈವ ಶಂಖಪಾದ್ರವ ಏವ ಚ ।

ಯೋಗಾತ್ಮಾನೋ ಮಹಾತ್ಮಾನಸ್ತೇ ಸರ್ವೇ ದಗ್ಧಕಿಲ್ಬಿಷಾಃ ॥
ತೇಽಪಿ ತೇನೈವ ಮಾರ್ಗೇಣ ಗಮಿಷ್ಯಂತಿ ನ ಸಂಶಯಃ ॥ ೧೨೬ ॥

ಸಪ್ತಮೇ ಪರಿವೃತ್ತೇ ತು ಯದಾ ವ್ಯಾಸಃ ಶತಕ್ರತುಃ ।
ವಿಭುರ್ನಾಮ ಮಹಾತೇಜಾಃ ಪೂರ್ವಮಾಸೀಚ್ಛತಕ್ರತುಃ ॥ ೧೨೭ ॥

---

೧೨೩. ಅವರು ಯಾರೆಂದರೆ, ಸನಂದನ, ಸನಾತನ, ಋತು ಮತ್ತು ಸನತ್ಕುಮಾರರೆಂಬ ನಾಮಕರೂ ಅಹಂಕಾರಶೂನ್ಯರೂ ಅಹಂಭಾವವಿಲ್ಲದವರೂ ಆದ ನಾಲ್ಕು ಜನ ಮಕ್ಕಳು ಹುಟ್ಟಿ ಪುನರಾವೃತ್ತಿಯಿಲ್ಲದ ನನ್ನ ಸಮೀಪವನ್ನು ಹೊಂದುವರು.

೧೨೪-೧೨೬ ಪುನಃ ಆರನೆಯ ಕಲ್ಪವು ಪ್ರಾರಂಭವಾಗಲು, ವ್ಯಾಸಮುನಿಯು ಮೃತ್ಯುನಾಮಕನಾಗಿ ಅವತರಿಸುವನು. ಆಗ ನಾನು, ಲೋಕಾಕ್ಷಿನಾಮಕನಾಗಿ ಉದ್ಭವಿಸುವೆನು, ಆಗ ನನಗೆ:ದಿವ್ಯರೂಪಿಗಳೂ, ದೃಢವ್ರತಿಗಳೂ, ಯೋಗನಿರತರೂ, ಮಹಾತ್ಮರೂ, ನಿಷ್ಕಲ್ಮಷರೂ, ಲೋಕವಿಖ್ಯಾಕರೂ ಆದ ಸುಧಾಮ, ವಿರಜ, ಶಂಖ, ಪಾದ್ರವರೆಂಬ ನಾಲ್ವರು ಕುಮಾರರು ಜನಿಸಿ ಅದೇ ಯೋಗಮಾರ್ಗದಿಂದಲೇ ನನ್ನನ್ನು ಹೊಂದುವರು.

೧೨೭-೧೩೦. ಏಳನೆಯ ಯುಗವು ಪ್ರಾರಂಭವಾಗಲು, ವ್ಯಾಸರು ಇಂದ್ರ ನಾಮಕರಾಗಿ ಜನಿಸುವರು. ವಿಭುವೆಂಬ ಮಹಾತೇಜಸ್ವಿಯೇ ಶತಕ್ರತುವಾಗಿ

ತದಾಪ್ಯಹಂ ಭವಿಷ್ಯಾಮಿ ಕಲೌ ತಸ್ಮಿನ್ ಯುಗಾಂತಿಕೇ ।
ಜೈಗೀಷವ್ಯೇತಿ ವಿಖ್ಯಾತಃ ಸರ್ವೇಷಾಂ ಯೋಗಿನಾಂ ವರಃ ॥ ೧೨೮ ॥

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಯುಗೇ ತದಾ ।
ಸಾರಸ್ವತಃ ಸುಮೇಧಾಶ್ಚ ವಸುವಾಹಃ ಸುವಾಹನಃ ॥ ೧೨೯ ॥

ತೇಽಪಿ ತೇನೈವ ಮಾರ್ಗೇಣ ಧ್ಯಾನಯುಕ್ತಿಂ ಸಮಾಶ್ರಿತಾಃ ।
ಭವಿಷ್ಯಂತಿ ಮಹಾತ್ಮಾನೋ ರುದ್ರಲೋಕಪರಾಯಣಾಃ ॥ ೧೩೦ ॥

ವಸಿಷ್ಠಶ್ಚಾಷ್ಟಮೇ ವ್ಯಾಸಃ ಪರಿವರ್ತೇ ಭವಿಷ್ಯತಿ ।
ಕಪಿಲಶ್ಚಾಸುರಿಶ್ಚೈವ ತಥಾ ಪಂಚಶಿಖೋ ಮುನಿಃ ॥
ವಾಗ್ಬಲಿಶ್ಚ ಮಹಾಯೋಗೀ ಸರ್ವ ಏವ ಮಹೌಜಸಃ ॥ ೧೩೧ ॥

ಪ್ರಾಪ್ಯ ಮಾಹೇಶ್ವರಂ ಯೋಗಂ ಧ್ಯಾನಿನೋ ದಗ್ಧಕಲ್ಮಷಾಃ ।
ಮತ್ಸಮೀಪಂ ಗಮಿಷ್ಯಂತಿ ಪುನರಾವೃತ್ತಿದುರ್ಲಭಂ ॥ ೧೩೨ ॥

ಪರಿವರ್ತೇಽಥ ನವಮೇ ವ್ಯಾಸಃ ಸಾರಸ್ವತೋ ಯದಾ ।
ತದಾ ಚಾಹಂ ಭವಿಷ್ಯಾಮಿ ಋಷಭೋ ನಾಮ ನಾಮತಃ ॥
ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಮಹೌಜಸಃ ॥ ೧೩೩ ॥

---

ಜನಿಸಿದ್ದನು. ಆಗ ನಾನೂ ಸಹ ಸರ್ವಯೋಗೀಶ್ವರನಾದ ಜೈಗೀಷವ್ಯವೆಂಬ ನಾಮದಿಂದ ಹುಟ್ಟುವೆನು. ಆಗಲೂ ಕೂಡ ನನಗೆ ಸಾರಸ್ವತ, ಸುಮೇಧ, ವಸುವಾಹ, ಸುವಾಹನರೆಂಬ ನಾಲ್ಕು ಜನ ಪುತ್ರರು ಹುಟ್ಟಿ ಯೋಗಸಿದ್ಧಿಯನ್ನು ಪಡೆದು ರುದ್ರಲೋಕವನ್ನು ಹೊಂದುವರು.

೧೩೧-೧೩೨. ಎಂಟನೆಯ ಯುಗವು ಪ್ರಾರಂಭವಾಗಲು ವ್ಯಾಸರು ವಸಿಷ್ಠ ನಾಮಕರಾಗಿ ಅವತರಿಸುವರು. ಆಗ ನನಗೆ ಕಪಿಲ, ಆಸುರಿ, ಪಂಚಶಿಖ, ವಾಗ್ಬಲಿ ಎಂಬ ಯೋಗೀಶ್ವರರೂ, ಮಹಾತೇಜಸ್ವಿಗಳೂ ಆದ ಪುತ್ರರು ಜನಿಸಿ, ಯೋಗ ಮಾರ್ಗದಿಂದ ನಿಷ್ಕಲ್ಮಷರಾಗಿ ಶಾಶ್ವತವಾದ ನನ್ನ ಪದವಿಯನ್ನು ಹೊಂದುವರು.

೧೩೩-೧೩೪. ಒಂಭತ್ತನೆಯ ಯುಗವು ಪ್ರಾರಂಭವಾಗಲು ವ್ಯಾಸರು ಸಾರಸ್ವತರಾಗಿ ಅವತಾರಮಾಡುವರು. ಆಗ ನಾನೂ ಕೂಡ ಋಷಭಾವತಾರವನ್ನು

ಪರಾಶರಶ್ಚ ಗಾರ್ಗ್ಯಶ್ಚ ಭಾರ್ಗವೋ ಹ್ಯಂಗಿರಾಸ್ತಥಾ ।
ಭವಿಷ್ಯಂತಿ ಮಹಾತ್ಮಾನೋ ಬ್ರಾಹ್ಮಣಾ ವೇದಪಾರಗಾಃ ॥ ೧೩೪ ॥

ಸರ್ವೇ ತಪೋ ಬಲೋತ್ಕೃಷ್ಟಾ ಶಾಪಾನುಗ್ರಹಕೋವಿದಾಃ ।
ತೇಽಪಿ ತೇನೈವ ಮಾರ್ಗೇಣ ಯೋಗೋಕ್ತೇನ ತಪಸ್ವಿನಃ ॥
ಧ್ಯಾನಮಾರ್ಗಂ ಸಮಾಸಾದ್ಯ ಗಮಿಷ್ಯಂತಿ ತಥೈವ ತೇ ॥ ೧೩೫ ॥

ದಶಮೇ ದ್ವಾಪರೇ ವ್ಯಾಸಸ್ತ್ರಿಧಾಮಾ ನಾಮ ನಾಮತಃ ।
ಯದಾ ಭವಿಷ್ಯತಿ ವಿಪ್ರಾಸ್ತದಾಹಂ ಭವಿತಾ ಪುನಃ ॥ ೧೩೬ ॥

ಹಿಮವಚ್ಛಿಖರೇ ರಮ್ಯೇ ಭೃಗುತುಂಗೇ ನಗೋತ್ತಮೇ ।
ನಾಮ್ನಾ ಭೃಗೋಸ್ತು ಶಿಖರಂ ತಸ್ಮಾತ್ತಚ್ಛಿಖರಂ ಭೃಗುಃ ॥ ೧೩೭ ॥

ತತ್ರಾಪ್ಯೇವ ಮಮ ತೇ ಪುತ್ರಾ ಭವಿಷ್ಯಂತಿ ದೃಢವ್ರತಾಃ ।
ಬಲಬಂಧುರ್ನಿರಾಮಿತ್ರಃ ಕೇತುಶೃಂಗಸ್ತಪೋಧನಃ ॥ ೧೩೮ ॥

---

ಮಾಡುವೆನು. ಆಗಲೂ ಸಹ ಮಹಾಜ್ಞಾನಿಗಳಾದ ಪರಾಶರ, ಗಾರ್ಗ್ಯ, ಭಾರ್ಗವ, ಅಂಗಿರಸರೆಂಬ ನಾಲ್ಕುಜನ ಕುಮಾರರು ಜನಿಸುವರು. ಅವರು ವೇದಪಾರಂಗತರೂ, ಮಹಾಜ್ಞಾನಿಗಳೂ, ಬ್ರಹ್ಮನಿಷ್ಠರೂ, ತಪೋಬಲಸಹಿತರೂ, ಶಾಪಾನುಗ್ರಹಶಕ್ತರೂ ಆಗಿ ಅದೇ ಯೋಗಾಭ್ಯಾಸದಿಂದ ಜ್ಞಾನವನ್ನು ಪಡೆದು ಶಾಶ್ವತವಾದ ನನ್ನ ಪದವಿಯನ್ನು ಹೊಂದುವರು.

೧೩೬. ಎಲೈ ಮುನಿಗಳೇ, ಹತ್ತನೆಯ ದ್ವಾಪರಯುಗವು ಬರಲು ವ್ಯಾಸರು ತ್ರಿಧಾಮನಾಮಕರಾಗಿ ಜನಿಸುವರು. ಆಗ ನಾನೂ ಕೂಡ ಪುನಃ ಅವತಾರವನ್ನು ಮಾಡುವೆನು.

೧೩೭-೧೩೯. ಪರ್ವತೋತ್ತಮವಾದ ಹಿಮಾಲಯದ ರಮ್ಯವೂ, ಉನ್ನತವೂ, ಭೃಗುನಾಮಕವೂ ಆದ ಶಿಖರದಲ್ಲಿ ನಾನು ಕೂಡ ಭೃಗುನಾಮಕನಾಗಿ ಅವತರಿಸುವೆನು. ಅದರಿಂದ ಆ ಶಿಖರಕ್ಕೆ ಭೃಗುಶೃಂಗವೆಂಬ ನಾಮವು ಪ್ರಾಪ್ತವಾಗುವುದು. ಅದರಲ್ಲಿ ಬಲಬಂಧು, ನಿರಾಮಿತ್ರ, ಕೇತುಶೃಂಗ, ತಪೋಧನರೆಂಬ ನಾಲ್ವರು

ಯೋಗಾತ್ಮಾನೋ ಮಹಾತ್ಮಾನೋ ಧ್ಯಾನಯೋಗಸಮನ್ವಿತಾಃ ।
ರುದ್ರಲೋಕಂ ಗಮಿಷ್ಯಂತಿ ತಪಸಾ ದಗ್ಧಕಲ್ಮಷಾಃ ॥ ೧೩೯ ॥

ಏಕಾದಶೇ ದ್ವಾಪರೇತು ತ್ರಿವೃದ್ವ್ಯಾಸೋ ಭವಿಷ್ಯತಿ ।
ತದಾಪ್ಯಹಂ ಭವಿಷ್ಯಾಮಿ ಗಂಗಾದ್ವಾರೇ ಕಲೇರ್ಧುರಿ ॥ ೧೪೦ ॥

ಉಗ್ರಾ ನಾಮ ಮಹಾನಾದಾ ಸ್ತತ್ರೈವ ಮಮ ಪುತ್ರಕಾಃ ।
ಭವಿಷ್ಯಂತಿ ಮಹೌಜಸ್ಕಾಃ ಸುವೃತ್ತಾ ಲೋಕವಿಶ್ರುತಾಃ ॥ ೧೪೧ ॥

ಲಂಬೋದರಶ್ಚ ಲಂಬಶ್ಚ ಲಂಬಾಕ್ಷೋ ಲಂಬಕೇಶಕಃ ।
ಪ್ರಾಪ್ಯ ಮಾಹೇಶ್ವರಂ ಯೋಗಂ ರುದ್ರಲೋಕಾಯ ಸಂಸ್ಥಿತಾಃ ॥
ತೇಪಿ ತೇನೈವ ಮಾರ್ಗೇಣ ಗಮಿಷ್ಯಂತಿ ಪರಾಂ ಗತಿಂ ॥ ೧೪೨ ॥

ದ್ವಾದಶೇ ಪರಿವರ್ತೇತು ಶತತೇಜಾ ಮಹಾಮುನಿಃ ।
ಭವಿಷ್ಯತಿ ಮಹಾಸತ್ವೋ ವ್ಯಾಸಃ ಕವಿವರೋತ್ತಮಃ ॥ ೧೪೩ ॥

---

ಕುಮಾರರು ಜನಿಸಿ ದೃಢವ್ರತಿಗಳೂ, ಯೋಗಾರೂಢರೂ, ಮಹಾತ್ಮರೂ, ಧ್ಯಾನಾಸಕ್ತರೂ, ನಿಷ್ಕಲ್ಮಷರೂ ಆಗಿ ರುದ್ರಲೋಕವನ್ನು ಹೊಂದುವರು.

೧೪೦. ಹನ್ನೊಂದನೆಯ ದ್ವಾಪರಯುಗದಲ್ಲಿ ವ್ಯಾಸಮಹರ್ಷಿಯು ತ್ರಿವೃನ್ನಾಮಕನಾಗಿ ಅವತರಿಸುವನು. ಆಗ ನಾನೂ ಕೂಡ ಗಂಗಾದ್ವಾರದಲ್ಲಿ ಕಲಿಯ ಮುಂದೆ ಆವಿರ್ಭವಿಸುವೆನು.

೧೪೧-೧೪೨. ಆ ಪರ್ವತದ ಶಿಖರದಲ್ಲಿಯೇ ಭಯಂಕರರೂ, ಮಹಾನಾದಪ್ರಳಯರೂ, ಮಹಾತೇಜಸ್ವಿಗಳೂ, ಸದಾಚಾರಿಗಳೂ, ಲೋಕವಿಖ್ಯಾತರೂ ಆದ ಲಂಬೋದರ, ಲಂಬ, ಲಂಬಾಕ್ಷ, ಲಂಬಕೇಶ ಎಂಬ ನಾಲ್ವರು ಪುತ್ರರು ಜನಿಸಿ ಉತ್ತಮವಾದ ಯೋಗಾಭ್ಯಾಸವನ್ನು ಮಾಡಿ ಪೂರ್ವಿಕರಂತೆಯೇ ಶಾಶ್ವತವಾದ ಪರಮಪದವಿಯನ್ನು ಹೊಂದುವರು.

೧೪೩. ಹನ್ನೆರಡನೆಯ ದ್ವಾಪರಯುಗದಲ್ಲಿ ಮಹಾನುಭಾವರೂ, ಕವೀಶ್ವರರೂ ಆದ ವ್ಯಾಸಮಹಾಮುನಿಗಳು ಶತತೇಜನಾಮದಿಂದ ಪ್ರಖ್ಯಾತರಾಗುವರು.

ತತೋऽಪ್ಯಹಂ ಭವಿಷ್ಯಾಮಿ ಅತ್ರಿರ್ನಾಮ ಯುಗಾಂತಿಕೇ ।
ಹೈಮಕಂ ವನಮಾಸಾದ್ಯ ಯೋಗಮಾಸ್ಥಾಯ ಭೂತಲೇ ॥ ೧೪೪ ॥

ಅತ್ರಾಪಿ ಮಮ ತೇ ಪುತ್ರಾ ಭಸ್ಮಸ್ನಾನಾನುಲೇಪನಾಃ ।
ಭವಿಷ್ಯಂತಿ ಮಹಾಯೋಗಾ ರುದ್ರಲೋಕಪರಾಯಣಾಃ ॥ ೧೪೫ ॥

ಸರ್ವಜ್ಞಃ ಸಮಬುದ್ಧಿಶ್ಚ ಸಾಧ್ಯಃ ಸರ್ವಸ್ತಥೈವ ಚ ।
ರುದ್ರಲೋಕಂ ಗಮಿಷ್ಯಂತಿ ಧ್ಯಾನಯೋಗಪರಾಯಣಾಃ ॥ ೧೪೬ ॥

ತ್ರಯೋದಶೇ ಪುನಃ ಪ್ರಾಪ್ತೇ ಪರಿವರ್ತೇ ಕ್ರಮೇಣ ತು ।
ಧರ್ಮೋ ನಾರಾಯಣೋ ನಾಮ ವ್ಯಾಸಸ್ತು ಭವಿತಾ ಯದಾ ॥ ೧೪೭ ॥

ತದಾಪ್ಯಹಂ ಭವಿಷ್ಯಾಮಿ ವಾಲಿರ್ನಾಮ ಮಹಾಮುನಿಃ ।
ವಾಲಖಿಲ್ಯಾಶ್ರಮೇ ಪುಣ್ಯೇ ಪರ್ವತೇ ಗಂಧಮಾದನೇ ॥ ೧೪೮ ॥

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ತಪೋಧನಾಃ ।
ಸುಧಾಮಾ ಕಾಶ್ಯಪಶ್ಚೈವ ವಸಿಷ್ಠೋ ವಿರಜಾಸ್ತಥಾ ॥ ೧೪೯ ॥

ಮಹಾಯೋಗಬಲೋಪೇತಾ ವಿಮಲಾ ಊರ್ಧ್ವರೇತಸಃ ।
ತೇನೈವ ಯೋಗಮಾರ್ಗೇಣ ಗಮಿಷ್ಯಂತಿ ನ ಸಂಶಯಃ ॥ ೧೫೦ ॥

---

೧೪೪-೧೪೬. ಆಗ ನಾನು ಈ ಭೂಮಿಯಲ್ಲಿ ಹಿಮಾಲಯದ ವನದಲ್ಲಿ ಧ್ಯಾನವನ್ನು ಮಾಡಿ ಅತ್ರಿನಾಮಕನಾಗಿ ಅವತರಿಸುವೆನು. ಆಗಲೂ ಸಹ ಭಸ್ಮದ ಸ್ನಾನ ಮತ್ತು ಅನುಲೇಪನವುಳ್ಳವರೂ, ಮಹಾಯೋಗಿಗಳೂ, ರುದ್ರಲೋಕಾಸಕ್ತರೂ ಆದ ಸರ್ವಜ್ಞ, ಸಮಬುದ್ಧಿ, ಸಾಧ್ಯ, ಸರ್ವ ಎಂಬ ನಾಲ್ಕುಜನ ಸುತರು ಜನಿಸಿ ಯೋಗಾಭ್ಯಾಸದಿಂದ ರುದ್ರಲೋಕವನ್ನು ಹೊಂದುವರು

೧೪೭-೧೫೦. ಹದಿಮೂರನೆಯ ದ್ವಾಪರಯುಗವು ಪ್ರಾಪ್ತವಾಗಲು ವ್ಯಾಸರು ಧರ್ಮನಾರಾಯಣನಾಮಕರಾಗಿ ಅವತರಿಸುವರು. ಆಗ ನಾನೂ ಕೂಡ ಗಂಧ ಮಾದನಪರ್ವತದಲ್ಲಿರುವ ಪವಿತ್ರವಾದ ವಾಲಖಿಲ್ಯಾಶ್ರಮದಲ್ಲಿ ವಾಲಿನಾಮಕಮಹಾ ಮುನಿಯಾಗಿ ಅವತರಿಸುವೆನು. ಆಗಲೂ ಕೂಡ ತಪೋಧನರಾದ ಸುಧಾಮ, ಕಾಶ್ಯಪ, ವಸಿಷ್ಠ, ಮತ್ತು ವಿರಜರೆಂಬ ನಾಲ್ವರು ಶಿಷ್ಯರು ಜನಿಸಿ, ಮಹಾಯೋಗಬಲ ದಿಂದ ವಿಮಲರೂ, ಊರ್ಧ್ವರೇತಸ್ಕರೂ ಆಗಿ ಅದೇ ಯೋಗಮಾರ್ಗದಿಂದಲೇ ಪುನರಾವೃತ್ತಿರಹಿತವೂ, ಶಾಶ್ವತವೂ ಆದ ನನ್ನ ಪರಮಪದವಿಯನ್ನು ಹೊಂದುವರು.

ಸುರುಕ್ಷಣೋ ಯದಾ ವ್ಯಾಸಃ ಪರ್ಯಾಯೇತು ಚತುರ್ದಶೇ ।
ತತ್ರಾಪಿ ಪುನರೇವಾಹಂ ಭವಿಷ್ಯಾಮಿ ಯುಗಾಂತಿಕೇ ॥ ೧೫೧ ॥

ವಂಶೇ ತ್ವಂಗಿರಸಃ ಶ್ರೇಷ್ಠೋ ಗೌತಮೋ ನಾಮ ಯೋಗವಿತ್ ।
ತಸ್ಮಾದ್ಭವಿಷ್ಯತೇ ಪುಣ್ಯಂ ಗೌತಮಂ ನಾಮ ತದ್ವನಂ ॥ ೧೫೨ ॥

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಕಲೌ ತಥಾ ।
ಅತ್ರಿರುಗ್ರತಪಾಶ್ಚೈವ ಶ್ರಾವಣೋಥ ಸ್ರವಿಷ್ಟಕಃ ॥ ೧೫೩ ॥

ಯೋಗಾತ್ಮಾನೋ ಮಹಾತ್ಮಾನೋ ಧ್ಯಾನಯೋಗಪರಾಯಣಾಃ ।
ತೇಪಿ ತೇನೈವ ಮಾರ್ಗೇಣ ರುದ್ರಲೋಕನಿವಾಸಿಸಃ ॥ ೧೫೪ ॥

ತತಃ ಪ್ರಾಪ್ತೇ ಪಂಚದಶೇ ಪರಿವರ್ತೇ ಕ್ರಮಾಗತೇ ।
ಆರುಣಿಸ್ತು ಯದಾ ವ್ಯಾಸೋ ದ್ವಾಪರೇ ಭವಿತಾ ಪ್ರಭುಃ ॥ ೧೫೫ ॥

ತದಾಪ್ಯಹಂ ಭವಿಷ್ಯಾಮಿ ನಾಮ್ನಾ ವೇದಶಿರಾ ದ್ವಿಜಾಃ ।
ತತ್ರ ವೇದಶಿರಾನಾಮ ಅಸ್ತ್ರಂ ತತ್ಪಾರಮೇಶ್ವರಂ ॥ ೧೫೬ ॥

---

೧೫೧-೧೫೪. ಹಾಗೆಯೇ ಹದಿನಾಲ್ಕನೆಯ ಕಲಿಯುಗದಲ್ಲಿ ವ್ಯಾಸರು ಸುರಕ್ಷಣನಾಮದಿಂದ ಅವತರಿಸುವರು. ಅದೇ ಯುಗದಲ್ಲಿ ನಾನೂ ಸಹ ಆಂಗಿರಸ ನಾಮಕರಾದ ಮಹರ್ಷಿಗಳ ಸುಪ್ರಸಿದ್ಧವಾದ ವಂಶದಲ್ಲಿ ಗೌತಮನಾಮದಿಂದ ಅವತರಿಸುವೆನು. ಆದರಿಂದ ಆ ವನವೆಲ್ಲವೂ ಗೌತಮನಾಮದಿಂದ ಜಗದ್ವಿಖ್ಯಾತ ವಾಗುವುದು. ಆಗಲೂ ಸಹ ನನಗೆ ಅತ್ರಿ, ಉಗ್ರತಪಸ್ಸು, ಶ್ರಾವಣ ಮತ್ತು ಸ್ರವಿಷ್ಟಕರೆಂಬ ನಾಲ್ವರು ಕುಮಾರರು ಜನಿಸಿ ಯೋಗಾಭ್ಯಾಸದಿಂದ ಧ್ಯಾನಪರಾಯಣ ರಾಗಿ ಪೂರ್ವಿಕರಂತೆಯೇ ರುದ್ರಲೋಕಕ್ಕೆ ಹೋಗುವರು.

೧೫೫. ಅನಂತರ ಕ್ರಮವಾಗಿ ಹದಿನೈದನೆಯ ದ್ವಾಪರಯುಗವು ಬರಲು ವ್ಯಾಸರು ಆರುಣಿನಾಮಕರಾಗಿ ಅವತರಿಸುವರು.

೧೫೬-೧೫೭. ಆಗ ನಾನು ಹಿಮಾಲಯದಲ್ಲಿರುವ ಸರಸ್ವತೀಪರ್ವತೋತ್ತಮ ದಲ್ಲಿ ವೇದಶಿರಸ್ಸೆಂಬ ನಾಮದಿಂದ ಅವತರಿಸುವೆನು. ನನ್ನ ಅಸ್ತ್ರಕ್ಕೂ ಕೂಡ ವೇದ

ಭವಿಷ್ಯತಿ ಮಹಾವೀರ್ಯಂ ವೇದಶೀರ್ಷಾ ಚ ಪರ್ವತಃ ।
ಹಿಮವತ್ಪೃಷ್ಠಮಾಶ್ರಿತ್ಯ ಸರಸ್ವತ್ಯಾ ನಗೋತ್ತಮೇ ॥ ೧೫೭ ॥

ತದಾಪಿ ಮಮ ತೇ ಪುತ್ರಾ ಭವಿಷ್ಯಂತಿ ತಪೋಧನಾಃ ।
ಕುಣಿಶ್ಚ ಕುಣಿಬಾಹುಶ್ಚ ಕುಶರೀರಃ ಕುನೇತ್ರಕಃ ॥ ೧೫೮ ॥

ಯೋಗಾತ್ಮಾನೋ ಮಹಾತ್ಮಾನೋ ಬ್ರಹ್ಮಿಷ್ಠಾಶ್ಚೋರ್ಧ್ವರೇತಸಃ ।
ತೇಽಪಿ ತೇನೈವ ಮಾರ್ಗೇಣ ರುದ್ರಲೋಕಂ ಗತಾಸ್ತು ತೇ ॥ ೧೫೯ ॥

ತತಃ ಷೋಡಶ ಮೇ ಚಾಪಿ ಪರಿವರ್ತೇ ಕ್ರಮಾಗತೇ ।
ವ್ಯಾಸಸ್ತು ಸಂಜಯೋ ನಾಮ ಭವಿಷ್ಯತಿ ತದಾ ಪ್ರಭುಃ ॥ ೧೬೦ ॥

ತದಾಪ್ಯಹಂ ಭವಿಷ್ಯಾಮಿ ಗೋಕರ್ಣೋ ನಾಮ ನಾಮತಃ ।
ತಸ್ಮಾದ್ಭವಿಷ್ಯತೇ ಪುಣ್ಯಂ ಗೋಕರ್ಣಂ ನಾಮ ತದ್ವನಂ ॥ ೧೬೧ ॥

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಮಹೌಜಸಃ ।
ಕಶ್ಯಪೋ ಹ್ಯುಶನಾಶ್ಚೈವ ಚ್ಯವನೋಽಥ ಬೃಹಸ್ಪತಿಃ ॥
ತೇಽಪಿ ತೇನೈವ ಮಾರ್ಗೇಣ ಗಮಿಷ್ಯಂತಿ ಪರಂ ಪದಂ ॥ ೧೬೨ ॥

---

ಶಿರವೆಂಬ ನಾಮವು ಪ್ರಾಪ್ತವಾಗಿ ವೀರ್ಯವತ್ತಾಗುವುದು. ಆ ಪರ್ವತವೂ ಸಹ ವೇದಶಿರವೆಂಬ ನಾಮದಿಂದ ಪ್ರಖ್ಯಾತವಾಗುವುದು

೧೫೮-೧೫೯ ಆಗಲೂ ಕೂಡ ನನಗೆ ಕುಣಿ, ಕುಣಿಬಾಹು, ಕುಶರೀರ, ಕುನೇತ್ರರೆಂಬ ನಾಲ್ವರು ಕುಮಾರರು ಜನಿಸಿ ಮಹಾತ್ಮರೂ, ಯೋಗಿಗಳೂ, ಬ್ರಹ್ಮ ಜ್ಞಾನಿಗಳೂ, ಊರ್ಧ್ವರೇತಸ್ಕರೂ ಆಗಿ ಪೂರ್ವೀಕರಂತೆಯೇ ಯೋಗಮಾರ್ಗದಿಂದ ರುದ್ರಲೋಕವನ್ನು ಹೊಂದುವರು.

೧೬೦. ಅನಂತರ ಕ್ರಮವಾಗಿ ಹದಿನಾರನೆಯ ದ್ವಾಪರಯುಗವು ಸಂಭವಿಸಲು ವ್ಯಾಸಮಹರ್ಷಿಗಳು ಸಂಜಯನಾಮಕರಾಗಿ ಆವಿರ್ಭವಿಸುವರು.

೧೬೧. ಆಗ ನಾನು ಗೋಕರ್ಣನಾಮದಿಂದ ಉದ್ಭವಿಸುವೆನು. ಅದರಿಂದ ಆ ವನವೂ ಕೂಡ ಗೋಕರ್ಣನಾಮಕವಾಗುವುದು.

೧೬೨. ಆಗಲೂ ಕೂಡ ಮಹಾತೇಜಸ್ವಿಗಳಾದ ಕಶ್ಯಪರು, ಉಶನಸರು, ಚ್ಯವನರು, ಬೃಹಸ್ಪತಿಗಳೆಂಬ ನಾಲ್ಕು ಜನ ಪುತ್ರರು ಆವಿರ್ಭವಿಸಿ ಅದೇ ಯೋಗ ಸಾಧನೆಯಿಂದ ಪರಮಪದವಿಯನ್ನು ಹೊಂದುವರು.

ತತಃ ಸಪ್ತದಶೇ ಚೈವ ಪರಿವರ್ತೇ ಕ್ರಮಾಗತೇ ।
ತದಾ ಭವಿಷ್ಯತಿ ವ್ಯಾಸೋ ನಾಮ್ನಾ ದೇವಕೃತಂಜಯಃ ॥ ೧೬೩ ॥

ಹಿಮವಚ್ಛಿಖರೇ ಚೈವ ಮಹಾತುಂಗೇ ಮಹಾಲಯೇ ।
ಸಿದ್ಧಕ್ಷೇತ್ರಂ ಮಹಾಪುಣ್ಯಂ ಭವಿಷ್ಯತಿ ಮಹಾಲಯಂ ॥ ೧೬೪ ॥

ತತ್ರಾಪಿ ಮಮ ತೇ ಪುತ್ರಾ ಬ್ರಹ್ಮಣ್ಯಾ ಯೋಗವೇದಿನಃ ।
ಭವಿಷ್ಯಂತಿ ಮಹಾತ್ಮಾನೋ ಸರ್ವಜ್ಞಾ ನಿರಹಂಕೃತಾಃ ॥ ೧೬೫ ॥

ಉತಥ್ಯೋ ವಾಮದೇವಶ್ಚ ಮಹಾಕಾಲೋ ಮಹಾಲಯಃ ।
ತೇಷಾಂ ಶತಸಹಸ್ರಂ ತು ಶಿಷ್ಯಾಣಾಂ ಧ್ಯಾನಸಾಧನಂ ॥ ೧೬೬ ॥

ಭವಿಷ್ಯಂತಿ ತದಾ ಕಲ್ಪೇ ಸರ್ವೇ ತೇ ಧ್ಯಾನ ಯುಂಜಕಾಃ ।
ತೇ ತು ಸನ್ನಿಹಿತಾ ಯೋಗೇ ಹೃದಿ ಕೃತ್ವಾ ಮಹೇಶ್ವರಂ ॥
ಮಹಾಲಯೇ ಪದಂ ಕ್ಷಿಪ್ತ್ವಾ ಪ್ರವಿಷ್ಟಾ ಶಿವಮವ್ಯಯಂ ॥ ೧೬೭ ॥

---

೧೬೩. ಅನಂತರ ಕ್ರಮವಾಗಿ ಹದಿನೇಳನೆಯ ಯುಗವು ಪ್ರಾಪ್ತವಾಗಲು ವ್ಯಾಸಮಹರ್ಷಿಗಳು ದೇವಕೃತಂಜಯವೆಂಬ ನಾಮದಿಂದ ಪ್ರಖ್ಯಾತರಾಗುವರು.

೧೬೪. ಆಗ ನಾನೂ ಸಹ ಗುಹಾವಾಸೀಯೆಂಬ ನಾಮದಿಂದ ಹಿಮಾಲಯದ ಅತ್ಯುನ್ನತವಾದ ಶಿಖರಾಲಯದಲ್ಲಿರುವ ಅತ್ಯಂತ ಪವಿತ್ರವಾದ ಸಿದ್ಧಿಕ್ಷೇತ್ರದಲ್ಲಿ ಅವತರಿಸುವೆನು.

೧೬೫-೧೬೬. ಆಗ ಸಿದ್ಧಿನಾಮಕವಾದ ಕ್ಷೇತ್ರದಲ್ಲಿ ನನಗೆ ಬ್ರಹ್ಮನಿಷ್ಠರೂ, ಯೋಗವೇತ್ತೃಗಳೂ, ಮಹಾತ್ಮರೂ, ಸರ್ವಜ್ಞರೂ, ಅಹಂಕಾರರಹಿತರೂ ಆದ ಉತಥ್ಯ, ವಾಮದೇವ, ಮಾಹಾಕಾಲ, ಮಹಾಲಯರೆಂಬ ನಾಲ್ಕುಜನ ಶಿಷ್ಯರು ಹುಟ್ಟುವರು. ಆ ಶಿಷ್ಯರಿಗೆ ಧ್ಯಾನಸಾಧನೆಗಳು ಲಕ್ಷಾಂತರಗಳಿರುವುವು.

೧೬೭. ಆ ಕಲ್ಪದಲ್ಲಿ ಆ ಮಕ್ಕಳೆಲ್ಲರೂ ಧ್ಯಾನಾಸಕ್ತರೂ ಯೋಗಿಗಳೂ ಆಗಿ ಚಿತ್ತದಲ್ಲಿ ಈಶ್ವರನನ್ನು ಧ್ಯಾನಿಸುತ್ತಾ ಮಹಾಲಯದಲ್ಲಿ ಪಾದವನ್ನು ಇಟ್ಟು ನಾಶರಹಿತವಾದ ಶಿವಪದವಿಯನ್ನು ಹೊಂದುವರು.

ಯೇ ಚಾನ್ಯೇಽಪಿ ಮಹಾತ್ಮಾನಃ ಕಾಲೇ ತಸ್ಮಿನ್ ಯುಗಾಂತಿಕೇ ।
ಧ್ಯಾನಯುಕ್ತೇನ ಮನಸಾ ವಿಮಲಾಃ ಶುದ್ಧಬುದ್ಧಯಃ ॥ ೧೬೮ ॥

ಗತ್ವಾ ಮಹಾಲಯಂ ಪುಣ್ಯಂ ದೃಷ್ಟ್ವಾ ಮಾಹೇಶ್ವರಂ ಪದಂ ।
ತೂರ್ಣಂ ತಾರಯತೇ ಜಂತೂನ್ ದಶ ಪೂರ್ವಾನ್ ದಶಾಪರಾನ್ ॥ ೧೬೯ ॥

ಆತ್ಮಾನಮೇಕವಿಂಶಂ ಚ ತಾರಯಿತ್ವಾ ಮಹಾರ್ಣವಂ ।
ಮಮ ಪ್ರಸಾದಾದ್ಯಾಸ್ಯಂತಿ ರುದ್ರಲೋಕಂ ಗತಜ್ವರಾಃ ॥ ೧೭೦ ॥

ತತೋಷ್ಟಾದಶಮೇ ಚೈವ ಪರಿವರ್ತೇ ಯದಾ ಭವೇತ್ ।
ತದಾ ಋತಂಜಯೋ ನಾಮ ವ್ಯಾಸಸ್ತು ಭವಿತಾ ಪುನಃ ॥
ತದಾಪ್ಯಹಂ ಭವಿಷ್ಯಾಮಿ ಶಿಖಂಡೀ ನಾಮ ನಾಮತಃ ॥ ೧೭೧ ॥

ಸಿದ್ಧಿಕ್ಷೇತ್ರೇ ಮಹಾಪುಣ್ಯೇ ದೇವದಾನವಪೂಜಿತೇ ।
ಹಿಮವಚ್ಛಿಖರೇ ಪುಣ್ಯೇ ಶಿಖಂಡೀ ಯತ್ರ ಪರ್ವತಃ ॥ ೧೭೨ ॥

---

೧೬೮-೧೬೯. ಆ ಯುಗದಲ್ಲಿರುವ ಇತರ ಮಹಾತ್ಮರೂ ಕೂಡ ಧ್ಯಾನದಿಂದ ವಿಮಲರೂ, ಶುದ್ಧಮನಸ್ಕರೂ ಆಗಿ ಪವಿತ್ರವಾದ ಮಹಾಲಯಕ್ಷೇತ್ರಕ್ಕೆ ಹೋಗಿ ಮಹೇಶ್ವರನ ಪಾದಪದ್ಮಗಳ ದರ್ಶನಮಾತ್ರದಿಂದಲೇ ತಕ್ಷಣದಲ್ಲಿಯೇ ಮುಕ್ತರಾಗುವರು. ಮತ್ತು ತಮ್ಮ ವಂಶದಲ್ಲಿ ಜನಿಸಿದ ಪೂರ್ವಾಪರದ ಹತ್ತು ತಲೆಯವರನ್ನೂ ಉದ್ಧರಿಸುವರು.

೧೭೦. ಆ ಯೋಗಿಗಳು ತಮ್ಮ ಸಂಗಡ ಇಪ್ಪತ್ತೊಂದು ವಂಶದವರನ್ನು ಸಂಸಾರಸಾಗರದಿಂದ ದಾಟಿಸುವರು. ಮತ್ತು ಅವರೆಲ್ಲರೂ ನನ್ನ ಅನುಗ್ರಹದಿಂದ ಪಾಪಗಳಿಂದ ಮುಕ್ತರಾಗಿ ರುದ್ರಲೋಕವನ್ನು ಹೊಂದುವರು.

೧೭೧. ಅನಂತರ ಹದಿನೆಂಟನೆಯ ಯುಗವು ಪ್ರಾಪ್ತವಾಗಲು ವ್ಯಾಸಮುನಿಯು ಋತಂಜಯನಾಮದಿಂದ ಅವತರಿಸುವನು. ಆಗ ನಾನೂ ಕೂಡ ಶಿಖಂಡಿಯೆಂಬ ನಾಮದಿಂದ ಆವಿರ್ಭವಿಸುವೆನು.

೧೭೨-೧೭೪ ಅತಿ ಮಾಹಾತ್ಮ್ಯಯುಕ್ತವೂ, ಪವಿತ್ರವೂ, ದೇವದೈತ್ಯರಿಂದ ಪೂಜಿತವೂ ಆದ ಹಿಮಾಲಯದ ಸಿದ್ಧಿಕ್ಷೇತ್ರದಲ್ಲಿ ಶಿಖಂಡಿನಾಮಕವೂ, ಋಷಿಗಳೂ,

ಶಿಖಂಡಿನೋವನಂಚಾಪಿ ಋಷಿ ಸಿದ್ಧ ನಿಷೇವಿತಂ ।
ತತ್ರಾಪಿ ಮಮತೇ ಪುತ್ರಾ ಭವಿಷ್ಯಂತಿ ತಪೋಧನಾಃ
ವಾಚಶ್ರವಾ ಋತೀಕಶ್ಚ ಶಾವಾಸಶ್ಚ ದೃಢವ್ರತಃ ॥ ೧೭೩ ॥

ಯೋಗಾತ್ಮಾನೋ ಮಹಾಶಕ್ತಾಃ ಸರ್ವೇ ತೇ ವೇದಪಾರಗಾಃ ।
ಪ್ರಾಪ್ಯ ಮಾಹೇಶ್ವರಂ ಯೋಗಂ ರುದ್ರಲೋಕಂ ವ್ರಜಂತಿ ತೇ ॥ ೧೭೪ ॥

ತತಸ್ತ್ವೇಕೋನವಿಂಶೇ ತು ಪರಿವರ್ತೇ ಕ್ರಮಾಗತೇ ।
ವ್ಯಾಸಸ್ತು ಭವಿತಾ ನಾಮ್ನಾ ಭರದ್ವಾಜೋ ಮಹಾಮುನಿಃ ॥ ೧೭೫ ॥

ತತ್ರಾಪ್ಯಹಂ ಭವಿಷ್ಯಾಮಿ ಜಟಾಮಾಲೀತಿ ನಾಮತಃ ।
ಹಿಮವಚ್ಛಿಖರೇ ರಮ್ಯೇ ಜಟಾಯುರ್ಯತ್ರ ಪರ್ವತಃ ॥ ೧೭೬ ॥

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಮಹೌಜಸಃ ।
ಹಿರಣ್ಯನಾಮಾ ಕೌಶಿಲ್ಯಃ ಕಾಕ್ಷೀವಃ ಕುಥುಮಿಸ್ತಥಾ ॥ ೧೭೭ ॥

ಈಶ್ವರಾ ಯೋಗಧರ್ಮಾಣಃ ಸರ್ವೇ ತೇ ಹ್ಯೂರ್ಧ್ವರೇತಸಃ ।
ಪ್ರಾಪ್ಯ ಮಾಹೇಶ್ವರಂ ಯೋಗಂ ಗಮಿಷ್ಯಂತಿ ನ ಸಂಶಯಃ ॥ ೧೭೮ ॥

---

ಸಿದ್ಧರೂ ಇವರಿಂದ ನಿಷೇವಿತವೂ ಆದ ವನದಲ್ಲಿ ತಪೋಧನರಾದ ವಾಚಶ್ರವ, ಋತೀಕ, ಶಾವಾಸ, ದೃಢವ್ರತರೆಂಬ ಮಕ್ಕಳು ಜನಿಸಿ ಯೋಗಾಭ್ಯಾಸದಿಂದ ಮಹಾಶಕ್ತಿಯನ್ನು ಪಡೆದು ವೇದಪಾರಂಗತರಾಗಿ ಈಶ್ವರನ ಅನುಗ್ರಹದಿಂದ ರುದ್ರಲೋಕವನ್ನು ಹೊಂದುವರು.

೧೭೫-೧೭೬. ಅನಂತರ ಹತ್ತೊಂಬತ್ತನೆಯ ಯುಗವು ಕ್ರಮವಾಗಿ ಪ್ರಾಪ್ತವಾಗಲಾಗಿ ವ್ಯಾಸಮುನಿಗಳು ಭರದ್ವಾಜನಾಮಕರಾಗಿ ಹುಟ್ಟುವರು. ಆಗ ನಾನೂ ಕೂಡ ಜಟಾಮಾಲೀ ಎಂಬ ನಾಮದಿಂದ ಪ್ರಖ್ಯಾತನಾಗುವೆನು. ರಮ್ಯವಾದ ಹಿಮಾಲಯದ ಜಟಾಯುಗಿರಿಯಲ್ಲಿ ಉದ್ಭವಿಸುವೆನು.

೧೭೭-೧೭೮. ಅಲ್ಲಿಯೂ ಕೂಡ ಮಹಾಪರಾಕ್ರಮಿಗಳೂ, ಊರ್ಧ್ವರೇತಸ್ಕರೂ ಆದ ಹಿರಣ್ಯನಾಮ, ಕೌಶಿಲ್ಯ, ಕಾಕ್ಷೀವ, ಕುಥುಮಿ ಎಂಬ ಪುತ್ರರು ಜನಿಸಿ, ಮಾಹೇಶ್ವರ ಯೋಗದಿಂದ ನಿಃಸಂದೇಹವಾಗಿಯೂ ಪರಮಪದವಿಯನ್ನು ಹೊಂದುವರು.

ತತೋ ವಿಂಶತಿಮೇ ಸರ್ಗೇ ಪರಿವರ್ತೇ ಕ್ರಮೇಣ ತು ।
ವಾಚಃಶ್ರವಾಃ ಸ್ಮೃತೋ ವ್ಯಾಸೋ ಭವಿಷ್ಯತಿ ಮಹಾಮತಿಃ ॥ ೧೭೯ ॥

ತದಾಪ್ಯಹಂ ಭವಿಷ್ಯಾಮಿ ಹ್ಯಟ್ಟಹಾಸೇತಿ ನಾಮತಃ ।
ಅಟ್ಟಹಾಸಪ್ರಿಯಾಶ್ಚಾಪಿ ಭವಿಷ್ಯಂತಿ ತದಾ ನರಾಃ ॥ ೧೮೦ ॥

ತತ್ರೈವ ಹಿಮವತ್ಪೃಷ್ಠೇ ಸಿದ್ಧಚಾರಣಸೇವಿತೇ ।
ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಮಹೌಜಸಃ ॥
ಯುಕ್ತಾತ್ಮಾನೋ ಮಹಾಸತ್ವಾ ಧ್ಯಾನಿನೋ ನಿಯತವ್ರತಾಃ ॥ ೧೮೧ ॥

ಸುಮಂತುರ್ವರ್ವರಿರ್ವಿದ್ವಾನ್ ಸುಬಂಧುಃ ಕುಶಿಕಂಧರಃ ।
ಪ್ರಾಪ್ಯ ಮಾಹೇಶ್ವರಂ ಯೋಗಂ ರುದ್ರಲೋಕಾಯ ತೇ ಗತಾಃ ॥ ೧೮೨ ॥

ಏಕವಿಂಶೇ ಪುನಃ ಪ್ರಾಪ್ತೇ ಪರಿವರ್ತೇ ಕ್ರಮೇಣ ತು ।
ವಾಚಸ್ಪತಿಃ ಸ್ಮೃತೋ ವ್ಯಾಸೋ ಯದಾ ಸ ಋಷಿಸತ್ತಮಃ ॥ ೧೮೩ ॥

ತದಾಽಪ್ಯಹಂ ಭವಿಷ್ಯಾಮಿ ದಾರುಕೋ ನಾಮ ನಾಮತಃ ।
ತಸ್ಮಾದ್ಭವಿಷ್ಯತೇ ಪುಣ್ಯಂ ದೇವದಾರುವನಂ ಮಹತ್ ॥ ೧೮೪ ॥

---

೧೭೯-೧೮೦. ಅನಂತರ ಇಪ್ಪತ್ತನೆಯ ಯುಗವು ಪ್ರಾರಂಭವಾಗಲು, ಮಹಾನುಭಾವರಾದ ವ್ಯಾಸರು, ಮಹಾಜ್ಞಾನಿಯಾದ ವಾಚಃಶ್ರವಸ್ಸು ಎಂಬ ನಾಮದಿಂದ ಅವತರಿಸುವರು. ಆಗ ನಾನು ಅಟ್ಟಹಾಸ ನಾಮಕನಾಗಿ ಪ್ರಖ್ಯಾತನಾಗುವೆನು. ಆಗ ಜನರಿಗೆ ಅಟ್ಟಹಾಸದಲ್ಲಿ ಅತಿಪ್ರಿಯವು ಉಂಟಾಗುವುದು.

೧೮೧-೧೮೨ ಸಿದ್ಧಚಾರಣರಿಂದ ಸೇವಿಸಲ್ಪಟ್ಟವರೂ ಹಿಮಾಲಯದಲ್ಲಿ ವಾಸಿಸುವರೂ, ಮಹಾತೇಜಸ್ವಿಗಳೂ, ಯುಕ್ತಾತ್ಮರೂ, ಮಹಾಸತ್ವವಂತರೂ, ಧ್ಯಾನಿಗಳೂ, ನಿಯತವ್ರತಿಗಳೂ ಆದ ಸುಮಂತು, ವರ್ವರಿ, ಸುಬಂಧು, ಮತ್ತು ಕುಶಿಕಂಧರರೆಂಬ ನಾಲ್ವರು ಸುತರು ಜನಿಸಿ, ಮಹೇಶ್ವರನ ಧ್ಯಾನದಿಂದ ರುದ್ರಲೋಕವನ್ನು ಹೊಂದುವರು.

೧೮೩-೧೮೪. ಇಪ್ಪತ್ತೊಂದನೆಯ ಯುಗವು ಕ್ರಮವಾಗಿ ಸಂಭವಿಸಲು, ಮಹರ್ಷಿಗಳಾದ ವ್ಯಾಸರು, ವಾಚಸ್ಪತಿನಾಮದಿಂದ ಆವಿರ್ಭವಿಸುವರು. ಆಗ ನಾನೂ ಕೂಡ, ದಾರುಕನಾಮದಿಂದ ಹುಟ್ಟುವೆನು. ಆ ವನದಲ್ಲಿ ಈಶ್ವರನು ಅವತಾರ ಮಾಡುವುದರಿಂದ ಆ ದೇವದಾರುವನವು ಪವಿತ್ರವೂ, ಪ್ರಖ್ಯಾತವೂ ಆಗುವುದು.

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಮಹೌಜಸಃ ।
ಪ್ಲಕ್ಷೋ ದಾಕ್ಷಾಯಣಿಶ್ಚೈವ ಕೇತುಮಾಲೀ ಬಕಸ್ತಥಾ ॥ ೧೮೫ ॥

ಯೋಗಾತ್ಮಾನೋ ಮಹಾತ್ಮಾನೋ ನಿಯತಾ ಹ್ಯೂರ್ಧ್ವರೇತಸಃ ।
ಪರಮಂ ಯೋಗಮಾಸ್ಥಾಯ ರುದ್ರಂ ಪ್ರಾಪ್ತಾಸ್ತಥಾನಘಾಃ ॥ ೧೮೬ ॥

ದ್ವಾವಿಂಶೇ ಪರಿವರ್ತೇ ತು ವ್ಯಾಸಃ ಶುಕ್ಲಾಯನೋ ಯದಾ ।
ತದಾಪ್ಯಹಂ ಭವಿಷ್ಯಾಮಿ ವಾರಾಣಸ್ಯಾಂ ಮಹಾಮುನಿಃ ॥ ೧೮೭ ॥

ನಾಮ್ನಾ ವೈ ಲಾಂಗಲೀ ಭೀಮೋ ಯತ್ರ ದೇವಾಃ ಸವಾಸವಾಃ ।
ದ್ರಕ್ಷ್ಯಂತಿ ಮಾಂ ಕಲೌ ತಸ್ಮಿನ್ ಅವತೀರ್ಣಂ ಹಲಾಯುಧಂ ॥ ೧೮೮ ॥

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಸುಧಾರ್ಮಿಕಾಃ ।
ತುಲ್ಯಾರ್ಚಿರ್ಮಧುಪಿಂಗಾಕ್ಷಃ ಶ್ವೇತಕೇತುಸ್ತಥೈವಚ ॥ ೧೮೯ ॥

ತೇ ಪಿ ಮಾಹೇಶ್ವರಂ ಯೋಗಂ ಪ್ರಾಪ್ಯ ಧ್ಯಾನಪರಾಯಣಾಃ ।
ವಿರಜಾ ಬ್ರಹ್ಮ ಭೂಯಿಷ್ಠಾ ರುದ್ರಲೋಕಾಯ ಸಂಸ್ಥಿತಾಃ ॥ ೧೯೦ ॥

---

೧೮೫-೧೮೬. ಅಲ್ಲಿಯೂ ಕೂಡ ಮಹಾಮತಿಕರಾದ, ಪ್ಲಕ್ಷ, ದಾಕ್ಷಾಯಣಿ, ಕೇತುಮಾಲೀ ಮತ್ತು ಬಕನೆಂಬ ನಾಲ್ವರು ಕುಮಾರರು ಜನಿಸಿ ಯೋಗಾತ್ಮರೂ, ಮಹಾತ್ಮರೂ, ಊರ್ಧ್ವರೇತಸ್ಕರೂ ಆಗಿ ಪರಮಯೋಗದಿಂದ ರುದ್ರಲೋಕ ವನ್ನು ಹೊಂದುವರು.

೧೮೭-೧೮೮. ಇಪ್ಪತ್ತೆರಡನೆಯ ಯುಗವು ಪರಿವರ್ತಿತವಾಗಲು, ವ್ಯಾಸರು ಶುಕ್ಲಾಯನನಾಮಕರಾಗಿ ಅವತರಿಸುವರು. ಆಗ ನಾನೂ ಕೂಡ ಕಾಶಿಯಲ್ಲಿ ಮಹಾ ಮುನಿಯಾದ ಬಲರಾಮನಾಮಕನಾಗಿ ಜನಿಸುವೆನು. ಆಗ ದೇವತೆಗಳು ನನ್ನನ್ನು ಭೂಮಿಯಲ್ಲಿ ಅವತರಿಸಿರುವ ಹಲಾಯುಧನೆಂದು ಹೇಳುವರು

೧೮೯-೧೯೦. ಅಲ್ಲಿಯೂ ಕೂಡ, ಅತ್ಯಂತ ಧಾರ್ಮಿಕರಾದ, ತುಲ್ಯಾರ್ಚಿ, ಮಧು, ಪಿಂಗಾಕ್ಷ, ಶ್ವೇತಕೇತು, ಎಂಬ ನಾಲ್ಕುಜನ ಪುತ್ರರು ಜನಿಸಿ ಯೋಗಾ ಭ್ಯಾಸದಿಂದ ಧ್ಯಾನಾಸಕ್ತರೂ, ವಿರಜರೂ, ಬ್ರಹ್ಮಜ್ಞಾನಿಗಳೂ, ಆಗಿ ರುದ್ರಲೋಕ ವನ್ನು ಹೊಂದುವರು

ಪರಿವರ್ತೇ ತ್ರಯೋವಿಂಶೇ ತೃಣಬಿಂದುರ್ಯದಾ ಮುನಿಃ ।
ವ್ಯಾಸೋ ಭವಿಷ್ಯತಿ ಬ್ರಹ್ಮಾ ತದಾಽಹಂ ಭವಿತಾ ಪುನಃ ॥
ಶ್ವೇತೋ ನಾಮ ಮಹಾಕಾಯೋ ಮುನಿಪುತ್ರಃ ಸುಧಾರ್ಮಿಕಃ ॥ ೧೯೧ ॥

ತತ್ರ ಕಾಲಂಜರಿಷ್ಯಾಮಿ ತದಾ ಗಿರಿವರೋತ್ತಮೇ ।
ತೇನ ಕಾಲಂಜರೋ ನಾಮ ಭವಿಷ್ಯತಿ ಸ ಪರ್ವತಃ ॥ ೧೯೨ ॥

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಮಹೌಜಸಃ ।
ಉಷಿಜೋ ಬೃಹದುಕ್ಥಶ್ಚ ದೇವಲಃ ಕವಿರೇವ ಚ ।
ಪ್ರಾಪ್ಯ ಮಾಹೇಶ್ವರಂ ಯೋಗಂ ರುದ್ರಲೋಕಂ ಗತಾ ಹಿ ತೇ ॥ ೧೯೩ ॥

ಪರಿವರ್ತೇ ಚತುರ್ವಿಂಶೇ ಋಕ್ಷೋ ವ್ಯಾಸೋ ಭವಿಷ್ಯತಿ ।
ತತ್ರಾಹಂ ಭವಿತಾ ಬ್ರಹ್ಮನ್ ಕಲೌ ತಸ್ಮಿನ್ ಯುಗಾಂತಿಕೇ ।
ಶೂಲೀ ನಾಮ ಮಹಾಯೋಗೀ ನೈಮಿಷೇ ಯೋಗಿವಂದಿತೇ ॥ ೧೯೪ ॥

---

೧೯೧-೧೯೨. ಇಪ್ಪತ್ತಮೂರನೆಯ ಕಲ್ಪವು ಕ್ರಮವಾಗಿ ಬರಲು, ವ್ಯಾಸ ಮುನಿಯು, ತೃಣಬಿಂದುನಾಮಕ ಬ್ರಹ್ಮನಾಗಿ ಅವತರಿಸುವನು. ಆಗ ನಾನು, ಸುಧಾರ್ಮಿಕನೂ, ಮಹಾಕಾಯನೂ, ಶ್ವೇತನಾಮಕನೂ ಆದ ಮುನಿಕುಮಾರನಾಗಿ ಜನಿಸಿ, ಆ ಪರ್ವತೋತ್ತಮದಲ್ಲಿ ಕಾಲಯಾಪನೆಯನ್ನು ಮಾಡುವೆನು. ಅದರಿಂದ ಆ ಪರ್ವತಕ್ಕೆ ಕಾಲಂಜರವೆಂಬ ನಾಮವು ಉಂಟಾಗುವುದು.

೧೯೩. ಆ ಪರ್ವತದಲ್ಲಿಯೂ ಕೂಡ, ಮಹಾತೇಜಸ್ವಿಗಳಾದ ಉಷಿಜ, ಬೃಹದುಕ್ಥ, ದೇವಲ, ಕವಿ ಎಂಬ ನಾಲ್ವರು ಸುತರು ಜನಿಸಿ, ಮಹೇಶ್ವರನ ಯೋಗದಿಂದ ರುದ್ರಲೋಕವನ್ನು ಹೊಂದುವರು

೧೯೪. ಪುನಃ ಇಪ್ಪತ್ತನಾಲ್ಕನೆಯ ಕಲಿಯುಗವು ಪ್ರಾಪ್ತವಾಗಲು, ವ್ಯಾಸರು ಋಕ್ಷನಾಮಕರಾಗಿ ಜನಿಸುವರು. ಆಗ ನಾನು, ಆ ಕಲಿಯುಗದ ಅಂತ್ಯದಲ್ಲಿ ಶೂಲಿ ಎಂಬ ಮಹಾಯೋಗಿಯಾಗಿ ಋಷಿಗಳಿಂದ ವಂದಿತವಾದ ನೈಮಿಷಾರಣ್ಯದಲ್ಲಿ ಅವತರಿಸುವೆನು

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ತಪಸ್ವಿನಃ ।
ಶಾಲಿಹೋತ್ರೋಽಗ್ನಿವೇಶ್ಯಶ್ಚ ಯುವನಾಶ್ವಃ ಶರದ್ವಸುಃ ।
ತೇಽಪಿ ಯೋಗಬಲೋಪೇತಾ ರುದ್ರಂ ಯಾಸ್ಯಂತಿ ಸುವ್ರತಾಃ ॥ ೧೯೫ ॥

ಪಂಚವಿಂಶೇ ಪುನಃ ಪ್ರಾಪ್ತೇ ಪರಿವರ್ತೇ ಯಥಾಕ್ರಮಂ ।
ವಾಸಿಷ್ಠಸ್ತು ತದಾ ವ್ಯಾಸಃ ಶಕ್ತಿರ್ನಾಮ ಭವಿಷ್ಯತಿ ॥ ೧೯೬ ॥

ತದಾಪ್ಯಹಂ ಭವಿಷ್ಯಾಮಿ ದಂಡೀ ಮುಂಡೀಶ್ವರಃ ಪ್ರಭುಃ ।
ಕೋಟಿವರ್ಷಂ ಸಮಾಸಾದ್ಯ ನಗರಂ ದೇವಪೂಜಿತಂ ॥ ೧೯೭ ॥

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಕ್ರಮಾಗತಾಃ ।
ಯೋಗಾತ್ಮಾನೋ ಮಹಾತ್ಮಾನಃ ಸರ್ವೇ ತೇ ಹ್ಯೂರ್ಧ್ವರೇತಸಃ ॥ ೧೯೮ ॥

ಛಗಲಃ ಕುಂಭಕರ್ಣಾಶ್ಯಃ ಕುಂಭಶ್ಚೈವ ಪ್ರಬಾಹುಕಃ ।
ಪ್ರಾಪ್ಯ ಮಾಹೇಶ್ವರಂ ಯೋಗಂ ಗಮಿಷ್ಯಂತಿ ತಥೈವ ತೇ ॥ ೧೯೯ ॥

---

೧೯೫. ಅಲ್ಲಿಯೂ ಸಹ ನನಗೆ, ಮಹಾತಪಸ್ವಿಗಳಾದ, ಶಾಲಿಹೋತ್ರ, ಅಗ್ನಿವೇಶ್ಯ, ಯುವನಾಶ್ವ ಮತ್ತು ಶರದ್ವಸುವೆಂಬ ನಾಲ್ವರು ಕುಮಾರರು ಜನಿಸಿ ಯೋಗಾಭ್ಯಾಸದ ಬಲದಿಂದ ಶಾಶ್ವತವಾದ ರುದ್ರಲೋಕವನ್ನು ಹೊಂದುವರು.

೧೯೬-೧೯೭. ಇಪ್ಪತ್ತೈದನೆಯ ಯುಗವು ಕ್ರಮವಾಗಿ ಪ್ರಾಪ್ತವಾಗಲು ವ್ಯಾಸರು ವಸಿಷ್ಠರ ವಂಶದಲ್ಲಿ ಶಕ್ತಿನಾಮಕರಾಗಿ ಹುಟ್ಟುವರು. ಆಗ ನಾನು, ದೇವ ಪೂಜಿತವಾದ ಕೋಟಿವರ್ಷವೆಂಬ ನಗರದಲ್ಲಿ, ದಂಡಧಾರಿಯಾದ, ಮುಂಡೀಶ್ವರನಾಗಿ ಅವತಾರಮಾಡುವೆನು.

೧೯೮-೧೯೯. ಅಲ್ಲಿಯೂ ಕೂಡ ಕ್ರಮಪ್ರಾಪ್ತವಾದ ಯೋಗಾಭ್ಯಾಸವುಳ್ಳವರೂ ಮಹಾತ್ಮರೂ, ಊರ್ಧ್ವರೇತಸ್ಕರೂ, ಆದ ಛಗಲ, ಕುಂಭಕರ್ಣಾಶ್ಯ, ಕುಂಭ, ಪ್ರಬಾಹುಕರೆಂಬ ನಾಲ್ವರು ಪುತ್ರರು ಉದ್ಭವಿಸಿ, ಮಹಾಯೋಗಾಭ್ಯಾಸದಿಂದ ಪುನರಾವೃತ್ತಿರಹಿತವೂ ಶಾಶ್ವತವೂ ಆದ ರುದ್ರಪದವಿಯನ್ನು ಹೊಂದುವರು.

ಷಡ್ವಿಂಶೇ ಪರಿವರ್ತೇ ತು ಯದಾ ವ್ಯಾಸಃ ಪರಾಶರಃ ।
ತದಾಪ್ಯಹಂ ಭವಿಷ್ಯಾಮಿ ಸಹಿಷ್ಣುರ್ನಾಮ ನಾಮತಃ ॥
ಪುಣ್ಯಂ ರುದ್ರವನಂ ಪ್ರಾಪ್ಯ ಕಲೌ ತಸ್ಮಿನ್ ಯುಗಾಂತಿಕೇ ॥ ೨೦೦ ॥

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಸುಧಾರ್ಮಿಕಾಃ ।
ಉಲೂಕೋ ವೈದ್ಯುತಶ್ಚೈವ ಸರ್ವಕೋ ಹ್ಯಾಶ್ವಲಾಯನಃ ॥
ಪ್ರಾಪ್ಯ ಮಾಹೇಶ್ವರಂ ಯೋಗಂ ಗಂತಾರಸ್ತೇ ತಥೈವ ಹಿ ॥ ೨೦೧ ॥

ಸಪ್ತವಿಂಶತಿಮೇ ಪ್ರಾಪ್ತೇ ಪರಿವರ್ತೇ ಕ್ರಮಾಗತೇ ।
ಜಾತೂಕರ್ಣ್ಯೋ ಯದಾ ವ್ಯಾಸೋ ಭವಿಷ್ಯತಿ ತಪೋಧನಃ ॥ ೨೦೨ ॥

ತದಾಪ್ಯಹಂ ಭವಿಷ್ಯಾಮಿ ಸೋಮಶರ್ಮಾ ದ್ವಿಜೋತ್ತಮಃ ।
ಪ್ರಭಾಸತೀರ್ಥಮಾಸಾದ್ಯ ಯೋಗಾತ್ಮಾ ಲೋಕವಿಶ್ರುತಃ ॥ ೨೦೩ ॥

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ತಪೋಧನಾಃ ।
ಅಕ್ಷಪಾದಃ ಕಣಾದಶ್ಚ ಉಲೂಕೋ ವತ್ಸ ಏವ ಚ ॥ ೨೦೪ ॥

ಯೋಗಾತ್ಮಾನೋ ಮಹಾತ್ಮಾನೋ ವಿಮಲಾಃ ಶುದ್ಧಬುದ್ಧಯಃ ।
ಪ್ರಾಪ್ಯ ಮಾಹೇಶ್ವರಂ ಯೋಗಂ ರುದ್ರಲೋಕಂ ತತೋ ಗತಾಃ ॥ ೨೦೫ ॥

---

೨೦೦-೨೦೧. ಇಪ್ಪತ್ತಾರನೆಯ ಯುಗವು ಕ್ರಮವಾಗಿ ಪ್ರಾಪ್ತವಾಗಲು, ವ್ಯಾಸರು ಪರಾಶರ ನಾಮಕರಾಗಿ ಜನಿಸುವರು. ಆಗ ನಾನೂ ಕೂಡ, ಸಹಿಷ್ಣುವೆಂಬ ನಾಮದಿಂದ ಕಲಿಯುಗಾಂತ್ಯದಲ್ಲಿ ಪವಿತ್ರವಾದ ರುದ್ರವನದಲ್ಲಿ ಅವತರಿಸುವೆನು. ಅಲ್ಲಿ ಅತ್ಯಂತ ಧಾರ್ಮಿಕರಾದ ಉಲೂಕ, ವೈದ್ಯುತ, ಸರ್ವಕ, ಆಶ್ವಲಾಯನರೆಂಬ ಪುತ್ರರು ಜನಿಸಿ, ಮಾಹೇಶ್ವರ ಯೋಗದಿಂದ, ಪ್ರಾಚೀನರಂತೆ ರುದ್ರಪದವಿಯನ್ನು ಹೊಂದುವರು.

೨೦೨-೨೦೫. ಇಪ್ಪತ್ತೇಳನೆಯ ಯುಗವು ಕ್ರಮವಾಗಿ ಪ್ರಾಪ್ತವಾಗಲು, ತಪೋಧನರಾದ ವ್ಯಾಸರು ಜಾತೂಕರ್ಣನಾಮಕರಾಗಿ ಉದ್ಭವಿಸುವರು. ಆಗ ನಾನು, ಪ್ರಭಾಸ ಕ್ಷೇತ್ರದಲ್ಲಿ, ಯೋಗಿಯೂ, ಪ್ರಖ್ಯಾತನೂ ಆದ ಸೋಮದೇವಶರ್ಮನೆಂಬ ಬ್ರಾಹ್ಮಣನಾಗಿ ಅವತರಿಸುವೆನು. ಅಲ್ಲಿಯೂ ಕೂಡ ತಪೋಧನರಾದ ಅಕ್ಷಪಾದ, ಕಣಾದ, ಉಲೂಕ, ವತ್ಸರೆಂಬ ನಾಲ್ವರು ಪುತ್ರರು ಹುಟ್ಟಿ, ಯೋಗಿಗಳೂ, ಮಹಾತ್ಮರೂ, ವಿಮಲರೂ, ಶುದ್ಧಮತಿಗಳೂ, ಆಗಿ ಮಾಹೇಶ್ವರಯೋಗದಿಂದ ಶಾಶ್ವತವಾದ ರುದ್ರಪದವಿಯನ್ನು ಹೊಂದುವರು.

ಅಷ್ಟಾವಿಂಶೇ ಪುನಃ ಪ್ರಾಪ್ತೇ ಪರಿವರ್ತೇ ಕ್ರಮಾಗತೇ ।
ಪರಾಶರಸುತಃ ಶ್ರೀಮಾನ್ ವಿಷ್ಣುರ್ಲೋಕಪಿತಾಮಹಃ ॥ ೨೦೬ ॥

ಯದಾ ಭವಿಷ್ಯತಿ ವ್ಯಾಸೋ ನಾಮ್ನಾ ದ್ವೈಪಾಯನಃ ಪ್ರಭುಃ ।
ತದಾ ಷಷ್ಠೇನ ಚಾಂಶೇನ ಕೃಷ್ಣಃ ಪುರುಷಸತ್ತಮಃ ।
ವಸುದೇವಾದ್ಯದುಶ್ರೇಷ್ಠೋ ವಾಸುದೇವೋ ಭವಿಷ್ಯತಿ ॥ ೨೦೭ ॥

ತದಾ ಚಾಹಂ ಭವಿಷ್ಯಾಮಿ ಯೋಗಾತ್ಮಾ ಯೋಗಮಾಯಯಾ ।
ಲೋಕವಿಸ್ಮಯನಾರ್ಥಾಯ ಬ್ರಹ್ಮಚಾರಿಶರೀರಕಃ ॥ ೨೦೮ ॥

ಶ್ಮಶಾನೇ ಮೃತಮುತ್ಸೃಷ್ಟಂ ದೃಷ್ಟ್ವಾ ಲೋಕಮನಾಥಕಂ ।
ಬ್ರಾಹ್ಮಣಾನಾಂ ಹಿತಾರ್ಥಾಯ ಪ್ರವಿಷ್ಟೋ ಯೋಗಮಾಯಯಾ ॥ ೨೦೯ ॥

ದಿವ್ಯಾಂ ಮೇರುಗುಹಾಂ ಪುಣ್ಯಾಂ ತ್ವಯಾ ಸಾರ್ಧಂಚ ವಿಷ್ಣುನಾ ।
ಭವಿಷ್ಯಾಮಿ ತದಾ ಬ್ರಹ್ಮನ್ ನಕುಲೀ ನಾಮ ನಾಮತಃ ॥ ೨೧೦ ॥

---

೨೦೬-೨೦೭. ಇಪ್ಪತ್ತೆಂಟನೆಯ ಕಲಿಯುಗವು ಕ್ರಮವಾಗಿ ಪ್ರಾಪ್ತವಾಗಲು ಮಹದೈಶ್ವರ್ಯವಂತನೂ, ಲೋಕಪಿತಾಮಹನೂ ಆದ ಮಹಾವಿಷ್ಣುವು ಪರಾಶರರ ಪುತ್ರನಾಗಿ ಅವತರಿಸಿ, ದ್ವೈಪಾಯನ ಮತ್ತು ವ್ಯಾಸ ಎಂಬ ನಾಮಗಳಿಂದ ಪ್ರಖ್ಯಾತ ನಾಗುವನು. ಆಗ ಪುರುಷೋತ್ತಮನಾದ ಶ್ರೀಹರಿಯು ತನ್ನ ಆರನೆಯ ಅಂಶದಿಂದ ಯದೂತ್ತಮನಾದ ವಸುದೇವರಾಜನಿಗೆ ಪುತ್ರನಾಗಿ ಉದ್ಭವಿಸಿ ಕೃಷ್ಣನಾಮಕನಾಗಿ ಪ್ರಖ್ಯಾತನಾಗುವನು.

೨೦೮-೨೧೦. ಆಗ ಯೋಗಿಯಾದ ನಾನು ಲೋಕಕ್ಕೆ ಆಶ್ಚರ್ಯವನ್ನು ಉಂಟುಮಾಡುವುದಕ್ಕಾಗಿ ಯೋಗಮಾಯೆಯಿಂದ ಬ್ರಹ್ಮಚಾರಿಯಾಗಿ ಶ್ಮಶಾನದಲ್ಲಿ ಅನಾಥವಾಗಿ ದಿಕ್ಕಿಲ್ಲದೆಯೇ ಸತ್ತುಬಿದ್ದಿರುವ ಶವವನ್ನು ನೋಡಿ ಬ್ರಾಹ್ಮಣರಿಗೆ ಹಿತ ವನ್ನು ಮಾಡುವ ಉದ್ದೇಶದಿಂದ ಅದನ್ನು ಪ್ರವೇಶಿಸುವೆನು ಮತ್ತು ಎಲೈ ಬ್ರಹ್ಮನೇ, ಆಗ ನಾನು ನಕುಲೀನಾಮಕನಾಗಿ ನಿನ್ನ ಮತ್ತು. ವಿಷ್ಣುವಿನ ಸಂಗಡ ಮೇರುಗಿರಿ ಯಲ್ಲಿರುವ ದಿವ್ಯವಾದ ಗವಿಯಲ್ಲಿ ಸಂಚರಿಸಿ ವಾಸಿಸುವೆನು.

ಕಾಯಾರೋಹಣಮಿತ್ಯೇವಂ ಸಿದ್ಧಕ್ಷೇತ್ರಂ ಚ ವೈ ತದಾ ।
ಭವಿಷ್ಯತಿ ತು ವಿಖ್ಯಾತಂ ಯಾವದ್ಭೂಮಿರ್ಧರಿಷ್ಯತಿ ॥ ೨೧೧ ॥

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ತಪಸ್ವಿನಃ ।
ಕುಶಿಕಶ್ಚೈವ ಗಾರ್ಗ್ಯಶ್ಚ ಮಿತ್ರಕೋ ರುಷ್ಟ ಏವ ಚ ॥ ೨೧೨ ॥

ಯೋಗಯುಕ್ತಾ ಮಹಾತ್ಮಾನೋ ಬ್ರಾಹ್ಮಣಾ ವೇದಪಾರಗಾಃ ।
ಪ್ರಾಪ್ಯ ಮಾಹೇಶ್ವರಂ ಯೋಗಂ ವಿಮಲಾ ಹ್ಯೂರ್ಧ್ವರೇತಸಃ ॥
ರುದ್ರಲೋಕಂ ಗಮಿಷ್ಯಂತಿ ಪುನರಾವೃತ್ತಿದುರ್ಲಭಂ ॥ ೨೧೩ ॥

ಇತ್ಯೇತದ್ವೈ ಮಯಾ ಪ್ರೋಕ್ತಮವತಾರೇಷು ಲಕ್ಷಣಂ ।
ಮನ್ವಾದಿಕೃಷ್ಣಪರ್ಯಂತಮಷ್ಟಾವಿಂಶಯುಗಕ್ರಮಾತ್ ॥
ತತ್ರ ಸ್ಮೃತಿಸಮೂಹಾನಾಂ ವಿಭಾಗೋ ಧರ್ಮಲಕ್ಷಣಂ ॥ ೨೧೪ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಮಾಹೇಶ್ವರಾವತಾರ ಯೋಗೋ" ನಾಮ ತ್ರಯೋವಿಂಶೋಽಧ್ಯಾಯಃ

---

೨೧೧. ಆಗ ಆ ಕ್ಷೇತ್ರವು ಈ ಲೋಕದಲ್ಲಿ ಕಾಯಾರೋಹಣನಾಮಕವಾದ ಸಿದ್ಧಿಕ್ಷೇತ್ರವೆಂಬುದಾಗಿ ಚಂದ್ರಸೂರ್ಯರು ಇರುವ ವರೆಗೂ ಪ್ರಖ್ಯಾತವಾಗುವುದು.

೨೧೨-೨೧೩. ಆಗಲೂ ಕೂಡ ತಪಸ್ವಿಗಳಾದ ಕುಶಿಕ, ಗಾರ್ಗ್ಯ, ಮಿತ್ರಕ, ರುಷ್ಟ ಎಂಬ ನಾಲ್ವರು ಮಕ್ಕಳು ಜನಿಸಿ ಯೋಗಯುಕ್ತರೂ, ವೇದಪಾರಂಗತರೂ, ಬ್ರಾಹ್ಮಣರೂ, ಮಾಹೇಶ್ವರಯೋಗದಿಂದ ವಿಮಲರೂ ಆಗಿ ಪುನರಾವೃತ್ತಿರಹಿತವಾದ ರುದ್ರಲೋಕವನ್ನು ಹೊಂದುವರು.

೨೧೪. ಈ ರೀತಿಯಾಗಿ ಇಪ್ಪತ್ತೆಂಟು ಯುಗಗಳಲ್ಲಿಯೂ ಮನ್ವಾದಿಯಾಗಿ ಕೃಷ್ಣಪರ್ಯಂತವಾದ ಅವತಾರಗಳನ್ನೂ, ಅವುಗಳಲ್ಲಿ ನಡೆದ ಕಾರ್ಯ ಮತ್ತು ಫಲಗಳನ್ನೂ ನಿಮಗಾಗಿ ನಿರೂಪಿಸಿರುವೆನು. ಮತ್ತು ಸ್ಮೃತಿಗಳು, ಧರ್ಮಗಳು ಇವುಗಳ ವಿಭಾಗಲಕ್ಷಣಗಳನ್ನೂ ಕೂಡ ಈಗ ನಿಮಗಾಗಿ ಹೇಳುವೆನು ಕೇಳಿ ಎಂದು ಸೂತಮುನಿಯು ಋಷಿಗಳಿಗೆ ತಿಳಿಸಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಮಾಹೇಶ್ವರಾವತಾರ ನಿರೂಪಣ" ವೆಂಬ ಇಪ್ಪತ್ತಮೂರನೆಯ ಅಧ್ಯಾಯವು ಸಮಾಪ್ತವು.

## ಇಪ್ಪತ್ತನಾಲ್ಕನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಪೀತಕಲ್ಪ, ಕೃಷ್ಣಕಲ್ಪ, ಅಸಿತಕಲ್ಪ, ವಿಶ್ವಕಲ್ಪ ಎಂಬ ಕಲ್ಪಗಳೂ, ಈ ಕಲ್ಪಗಳಲ್ಲಿ ಮಾಡಿದ ಭಗವದವತಾರಗಳೂ, ಅವರ ಶಿಷ್ಯರೂ ಮತ್ತು ಉಪದೇಶಫಲಗಳೂ ಉಕ್ತವಾಗಿವೆ.

ಅನಂತರ ವರಾಹಕಲ್ಪ, ಕೃತ, ತ್ರೇತಾ, ದ್ವಾಪರ, ಕಲಿಯುಗಗಳು, ಮನ್ವಂತರ ಪ್ರಲಯಗಳು, ಜಲಶಾಯಿಯಾದ ಪರಮಾತ್ಮನ ನಾಭಿಯಲ್ಲಿ ಕಮಲೋತ್ಪತ್ತಿ, ಅದರಲ್ಲಿ ಬ್ರಹ್ಮನ ಜನನ, ಇವುಗಳು ನಿರೂಪಿತವಾಗಿವೆ. ಆದ್ದರಿಂದ ಆ ಕಲ್ಪಕ್ಕೆ ಪದ್ಮಕಲ್ಪವೆಂಬನಾಮವೂ ಕೂಡ ವ್ಯಕ್ತವಾಗಿದೆ.

೨ ನೆಯ ಕಲ್ಪದಲ್ಲಿ ವ್ಯಾಸಮುನಿಯು, ಸತ್ಯನಾಮಕನೂ, ಈಶ್ವರನು, ಸಿತಾರನಾಮಕನೂ, ೩ ರಲ್ಲಿ ಭಾರ್ಗವ, ದಮನಕ, ೪ ರಲ್ಲಿ ಆಂಗಿರಸ, ಸಹೋತ್ರ, ೫ ರಲ್ಲಿ ಸವಿತಾ, ಕಂಕಮುನಿ, ೬ ರಲ್ಲಿ ಮೃತ್ಯು, ಲೋಕಾಕ್ಷ, ೭ ರಲ್ಲಿ ಶತಕ್ರತು, ಜೈಗೀಷವ್ಯ, ೮ ರಲ್ಲಿ ವಸಿಷ್ಠ, ೯ ರಲ್ಲಿ ಸಾರಸ್ವತ, ಋಷಭ, ೧೦ ರಲ್ಲಿ ತ್ರಿಧಾಮ, ಉಗ್ರ, ೧೧ ರಲ್ಲಿ ತ್ರಿವೃತ್, ಉಗ್ರ, ೧೨ ರಲ್ಲಿ ಶತತೇಜಾ, ಅತ್ರಿ, ೧೩ ರಲ್ಲಿ ನಾರಾಯಣ, ವಾತಮುನಿ, ೧೪ ರಲ್ಲಿ ಸುಲಕ್ಷಣ, ಗೌತಮ, ೧೫ ರಲ್ಲಿ ಆರುಣಿ, ವೇದಶಿರಾ, ೧೬ ರಲ್ಲಿ ಸಂಜಯ, ಗೋಕರ್ಣ, ೧೭ ರಲ್ಲಿ ವೇದಕೃತಂಜಯ, ಗುಹಾ ವಾಸಿ, ೧೮ ರಲ್ಲಿ ಋತುಂಜಯ, ಶಿಖಂಡಿ, ೧೯ ರಲ್ಲಿ ಭರದ್ವಾಜ, ಜಟಾಮುಂಡೀ, ೨೦ ರಲ್ಲಿ ವಾಚಃಶ್ರವ, ಅಟ್ಟಹಾಸೀ, ೨೧ ರಲ್ಲಿ ವಾಚಸ್ಪತಿ, ದಾರುಕ, ೨೨ ರಲ್ಲಿ ಶುಕ್ಲಾಯನ, ಲಾಂಗಲಿ, ೨೩ ರಲ್ಲಿ ತೃಣಬಿಂದು, ಶ್ವೇತಮುನಿ, ೨೪ ರಲ್ಲಿ ಋಷಭ, ಶೂಲಿಮುನಿ, ೨೫ ರಲ್ಲಿ ಶಕ್ತಿ, ದಂಡೀ, ೨೬ ರಲ್ಲಿ ಪರಾಶರ, ಸಹಿಷ್ಣು, ೨೭ ರಲ್ಲಿ ಜಾತೂಕರ್ಣ, ಸೋಮಶರ್ಮ, ೨೮ ರಲ್ಲಿ ಶ್ರೀಕೃಷ್ಣ, ಬ್ರಹ್ಮಚಾರಿ ಹೀಗೆ ಕ್ರಮವಾಗಿ ಇಬ್ಬರೂ ಅವತಾರಗಳನ್ನು ಮಾಡಿದರು.

ಪ್ರತಿಯೊಂದು ಯುಗದಲ್ಲಿಯೂ ನಾಲ್ವರು ಪುತ್ರರು ಜನಿಸಿ ಜ್ಞಾನ, ಭಕ್ತಿ, ವೈರಾಗ್ಯಾದಿಗಳನ್ನು ಪಡೆದು ಪರಮಪದವಿಯನ್ನು ಪಡೆಯುವರು. ೨೮ ನೆಯ ಕಲ್ಪದಲ್ಲಿ ಪರಮೇಶ್ವರನು ಬ್ರಹ್ಮಚಾರಿಯಾಗಿ ಶ್ಮಶಾನದಲ್ಲಿ ಸತ್ತುಬಿದ್ದಿದ್ದ ಅನಾಥ ಪ್ರೇತವನ್ನು ಪ್ರವೇಶಿಸಿ ಬ್ರಹ್ಮವಿಷ್ಣುಗಳೊಡನೆ ಮೇರುಪರ್ವತದ ಗುಹಾಪ್ರವೇಶವನ್ನು ಮಾಡುವನು. ಅದು ಕಾಯಾರೋಹಣಸಿದ್ಧಿಕ್ಷೇತ್ರವಾಗುವುದು. ಅಲ್ಲಿಯೂ ನಾಲ್ವರು ಶಿಷ್ಯರು ಮಹಾಯೋಗದಿಂದ ಪುನರಾವೃತ್ತಿರಹಿತವಾದ ರುದ್ರಪದವಿಯನ್ನು ಹೊಂದಿದ ವಿಷಯವೂ ಉಕ್ತವಾಗಿದೆ.

ಮನುಮೊದಲು ಕೃಷ್ಣನವರೆಗೂ ಆದ ೨೮ ಯುಗಗಳು, ಹರಿಹರರ ಅವತಾರ ಗಳು, ಶಿಷ್ಯರು, ಅವರು ಪಡೆದ ಪರಮಪದವಿ ಇವುಗಳು ೨೩ ನೆಯ ಅಧ್ಯಾಯದಲ್ಲಿ ವರ್ಣಿತವಾಗಿವೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಚತುರ್ವಿಂಶೋಽಧ್ಯಾಯಃ

॥ ವಾಯುರುವಾಚ ॥

ಚತ್ವಾರಿ ಭಾರತೇ ವರ್ಷೇ ಯುಗಾನಿ ಮುನಯೋ ವಿದುಃ ।
ಕೃತಂ ತ್ರೇತಾ ದ್ವಾಪರಂ ಚ ತಿಷ್ಯಂ ಚೇತಿ ಚತುರ್ಯುಗಂ ॥ ೧ ॥

ಏತತ್ಸಹಸ್ರಪರ್ಯಂತಮಹರ್ಯದ್ಬ್ರಹ್ಮಣಃ ಸ್ಮೃತಂ ।
ಯಾಮಾದ್ಯಾಸ್ತು ಗಣಾಃ ಸಪ್ತ ರೋಮವಂತಶ್ಚತುರ್ದಶ ॥ ೨ ॥

ಸ ಶರೀರಾಃ ಶ್ರಯಂತೇ ಸ್ಮ ಜನಲೋಕಂ ಸಹಾನುಗಾಃ ।
ಏವಂ ದೇವೇಷ್ವತೀತೇಷು ಮಹರ್ಲೋಕಾಜ್ಜನಂ ತಪಃ ॥ ೩ ॥

---

## ಇಪ್ಪತ್ತನಾಲ್ಕನೆಯ ಅಧ್ಯಾಯವು

೧. ವಾಯುದೇವನು ಹೇಳಿದನು:—ಭಾರತವರ್ಷದಲ್ಲಿ ಕೃತ, ತ್ರೇತಾ, ದ್ವಾಪರ, ತಿಷ್ಯವೆಂಬುದಾಗಿ ನಾಲ್ಕು ಯುಗಗಳು ಇವೆಯೆಂದು ಮಹರ್ಷಿಗಳು ಹೇಳುವರು.

೨ ಈ ಚತುರ್ಯುಗಗಳು ಸಹಸ್ರಗಳಾದರೆ ಬ್ರಹ್ಮದೇವನಿಗೆ ಒಂದು ಹಗಲು. ರೋಮಗಳಿರುವ ಯಾಮಾದಿ ಸಪ್ತಗಣಗಳು ಹದಿನಾಲ್ಕು ಯುಗಗಳಲ್ಲಿಯೂ ಜನಿಸುವುವು.

೩. ಆ ಗಣದವರು ಸಶರೀರರಾಗಿ ತಮ್ಮ ಭೃತ್ಯರ ಸಂಗಡ ಜನಲೋಕವನ್ನು ಹೊಂದುವರು. ಹೀಗೆ ದೇವತೆಗಳೂ ಕೂಡ ಪುಣ್ಯವಿಶೇಷದಿಂದ ಮಹರ್ಲೋಕದಿಂದ ಜನಲೋಕಕ್ಕೂ ಅಲ್ಲಿಂದ ತಪೋಲೋಕಕ್ಕೂ ಹೋಗುವರು.

ಮನ್ವಂತರೇಷ್ವತೀತೇಷು ದೇವಾಃ ಸರ್ವೇ ಮಹೌಜಸಃ ।
ತತಸ್ತೇಷು ಗತೇಷೂರ್ಧ್ವಂ ಸಾಯುಜ್ಯಂ ಕಲ್ಪವಾಸಿನಾಂ ॥ ೪ ॥

ಸಮೇತ್ಯ ದೇವೈಸ್ತೇ ದೇವಾಃ ಪ್ರಾಪ್ತೇ ಸಂಕಾಲನೇ ತದಾ ।
ಮಹರ್ಲೋಕಂ ಪರಿತ್ಯಜ್ಯ ಗಣಾಸ್ತೇ ವೈ ಚತುರ್ದಶ ॥ ೫ ॥

ಭೂತಾದಿಷ್ವವಶಿಷ್ಟೇಷು ಸ್ಥಾವರಾಂತೇಷು ವೈ ತದಾ ।
ಶೂನ್ಯೇಷು ತೇಷು ಲೋಕೇಷು ಮಹಾಂತೇಷು ಭುವಾದಿಷು ॥
ದೇವೇಷ್ವಥ ಗತೇಷೂರ್ಧ್ವಂ ಕಲ್ಪವಾಸಿಷು ವೈ ಜನಂ ॥ ೬ ॥

ತತ್ಸಂಹೃತ್ಯ ತತೋ ಬ್ರಹ್ಮಾ ದೇವರ್ಷಿಗಣದಾನವಾನ್ ।
ಸಂಸ್ಥಾಪಯತಿ ವೈ ಸರ್ವಾನ್ ದಾಹವೃಷ್ಟ್ಯಾ ಯುಗಕ್ಷಯೇ ॥ ೭॥

ಯೋಽತೀತಃ ಸಪ್ತಮಃ ಕಲ್ಪೋ ಮಯಾ ವಃ ಪರಿಕೀರ್ತಿತಃ ।
ಸಮುದ್ರೈಃ ಸಪ್ತಭಿರ್ಗಾಢಮೇಕೀಭೂತೈರ್ಮಹಾರ್ಣವೈಃ ॥
ಆಸೀದೇಕಾರ್ಣವಂ ಘೋರಮವಿಭಾಗಂ ತಮೋಮಯಂ ॥ ೮ ॥

---

೪. ಮನ್ವಂತರಗಳು ಅತೀತವಾಗಲು ಮಹಾತೇಜಸ್ವಿಗಳಾದ ಸಮಸ್ತ ದೇವತೆಗಳೂ ಅವರ ಲೋಕಗಳೂ ನಷ್ಟವಾಗಲು ಮೇಲಿನ ಲೋಕವನ್ನು ಹೊಂದಿ ಸಾಯುಜ್ಯವನ್ನು ಪಡೆಯುವರು.

೫. ಆ ದೇವತೆಗಳೆಲ್ಲರೂ ಒಟ್ಟುಗೂಡಿ ಪ್ರಲಯವು ಬರಲು ಆ ಹದಿನಾಲ್ಕು ಗಣಗಳ ಸಂಗಡ ಮಹರ್ಲೋಕವನ್ನು ಬಿಟ್ಟು ಜನಲೋಕಾದಿಗಳಿಗೆ ಹೋಗುವರು.

೬-೭. ಸ್ಥಾವರಾದಿ ಭೂತಗಳು ಮಾತ್ರ ಉಳಿದು ಭೂಲೋಕಾದಿಯಾಗಿ ಮಹರ್ಲೋಕದವರೆಗೂ ಇರುವ ಲೋಕಗಳು ಶೂನ್ಯವಾಗಲು ಆ ಕಲ್ಪವಾಸಿಗಳಾದ ಜನರೆಲ್ಲರೂ ಜನಲೋಕಾದಿಗಳಿಗೆ ಹೋಗುವರು. ಬ್ರಹ್ಮದೇವನು ಉಳಿದಿರುವ ದೇವತೆಗಳು, ಋಷಿಗಳು, ದಾನವರು ಇವರೇ ಮೊದಲಾದವರನ್ನು ಸಂಹಾರಮಾಡಿ ಪ್ರಳಯಕಾಲದಲ್ಲಿ ಪ್ರಳಯಾಗ್ನಿಯಿಂದ ಅವರನ್ನು ಸುಟ್ಟು ಭಸ್ಮಮಾಡುವನು.

೮. ಅತೀತವಾದ ಏಳನೆಯ ಯುಗದ ವಿಷಯವಾಗಿ ನಾನು ತಮಗೆ ತಿಳಿಸಿದಂತೆಯೇ ಆ ಕಲ್ಪವು ಸಪ್ತಸಮುದ್ರಗಳಿಂದ ಕೂಡಿ ಪ್ರಳಯೋದಕಮಯವಾಗಲು ಘೋರವಾದ ಅಂಧಕಾರವು ಜಗತ್ತೆಲ್ಲವನ್ನೂ ಆವರಿಸಿತು.

ಮಾಯಯೈಕಾರ್ಣವೇ ತಸ್ಮಿನ್ ಶಂಖಚಕ್ರಗದಾಧರಃ ।
ಜೀಮೂತಾಭೋಽಂಬುಜಾಕ್ಷಶ್ಚ ಕಿರೀಟೀ ಶ್ರೀಪತಿರ್ಹರಿಃ ॥ ೯ ॥

ನಾರಾಯಣಮುಖೋದ್ಗೀರ್ಣಃ ಸೋಽಷ್ಟಮಃ ಪುರುಷೋತ್ತಮಃ ।
ಅಷ್ಟಬಾಹುರ್ಮಹೋರಸ್ಕೋ ಲೋಕಾನಾಂ ಯೋನಿರುಚ್ಯತೇ ॥
ಕಿಮಪ್ಯಚಿಂತ್ಯಂ ಯುಕ್ತಾತ್ಮಾ ಯೋಗಮಾಸ್ಥಾಯ ಯೋಗವಿತ್ ॥ ೧೦ ॥

ಫಣಾಸಹಸ್ರಕಲಿತಂ ತಮಪ್ರತಿಮವರ್ಚಸಂ ।
ಮಹಾಭೋಗಪತೇರ್ಭೋಗಮಸ್ವಾಸ್ತೀರ್ಯ ಮಹೋಚ್ಛ್ರಯಂ ॥
ತಸ್ಮಿನ್ ಮಹತಿ ಪರ್ಯಂಕೇ ಶೇತೇ ವೈ ಕನಕಪ್ರಭೇ ॥ ೧೧ ॥

ಏವಂ ತತ್ರ ಶಯಾನೇನ ವಿಷ್ಣುನಾ ಪ್ರಭವಿಷ್ಣುನಾ ।
ಆತ್ಮಾರಾಮೇಣ ಕ್ರೀಡಾರ್ಥಂ ಸೃಷ್ಟಂ ನಾಭ್ಯಾಂ ತು ಪಂಕಜಂ ॥ ೧೨ ॥

ಶತಯೋಜನವಿಸ್ತೀರ್ಣಂ ತರುಣಾದಿತ್ಯವರ್ಚಸಂ ।
ವಜ್ರದಂಡಂ ಮಹೋತ್ಸೇಧಂ ಲೀಲಯಾ ಪ್ರಭವಿಷ್ಣುನಾ ॥ ೧೩ ॥

---

೯-೧೦ ಶಂಖಚಕ್ರಗದಾಧರನೂ, ಮೇಘವರ್ಣನೂ, ಕಮಲಾಕ್ಷನೂ, ಕಿರೀಟಿಯೂ, ಶ್ರೀಪತಿಯೂ, ಪುರುಷೋತ್ತಮನೂ ಆದ ಶ್ರೀಮನ್ನಾರಾಯಣನು, ತನ್ನ ಮಾಯೆಯಿಂದ ಆ ಪ್ರಳಯೋದಕದಲ್ಲಿ ಸುಪ್ತನಾಗಿ ಅಷ್ಟಬಾಹುವೂ, ವಿಶಾಲ ಹೃದಯನೂ, ಮಹಾಯೋಗಿಯೂ ಆಗಿ ಯೋಗನಿದ್ರೆಯಲ್ಲಿ ಆಸಕ್ತನಾಗುವನು.

೧೧. ಆಗ ಆ ವಿಷ್ಣುವು ಸಹಸ್ರಹೆಡೆಗಳು, ಮಹಾಕಾಂತಿ, ಅತ್ಯೌನ್ನತ್ಯ ಇವುಗಳುಳ್ಳ ಶೇಷದೇವನ ಕನಕಮಯವೂ, ವಿಶಾಲವೂ ಆದ ಶರೀರವೆಂಬ ಹಾಸಿಗೆಯಲ್ಲಿ ಮಲಗಿ ಯೋಗನಿದ್ರೆಯನ್ನು ಅನುಭವಿಸುವನು.

೧೨-೧೩. ಹೀಗೆ ಆ ಪ್ರಳಯೋದಕದಲ್ಲಿ ಮಲಗಿರುವವನೂ, ಅತ್ಯಂತ ಸಮರ್ಥನೂ, ಆತ್ಮಾರಾಮನೂ ಆದ ಶ್ರೀಹರಿಯು ವಿಹಾರಾರ್ಥವಾಗಿ ಲೀಲೆಯಿಂದ ಶತಯೋಜನವಿಸ್ತೀರ್ಣವೂ, ಎಳೆಯ ಬಿಸಿಲಿನಂತೆ ಕಾಂತಿಯುಕ್ತವೂ, ವಜ್ರದಂಡವುಳ್ಳದ್ದೂ, ಅತ್ಯುನ್ನತವೂ ಆದ ಕಮಲವನ್ನು ತನ್ನ ನಾಭಿಯಲ್ಲಿ ಸೃಷ್ಟಿಸಿದನು.

ತಸ್ಯೈವಂ ಕ್ರೀಡಮಾನಸ್ಯ ಸಮೀಪಂ ದೇವಮೀಢುಷಃ ।
ಹೇಮ ಬ್ರಹ್ಮಾಂಡಜೋ ಬ್ರಹ್ಮಾ ರುಕ್ಮವರ್ಣೋ ಹ್ಯತೀಂದ್ರಿಯಃ ॥
ಚತುರ್ಮುಖೋ ವಿಶಾಲಾಕ್ಷಃ ಸಮಾಗಮ್ಯ ಯದೃಚ್ಛಯಾ ॥ ೧೪ ॥

ಶ್ರಿಯಾ ಯುಕ್ತೇನ ನವ್ಯೇನ ಸುಪ್ರಭೇಣ ಸುಗಂಧಿನಾ ।
ತಂ ಕ್ರಿಡಮಾನಂ ಪದ್ಮೇನ ದೃಷ್ಟ್ವಾ ಬ್ರಹ್ಮಾ ತು ಭೇಜಿವಾನ್ ॥ ೧೫ ॥

ಸ ವಿಸ್ಮಯಮಥಾಗಮ್ಯ ಶಸ್ಯ ಸಂಪೂರ್ಣಯಾ ಗಿರಾ ।
ಪ್ರೋವಾಚ ಕೋ ಭವಾನ್ ಶೇತೇ ಆಶ್ರಿತೋ ಮಧ್ಯಮಂಭಸಾಂ ॥ ೧೬ ॥

ಅಥ ತಸ್ಯಾಚ್ಯುತಃ ಶ್ರುತ್ವಾ ಬ್ರಹ್ಮಣಸ್ತು ಶುಭಂ ವಚಃ ।
ಉದತಿಷ್ಠತ ಪರ್ಯಂಕಾದ್ವಿಸ್ಮಯೋತ್ಫುಲ್ಲಲೋಚನಃ ॥ ೧೭ ॥

---

೧೪. ಸುವರ್ಣಮಯವಾದ ಬ್ರಹ್ಮಾಂಡದಲ್ಲಿ ಜನಿಸಿದವನೂ, ರುಕ್ಮವರ್ಣನೂ, ಅತೀಂದ್ರಿಯನೂ, ಚತುರ್ಮುಖನೂ, ವಿಶಾಲಾಕ್ಷನೂ ಆದ ಬ್ರಹ್ಮದೇವನು ಹೀಗೆ ಜಲದಲ್ಲಿ ವಿಹರಿಸುತ್ತಿರುವನೂ, ದೇವೋತ್ತಮನೂ ಆದ ಶ್ರೀಹರಿಯ ಬಳಿಗೆ ಬಂದನು.

೧೫. ಬ್ರಹ್ಮದೇವನು ಹೀಗೆ ಕಾಂತಿಯುಕ್ತವೂ, ನೂತನವೂ, ಸುಗಂಧಿಯೂ, ಪ್ರಕಾಶವೂ ಆದ ಕಮಲದಿಂದ ವಿಹರಿಸುತ್ತಿರುವ ಶ್ರೀಹರಿಯನ್ನು ನೋಡಿ ಹೊಗಳಿದನು.

೧೬. ಆಗ ಪೂಜ್ಯನಾದ ಬ್ರಹ್ಮದೇವನು ಆಶ್ಚರ್ಯವನ್ನು ಹೊಂದಿ ಸಮೀಪಕ್ಕೆ ಹೋಗಿ ಈ ಸಮುದ್ರಮಧ್ಯದಲ್ಲಿ ಮಲಗಿರುವ ನೀನು ಯಾರು? ಏಕೆ ಹೀಗೆ ಮಲಗಿರುತ್ತೀಯೆ ಎಂದನು

೧೭. ಅನಂತರ ಶ್ರೀಹರಿಯು ಬ್ರಹ್ಮದೇವನ ಶುಭಕರವಾದ ಆ ಮಾತನ್ನು ಕೇಳಿ ಅತ್ಯಂತ ಆಶ್ಚರ್ಯಯುಕ್ತನಾಗಿ ವಿಕಸಿತವಾದ ನೇತ್ರಗಳೊಡನೆ ಕೂಡಿ ಹಾಸಿಗೆಯಿಂದ ಎದ್ದನು.

ಪ್ರತ್ಯುವಾಚೋತ್ತರಂ ಚೈವಕ್ರಿಯತೇ ಯಚ್ಚ ಕಿಂಚನ ।
ದ್ಯೌರಂತರಿಕ್ಷಂ ಭೂತಂಚ ಪರಂ ಪದಮಹಂ ಪ್ರಭುಃ ॥ ೧೮ ॥

ತಮೇವಮುಕ್ತ್ವಾ ಭಗವಾನ್ ವಿಷ್ಣುಃ ಪುನರಥಾಬ್ರವೀತ್ ।
ಕಸ್ತ್ವಂ ಖಲು ಸಮಾಯಾತಃ ಸಮೀಪಂ ಭಗವಾನ್ ಕುತಃ ॥
ಕುತಶ್ಚ ಭೂಯೋ ಗಂತವ್ಯಂ ಕುತ್ರ ವಾ ತೇ ಪ್ರತಿಶ್ರಯಃ ॥ ೧೯ ॥

ಕೋ ಭವಾನ್ ವಿಶ್ವಮೂರ್ತಿಸ್ತ್ವಂ ಕರ್ತವ್ಯಂ ಕಿಂಚ ತೇ ಮಯಾ ।
ಏವಂ ಬ್ರುವಾಣಂ ವೈಕುಂಠಂ ಪ್ರತ್ಯುವಾಚ ಪಿತಾಮಹಃ ॥ ೨೦ ॥

ಯಥಾ ಭವಾಂಸ್ತಥಾ ಚಾಹಮಾದಿಕರ್ತಾ ಪ್ರಜಾಪತಿಃ ।
ನಾರಾಯಣಸಮಾಖ್ಯಾತಃ ಸರ್ವಂ ವೈ ಮಯಿ ತಿಷ್ಠತಿ ॥ ೨೧ ॥

ಸವಿಸ್ಮಯಂ ಪರಂ ಶ್ರುತ್ವಾ ಬ್ರಹ್ಮಣಾ ಲೋಕಕರ್ತೃಣಾ ।
ಸೋಽನುಜ್ಞಾತೋ ಭಗವತಾ ವೈಕುಂಠೋ ವಿಶ್ವಸಂಭವಃ ॥ ೨೨ ॥

---

೧೮-೧೯. ಸ್ವಾಮಿಯಾದ ಶ್ರೀಹರಿಯು ಎದ್ದು ಈ ಜಗತ್ತಿನಲ್ಲಿರುವ ಸ್ವರ್ಗ, ಅಂತರಿಕ್ಷ, ಭೂತ, ಪರಮಪದ ಇವೇ ಮೊದಲಾದ ಸರ್ವಕ್ಕೂ ನಾನೇ ಯಜಮಾನನು ಎಂದು ಹೇಳಿ ನೀನು ಯಾರು ? ಎಲ್ಲಿಂದ ಏತಕ್ಕಾಗಿ ನನ್ನ ಬಳಿಗೆ ಬಂದಿರುವೆ ? ಮತ್ತೆಲ್ಲಿಗೆ ಹೋಗುವೆ? ನಿನ್ನ ವಾಸಸ್ಥಾನವು ಯಾವುದು ? ಎಂದು ಬ್ರಹ್ಮನನ್ನು ಪ್ರಶ್ನಿಸಿದನು.

೨೦. ಮತ್ತು ನೀನು ಯಾರು ? ವಿಶ್ವಮೂರ್ತಿಯು ಹಾಗೆ ಕಾಣುತ್ತಿದ್ದೀಯೆ. ನನ್ನಿಂದ ನಿನಗೆ ಏನಾಗಬೇಕಾಗಿದೆ ? ಎಂದು ಹರಿಯು ಕೇಳಲಾಗಿ ಬ್ರಹ್ಮದೇವನು ಮುಂದೆ ಹೇಳುವ ಹಾಗೆ ಶ್ರೀಹರಿಗೆ ಉತ್ತರವನ್ನು ಕೊಟ್ಟನು.

೨೧. ಎಲೈ ಹರಿಯೇ, ನೀನು ಹೇಗೆ ಸ್ವತಂತ್ರನೂ, ಆದಿಕರ್ತನೂ, ಆಗಿರುತ್ತೀಯೋ ಹಾಗೆಯೇ ನಾನೂ ಸಹ ಆಗಿರುತ್ತೇನೆ ಮತ್ತು ನಾರಾಯಣನಾಮಕನಾದ ನಿನಗೆ ಸಮವಾದ ಜಗದ್ರಕ್ಷಕನೂ, ಬ್ರಹ್ಮನಾಮಕನೂ ಆಗಿರುತ್ತೇನೆಂದು ಬ್ರಹ್ಮನು ಉತ್ತರವನ್ನು ಕೊಟ್ಟನು.

೨೨. ಶ್ರೀಹರಿಯು ಈರೀತಿಯಾಗಿ ಹೇಳಿದ ಬ್ರಹ್ಮದೇವನ ಮಾತನ್ನು ಕೇಳಿ ಪರಮಾಶ್ಚರ್ಯಯುಕ್ತನಾಗಿ ಬ್ರಹ್ಮದೇವನಿಗೆ ಇಂತೆಂದನು.

ಕೌತೂಹಲಾನ್ಮಹಾಯೋಗೀ ಪ್ರವಿಷ್ಟೋ ಬ್ರಹ್ಮಣೋ ಮುಖಂ ।
ಇಮಾನಷ್ಟಾದಶದ್ವೀಪಾನ್ ಸಸಮುದ್ರಾನ್ ಸಪರ್ವತಾನ್ ॥
ಪ್ರವಿಶ್ಯ ಸ ಮಹಾತೇಜಾ ಶ್ಚಾತುವರ್ಣ್ಯ ಸಮಾಕುಲಾನ್ ।
ಬ್ರಹ್ಮಾದಿಸ್ತಂಬಪರ್ಯಂತಾನ್ ಸಪ್ತಲೋಕಾನ್ ಸನಾತನಾನ್ ॥ ೨೩ ॥

ಬ್ರಹ್ಮಣಸ್ತೂದರೇ ದೃಷ್ಟ್ವಾ ಸರ್ವಾನ್ ವಿಷ್ಣುರ್ಮಹಾಯಶಾಃ ।
ಆಹೋಸ್ಯ ತಪಸೋ ವೀರ್ಯಂ ಪುನಃ ಪುನರಭಾಷತ ॥ ೨೪ ॥

ಪರ್ಯಟನ್ ವಿವಿಧಾನ್ ಲೋಕಾನ್ ವಿಷ್ಣುರ್ನಾನಾವಿಧಾಶ್ರಮಾನ್ ।
ತತೋ ವರ್ಷಸಹಸ್ರಾಂತೇ ನಾಂತಂ ಹಿ ದದೃಶೇ ತದಾ ॥ ೨೫ ॥

ತದಾಸ್ಯ ವಕ್ತ್ರಾನ್ನಿಷ್ಕ್ರಮ್ಯ ಪನ್ನಗೇಂದ್ರಾರಿಕೇತನಃ ।
ಅಜಾತಶತ್ರುರ್ಭಗವಾನ್ ಪಿತಾಮಹಮಥಾಬ್ರವೀತ್ ॥ ೨೬ ॥

ಭಗವನ್ ಆದಿ ಮಧ್ಯಂ ಚ ಅಂತಂ ಕಾಲದಿಶೋರ್ನ ಚ ।
ನಾಹಮಂತಂ ಪ್ರಪಶ್ಯಾಮಿ ಹ್ಯುದರಸ್ಯ ತವಾನಘ ॥ ೨೭ ॥

---

೨೩-೨೪. ಮಹಾಯೋಗಿಯೂ, ಮಹಾಕೀರ್ತಿವಂತನೂ ಆದ ಆ ಮಹಾವಿಷ್ಣುವು ಕುತೂಹಲದಿಂದ ಬ್ರಹ್ಮದೇವನ ಮುಖದಲ್ಲಿ ಪ್ರವೇಶಿಸಿ ನೋಡಿದನು ಅವನ ಉದರದಲ್ಲಿ ಹದಿನೆಂಟು ದ್ವೀಪಗಳೂ, ಸಮುದ್ರಗಳೂ, ಪರ್ವತಗಳೂ ವ್ಯಾಪ್ತವಾಗಿರುವ ಚಾತುರ್ವರ್ಣ್ಯಗಳೂ, ಬ್ರಹ್ಮಾದಿ ಸ್ತಂಬಪರ್ಯಂತಗಳಾಗಿರತಕ್ಕ ಸಪ್ತಲೋಕಗಳೂ ಇವುಗಳನ್ನು ನೋಡಿದನು. ಮತ್ತು ತಪಸ್ಸು ಎಂತಹ ಮಹತ್ತರವಾದ್ದದ್ದು ಎಷ್ಟು ಸಾಮರ್ಥ್ಯವುಳ್ಳದ್ದಾಗಿದೆಯೆಂದು ಪುನಃ ಪುನಃ ಹೊಗಳಿದನು.

೨೫. ಆಗ ಶ್ರೀಹರಿಯು ಬ್ರಹ್ಮನ ಉದರದಲ್ಲಿ ಒಂದು ಸಹಸ್ರವರ್ಷಗಳು ಸಂಚರಿಸಿ ವಿವಿಧ ಲೋಕಗಳನ್ನೂ ಆಶ್ರಮಗಳನ್ನೂ ನೋಡಿದರೂ ಕೊನೆಯನ್ನು ಕಾಣದೇ ಇರುವುದನ್ನು ತಿಳಿದು ಆಶ್ಚರ್ಯಪಟ್ಟನು.

೨೬. ಆಗ ಗರುಡಧ್ವಜನೂ, ಅಜಾತಶತ್ರುವೂ ಆದ ಶ್ರೀಮನ್ನಾರಾಯಣನು ಬ್ರಹ್ಮದೇವನ ಮುಖದಿಂದ ಹೊರಗೆ ಬಂದು ಬ್ರಹ್ಮನಿಗೆ ಇಂತೆಂದನು.

೨೭-೨೮. ಆಗ ಶ್ರೀಹರಿಯು ಬ್ರಹ್ಮದೇವನನ್ನು ಕುರಿತು ಎಲೈ ಬ್ರಹ್ಮನೇ, ನಿನ್ನ ಉದರಕ್ಕೆ ಆದಿಮಧ್ಯಾಂತಗಳೂ, ಕಾಲದಿಕ್ಕುಗಳೂ, ಕೊನೆಯೂ ಇರುವುದಿಲ್ಲ.

ಏವಮುಕ್ತ್ವಾಬ್ರವೀದ್ಭೂಯಃ ಪಿತಾಮಹಮಿದಂ ಹರಿಃ ।
ಭವಾನಪ್ಯೇವಮೇವಾದ್ಯ ಹ್ಯುದರಂ ಮಮ ಶಾಶ್ವತಂ ॥
ಪ್ರವಿಶ್ಯ ಲೋಕಾನ್ ಪಶ್ಯೇತಾನನೌಪಮ್ಯಾನ್ ದ್ವಿಜೋತ್ತಮ ॥ ೨೮ ॥

ಮನಃ ಪ್ರಹ್ಲಾದಿನೀಂ ವಾಣೀಂ ಶ್ರುತ್ವಾ ತಸ್ಯಾಭಿನಂದ್ಯ ಚ ।
ಶ್ರೀಪತೇರುದರಂ ಭೂಯಃ ಪ್ರವಿವೇಶ ಪಿತಾಮಹಃ ॥ ೨೯ ॥

ತಾನೇವ ಲೋಕಾನ್ ಗರ್ಭಸ್ಥಃ ಪಶ್ಯನ್ ಸೋಽಚಿಂತ್ಯವಿಕ್ರಮಃ ।
ಪರ್ಯಟಿತ್ವಾದಿದೇವಸ್ಯ ದದರ್ಶಾಂತಂ ನ ವೈ ಹರೇಃ ॥ ೩೦ ॥

ಜ್ಞಾತ್ವಾಗಮಂ ತಸ್ಯ ಪಿತಾಮಹಸ್ಯ ।
ದ್ವಾರಾಣಿ ಸರ್ವಾಣಿ ಪಿಧಾಯವಿಷ್ಣುಃ ॥
ವಿಭುರ್ಮನಃ ಕರ್ತುಮಿಯೇಷ ಚಾಶು ।
ಸುಖಂ ಪ್ರಸುಪ್ತೋಽಸ್ಮಿ ಮಹಾಜಲೌಘೇ ॥ ೩೧ ॥

---

ಎಷ್ಟು ಹುಡುಕಿದರೂ ಕಾಣಲೇ ಇಲ್ಲ, ಅಗಾಧವಾಗಿದೆ. ಆದರೆ ನೀನೂ ಕೂಡ ನನ್ನ ಉದರವನ್ನು ಪ್ರವೇಶಿಸಿ ನೋಡುವನಾಗು. ಶಾಶ್ವತವಾದ ನನ್ನ ಉದರದಲ್ಲಿ ಅಸದೃಶವೂ, ಶಾಶ್ವತವೂ, ಚರಾಚರಾತ್ಮಕವೂ ಆದ ಸಮಸ್ತ ಲೋಕಗಳೂ ಕಾಣುವುವು ಎಂದನು.

೨೯. ಆಗ ಬ್ರಹ್ಮದೇವನು ಲಕ್ಷ್ಮೀಪತಿಯಾದ ಶ್ರೀಹರಿಯ ಆಹ್ಲಾದಕರವಾದ ಆ ಮಾತನ್ನು ಕೇಳಿ ಅವನನ್ನು ಹೊಗಳಿ, ಆ ಹರಿಯ ಉದರವನ್ನು ಪ್ರವೇಶಿಸಿದನು.

೩೦. ಆಗ ಅಚಿಂತ್ಯಮಹಿಮೆಯುಳ್ಳ ಬ್ರಹ್ಮದೇವನು ಆದಿದೇವನಾದ ಶ್ರೀಹರಿಯ ಉದರವನ್ನು ಪ್ರವೇಶಿಸಿ, ತಿರುಗಾಡಿ, ಅಪಾರಗಳಾದ ಲೋಕಗಳನ್ನು ನೋಡಿ ಕೊನೆಯನ್ನು ಕಾಣದೇ ಹೋದನು.

೩೧. ಆಗ ಶ್ರೀಹರಿಯು, ಬ್ರಹ್ಮನು ಹಿಂತಿರುಗಿ ಬರುವುದನ್ನು ತಿಳಿದು ತನ್ನ ನವದ್ವಾರಗಳನ್ನೂ ಮುಚ್ಚಿಕೊಂಡು ಮುಂದಿನ ದೃಷ್ಟಿಯಿಂದ ಆ ಪ್ರಲಯೋದಕದಲ್ಲಿ ಸುಖಶಯನವನ್ನು ಮಾಡಿದನು.

ತತೋ ದ್ವಾರಾಣಿ ಸರ್ವಾಣಿ ಪಿಹಿತಾನ್ಯುಪಲಕ್ಷ್ಯ ತೇ ।
ಸೂಕ್ಷ್ಮಂ ಕೃತ್ವಾತ್ಮನೋ ರೂಪಂ ನಾಭ್ಯಾಂ ದ್ವಾರಮವಿಂದತ ॥ ೩೨ ॥

ಪದ್ಮಸೂತ್ರಾನುಮಾರ್ಗೇಣ ಹ್ಯನುಗಮ್ಯ ಪಿತಾಮಹಃ ।
ಉಜ್ಜಹಾರಾತ್ಮನೋ ರೂಪಂ ಪುಷ್ಕರಾಚ್ಚತುರಾನನಃ ॥
ವಿರರಾಜಾರವಿಂದಸ್ಥಃ ಪದ್ಮಗರ್ಭಸಮದ್ಯುತಿಃ ॥ ೩೩ ॥

ಏತಸ್ಮಿನ್ನಂತರೇ ತಾಭ್ಯಾಮೇಕೈಕಸ್ಯ ತು ಕಾರ್ತ್ಸ್ನ್ಯತಃ ।
ಪ್ರವರ್ತಮಾನೇ ಸಂಹರ್ಷೇ ಮಧ್ಯೇ ತಸ್ಯಾರ್ಣವಸ್ಯ ತು ॥ ೩೪ ॥

॥ ಸೂತ ಉವಾಚ ॥

ತತೋ ಹ್ಯಪರಿಮೇಯಾತ್ಮಾ ಭೂತಾನಾಂ ಪ್ರಭುರೀಶ್ವರಃ ।
ಶೂಲಪಾಣಿರ್ಮಹಾದೇವೋ ಹೈಮಚೀರಾಂಬರಚ್ಛದಃ ॥
ಆಗಚ್ಛದ್ಯತ್ರ ಸೋಽನಂತೋ ನಾಗಭೋಗಪತಿರ್ಹರಿಃ ॥ ೩೫ ॥

ಶೀಘ್ರಂ ವಿಕ್ರಮತಸ್ತಸ್ಯ ಪದ್ಭ್ಯಾಮತ್ಯಂತಪೀಡಿತಾಃ ।
ಉದ್ಭೂತಾಸ್ತೂರ್ಣಮಾಕಾಶೇ ಪೃಥುಲಾಸ್ತೋಯಬಿಂದವಃ ॥
ಅತ್ಯುಷ್ಣಾಶ್ಚಾತಿಶೀತಾಶ್ಚ ವಾಯುಸ್ತತ್ರ ವವೌ ಭೃಶಂ ॥ ೩೬ ॥

---

೩೨-೩೩. ಆಗ ಬ್ರಹ್ಮದೇವನು ದ್ವಾರಗಳೆಲ್ಲವೂ ಮುಚ್ಚಿರುವುದನ್ನು ಅರಿತು ತನ್ನ ರೂಪವನ್ನು ಸೂಕ್ಷ್ಮವನ್ನಾಗಿ ಮಾಡಿಕೊಂಡು ನಾಭಿಕಮಲದ ನಾಳದ ಸೂತ್ರದ ಮೂಲಕವಾಗಿ ನಾಭಿಕಮಲವನ್ನು ಹೊಂದಿ ಅದರಲ್ಲಿ ಕಮಲದಂತೆ ಕಾಂತಿಯುಕ್ತನಾಗಿ ಪ್ರಕಾಶಿಸಿದನು.

೩೪. ಈ ಸಮಯದಲ್ಲಿ ಅವರಿಬ್ಬರೂ ಪರಸ್ಪರ ಮಹಿಮೆಗಳನ್ನು ತಿಳಿದು ಆ ಸಮುದ್ರಮಧ್ಯದಲ್ಲಿ ಸಂತೋಷಚಿತ್ತರಾಗಿ ಆನಂದಸಮುದ್ರದಲ್ಲಿ ಓಲಾಡುತ್ತಿದ್ದರು.

೩೫. ಸೂತನು ಹೇಳಿದನು :—ಅನಂತರ ಅಪರಮಿತಮಹಿಮನೂ, ಭೂತ ಪತಿಯೂ, ಶೂಲಪಾಣಿಯೂ, ಶುಭ್ರವಸ್ತ್ರಧಾರಿಯೂ, ಮಹಾದೇವನೂ ಆದ ಪರ ಮೇಶ್ವರನು, ಶೇಷಶಾಯಿಯಾದ ಶ್ರೀಹರಿಯು, ಮಲಗಿದ್ದ ಸ್ಥಳಕ್ಕೆ ಬಂದನು.

೩೬. ಬಹಳ ವೇಗವಾಗಿ ಹೆಜ್ಜೆಗಳನ್ನಿಡುವ ಪರಮೇಶ್ವರನ ಪಾದಗಳಿಂದ ಪೀಡಿತವಾದ ಜಲಬಿಂದುಗಳು, ಬಹಳವಾಗಿಯೂ, ದೊಡ್ಡದಾಗಿಯೂ ಎದ್ದು ಆಕಾಶಕ್ಕೆ ಚಿಮ್ಮಿದವು. ಮತ್ತು ಆ ರಭಸದಿಂದ ಜನ್ಯವಾದ ಗಾಳಿಯು ಅತಿಶೀತವಾಗಿಯೂ, ಅತ್ಯುಷ್ಣವಾಗಿಯೂ ಬೀಸಿತು.

ತದ್ದೃಷ್ಟ್ವಾ ಮಹದಾಶ್ಚರ್ಯಂ ಬ್ರಹ್ಮಾ ವಿಷ್ಣುಮಭಾಷತ ।
ಅಬ್ಬಿಂದವೋ ಹಿ ಸ್ಥೂಲೋಷ್ಣಾಃ ಕಂಪತೇ ಚಾಂಬುಜಂ ಭೃಶಂ ॥
ಏತಂ ಮೇ ಸಂಶಯಂ ಬ್ರೂಹಿ ಕಿಂಚಾನ್ಯತ್ ತ್ವಂ ಚಿಕೀರ್ಷಸಿ ॥ ೩೭ ॥

ಏತದೇವಂ ವಿಧಂ ವಾಕ್ಯಂ ಪಿತಾಮಹಮುಖೋದ್ಭವಂ ।
ಶ್ರುತ್ವಾ ಪ್ರತಿಮಕರ್ಮಾಹ ಭಗವಾನಸುರಾಂತಕೃತ್ ॥ ೩೮ ॥

ಕಿನ್ನು ಖಲ್ವತ್ರ ಮೇ ನಾಭ್ಯಾಂ ಭೂತಮನ್ಯತ್ಕೃತಾಲಯಂ ।
ವದಂತಿ ಪ್ರಿಯಮತ್ಯರ್ಥಂ ವಿಪ್ರಿಯೇಽಪಿ ಚ ತೇ ಮಯಾ ॥ ೩೯ ॥

ಇತ್ಯೇವಂ ಮನಸಾ ಧ್ಯಾತ್ವಾ ಪ್ರತ್ಯುವಾಚೇದ ಮುತ್ತರಂ ।
ಕಿನ್ನ್ವತ್ರ ಭಗವಾಂಸ್ತಸ್ಮಿನ್ ಪುಷ್ಕರೇ ಜಾತಸಂಭ್ರಮಃ ॥ ೪೦ ॥

ಕಿಂ ಮಯಾ ಯತ್ಕೃತಂ ದೇವ ಯನ್ಮಾಂ ಪ್ರಿಯಮನುತ್ತಮಂ ।
ಭಾಷಸೇ ಪುರುಷಶ್ರೇಷ್ಠ ಕಿಮರ್ಥಂ ಬ್ರೂಹಿ ತತ್ವತಃ ॥ ೪೧ ॥

---

೩೭. ಬ್ರಹ್ಮದೇವನು ಆ ಮಹದಾಶ್ಚರ್ಯವನ್ನು ನೋಡಿ ಹರಿಯನ್ನು ಕುರಿತು ಅತಿಸ್ಥೂಲವೂ, ಉಷ್ಣವೂ ಆದ ಈ ಜಲಬಿಂದುಗಳು ಕಮಲವನ್ನು ಬಹಳ ವಾಗಿ ಕಂಪಿಸುತ್ತವೆ. ಹೀಗೆ ಆಗಲು ಕಾರಣವೇನು ? ಇದಕ್ಕೆ ಪ್ರತೀಕವೇನಾದರೂ ಉಂಟೆ ? ಎಂದನು.

೩೮. ದೈತ್ಯನಾಶಕನೂ, ಅಪ್ರತಿಮಮಹಿಮನೂ ಆದ ಆ ಭಗವಂತನು ಬ್ರಹ್ಮದೇವನು ಹೇಳಿದ ವಾಕ್ಯಗಳನ್ನು ಕೇಳಿ ಸಂತೋಷದಿಂದ ಇಂತೆಂದನು

೩೯. ಆಗ ಶ್ರೀಹರಿಯು ನನ್ನ ಈ ನಾಭಿಕಮಲದಲ್ಲಿ ಬೇರೆ ಭೂತವೇನಾದರೂ ಸೇರಿಕೊಂಡಿದೆಯೋ ಏನು? ನಾನು ಇದಕ್ಕೆ ವಿಪ್ರಿಯವನ್ನು ಮಾಡಿದ್ದರೂ ಅದು ನನಗೆ ಪ್ರಿಯವನ್ನೇ ನುಡಿಯುತ್ತದೆ ಎಂದನು.

೪೦. ಆಗ ಭಗವಂತನು ಮನಸ್ಸಿನಲ್ಲಿ ಆಲೋಚಿಸಿ ಇಂತೆಂದನು. ಭಗವಂತ ನಾದ ಬ್ರಹ್ಮದೇವನು ಏನಾದರೂ ಸಂಭ್ರಮದಿಂದ ಈ ನಾಭಿಕಮಲದಲ್ಲಿ ಸೇರಿಕೊಂಡಿದ್ದಾನೆಯೋ ಏನು, ಎಂದನು.

೪೧. ಎಲೈ ಬ್ರಹ್ಮದೇವನೇ, ನಾನು ನಿನಗೆ ಏನು ಅಪರಾಧವನ್ನು ಮಾಡಿದ್ದೇನೆ. ಏಕೆಂದರೆ ನೀನು ನನಗೆ ಪ್ರಿಯವಾದ ಮಾತನ್ನಾಡದೇ ಸುಮ್ಮನೆ ಇರುತ್ತೀಯೆ ಆದುದರಿಂದ ಪುರುಷೋತ್ತಮನೇ, ತತ್ವವನ್ನು ಹೇಳುವವನಾಗು ಎಂದನು.

ಏವಂ ಬ್ರುವಾಣಂ ದೇವೇಶಂ ಲೋಕಯಾತ್ರಾಂ ತು ತತ್ವಗಾಂ ।
ಪ್ರತ್ಯುವಾಚಾಂಬುಜಾಭಾಸ್ಯೋ ಬ್ರಹ್ಮಾ ವೇದನಿಧಿಃ ಪ್ರಭುಃ ॥ ೪೨ ॥

ಯೋಽಸೌ ತವೋದರಂ ಪೂರ್ವಂ ಪ್ರವಿಷ್ಟೋಽಹಂ ತ್ವದಿಚ್ಛಯಾ ।
ಯಥಾ ಮಮೋದರೇ ಲೋಕಾಃ ಸರ್ವೇ ದೃಷ್ಟಾಸ್ತ್ವಯಾ ಪ್ರಭೋ ॥
ತಥೈವ ದೃಷ್ಟಾಃ ಕಾರ್ತ್ಸ್ನ್ಯೇನ ಮಯಾ ಲೋಕಾಸ್ತವೋದರೇ ॥ ೪೩ ॥

ತತೋ ವರ್ಷಸಹಸ್ರಾಂತೇ ಉಪಾವೃತ್ತಸ್ಯ ಮೇಽನಘ ।
ನೂನಂ ಮತ್ಸರಭಾವೇನ ಮಾಂ ವಶೀಕರ್ತುಮಿಚ್ಛತಾ ॥
ಆಶು ದ್ವಾರಾಣಿ ಸರ್ವಾಣಿ ಘಟಿತಾನಿ ತ್ವಯಾ ಪುನಃ ॥ ೪೪ ॥

ತತೋ ಮಯಾ ಮಹಾಭಾಗ ಸಂಚಿತ್ಯ ಸ್ವೇನ ಚೇತಸಾ ।
ಲಬ್ಧೋ ನಾಭ್ಯಾಂ ಪ್ರವೇಶಸ್ತು ಪದ್ಮಸೂತ್ರಾದ್ವಿನಿರ್ಗಮಃ ॥ ೪೫ ॥

---

೪೨. ದೇವೇಶನಾದ ಶ್ರೀಹರಿಯು ಹೀಗೆ ಹೇಳಲಾಗಿ ಕಮಲದಂತೆ ಕಾಂತಿಯುತನೂ, ವೇದಗಳಿಗೆ ನಿಧಿಯೂ ಆದ ಬ್ರಹ್ಮದೇವನು ಯಥಾರ್ಥವಾದ ಲೋಕಯಾತ್ರಾ ವಿಷಯವನ್ನು ಹೇಳಿದನು.

೪೩. ಓ ಹರಿಯೇ, " ಪೂರ್ವದಲ್ಲಿ ನೀನು ನನ್ನ ಉದರವನ್ನು ಪ್ರವೇಶಿಸಿ ಲೋಕಗಳೆಲ್ಲವನ್ನೂ ಸಂಪೂರ್ಣವಾಗಿ ಹೇಗೆ ನೋಡಿದೆಯೋ ಹಾಗೆಯೇ ನಾನೂ ಕೂಡ ನಿನ್ನ ಉದರವನ್ನು ಪ್ರವೇಶಿಸಿ ಲೋಕಗಳೆಲ್ಲವನ್ನೂ ಪೂರ್ಣವಾಗಿ ನೋಡಿರುತ್ತೇನೆ " ಎಂದನು.

೪೪. ಎಲೈ ಭಗವಂತನೇ, ನಾನು ನಿನ್ನ ಉದರದಲ್ಲಿ ಒಂದು ಸಹಸ್ರವರ್ಷಗಳವರೆಗೂ ಸಂಚರಿಸಿ ಪುನಃ ಹಿಂದಕ್ಕೆ ಬರಲು ಯತ್ನಿಸಿದೆನು. ಆಗ ನೀನು ದ್ವೇಷದಿಂದ ನನ್ನನ್ನು ವಶಮಾಡಿಕೊಳ್ಳುವುದಕ್ಕಾಗಿ ಸಮಸ್ತದ್ವಾರಗಳನ್ನೂ ಮುಚ್ಚಿಕೊಂಡಿರುತ್ತೀಯೆ ಎಂದು ಹೇಳಿದನು.

೪೫. ಎಲೈ ಮಹಾನುಭಾವನಾದ ಶ್ರೀಹರಿಯೇ, ಅನಂತರ ನಾನು ಯೋಚಿಸಿ ನಾಭಿಕಮಲದ ನಾಳದಸೂತ್ರಮಾರ್ಗದಿಂದ ಹೊರಗೆ ಬಂದು ಕಮಲವಾಸಿಯಾಗಿರುತ್ತೇನೆಂದು ಬ್ರಹ್ಮನು ಹೇಳಿದನು.

ಮಾಭೂತ್ತೇ ಮನಸೋಽಲ್ಪೋಽಪಿ ವ್ಯಾಘಾತೋಽಯಂ ಕಥಂಚನ ।
ಇತ್ಯೇಷಾನುಗತಿರ್ವಿಷ್ಣೋಃ ಕಾರ್ಯಾಣಾಮೌಪಸರ್ಗಿಕೀ ॥ ೪೬ ॥

ಯನ್ಮಯಾನಂತರಂ ಕಾರ್ಯಂ ಮಯಾಧ್ಯವಸಿತಂ ತ್ವಯಿ ।
ತ್ವಾಂಚಾಬಾಧಿತು ಕಾಮೇನ ಕ್ರೀಡಾಪೂರ್ವಂ ಯದೃಚ್ಛಯಾ ॥
ಆಶು ದ್ವಾರಾಣಿ ಸರ್ವಾಣಿ ಘಟಿತಾನಿ ಮಯಾ ಪುನಃ ॥ ೪೭ ॥

ನ ತೇಽನ್ಯಥಾವಮಂತವ್ಯೋ ಮಾನ್ಯಃ ಪೂಜ್ಯಶ್ಚ ಮೇ ಭವಾನ್ ।
ಸರ್ವಂ ಮರ್ಷಯ ಕಲ್ಯಾಣ ಯನ್ಮಯಾಪಕೃತಂತವ ॥
ತಸ್ಮಾನ್ಮಯೋಽಚ್ಯಮಾನಸ್ತ್ವಂ ಪದ್ಮಾದವತರ ಪ್ರಭೋ ॥ ೪೮ ॥

ನಾಹಂ ಭವಂತಂ ಶಕ್ನೋಮಿ ಸೋಢುಂ ತೇಜೋಮಯಂ ಗುರುಂ ।
ಸ ಚೋವಾಚ ವರಂ ಬ್ರೂಹಿ ಪದ್ಮಾದವತರಾಮ್ಯಹಂ ॥ ೪೯ ॥

---

೪೬. ಆದುದರಿಂದ ಹರಿಯೇ ನಿನ್ನ ಮನಸ್ಸಿನಲ್ಲಿ ಬೇರೆ ರೀತಿಯಾಗಿ ಯೋಚಿಸಿ ವ್ಯಸನಪಡಬೇಕಾಗಿಲ್ಲವೆಂದು ಬ್ರಹ್ಮನು ಹೇಳಿದನು. ಇದು ಬ್ರಹ್ಮನು ವಿಷ್ಣುವಿನ ನಾಭಿ ಕಮಲಕ್ಕೆ ಬರಲು ಕಾರಣವಾಗಿದೆ. ಲೋಕದಲ್ಲಿ ಬ್ರಹ್ಮನು ವಿಷ್ಣುವಿನ ನಾಭಿಕಮಲ ದಲ್ಲಿ ಜನಿಸಿದನೆಂದು ವದಂತಿಯು ಉಂಟಾಗಿರುತ್ತದೆ.

೪೭. ಆಗ ಹರಿಯು ಎಲೈ ಬ್ರಹ್ಮನೇ ನೀನು ಮುಂದೆ ಹೀಗೆ ಮಾಡುತ್ತೀಯೆ ಎಂದು ತಿಳಿದೇ ನಾನು ಹೀಗೆ ಮಾಡಿದೆನು. ನಿನಗೆ ತೊಂದರೆಯನ್ನು ಮಾಡಬೇಕೆಂದು ಮುಚ್ಚಲಿಲ್ಲ. ಮನಃಪೂರ್ವಕವಾಗಿಯೇ ಮಾಡಿರುವೆನು ಎಂದನು.

೪೮. ಆದುದರಿಂದ ನೀನು ಬೇರೆ ವಿಧವಾಗಿ ಯೋಚಿಸಬಾರದು ನೀನು ನನಗೆ ಪೂಜ್ಯನೂ, ಮಾನ್ಯನೂ ಆಗಿರುತ್ತೀಯೆ. ಎಲೈ ಮಂಗಳಾಂಗನೇ ನನ್ನ ಕಾರ್ಯವನ್ನು ಕ್ಷಮಿಸುವನಾಗು. ಈಗ ನೀನು ಕಮಲದಿಂದ ಕೆಳಗೆ ಬಾ. ಎಂದು ಹರಿಯು ಹೇಳಿದನು.

೪೯. ಎಲೈ ಬ್ರಹ್ಮದೇವನೇ, ತೇಜೋಮಯನೂ, ಭಾರಭೂತನೂ ಆದ ನಿನ್ನನ್ನು ಧರಿಸಲು ನನಗೆ ಶಕ್ತಿಯಿಲ್ಲ ಎಂದು ಹೇಳಿದನು. ಆಗ ಬ್ರಹ್ಮನು ಎಲೈ ಹರಿಯೇ ನಿನ್ನ ಮಾತಿನಿಂದ ಪ್ರೀತನಾದೆನು. ವರವನ್ನು ಬೇಡಿಕೋ ಕೊಡುವೆನು ಮತ್ತು ಪದ್ಮದಿಂದ ಕೆಳಗೆ ಇಳಿಯುವೆನು ಎಂದು ಹೇಳಿದನು.

॥ ವಿಷ್ಣುರುವಾಚ ॥

ಪುತ್ರೋ ಭವ ಮಮಾರಿಘ್ನ ಮುದಂ ಪ್ರಾಪ್ಸ್ಯಸಿ ಶೋಭನಂ ।
ಸತ್ಯಧನೋ ಮಹಾಯೋಗೀ ತ್ವಮೀಡ್ಯಃ ಪ್ರಣವಾತ್ಮಕಃ ॥ ೫೦ ॥

ಅದ್ಯಪ್ರಭೃತಿ ಸರ್ವೇಶ ಶ್ವೇತೋಷ್ಣೀಷ ವಿಭೂಷಣಃ ।
ಪದ್ಮಯೋನಿರಿತೀತ್ಯೇವಂ ಖ್ಯಾತೋ ನಾಮ್ನಾ ಭವಿಷ್ಯಸಿ ॥
ಪುತ್ರೋ ಮೇ ತ್ವಂ ಭವ ಬ್ರಹ್ಮನ್ ಸರ್ವಲೋಕಾಧಿಪ ಪ್ರಭೋ ॥ ೫೧ ॥

ತತಃ ಸ ಭಗವಾನ್ ಬ್ರಹ್ಮಾ ವರಂ ಗೃಹ್ಯ ಕಿರೀಟಿನಃ ।
ಏವಂ ಭವತು ಚೇತ್ಯುಕ್ತ್ವಾ ಪ್ರೀತಾತ್ಮಾ ಗತಮತ್ಸರಃ ॥ ೫೨ ॥

ಪ್ರತ್ಯಾಸನ್ನಮಥಾಯಾತಂ ಬಾಲಾರ್ಕಾಭಂ ಮಹಾನನಂ ।
ಭೂತಮತ್ಯದ್ಭುತಂ ದೃಷ್ಟ್ವಾ ನಾರಾಯಣ ಮಥಾಬ್ರವೀತ್ ॥ ೫೩ ॥

---

೫೦. ಶ್ರೀಹರಿಯು ಹೇಳಿದನು :—ಎಲೈ ಶತ್ರುನಾಶಕನಾದ ಬ್ರಹ್ಮದೇವನೇ ನೀನು ಪದ್ಮದಲ್ಲಿ ಅವತರಿಸುವುದರಿಂದ ನನಗೆ ಪುತ್ರನಾಗಿರುತ್ತೀಯೆ. ನಿನಗೆ ಕಲ್ಯಾಣವೂ ಸಂತೋಷವೂ, ಸತ್ಯ, ಧನ, ಯೋಗ, ಮರ್ಯಾದೆ ಇವುಗಳೂ ಉಂಟಾಗುವುದು. ನೀನು ಸತ್ಯವಂತನೂ, ಧನಿಕನೂ, ಮಹಾಯೋಗಿಯೂ, ಸ್ತುತ್ಯನೂ, ಪ್ರಣವ ರೂಪಿಯೂ, ಆಗು ಎಂದನು.

೫೧. ಸರ್ವೇಶನೂ, ಲೋಕಾಧಿಪತಿಯೂ, ಸ್ವಾಮಿಯೂ, ಆದ ಎಲೈ ಬ್ರಹ್ಮ ದೇವನೇ ನೀನು ಇಂದಿನಿಂದಲೂ ಲೋಕಗಳಲ್ಲಿ ಶುಭ್ರವಾದ ರುಮಾಲು ವಸ್ತ್ರ ಭೂಷಣ ಗಳುಳ್ಳವನೆಂದೂ, ನನ್ನ ಪುತ್ರನೆಂದೂ, ಪ್ರಸಿದ್ಧಿಯನ್ನು ಪಡೆ ಎಂದು ಹರಿಯು ಹೇಳಿದನು.

೫೨. ಅನಂತರ ಐಶ್ವರ್ಯವಂತನಾದ ಬ್ರಹ್ಮದೇವನು ಶ್ರೀ ಹರಿಯಿಂದ ವರ ವನ್ನು ಸ್ವೀಕರಿಸಿ, ತಮ್ಮ ಇಷ್ಟದಂತೆಯೇ ಆಗಲೆಂದು ಹರಿಗೆ ಹೇಳಿ ಪ್ರೀತಿಯುಳ್ಳ ವನೂ, ದ್ವೇಷಶೂನ್ಯನೂ ಆದನು.

೫೩. ಇಷ್ಟರಲ್ಲಿ ಬ್ರಹ್ಮದೇವನು ಸಮೀಪಗತವೂ ಬಾಲಸೂರ್ಯಪ್ರಭೆ ಯುಳ್ಳದ್ದೂ, ವಿಶಾಲಮುಖಿಯೂ, ಅತ್ಯಂತ ಆಶ್ಚರ್ಯಕರವೂ, ಆದ ಮಹಾಭೂತ ವೊಂದನ್ನು ನೋಡಿ ಶ್ರೀಹರಿಗೆ ಇತೆಂದನು.

ಅಪ್ರಮೇಯೋ ಮಹಾವಕ್ತ್ರೋ ದಂಷ್ಟ್ರೀ ವ್ಯಸ್ತಶಿರೋರುಹಃ ।
ದಶಬಾಹುಸ್ತ್ರಿಶೂಲಾಂಕೋ ನಯನೈರ್ವಿಶ್ವತೋಮುಖಃ ॥ ೫೪ ॥

ಲೋಕಪ್ರಭುಃ ಸ್ವಯಂ ಸಾಕ್ಷಾತ್ ವಿಕೃತೋ ಮುಂಜಮೇಖಲೀ
ಮೇಢ್ರೇಣೋರ್ಧ್ವೇನ ಸಹತಾ ನದಮಾನೋಽತಿಭೈರವಂ ॥ ೫೫ ॥

ಕಃ ಖಲ್ವೇಷ ಪುಮಾನ್ ವಿಷ್ಣೋ ತೇಜೋರಾಶಿರ್ಮಹಾದ್ಯುತಿಃ ।
ವ್ಯಾಪ್ಯ ಸರ್ವಾ ದಿಶೋ ದ್ಯಾಂ ಚ ಇತ ಏವಾಭಿವರ್ತತೇ ॥ ೫೬ ॥

ತೇನೈವಮುಕ್ತೋ ಭಗವಾನ್ ವಿಷ್ಣುರ್ಬ್ರಹ್ಮಾಣಮಬ್ರವೀತ್ ।
ಪದ್ಭ್ಯಾಂತಲನಿಪಾತೇನ ಯಸ್ಯ ವಿಕ್ರಮತೋಽರ್ಣವೇ ॥
ವೇಗೇನ ಮಹತಾಕಾಶೇ ವ್ಯಥಿತಾಶ್ಚ ಜಲಾಶಯಾಃ ॥ ೫೭ ॥

ಛಟಾಭಿವಿಷ್ಣುತೋಽತ್ಯರ್ಥಂ ಸಿಚ್ಯತೇ ಪದ್ಮಸಂಭವಃ ।
ಘ್ರಾಣಜೇನ ಚ ವಾತೇನ ಕಂಪಮಾನಂ ತ್ವಯಾ ಸಹ ॥
ದೋಧೂಯತೇ ಮಹಾಪದ್ಮಂ ಸ್ವಚ್ಛಂದಂ ಮಮ ನಾಭಿಜಂ ॥ ೫೮ ॥

---

೫೪-೫೬. ಆಗ ಬ್ರಹ್ಮನು ಎಲೈ ಹರಿಯೇ, ಅಪ್ರಮೇಯನೂ, ವಿಶಾಲ ಮುಖಿಯೂ, ದಂಷ್ಟ್ರಿಯೂ, ವ್ಯಾಪ್ತವಾದ ಕೇಶಪಾಶವುಳ್ಳವನೂ, ಹತ್ತು ಭುಜಗಳುಳ್ಳವನೂ, ತ್ರಿಶೂಲಿಯೂ, ಮುಕ್ಕಣ್ಣನೂ, ವಿಶ್ವತೋಮುಖಿಯೂ, ಲೋಕದ ಒಡೆಯನೂ, ವಿಕೃತನೂ, ಮುಂಜೇಹುಲ್ಲಿನ ಉಡದಾರವುಳ್ಳವನೂ, ಮಹತ್ತೂ ಊರ್ಧ್ವವೂ ಆದ ಲಿಂಗಧಾರಿಯೂ, ಅತಿ ಗಂಭೀರಧ್ವನಿಯುಳ್ಳವನೂ, ತೇಜೋರೂಪಿಯೂ, ಮಹಾಕಾಂತಿವಂತನೂ, ಆಗಿ ಈ ಕಡೆಗೆ ಬರುತ್ತಿರುವ ಈ ಪುರುಷನು ಯಾರು, ಎಂದು ಬ್ರಹ್ಮನು ಹರಿಯನ್ನು ಕುರಿತು ಕೇಳಿದನು.

೫೭-೫೯ ಬ್ರಹ್ಮದೇವನು ಹೀಗೆ ಹೇಳಲಾಗಿ ವಿಷ್ಣುವು ಬ್ರಹ್ಮನಿಗೆ ಇಂತೆಂದನು. ಓ, ಬ್ರಹ್ಮನೇ, ಯಾವನ ಪಾದವಿಕ್ಷೇಪಮಾತ್ರದಿಂದಲೇ ಈ ಸಮುದ್ರವು ಅಲ್ಲೋಲಕಲ್ಲೋಲವಾಗಿ ಜಲರಾಶಿಯು ಆಕಾಶಕ್ಕೆ ಹಾರಿ ಪ್ರಲಯಕಾಲದ ವೃಷ್ಟಿಯಂತೆ ನಮ್ಮಗಳ ಮೇಲೆ ಸುರಿಯುತ್ತದೆಯೋ ಮತ್ತು (ಯಾವನ) ಉಚ್ಛ್ವಾಸ ವಾಯುವಿನಿಂದ ನಾವಿಬ್ಬರೂ ಕಂಪಿಸುವುದಲ್ಲದೇ ಈ ನನ್ನ ನಾಭಿಕಮಲವೂ ಸಹ ಮುರಿದು ಬೀಳುವಷ್ಟು ವೇಗವಾಗಿ ತೂಗಾಡುತ್ತಿದೆಯೋ ಅಂತಹ ಈ ಪರಮೇಶ್ವರನು

ಸ ಏಷ ಭಗವಾನೀಶೋ ಹ್ಯನಾದಿಶ್ಚಾಂತಕೃದ್ವಿಭುಃ ।
ಭವಾನಹಂ ಚ ಸ್ತೋತ್ರೇಣ ಹ್ಯುಪತಿಷ್ಠಾವ ಗೋಧ್ವಜಂ ॥ ೫೯ ॥

ತತಃ ಕ್ರುದ್ಧೋಽಂಬುಜಾಭಾಕ್ಷಂ ಬ್ರಹ್ಮಾ ಪ್ರೋವಾಚ ಕೇಶವಂ ।
ನ ಭವಾನ್ನೂನಮಾತ್ಮಾನಂ ಲೋಕಾನಾಂ ಯೋನಿಮುತ್ತಮಂ ॥ ೬೦ ॥

ಬ್ರಹ್ಮಾಣಂ ಲೋಕಕರ್ತಾರಂ ಮಾಂಚ ವೇತ್ತಿ ಸನಾತನಂ ।
ಕೋಽಯಂ ಭೋಃ ಶಂಕರೋ ನಾಮ ಹ್ಯಾವಯೋರ್ವ್ಯತಿರಿಚ್ಯತೇ ॥ ೬೧ ॥

ತಸ್ಯ ತತ್ಕ್ರೋಧಜಂ ವಾಕ್ಯಂ ಶ್ರುತ್ವಾ ವಿಷ್ಣುರಭಾಷತ ।
ಮಾ ಮೈವಂ ವದ ಕಲ್ಯಾಣ ಪರಿವಾದಂ ಮಹಾತ್ಮನಃ ॥ ೬೨ ॥

---

ಅನಾದಿಯೂ, ಅಂತಕನೂ, ವ್ಯಾಪ್ತನೂ, ಪೂಜ್ಯನೂ, ಆಗಿರುತ್ತಾನೆ. ಆದುದರಿಂದ ನಾವಿಬ್ಬರೂ ವೃಷಭಧ್ವಜನಾದ ಆ ಪರಮೇಶ್ವರನನ್ನು ಮರ್ಯಾದಿಸಿ ಎದಿರು ಗೊಳ್ಳೋಣವೆಂದನು.

೬೦-೬೧. ಅನಂತರ ಈ ಮಾತುಗಳನ್ನು ಕೇಳಿದ ಬ್ರಹ್ಮನು ಕೋಪಗೊಂಡು ಕಮಲಪ್ರಭನಾದ ಕೇಶವನನ್ನು ನೋಡಿ ಇಂತೆಂದನು :—ಎಲೈ ಹರಿಯೇ, ನೀನು ಲೋಕೋತ್ತಮನೂ, ಲೋಕಕಾರಣಕರ್ತನೂ ಆಗಿದ್ದರೂ ಕೂಡ ಅಧಮನೆಂಬು ದಾಗಿ ಭಾವಿಸುತ್ತೀಯೆ ಮತ್ತು ಲೋಕಕರ್ತನೂ, ಸನಾತನೂ, ಬ್ರಹ್ಮದೇವನೂ ಆದ ನನ್ನನ್ನೂ ಸಹ ಅಲ್ಪನೆಂದು ಭಾವಿಸುತ್ತೀಯೆ. ಇಂತಹ ನಮ್ಮಿಬ್ಬರಿಗೂ ಉತ್ತಮ ನಾದ ಶಂಕರನೆಂಬುವನು ಯಾವನು ? ಎಂತಹವನು ? ಎಂದು ಕೇಳಿದನು.

೬೨. ಆಗ ವಿಷ್ಣುವು ಕೋಪದಿಂದ ಹೇಳಿದ ಬ್ರಹ್ಮನ ವಾಕ್ಯವನ್ನು ಕೇಳಿ ಎಲೈ ಬ್ರಹ್ಮನೇ, ನೀನು ಹೀಗೆ ಮಹಾತ್ಮನಾದ ಈಶ್ವರನ ವಿಷಯದಲ್ಲಿ ದೂಷಣೆ ಯನ್ನು ಮಾಡುವುದು ಸರಿಯಲ್ಲ. ಯೋಗ್ಯರಾದ ನಿಮ್ಮಂಥಹವರಿಗೆ ಮಹಾತ್ಮರನ್ನು ದೂಷಿಸುವುದು ಸರಿಯಲ್ಲವೆಂದನು.

ಮಾಯಾ ಯೋಗೇಶ್ವರೋ ಧರ್ಮೋ ದುರಾಧರ್ಷೋ ವರಪ್ರದಃ ।
ಹೇತುರಸ್ಯಾತ್ರ ಜಗತಃ ಪುರಾಣಃ ಪುರುಷೋಽವ್ಯಯಃ ॥ ೬೩ ॥

ಜೀವಃ ಖಲ್ವೇಷ ಜೀವಾನಾಂ ಜ್ಯೋತಿರೇಕಂ ಪ್ರಕಾಶತೇ ।
ಬಾಲಕ್ರೀಡನಕೈರ್ದೇವಃ ಕ್ರೀಡತೇ ಶಂಕರಃ ಸ್ವಯಂ ॥ ೬೪ ॥

ಪ್ರಧಾನಮವ್ಯಯಂ ಜ್ಯೋತಿರವ್ಯಕ್ತಂ ಪ್ರಕೃತಿಸ್ತಮಃ ।
ಅಸ್ಯ ಚೈತಾನಿ ನಾಮಾನಿ ನಿತ್ಯಂ ಪ್ರಸವಧರ್ಮಿಣಃ ॥
ಯಃ ಕಃ ಸ ಇತಿ ದುಃಖಾರ್ತೈರ್ಮೃಗ್ಯತೇ ಯತಿಭಿಃ ಶಿವಃ ॥ ೬೫ ॥

ಏಷ ಬೀಜೀ ಭವಾನ್ ಬೀಜಮಹಂ ಯೋನಿಃ ಸನಾತನಃ ।
ಏವಮುಕ್ತೋಽಥ ವಿಶ್ವಾತ್ಮಾ ಬ್ರಹ್ಮಾ ವಿಷ್ಣುಮಭಾಷತ ॥ ೬೬ ॥

---

೬೩. ಈ ಪರಮೇಶ್ವರನು ಮಾಯಾರೂಪಿಯೂ, ಯೋಗೇಶ್ವರನೂ, ಧರ್ಮ ರೂಪಿಯೂ, ದುರಾಧರ್ಷನೂ, ವರಪ್ರದನೂ, ಪುರಾಣಪುರುಷನೂ, ನಾಶರಹಿತನೂ, ಜಗತ್ಕರ್ತನೂ ಆಗಿರುತ್ತಾನೆ. ಇಂತಹವರನ್ನು ದೂಷಿಸುವುದು ಸರಿಯಲ್ಲವೆಂದು ಹರಿಯು ಬ್ರಹ್ಮನಿಗೆ ಹೇಳಿದನು.

೬೪. ಈ ಪರಮೇಶ್ವರನು ಜೀವಿಗಳಿಗೆ ಪ್ರಾಣಪ್ರದನೂ, ತೇಜೋಮಯನೂ ಅದ್ವಿತೀಯನೂ ಆಗಿ ಪ್ರಕಾಶಿಸುತ್ತಾನೆ. ಮತ್ತು ದೇವನಾದ ಈ ಶಂಕರನು ಮಕ್ಕಳಂತೆಯೇ ಕ್ರೀಡಿಸುವನು.

೬೫. ಸೃಷ್ಟಿಕರ್ತನಾದ ಈ ಪರಮೇಶ್ವರನಿಗೆ, ಪ್ರಧಾನ, ಅವ್ಯಯ, ಜ್ಯೋತಿ, ಅವ್ಯಕ್ತ, ಪ್ರಕೃತಿ, ತಮಸ್ಸು ಎಂಬ ಅಸಂಖ್ಯಾತವಾದ ನಾಮಗಳಿವೆ. ಮಂಗಳದಾಯಕ ನಾದ ಈ ಪರಮೇಶ್ವರನು ಲೋಕದಲ್ಲಿ ಯಾವನು ದುಃಖಪರಿಹಾರಕನೋ ಅವನೇ ಆಗಿರುತ್ತಾನೆಂದು ಮುನಿಗಳು ಇವನನ್ನು ಸ್ತೋತ್ರಮಾಡುವರು ಎಂದನು.

೬೬ ಈ ಈಶ್ವರನು ವೃಕ್ಷರೂಪನಾಗಿರುವನು. ನೀನು ಬೀಜರೂಪಿಯಾ ಗಿರುವೆ. ನಾನಾದರೋ ಸನಾತನವಾದ ಆಶ್ರಯನಾಗಿರುವೆನು ಎಂದು ಹರಿಯು ಹೇಳಲಾಗಿ ವಿಶ್ವರೂಪಿಯಾದ ಬ್ರಹ್ಮದೇವನು ಶ್ರೀಹರಿಗೆ ಇಂತೆಂದನು.

ಭವಾನ್ಯೋನಿರಹಂ ಬೀಜಂ ಕಥಂ ಬೀಜೀ ಮಹೇಶ್ವರಃ ।
ಏತನ್ಮೇ ಸೂಕ್ಷ್ಮಮವ್ಯಕ್ತಂ ಸಂಶಯಂ ಛೇತ್ತು ಮರ್ಹಸಿ ॥ ೬೭ ॥

ಜ್ಞಾತ್ವಾ ಚೈವಂ ಸಮುತ್ಪತ್ತಿಂ ಬ್ರಹ್ಮಣಾ ಲೋಕತಂತ್ರಿಣಾ ।
ಇದಂ ಪರಮಸಾದೃಶ್ಯಂ ಪ್ರಶ್ನಮಭ್ಯವದದ್ಧರಿಃ ॥ ೬೮ ॥

ಅಸ್ಮಾನ್ಮಹತ್ತರಂ ಗುಹ್ಯಂ ಭೂತಮನ್ಯನ್ನ ವಿದ್ಯತೇ ।
ಮಹತಃ ಪರಮಂ ಧಾಮ ಶಿವಮಧ್ಯಾತ್ಮಿನಾಂ ಪದಂ ॥ ೬೯ ॥

ದ್ವೈಧೀಭಾವೇನ ಚಾತ್ಮಾನಂ ಪ್ರವಿಷ್ಟಸ್ತು ವ್ಯವಸ್ಥಿತಃ ।
ನಿಷ್ಕಲಃ ಸೂಕ್ಷ್ಮಮವ್ಯಕ್ತಃ ಸಕಲಶ್ಚ ಮಹೇಶ್ವರಃ ॥ ೭೦ ॥

ಅಸ್ಯ ಮಾಯಾವಿಧಿಜ್ಞಸ್ಯ ಅಗಮ್ಯ ಗಹನಸ್ಯ ಚ ।
ಪುರಾ ಲಿಂಗಂ ಭವದ್ಬೀಜಂ ಪ್ರಥಮಂ ತ್ವಾದಿಸರ್ಗಿಕಂ ॥ ೭೧ ॥

---

೬೭. ಎಲೈ ಹರಿಯೇ, ನೀನು ಮೂಲಕಾರಣವಾದ ಯೋನಿಯಾಗಿರುವೆ ನಾನು ಬೀಜರೂಪನಾಗಿರುವುದೇನೋ ಸರಿಯಾಗಿದೆ. ಆದರೆ ಈಶ್ವರನು ಹೇಗೆ (ಬೀಜಿಯಾಗಿ) ವೃಕ್ಷರೂಪಿಯಾಗಿರುವನು? ಈ ನನ್ನ ಸಂಶಯವನ್ನು ಪರಿಹರಿಸ ಬೇಕೆಂದು ಬ್ರಹ್ಮನು ಕೇಳಿದನು.

೬೮. ಹೀಗೆ ಲೋಕಕರ್ತನಾದ ಬ್ರಹ್ಮದೇವನು ಹೇಳಲಾಗಿ ಈ ಉತ್ಪತ್ತಿ ಕ್ರಮವನ್ನು ಕೇಳಿದ ಶ್ರೀಹರಿಯು ಅತ್ಯಂತ ಸಾದೃಶ್ಯವಿರುವ ಉತ್ತಮವಾದ ಉತ್ತರ ವನ್ನು ಕೊಟ್ಟನು.

೬೯. ಈ ಪರಮೇಶ್ವರನಿಗಿಂತಲೂ ಶ್ರೇಷ್ಠವೂ, ರಹಸ್ಯವೂ ಆದ ಬೇರೊಂದು ವಸ್ತುವು ಈ ಲೋಕದಲ್ಲಿಯೇ ಇಲ್ಲ. ಇವನು ಮಹತ್ತತ್ವಗಿಂತಲೂ ಉತ್ತಮನೂ, ಜ್ಞಾನಿಗಳಿಗೆ ಮಂಗಳಪ್ರದನೂ ಆಗಿರುತ್ತಾನೆ.

೭೦. ಎಲೈ ಬ್ರಹ್ಮದೇವನೇ, ಪರಮೇಶ್ವರನು ನಿಷ್ಕಲ, ಸಕಲನೆಂಬುದಾಗಿ ಎರಡು ಭಾಗಗಳಿಂದ ಪ್ರಖ್ಯಾತನಾಗಿರುವನು. ಅವುಗಳಲ್ಲಿ ನಿಷ್ಕಲವೂ, ಸೂಕ್ಷ್ಮವೂ, ಅವ್ಯಕ್ತವೂ ಆಗಿದೆ. ಸಕಲವಾದರೋ ಮಹೇಶ್ವರಸ್ವರೂಪವಾಗಿದೆ ಎಂದು ಬ್ರಹ್ಮನಿಗೆ ಹೇಳಿದನು.

೭೧. ಮಾಯಾವಿಧಿಜ್ಞನೂ, ಅಗಮ್ಯನೂ, ಗಹನನೂ ಆದ ಈ ಪರಮೇಶ್ವರನ ಅನಾದಿಯೂ, ಆದಿಸೃಷ್ಟಿಯ ವಿಷಯವೂ ಆದ ಆ ಲಿಂಗವು ಬೀಜರೂಪವಾಗಿದೆ.

ಮಯಿ ಯೋನೌ ಸಮಾಯುಕ್ತಂ ತದ್ಬೀಜಂ ಕಾಲಪರ್ಯಯಾತ್ ।
ಹಿರಣ್ಮಯಮಪಾರಂತದ್ಯೋನ್ಯಾಮಂಡಮಜಾಯತ ॥ ೭೨ ॥

ಶತಾನಿ ದಶವರ್ಷಾಣಾಮಂಡಂ ಚಾಪ್ಸು ಪ್ರತಿಷ್ಠಿತಂ ।
ಅಂತೇ ವರ್ಷಸಹಸ್ರಸ್ಯ ವಾಯುನಾ ತದ್ವಿಧಾ ಕೃತಂ ॥ ೭೩ ॥

ಕಪಾಲಮೇಕಂ ದ್ಯೌರ್ಜಜ್ಞೇ ಕಪಾಲಮಪರಂ ಕ್ಷಿತಿಃ ।
ಉಲ್ಬಂತಸ್ಯ ಮಹೋತ್ಸೇಧಂ ಯೋಸೌ ಕನಕಪರ್ವತಃ ॥ ೭೪ ॥

ತತಸ್ತಸ್ಮಾತ್ ಪ್ರಬುದ್ಧಾತ್ಮಾ ದೇವೋ ದೇವವರಃ ಪ್ರಭುಃ ।
ಹಿರಣ್ಯಗರ್ಭೋ ಭಗವಾನ್ ಅಹಂ ಜಜ್ಞೇ ಚತುರ್ಭುಜಃ ॥ ೭೫ ॥

ತತೋ ವರ್ಷಸಹಸ್ರಾಂತೇ ವಾಯುನಾ ತದ್ವಿಧಾಕೃತಂ ।
ಅತಾರಾರ್ಕೇಂದುನಕ್ಷತ್ರಂ ಶೂನ್ಯಂ ಲೋಕಮವೇಕ್ಷ್ಯ ಚ ॥
ಕೋಯಮತ್ರೇತ್ಯಭಿಧ್ಯಾತೇ ಕುಮಾರಾಸ್ತೇ ಭವಂಸ್ತದಾ ॥ ೭೬ ॥

---

೭೨. ಆ ಬೀಜವು ಯೋನಿರೂಪನಾದ ನನ್ನಲ್ಲಿ ಸಂಬಂಧವಾಗಿ, ಕಾಲವಿಪರ್ಯ ದಿಂದ ಸುವರ್ಣಮಯವಾದ ಅಂಡವನ್ನೇ ಸೃಷ್ಟಿಮಾಡಿತು.

೭೩. ಆ ಅಂಡವು ಜಲದಲ್ಲಿ ಒಂದುಸಹಸ್ರವರ್ಷಗಳವರೆಗೂ ಸ್ಥಾಪಿತ ವಾಗಿದ್ದು ಒಂದುಸಹಸ್ರವರ್ಷಾನಂತರ ವಾಯುವು ಆ ಅಂಡವನ್ನು ಎರಡು ಭಾಗ ವನ್ನಾಗಿ ಮಾಡಿತು.

೭೪. ಆ ಅಂಡದ ಒಂದು ಹೋಳು ಅಂತರಿಕ್ಷವಾಗಿಯೂ, ಮತ್ತೊಂದು ಭಾಗವು ಭೂಮಿಯಾಗಿಯೂ ಪರಿಣಮಿಸಿದುವು. ಪಿಂಡವಾದರೋ ಅತ್ಯುನ್ನತವೂ, ಸುವರ್ಣಮಯವೂ ಆದ ಮೇರುವೆಂದು ಪ್ರಖ್ಯಾತವಾಯಿತು.

೭೫. ಅನಂತರ ಜ್ಞಾನಸ್ವರೂಪನೂ, ದೇವೋತ್ತಮನೂ, ಪ್ರಭುವೂ, ಹಿರಣ್ಯ ಗರ್ಭನೂ, ಚತುರ್ಭುಜನೂ, ಆದ ನಾನು ಆ ಅಂಡದಿಂದ ಪ್ರಾದುರ್ಭೂತನಾದೆನು.

೭೬. ಅನಂತರ ಒಂದು ಸಹಸ್ರ ವರ್ಷಗಳು ಕಳೆಯಲಾಗಿ ವಾಯುವಿನಿಂದ ಆ ಅಂಡವು ಎರಡು ಭಾಗವಾಗಿ ಏರ್ಪಟ್ಟಿತು. ಆಗ ಅಲ್ಲಿ ಸೂರ್ಯಚಂದ್ರರೂ, ನಕ್ಷತ್ರ ಗಳೂ, ಗ್ರಹಗಳೂ ಇವೇ ಮೊದಲಾದ ಯಾವುವೂ ಇರಲಿಲ್ಲ. ಲೋಕವೆಲ್ಲವೂ ಶೂನ್ಯವಾಗಿಯೇ ಇದ್ದಿತು. ಈ ಲೋಕದಲ್ಲಿರುವವರು ಯಾರೆಂದು ಕೇಳಲಾಗಿ ಕುಮಾ ರರು ಬಂದು ಇಂತೆಂದರು.

ಪ್ರಿಯದರ್ಶಾಸ್ಸುತನವೋ ಯೇತೀತಾಃ ಪೂರ್ವಜಾಸ್ತವ ।
ಭೂಯೋ ವರ್ಷಸಹಸ್ರಾಂತೇ ತತ ಏವಾತ್ಮಜಾಸ್ತವ ॥
ಭುವನಾನಲಸಂಕಾಶಾಃ ಪದ್ಮಪತ್ರಾಯತೇಕ್ಷಣಾಃ ॥ ೭೭ ॥

ಶ್ರೀಮಾನ್ ಸನತ್ಕುಮಾರಸ್ತು ಋಭುಶ್ಚೈವೋರ್ಧ್ವರೇತಸೌ ।
ಸನಾತನಶ್ಚ ಸನಕಸ್ತಥೈವ ಚ ಸನಂದನಃ ॥
ಉತ್ಪನ್ನಾಃ ಸಮಕಾಲಂ ತೇ ಬುದ್ಧ್ಯಾತೀಂದ್ರಿಯದರ್ಶನಾಃ ॥ ೭೮ ॥

ಉತ್ಪನ್ನಾಃ ಪ್ರತಿಭಾತ್ಮಾನೋ ಜಗದುಶ್ಚ ತದೈವ ಹಿ ।
ನಾರಪ್ಸ್ಯಂತೇ ಚ ಕರ್ಮಾಣಿ ತಾಪತ್ರಯವಿವರ್ಜಿತಾಃ ॥ ೭೯ ॥

ಅಸ್ಯ ಸೌಮ್ಯಂ ಬಹುಕ್ಲೇಶಂ ಜರಾಶೋಕಸಮನ್ವಿತಂ ॥
ಜೀವಿತಂ ಮರಣಂ ಚೈವ ಸಂಭವಂ ಚ ಪುನಃ ಪುನಃ ॥ ೮೦ ॥

ಸ್ವಪ್ನಭೂತಂ ಪುನಃ ಸ್ವರ್ಗೇ ದುಃಖಾನಿ ನರಕಾಂಸ್ತಥಾ ॥
ವಿದಿತ್ವಾ-ಚಾಗಮಂ ಸರ್ವಮವಶ್ಯಂ ಭವಿತವ್ಯತಾಂ ॥ ೮೧ ॥

---

೭೭-೭೮. ಎಲೈ ಬ್ರಹ್ಮದೇವನೇ, ಪೂರ್ವಕಲ್ಪದವನಾದ ನಿನಗೆ ಪ್ರಿಯದರ್ಶಿಗಳೂ ಸುಶರೀರಿಗಳೂ, ಆದ ಯಾವ ಪುತ್ರರು ಜನಿಸಿ ಅತೀತರಾದರೋ ಅವರೇ ಒಂದು ಸಹಸ್ರವರ್ಷಗಳಾದ ತರುವಾಯ ಪುನಃ ನಿನಗೆ ಮತ್ತು ಅಗ್ನಿಗೆ ಸಮವಾದ ಕಾಂತಿಯುಳ್ಳವರೂ, ಕಮಲಾಕ್ಷರೂ, ಅತೀಂದ್ರಿಯರೂ, ಊರ್ಧ್ವರೇತಸ್ಕರೂ, ಶ್ರೀಮಂತರೂ ಸನಕ, ಸನಂದನ, ಸನಾತನ, ಸನತ್ಕುಮಾರ, ಮತ್ತು ಋಭುಕ್ಷ ನಾಮಕ ಕುಮಾರರೂ ಆಗಿ ಉತ್ಪನ್ನರಾದರು.

೭೯. ಉತ್ಪನ್ನರಾದ ಆ ಕುಮಾರರು ತಡೆಯಿಲ್ಲದೆಯೇ ಕೂಡಲೇ ಹೇಳಿದರು ಮತ್ತು ತಾಪತ್ರಯರಹಿತರಾಗಿ ಯಾವವಿಧ ಕಾರ್ಯಗಳನ್ನೂ ಪ್ರಾರಂಭಮಾಡಲಿಲ್ಲ.

೮೦. ಅವರು ಈ ಸಂಸಾರದಲ್ಲಿ ಬಹುಕ್ಲೇಶ, ಜನನಮರಣ, ಜರಾಶೋಕ, ಪುನರ್ಜನನ, ಇವು ಪದೇ ಪದೇ ಸಹಜವಾಗಿ ಸಂಭವಿಸುತ್ತವೆ ಎಂದರು.

೮೧. ಸ್ವರ್ಗದಲ್ಲಿ ಉಂಟಾಗುವ ಸುಖಗಳು ಸ್ವಪ್ನಸುಖಕ್ಕೆ ಸಮಾನಗಳು. ನರಕಾದಿ ದುಃಖಗಳು ಸಹಿಸಲಸಾಧ್ಯಗಳು. ಇವುಗಳು ಆವಶ್ಯಕವಾಗಿ ಭೋಕ್ತವ್ಯಗಳಾಗಿವೆ ಎಂದು ಹೇಳಿದರು.

ಋಭುಂ ಸನತ್ಕುಮಾರಂ ಚ ದೃಷ್ಟ್ವಾ ತವ ವಶೇ ಸ್ಥಿತೌ ।
ತ್ರಯಸ್ತು ತ್ರೀನ್ ಗುಣಾನ್ ಹಿತ್ವಾ ಆತ್ಮಜಾಃ ಸನಕಾದಯಃ ॥
ವೈವರ್ತೇನ ತು ಜ್ಞಾನೇನ ನಿವೃತ್ತಾಸ್ತೇ ಮಹೌಜಸಃ ॥ ೮೨ ॥

ತತಸ್ತೇಷ್ವಪವೃತ್ತೇಷು ಸನಕಾದಿಷು ವೈ ತ್ರಿಷು ।
ಭವಿಷ್ಯಸಿ ವಿಮೂಢಸ್ತು ಮಾಯಯಾ ಶಂಕರಸ್ಯ ತು ॥ ೮೩ ॥

ಏವಂ ಕಲ್ಪೇತು ವೈಕಲ್ಪೇ ಸಂಜ್ಞಾ ನಶ್ಯತಿ ತೇಽನಘ ।
ಕಲ್ಪಶೇಷಾಣಿ ಭೂತಾನಿ ಸೂಕ್ಷ್ಮಾಣಿ ಪಾರ್ಥಿವಾನಿ ಚ ॥ ೮೪ ॥

ಸಾ ಚೈಷಾ ಹ್ಯೈಶ್ವರೀ ಮಾಯಾ ಜಗತಃ ಸಮುದಾಹೃತಾ ।
ಸ ಏಷ ಪರ್ವತೋ ಮೇರುರ್ದೇವಲೋಕ ಉದಾಹೃತಃ ॥ ೮೫ ॥

ತವೈವೇದಂ ಹಿ ಮಾಹಾತ್ಮ್ಯಂ ದೃಷ್ಟ್ವಾ ಚಾತ್ಮಾನಮಾತ್ಮನಾ ।
ಜ್ಞಾತ್ವಾ ಚೇಶ್ವರಸದ್ಭಾವಂ ಜ್ಞಾತ್ವಾ ಮಾಮಂಬುಜೇಕ್ಷಣಂ ॥ ೮೬ ॥

---

೮೨. ಅವರಲ್ಲಿ ಋಭು ಸನತ್ಕುಮಾರರೆಂಬ ಇಬ್ಬರು ಮಕ್ಕಳು ನಿಮ್ಮ ವಶದಲ್ಲಿಯೇ ಇದ್ದರು. ಉಳಿದ ಸನಕ ಸನಂದನ ಸನಾತನರೆಂಬ ಮೂವರು ಕುಮಾರರು ಸತ್ವರಜಸ್ತಮೋಗುಣಗಳನ್ನು ಮೀರಿ ದಿವ್ಯಜ್ಞಾನದಿಂದ ಶಾಶ್ವತವಾದ ಪರಮಪದವಿಯನ್ನು ಹೊಂದಿದರು.

೮೩. ಆ ಸನಕಾದಿಗಳು ಮೂವರು ಅತಿಕ್ರಾಂತವಾಗಲು ಪರಮೇಶ್ವರನ ಮಾಯೆಯಿಂದ ನೀನೂ ಕೂಡ ಭ್ರಾಂತಿಯನ್ನು ಪಡೆಯುವಿ ಎಂದನು.

೮೪. ದೋಷರಹಿತನಾದ ಎಲೈ ಬ್ರಹ್ಮದೇವನೇ, ಹೀಗೆ ಅವಾಂತರಕಲ್ಪಗಳು ಕಳೆದುಹೋದರೆ ನಿನ್ನ ಜ್ಞಾನವೂ ಕೂಡ ನಷ್ಟವಾಗುವುದು. ಆ ಕಲ್ಪದಲ್ಲಿ ನಷ್ಟವಾಗದೆಯೇ ಉಳಿದಿದ್ದ ವಸ್ತುಗಳೂ, ಪಾರ್ಥಿವಗಳಾದ ಪದಾರ್ಥಗಳೂ ಕೂಡ ಸೂಕ್ಷ್ಮರೂಪಗಳಾಗಿ ಉಳಿಯುವುವು.

೮೫. ಇವೆಲ್ಲವೂ ಈಶ್ವರ ಮಾಯೆಯಿಂದ ಉಂಟಾಗಿವೆ, ಇದೇ ಈ ಜಗತ್ತಿನ ಪರಿಣಾಮವಾಗಿದೆ. ಈ ಮೇರುಪರ್ವತವೇ ದೇವಲೋಕವೆಂಬುದಾಗಿ ಹೇಳಲ್ಪಟ್ಟಿದೆ.

೮೬-೮೭. ಎಲೈ ಬ್ರಹ್ಮನೇ ಆ ಪರಮೇಶ್ವರನು ಈ ನಿನ್ನ ಮಹಿಮೆಗಳನ್ನೂ, ಅಂಬುಜೇಕ್ಷಣನಾದ ನನ್ನ ಈ ಸೃಷ್ಟ್ಯಾದಿ ಮಾಹಾತ್ಮ್ಯಗಳನ್ನೂ, ತನ್ನ ಸ್ವರೂಪವನ್ನೂ, ತಿಳಿದು ಕೋಪಿಸಿಕೊಳ್ಳುವನು. ಆದುದರಿಂದ ಮಹಾಯೋಗಿಯೂ,

**ಮಹಾದೇವಂ ಮಹಾಯೋಗಂ ಭೂತಾನಾಂ ವರದಂ ಪ್ರಭುಂ ।**
**ಪ್ರಣಮಾತ್ಮಾನಮಾಸಾದ್ಯ ನಮಸ್ಕೃತ್ಯ ಜಗದ್ಗುರುಂ ॥**
**ತ್ವಾಂ ಚ ಮಾಂ ಚೈವ ಸಂಕ್ರುದ್ಧೋ ನಿಶ್ವಾಸಾನ್ನಿರ್ದಹೇದಯಂ ॥ ೮೭ ॥**

**ಏವಂ ಜ್ಞಾತ್ವಾ ಮಹಾಯೋಗಂ ಅಭ್ಯುತ್ತಿಷ್ಠನ್ಮಹಾಬಲಃ ।**
**ಅಹಂ ತ್ವಾಮಗ್ರತಃ ಕೃತ್ವಾ ಸ್ತೋಷ್ಯೇಹಮನಲಪ್ರಭಂ ॥ ೮೮ ॥**

**॥ ಸೂತ ಉವಾಚ ॥**

**ಬ್ರಹ್ಮಾಣಮಗ್ರತಃ ಕೃತ್ವಾ ತತಃ ಸ ಗರುಡಧ್ವಜಃ ।**
**ಅತೀತೈಶ್ಚ ಭವಿಷ್ಯೈಶ್ಚ ವರ್ತಮಾನೈಸ್ತಥೈವ ಚ ॥**
**ನಾಮಭಿಶ್ಛಂದಸೈಶ್ಚೈವ ಇದಂ ಸ್ತೋತ್ರಮುದೀರಯುತ್ ॥ ೮೯ ॥**

**ನಮಸ್ತುಭ್ಯಂ ಭಗವತೇ ಸುವ್ರತೇಽನಂತತೇಜಸೇ ॥**
**ನಮಃ ಕ್ಷೇತ್ರಾಧಿಪತಯೇ ಬೀಜಿನೇ ಶೂಲಿನೇ ನಮಃ ॥ ೯೦ ॥**

---

ಭೂತಗಳಿಗೆ ವರಪ್ರದನೂ, ಸ್ವಾಮಿಯೂ, ಆದ ಮಹಾದೇವನಿಗೆ ನಮಸ್ಕರಿಸೋಣ, ಇಲ್ಲದಿದ್ದರೆ ಅವನು ನಿಶ್ವಾಸದಿಂದಲೇ ನಮ್ಮಿಬ್ಬರನ್ನೂ ದಹಿಸಿಬಿಡುವನೆಂದು ಹರಿಯು ಹೇಳಿದನು.

೮೮. ಮಹಾಬಲಿಷ್ಠನಾದ ಪರಮೇಶ್ವರನು ಮಹಾಯೋಗದಿಂದ ಈ ವಿಷಯುವನ್ನು ತಿಳಿದು ಎದುರಿಗೆ ಬಂದನು. ಆದುದರಿಂದ ನಾನೂ ನೀನೂ ಇಬ್ಬರೂ ಹೋಗಿ ಅಗ್ನಿಯಂತೆ ಕಾಂತಿಯುಳ್ಳ ಅವನನ್ನು ಸ್ತೋತ್ರಮಾಡೋಣ ಎಂದನು.

೮೯. ಸೂತಮುನಿಯು ಹೇಳಿದನು :—ಅನಂತರ ಗರುಡಧ್ವಜನಾದ ಶ್ರೀ ಹರಿಯು ಬ್ರಹ್ಮನ ಸಂಗಡ ಕೂಡಿ ಅತೀತನಾಹಿತವರ್ತಮಾನಕಾಲಗಳಲ್ಲಿ ಪ್ರಖ್ಯಾತಗಳಾದ ನಾಮುಗಳಿಂದ ವಕ್ಷ್ಯಮಾಣರೀತಿಯಾಗಿ ಈಶ್ವರನನ್ನು ಸ್ತೋತ್ರಮಾಡಲು ಉಪಕ್ರಮಿಸಿದನು.

೯೦. ಅನಂತರ ಹರಿಯು ಭಗವಂತನೂ, ನಿಯಮವಂತನೂ, ಅಪರಿಮಿತವಾದ ತೇಜೋವಂತನೂ, ಕ್ಷೇತ್ರಾಧಿಪತಿಯೂ, ಜ್ಞಾನಿಯೂ, ಶೂಲಧರನೂ, ಆದ ನಿನಗೆ ನಮಸ್ಕಾರವೆಂದು ಈಶ್ವರನನ್ನು ಹೊಗಳಿದನು.

ಅಮೇಢ್ರಾಯೋರ್ಧ್ವಮೇಢ್ರಾಯ ನಮೋ ವೈಕುಂಠರೇತಸೇ ।
ನಮೋ ಜ್ಯೇಷ್ಠಾಯ ಶ್ರೇಷ್ಠಾಯ ಅಪೂರ್ವ ಪ್ರಥಮಾಯ ಚ ॥ ೯೧ ॥

ನಮೋ ಹವ್ಯಾಯ ಪೂಜ್ಯಾಯ ಸದ್ಯೋಜಾತಾಯ ವೈ ನಮಃ ।
ಗಹ್ವರಾಯ ಧನೇಶಾಯ ಹೈಮಚೀರಾಂಬರಾಯ ಚ ॥ ೯೨ ॥

ನಮಸ್ತೇ ಹ್ಯಸ್ಮದಾದೀನಾಂ ಭೂತಾನಾಂ ಪ್ರಭವಾಯ ಚ ।
ವೇದಕರ್ಮಾವದಾನಾನಾಂ ದ್ರವ್ಯಾಣಾಂ ಪ್ರಭವೇ ನಮಃ ॥ ೯೩ ॥

ನಮೋ ಯೋಗಸ್ಯ ಪ್ರಭವೇ ಸಾಂಖ್ಯಸ್ಯ ಪ್ರಭವೇ ನಮಃ ।
ನಮೋ ಧ್ರುವನಿಶೀಥಾನಾಮೃಷೀಣಾಂ ಪತಯೇ ನಮಃ ॥ ೯೪ ॥

ವಿದ್ಯುದಶನಿಮೇಘಾನಾಂ ಗರ್ಜಿತ ಪ್ರಭವೇ ನಮಃ ।
ಉದಧೀನಾಂ ಚ ಪ್ರಭವೇ ದ್ವೀಪಾನಾಂ ಪ್ರಭವೇ ನಮಃ ॥ ೯೫ ॥

ಅದ್ರೀಣಾಂ ಪ್ರಭವೇ ಚೈವ ವರ್ಷಾಣಾಂ ಪ್ರಭವೇ ನಮಃ ।
ನಮೋ ನದಾನಾಂ ಪ್ರಭವೇ ನದೀನಾಂ ಪ್ರಭವೇ ನಮಃ ॥ ೯೬ ॥

ನಮಶ್ಚೌಷಧಿ ಪ್ರಭವೇ ವೃಕ್ಷಾಣಾಂ ಪ್ರಭವೇ ನಮಃ ।
ಧರ್ಮಾಧ್ಯಕ್ಷಾಯ ಧರ್ಮಾಯ ಸ್ಥಿತೀನಾಂ ಪ್ರಭವೇ ನಮಃ ॥ ೯೭ ॥

---

೯೧-೯೩. ಲಿಂಗರಹಿತನೂ, ಊರ್ಧ್ವಲಿಂಗಿಯೂ, ವೈಕುಂಠ ರೇತಸ್ಸನೂ, ಜ್ಯೇಷ್ಠನೂ, ಶ್ರೇಷ್ಠನೂ, ಅಪೂರ್ವನೂ, ಆದಿಯೂ, ಹೋಮಾರ್ಹನೂ, ಪೂಜ್ಯನೂ ಸದ್ಯೋಜಾತನೂ, ಗಹ್ವರನೂ, ಧನೇಶನೂ, ಸುವರ್ಣವಸ್ತ್ರಧಾರಿಯೂ, ಅಸ್ಮಾದಾದಿ ಸಕಲಭೂತಗಳಿಗೆ ಒಡೆಯನೂ, ವೇದಕರ್ಮಪ್ರವರ್ತಕನೂ, ದ್ರವ್ಯಜನಕನೂ ಆದ ಈಶ್ವರನಿಗೆ ನಮಸ್ಕಾರವು.

೯೪-೯೫ ಮತ್ತು ಯೋಗಪ್ರವರ್ತಕನೂ, ಸಾಂಖ್ಯನಿಯಾಮಕನೂ ಶಾಶ್ವತನೂ, ಮಹಾತ್ಮರಾದ ಋಷಿಗಳಿಗೆ ಪತಿಯೂ, ಮೇಘ, ಮಿಂಚು, ಗುಡುಗು, ಗರ್ಜನ ಇವುಗಳಿಗೆ ಕಾರಣನೂ, ಮತ್ತು ಸಮುದ್ರದ್ವೀಪಗಳಿಗೆ ಕಾರಣನೂ ಆದ ಈಶ್ವರನಿಗೆ ನಮಸ್ಕಾರಗಳು.

೯೬-೯೭. ಪರ್ವತಗಳು, ವರ್ಷಗಳು, ನದೀನದಗಳು, ವೃಕ್ಷ ಔಷಧಿಗಳು, ಧರ್ಮಾಧರ್ಮಗಳು, ಸ್ಥಿತಿಗತಿಗಳು, ಇವುಗಳಿಗೆ ಕಾರಣನಾದ ಈಶ್ವರನಿಗೆ ನಮಸ್ಕಾರಗಳು.

ನಮೋ ರಸಾನಾಂ ಪ್ರಭವೇ ರತ್ನಾನಾಂ ಪ್ರಭವೇ ನಮಃ ।
ನಮಃ ಕ್ಷಣಾನಾಂ ಪ್ರಭವೇ ಕಾಲಾನಾಂ ಪ್ರಭವೇ ನಮಃ ॥ ೯೮ ॥

ನಿಮೇಷ ಪ್ರಭವೇ ಚೈವ ಕಾಷ್ಠಾನಾಂ ಪ್ರಭವೇ ನಮಃ ।
ಅಹೋರಾತ್ರಾರ್ಧಮಾಸಾನಾಂ ಮಾಸಾನಾಂ ಪ್ರಭವೇ ನಮಃ ॥ ೯೯ ॥

ನವ ಋತೂನಾಂ ಪ್ರಭವೇ ಸಂಖ್ಯಾಯಾಃ ಪ್ರಭವೇ ನಮಃ ।
ಪ್ರಭವೇ ಚ ಪರಾರ್ಧಸ್ಯ ಪರಸ್ಯ ಪ್ರಭವೇ ನಮಃ ॥ ೧೦೦ ॥

ನಮಃ ಪುರಾಣ ಪ್ರಭವೇ ಯುಗಸ್ಯ ಪ್ರಭವೇ ನಮಃ ।
ಚತುರ್ವಿಧಸ್ಯ ಸರ್ಗಸ್ಯ ಪ್ರಭವೇಽನಂತ ಚಕ್ಷುಷೇ ॥ ೧೦೧ ॥

ಕಲ್ಪೋದಯೇ ನಿಬದ್ಧಾನಾಂ ವಾರ್ತಾನಾಂ ಪ್ರಭವೇ ನಮಃ ।
ನಮೋ ವಿಶ್ವಸ್ಯ ಪ್ರಭವೇ ಬ್ರಹ್ಮಾದಿ ಪ್ರಭವೇ ನಮಃ ॥ ೧೦೨ ॥

ವಿದ್ಯಾನಾಂ ಪ್ರಭವೇ ಚೈವ ವಿದ್ಯಾನಾಂ ಪತಯೇ ನಮಃ ।
ನಮೋ ವ್ರತಾನಾಂ ಪತಯೇ ಮಂತ್ರಾಣಾಂ ಪತಯೇ ನಮಃ ॥ ೧೦೩ ॥

ಪಿತ್ರ್ಯಾಣಾಂ ಪತಯೇ ಚೈವ ಪಶೂನಾಂ ಪತಯೇ ನಮಃ ।
ವಾಗ್ವೃಷಾಯ ನಮಸ್ತುಭ್ಯಂ ಪುರಾಣ ವೃಷಭಾಯ ಚ ॥ ೧೦೪ ॥

ಸುಚಾರು ಚಾರುಕೇಶಾಯ ಊರ್ಧ್ವಚಕ್ಷುಃ ಶಿರಾಯ ಚ ।
ನಮಃ ಪಶೂನಾಂ ಪತಯೇ ಗೋವೃಷೇಂದ್ರಧ್ವಜಾಯ ಚ ॥ ೧೦೫ ॥

---

೯೮-೧೦೦. ರಸಗಳು, ರತ್ನಗಳು, ಕ್ಷಣ, ಲವ, ಕಾಲ, ನಿಮಿಷ, ಕಾಷ್ಠ, ಅಹೋರಾತ್ರಿಗಳು, ಅರ್ಧಮಾಸ, (ಪಕ್ಷಮಾಸ) ಋತು ಅಯನ, ವರ್ಷಸಂಖ್ಯಾ ಪರಾರ್ಧಪರ, ಇವುಗಳಿಗೆ ಕಾರಣನಾದ ಪರಮೇಶ್ವರನಿಗೆ ಅನಂತ ವಂದನೆಗಳು.

೧೦೧-೧೦೫. ಪುರಾಣಗಳು, ಯುಗಗಳು, ನಾಲ್ಕುವಿಧ ಸರ್ಗಗಳು, ಅನಂತ, ಚಕ್ಷುಸ್ಸು, ವ್ಯಾಪಾರ, ವಿದ್ಯಾ, ವ್ರತನಿಯಮ, ಮಂತ್ರ, ತಂತ್ರ, ಜಗತ್ತು, ಬ್ರಹ್ಮ, ಪಿತೃ, ಪಶು, ವಾಕ್ಕು, ವೃಷಭ, ಪುರಾಣ, ಪಶು, ಇವುಗಳಿಗೆ ಕಾರಣನೂ, ಪುರಾಣ ಪುರುಷನೂ, ಸುಂದರವಾದ ಕೇಶಪಾಶವುಳ್ಳವನೂ, ವೃಷಭಧ್ವಜನೂ, ಪಶುಪತಿಯೂ ಊರ್ಧ್ವನೇತ್ರನೂ, ಊರ್ಧ್ವಶಿರಸ್ಕನೂ, ಆದ ಪರಮೇಶ್ವರನಿಗೆ ಅನಂತಾನಂತ ಪ್ರಣಾಮಗಳು.

ಪ್ರಜಾಪತೀನಾಂ ಪತಯೇ ಸಿದ್ಧಾನಾಂ ಪತಯೇ ನಮಃ ।
ಗರುಡೋರಗ ಸರ್ಪಾಣಾಂ ಪಕ್ಷಿಣಾಂ ಪತಯೇ ನಮಃ ॥ ೧೦೬ ॥

ಗೋಕರ್ಣಾಯ ಚ ಗೋಷ್ಠಾಯ ಶಂಕುಕರ್ಣಾಯ ವೈ ನಮಃ ।
ವಾರಾಹಾಯಾ ಪ್ರಮೇಯಾಯ ರಕ್ಷೋಧಿಪತಯೇ ನಮಃ ॥ ೧೦೭ ॥

ನಮೋಽಪ್ಸರಸಾಂತ್ಯೇ ಪತಯೇ ಗಣಾನಾಂ ಹ್ರೀಮಯೋ ನಮಃ ।
ಅಂಭಸಾಂ ಪತಯೇ ಚೈವ ತೇಜಸಾಂ ಪತಯೇ ನಮಃ ॥ ೧೦೮ ॥

ನಮೋಽಸ್ತು ಲಕ್ಷ್ಮೀಪತಯೇ ಶ್ರೀಮತೇ ಹ್ರೀಮತೇ ನಮಃ ।
ಬಲಾಬಲ ಸಮೂಹಾಯ ಹ್ಯಕ್ಷೋಭ್ಯಕ್ಷೋಭಣಾಯ ಚ ॥ ೧೦೯ ॥

ದೀರ್ಘಶೃಂಗೈಕಶೃಂಗಾಯ ವೃಷಭಾಯ ಕಕುದ್ಮಿನೇ ।
ನಮಸ್ಥೈರ್ಯಾಯ ವಪುಷೇ ತೇಜಸೇ ಸುಪ್ರಭಾಯ ಚ ॥ ೧೧೦ ॥

ಭೂತಾಯ ಚ ಭವಿಷ್ಯಾಯ ವರ್ತಮಾನಾಯ ವೈ ನಮಃ ।
ಸುವರ್ಚಸೇಽಥ ವೀರಾಯ ಶೂರಾಯ ಹ್ಯತಿಗಾಯ ಚ ॥ ೧೧೧ ॥

ವರದಾಯ ವರೇಣ್ಯಾಯ ನಮಃ ಸರ್ವಗತಾಯ ಚ ।
ನಮೋ ಭೂತಾಯ ಭವ್ಯಾಯ ಭವಾಯ ಮಹತೇ ತಥಾ ॥ ೧೧೨ ॥

---

೧೦೬-೧೦೭ ಪ್ರಜಾಪತಿಗಳು ಸಿದ್ಧರು, ಗರುಡ, ಸರ್ಪಗಳು, ಪಕ್ಷಿಗಳು, ರಾಕ್ಷಸರು, ಇವರಿಗೆ ಅಧಿಪತಿಯೂ, ಗೋಕರ್ಣನೂ, ಶಂಕುಕರ್ಣನೂ, ಗೋಕುಲ ರೂಪಿಯೂ, ವರಾಹರೂಪನೂ, ಅಪ್ರಮೇಯನೂ, ರಾಕ್ಷಸಾಧಿಪತಿಯೂ, ಆದ ಈಶ್ವರ ನಿಗೆ ನಮಸ್ಕಾರಗಳು.

೧೦೮-೧೧೦. ಅಪ್ಸರೆಸಿಯರು, ಗಣಾಧಿಪತಿಗಳು, ಜಲ, ತೇಜಸ್ಸು, ಐಶ್ವರ್ಯ, ಸಂಪತ್ತು, ಬಲಾಬಲ, ಇವುಗಳಿಗೆ ಪತಿಯೂ, ಭಯಂಕರರಿಗೆ ಭಯಜನಕನೂ, ದೀರ್ಘ ಶೃಂಗನೂ, ಏಕಶೃಂಗನೂ, ಸ್ಥೈರ್ಯವಂತನೂ, ಕಾಂತಿಯುತನೂ, ಆದ ಪರಮ ಪುರುಷನಿಗೆ ಅನಂತ ಪ್ರಣಾಮಗಳು.

೧೧೧-೧೧೫. ಭೂತಭವಿಷ್ಯದ್ವರ್ತಮಾನಕಾಲಗಳಿಗೆ ಪತಿಯೂ, ತೇಜಸ್ವಿಯೂ, ವೀರನೂ, ಭವನೂ, ಮಹಾತ್ಮನೂ, ವರದನೂ, ವರೇಣ್ಯನೂ, ಸರ್ವಗತನೂ, ಭೂತನೂ, ಭವ್ಯನೂ ಮಹತ್ತರನೂ, ಉತ್ಪನ್ನನೂ, ಯೋಗಿಗಳಿಗೆ

ಜನಾಯ ಚ ನಮಸ್ತುಭ್ಯಂ ತಪಸೇ ವರದಾಯ ಚ ।
ನಮೋ ವಂದ್ಯಾಯ ಮೋಕ್ಷಾಯ ಜನಾಯ ನರಕಾಯ ಚ ॥ ೧೧೩ ॥

ಭವಾಯ ಭಜಮಾನಾಯ ಇಷ್ಟಾಯ ಯಾಜಕಾಯ ಚ ।
ಅಭ್ಯುದೀರ್ಣಾಯ ದೀಪ್ತಾಯ ತತ್ವಾಯ ನಿರ್ಗುಣಾಯ ಚ ॥ ೧೧೪ ॥

ನಮಃ ಪಾಶಾಯ ಹಸ್ತಾಯ ನಮಃ ಸ್ವಾಭರಣಾಯ ಚ ।
ಹುತಾಯ ಅಪಹುತಾಯ ಪ್ರಹುತಪ್ರಶಿತಾಯ ಚ ॥ ೧೧೫ ॥

ನಮೋಽಸ್ತ್ವಿಷ್ಟಾಯ ಮೂರ್ತಾಯ ಹ್ಯಗ್ನಿಷ್ಟೋಮರ್ತ್ವಿಜಾಯ ಚ ।
ನಮ ಋತಾಯ ಸತ್ಯಾಯ ಭೂತಾಧಿಪತಯೇ ನಮಃ ॥ ೧೧೬ ॥

ಸದಸ್ಯಾಯ ನಮಶ್ಚೈವ ದಕ್ಷಿಣಾವಭೃಥಾಯ ಚ ।
ಅಹಿಂಸಾಯಾಥ ಲೋಕಾನಾಂ ಪಶುಮಂತ್ರೌಷಧಾಯ ಚ ॥ ೧೧೭ ॥

ನಮಸ್ತುಷ್ಟಿಪ್ರದಾನಾಯ ತ್ರ್ಯಂಬಕಾಯ ಸುಗಂಧಿನೇ ।
ನಮೋಽಸ್ತ್ವಿಂದ್ರಿಯಪತಯೇ ಪರಿಹಾರಾಯ ಸ್ರಗ್ವಿಣೇ ॥ ೧೧೮ ॥

ವಿಶ್ವಾಯ ವಿಶ್ವರೂಪಾಯ ವಿಶ್ವತೋಽಕ್ಷಿಮುಖಾಯ ಚ ।
ಸರ್ವತಃ ಪಾಣಿಪಾದಾಯ ರುದ್ರಾಯಾಪ್ರಮಿತಾಯ ಚ ॥ ೧೧೯ ॥

ನಮೋ ಹವ್ಯಾಯ ಕವ್ಯಾಯ ಹವ್ಯಕವ್ಯಾಯ ವೈ ನಮಃ ।
ನಮಃ ಸಿದ್ಧಾಯ ಮೇಧ್ಯಾಯ ಚೇಷ್ಟಾಯ ತ್ವವ್ಯಯಾಯ ಚ ॥ ೧೨೦ ॥

---

ವರಪ್ರದನೂ, ವಂದ್ಯನೂ, ನರಕಮೋಕ್ಷದಾತನೂ, ಭವರೂಪನೂ, ಜಯಜನಕನೂ, ಇಷ್ಟನೂ, ಹೋತೃವೂ, ಉದೀರ್ಣನೂ, ದೀಪ್ತನೂ, ತತ್ವರೂಪಿಯೂ, ನಿರ್ಗುಣನೂ ಪಾಶಹಸ್ತನೂ, ಆಭರಣವುಳ್ಳವನೂ, ಆಹುತ, ಹುತ, ಪ್ರಹುತ, ಪ್ರಶಿತಾದಿಶಬ್ದ ವಾಚ್ಯನೂ ಆದ ಈಶ್ವರನಿಗೆ ಅನಂತವಂದನೆಗಳು.

೧೧೬-೧೨೦. ಇಷ್ಟನೂ, ಮೂರ್ತನೂ, ಅಗ್ನಿಷ್ಟೋಮರೂಪನೂ, ಪುರೋಹಿತನೂ, ಸತ್ಯವಂತನೂ, ಭಿಕ್ಷುಕನೂ, ಭೂತಪತಿಯೂ, ಸದಸ್ಯನೂ, ದಕ್ಷಿಣಾವಭೃತಸ್ವರೂಪನೂ, ಅಹಿಂಸಕನೂ, ಪಶು, ಮಂತ್ರ, ಔಷಧಿ, ಲೋಕ ಇವುಗಳಿಗೆ ಒಡೆಯನೂ, ಇಷ್ಟಪ್ರದನೂ, ಮುಕ್ಕಣ್ಣನೂ, ಸುಗಂಧಿಯೂ, ವಿಶ್ವರೂಪನೂ, ಸರ್ವತ್ರಾಕ್ಷಿಮುಖಗಳುಳ್ಳವನೂ, ಸರ್ವತ್ರಪಾಣಿಪಾದಗಳುಳ್ಳವನೂ, ಭಯಪ್ರದನೂ, ಜ್ಞಾನಿಯೂ, ಹವ್ಯಕವ್ಯಾದಿರೂಪನೂ, ಸಿದ್ಧನೂ, ವೇದ್ಯನೂ, ಚೇಷ್ಟಾಪ್ರದನೂ, ಅವ್ಯಯನೂ ಆದ ಈಶ್ವರನಿಗೆ ನಮಸ್ಕಾರಗಳು.

ಸುವೀರಾಯ ಸುಘೋರಾಯ ಹ್ಯಕ್ಷೋಭ್ಯಕ್ಷೋಭಣಾಯ ಚ ।
ಸುಮೇಧಸೇ ಸುಪ್ರಜಾಯ ದೀಪ್ತಾಯ ಭಾಸ್ಕರಾಯ ಚ ॥ ೧೨೧ ॥

ನಮೋ ನಮಃ ಸುಪರ್ಣಾಯ ತಪನೀಯನಿಭಾಯ ಚ ।
ವಿರೂಪಾಕ್ಷಾಯ ತ್ರ್ಯಕ್ಷಾಯ ಪಿಂಗಳಾಯ ಮಹೌಜಸೇ ॥ ೧೨೨ ॥

ದೃಷ್ಟಿಘ್ನಾಯ ನಮಶ್ಚೈವ ನಮಃ ಸೌಮ್ಯೇಕ್ಷಣಾಯ ಚ ।
ನಮೋ ಧೂಮ್ರಾಯ ಶ್ವೇತಾಯ ಕೃಷ್ಣಾಯ ಲೋಹಿತಾಯ ಚ ॥ ೧೨೩ ॥

ಪಿಶಿತಾಯ ಪಿಶಂಗಾಯ ಪೀತಾಯ ಚ ನಿಷಂಗಿಣೇ ।
ನಮಸ್ತೇ ಸವಿಶೇಷಾಯ ನಿರ್ವಿಶೇಷಾಯ ವೈ ನಮಃ ॥ ೧೨೪ ॥

ನಮೋ ವೈ ಪದ್ಮವರ್ಣಾಯ ಮೃತ್ಯುಘ್ನಾಯ ಚ ಮೃತ್ಯವೇ ।
ನಮಃ ಶ್ಯಾಮಾಯ ಗೌರಾಯ ಕದ್ರವೇ ರೋಹಿತಾಯ ಚ ॥ ೧೨೫ ॥

ನಮಃ ಕಾಂತಾಯ ಸಂಧ್ಯಾಭ್ರವರ್ಣಾಯ ಬಹುರೂಪಿಣೇ ।
ನಮಃ ಕಪಾಲಹಸ್ತಾಯ ದಿಗ್ವಸ್ತ್ರಾಯ ಕಪರ್ದಿನೇ ॥ ೧೨೬ ॥

ಅಪ್ರಮೇಯಾಯ ಶರ್ವಾಯ ಹ್ಯವಧ್ಯಾಯ ವರಾಯ ಚ ।
ಪುರಸ್ತಾತ್ ಪೃಷ್ಠತಶ್ಚೈವ ಬಿಭ್ರಾಣಾಯ ಕೃಶಾನವೇ ॥ ೧೨೭ ॥

---

೧೨೧-೧೨೫. ಅತ್ಯಂತವೀರನೂ, ಘೋರರೂಪಿಯೂ, ಮೇಧಾವಂತನೂ, ಪ್ರಜಾವಂತನೂ, ಪ್ರಕಾಶಕನೂ, ಕಾಂತಿಪ್ರದನೂ, ಸೌಮ್ಯನೇತ್ರವುಳ್ಳವನೂ, ಸಪರ್ಣನೂ, ವಿರೂಪಾಕ್ಷನೂ, ಮೂರುನೇತ್ರವುಳ್ಳವನೂ, ಪಿಂಗಳಾಂಗನೂ, ಕಾಂತಿ ಪ್ರದನೂ, ದೃಷ್ಟಿನಾಶಕನೂ, ಸೌಮ್ಯನೇತ್ರನೂ, ಧೂಮ್ರ, ಶ್ವೇತ, ಕೃಷ್ಣ, ಲೋಹಿತ, ಪೀತ ಈ ರೂಪವಂತನೂ, ಮಾಂಸರೂಪಿಯೂ. ಬತ್ತಳಿಕೆಯುಳ್ಳವನೂ, ವಿಲಕ್ಷಣನೂ, ವಿಶೇಷದೋಷದೂರನೂ, ಪದ್ಮವರ್ಣನೂ, ಮೃತ್ಯುಹರನೂ, ಮೃತ್ಯುಂಜಯನೂ, ಶ್ವೇತಾದಿರೂಪಿಯೂ ಆದ ಪರಮೇಶ್ವರನಿಗೆ ಅನಂತಾನಂತ ಪ್ರಣಾಮಗಳು.

೧೨೬-೧೩೦. ಮನೋಹರನೂ, ಸಂಧ್ಯಾಮೇಘವರ್ಣನೂ, ಬಹುರೂಪಿಯೂ, ಕಪಾಲಹಸ್ತನೂ, ದಿಗಂಬರನೂ, ಜಟಾಧಾರಿಯೂ, ಅಪ್ರಮೇಯನೂ, ಸುಖಿ ರೂಪಿಯೂ, ದೋಷಶೂನ್ಯನೂ, ಉತ್ತಮನೂ, ಸರ್ವರಕ್ಷಕನೂ, ಅಗ್ನಿರೂಪನೂ,

**ದುರ್ಗಾಯ ಮಹತೇ ಚೈವ ರೋಧಾಯ ಕಪಿಲಾಯ ಚ ।**
**ಅರ್ಕಪ್ರಭಶರೀರಾಯ ಬಲಿನೇ ರಂಹಸಾಯ ಚ ॥ ೧೨೮ ॥**

**ಪಿನಾಕಿನೇ ಪ್ರಸಿದ್ಧಾಯ ಸ್ಫೀತಾಯ ಪ್ರಸೃತಾಯ ಚ ।**
**ಸುಮೇಧಸೇಽಕ್ಷಮಾಲಾಯ ದಿಗ್ವಾಸಾಯ ಶಿಖಂಡಿನೇ ॥ ೧೨೯ ॥**

**ಚಿತ್ರಾಯ ಚಿತ್ರವರ್ಣಾಯ ವಿಚಿತ್ರಾಯ ಧರಾಯ ಚ ।**
**ಚೇಕಿತಾನಾಯ ತುಷ್ಟಾಯ ನಮಸ್ತ್ವನಿಹಿತಾಯ ಚ ॥ ೧೩೦ ॥**

**ನಮಃ ಕ್ಷಾಂತಾಯ ಶಾಂತಾಯ ವಜ್ರಸಂಹನನಾಯ ಚ ।**
**ರಕ್ಷೋಘ್ನಾಯ ಮಖಘ್ನಾಯ ಶಿತಿಕಂಠೋರ್ಧ್ವರೇತಸೇ ॥ ೧೩೧ ॥**

**ಅರಿಹಾಯ ಕೃತಾಂತಾಯ ತಿಗ್ಮಾಯುಧ ಧರಾಯ ಚ ।**
**ಸಮೋದಾಯ ಪ್ರಮೋದಾಯ ಇರಿಣಾಯೈವ ತೇ ನಮಃ ॥ ೧೩೨ ॥**

**ಪ್ರಣವ ಪ್ರಣವೇಶಾಯ ಭಕ್ತಾನಾಂ ಶರ್ಮದಾಯ ಚ ।**
**ಮೃಗವ್ಯಾಧಾಯ ದಕ್ಷಾಯ ದಕ್ಷಯಜ್ಞಹರಾಯ ಚ ॥ ೧೩೩ ॥**

---

ಕಷ್ಟಸಾಧ್ಯನೂ, ಮಹತ್ತರನೂ, ವಿಘ್ನಕಾರಿಯೂ, ಕಪಿಲರೂಪಿಯೂ, ಸೂರ್ಯ ಸಮಾನಕಾಂತಿವಂತನೂ, ಬಲಿಷ್ಠನೂ, ವೇಗವಂತನೂ, ಪಿನಾಕಿಯೂ, ಪ್ರಖ್ಯಾತನೂ, ಸ್ಥಿರಚಿತ್ತನೂ, ಜ್ಞಾನಿಯೂ, ಅಕ್ಷಮಾಲೆಯುಳ್ಳವನೂ, ದಿಗಂಬರನೂ, ಶಿಖಂಡಿಯೂ, ವಿಚಿತ್ರರೂಪಿಯೂ, ಭಯಂಕರರೂಪಿಯೂ, ಸಂತುಷ್ಟನೂ, ಅಜೇಯನೂ ಆದ ಪರಮೇಶ್ವರನಿಗೆ ನಮಸ್ಕಾರಗಳು.

೧೩೧-೧೩೨. ಶಾಂತನೂ, ಕ್ಷಾಂತಿಯುಕ್ತನೂ, ವಜ್ರಕಾಯನೂ, ರಾಕ್ಷಸಾಂತಕನೂ, ಯಾಗಧ್ವಂಸಕನೂ, ಶಿತಿಕಂಠನೂ, ಊರ್ಧ್ವರೇತಸ್ಕನೂ, ಶತ್ರುನಾಶಕನೂ, ಯಮಸ್ವರೂಪಿಯೂ, ತೀಕ್ಷ್ಣಾಯುಧಧಾರಿಯೂ, ಸುಖರೂಪಿಯೂ, ಪ್ರಮೋದ ಜನಕನೂ, ಶೂನ್ಯನೂ ಆದ ಪರಮೇಶ್ವರನಿಗೆ ಅನಂತವಂದನೆಗಳು.

೧೩೩-೧೩೪. ಪ್ರಣವಗಳಿಗೆ ಓಂಕಾರರೂಪನೂ, ಭಕ್ತರಿಗೆ ಸುಖದಾಯಕನೂ, ಮೃಗಗಳಿಗೆ ವ್ಯಾಧನಂತೆ ಇರುವವನೂ, ಸಮರ್ಥನೂ, ದಕ್ಷಯಜ್ಞಧ್ವಂಸಕನೂ,

**ಸರ್ವಭೂತಾಯ ಭೂತಾಯ ಸರ್ವೇಶಾತಿಶಯಾಯ ಚ ।**
**ಪುರಭೇತ್ರೇ ಚ ಶಾಂತಾಯ ಸುಗಂಧಾಯ ವರೇಶವೇ ॥ ೧೩೪ ॥**

**ಪುಷ್ಪವಂತಸ್ವರೂಪಾಯ ಭಗನೇತ್ರಾಂತಕಾಯ ಚ ।**
**ಕಣಾದಾಯ ವರಿಷ್ಠಾಯ ಕಾಮಾಂಗದಹನಾಯ ಚ ॥ ೧೩೫ ॥**

**ರವೇಃ ಕರಾಲಚಕ್ರಾಯ ನಾಗೇಂದ್ರದಮನಾಯ ಚ ।**
**ದೈತ್ಯಾನಾಮಂತಕಾಯಾಥೋ ದಿವ್ಯಾಕ್ರಂದಕರಾಯ ಚ ॥ ೧೩೬ ॥**

**ಶ್ಮಶಾನರತಿನಿತ್ಯಾಯ ನಮಸ್ತ್ರ್ಯಂಬಕಧಾರಿಣೇ ।**
**ನಮಸ್ತೇ ಪ್ರಾಣಪಾಲಾಯ ಧವಮಾಲಾಧರಾಯ ಚ ॥ ೧೩೭ ॥**

**ಪ್ರಹೀಣಶೋಕೈರ್ವಿವಿಧೈರ್ಭೂತೈಃ ಪರಿಷ್ಟುತಾಯ ಚ ।**
**ನರನಾರೀಶರೀರಾಯ ದೇವ್ಯಾಃ ಪ್ರಿಯಕರಾಯ ಚ ॥ ೧೩೮ ॥**

**ಜಟಿನೇ ದಂಡಿನೇ ತುಭ್ಯಂ ವ್ಯಾಲಯಜ್ಞೋಪವೀತಿನೇ ।**
**ನಮೋಸ್ತು ನೃತ್ಯಶೀಲಾಯ ವಾದ್ಯನೃತ್ಯಪ್ರಿಯಾಯ ಚ ॥ ೧೩೯ ॥**

---

ಸರ್ವಭೂತಗಳಿಗೂ ಭಯಪ್ರದನೂ, ಸರ್ವೇಶರಿಗೆ ಒಡೆಯನೂ, ಪುರಾಣಪುರುಷನೂ, ತ್ರಿಪುರಾಂತಕನೂ, ಶಾಂತನೂ, ಸುಗಂಧಿರೂಪವುಳ್ಳವನೂ, ವರೇಣ್ಯನೂ, ಸೂರ್ಯ ಚಂದ್ರಸ್ವರೂಪನೂ, ಭಗನೇತ್ರನಾಶಕನೂ, ಕಣಾದನೂ, ಶ್ರೇಷ್ಠನೂ, ಮನ್ಮಥಾ ರಿಯೂ ಆದ ಪರಮೇಶ್ವರನಿಗೆ ನಮಸ್ಕಾರಗಳು.

೧೩೬-೧೩೭. ಸೂರ್ಯನಿಗೆ ಭಯಂಕರವಾದ ಚಕ್ರರೂಪಿಯೂ, ಸರ್ಪರಾಜ ಗರ್ವಭಂಜಕನೂ, ದೈತ್ಯಾಂತಕನೂ, ಆಕಾಶದಲ್ಲಿ ರೋದನಮಾಡುವವನೂ, ಶ್ಮಶಾನ ರತನೂ, ತ್ರಿನೇತ್ರನೂ, ಪ್ರಾಣರಕ್ಷಕನೂ, ಕಗ್ಗಲೀಮಾಲೆಧಾರಿಯೂ, ಆದ ಈಶ್ವರನಿಗೆ ನಮಸ್ಕಾರವು.

೧೩೮-೧೪೦. ಶೋಕರಹಿತಗಳಾದ ನಾನಾಭೂತಗಳಿಂದ ಹೊಗಳಲ್ಪಡುವ ವನೂ, ಸ್ತ್ರೀಪುರುಷರೂಪಿಯೂ, ಪಾರ್ವತೀಪ್ರಿಯಕರನೂ, ಜಟಾಧಾರಿಯೂ, ದಂಡಧರನೂ, ಸರ್ಪಗಳೇ ಯಜ್ಞೋಪವೀತವಾಗಿಯುಳ್ಳವನೂ, ನೃತ್ಯಶೀಲನೂ, ನೃತ್ಯಗೀತಪ್ರಿಯನೂ, ಕೋಪಶೀಲನೂ. ಶಾಂತಶೀಲನೂ, ಮನೋಹರವಾಗಿ ಗಾನ

ಮನ್ಯವೇ ಶೀತಶೀಲಾಯ ಸುಗೀತಿಗಾಯತೇ ನಮಃ ।
ಕಟಂಕರಾಯ ಭೀಮಾಯ ಚೋಗ್ರರೂಪಧರಾಯ ಚ ॥ ೧೪೦ ॥

ವಿಭೀಷಣಾಯ ಭೀಮಾಯ ಭಗಪ್ರಮಥನಾಯ ಚ ।
ಸಿದ್ಧಸಂಘಾತಗೀತಾಯ ಮಹಾಭಾಗಾಯ ವೈ ನಮಃ ॥ ೧೪೧ ॥

ನಮೋ ಮುಕ್ತಾಟ್ಟಹಾಸಾಯ ಕ್ಷ್ವೇಡಿತಾಸ್ಫೋಟಿತಾಯ ಚ ।
ನದತೇ ಕೂರ್ದತೇ ಚೈವ ನಮಃ ಪ್ರಮುದಿತಾಯ ಚ ॥ ೧೪೨ ॥

ನಮೋಽದ್ಭುತಾಯ ಸ್ವಪತೇ ಧಾವತೇ ಪ್ರಸ್ಥಿತಾಯ ಚ ।
ಧ್ಯಾಯತೇ ಜೃಂಭತೇ ಚೈವ ತುದತೇ ದ್ರವತೇ ನಮಃ ॥ ೧೪೩ ॥

ಚಲತೇ ಕ್ರೀಡತೇ ಚೈವ ಲಂಬೋಧರಶರೀರಿಣೇ ।
ನಮಃ ಕೃತಾಯ ಕಂಪಾಯ ಮುಂಡಾಯ ವಿಕರಾಯ ಚ ॥ ೧೪೪ ॥

ನಮಃ ಉನ್ಮತ್ತವೇಷಾಯ ಕಿಂಕಿಣೀಕಾಯ ವೈ ನಮಃ ।
ನಮೋ ವಿಕೃತವೇಷಾಯ ಕ್ರೂರೋಗ್ರಾಮರ್ಷಣಾಯ ಚ ॥ ೧೪೫ ॥

---

ಮಾಡುವವನೂ, ಭಯಂಕರನೂ, ಉಗ್ರರೂಪಿಯೂ, ಅದ್ರಿರೂಪವುಳ್ಳವನೂ ಆದ ಈಶ್ವರನಿಗೆ ನಮಸ್ಕಾರಗಳು.

೧೪೧-೧೪೩. ಅತ್ಯಂತಭಯಪ್ರದನೂ, ಭಯಂಕರರೂಪಿಯೂ, ಅಜ್ಞಾನ ನಾಶಕನೂ, ಸಿದ್ಧರ ಸಂಘದಿಂದ ಹೊಗಳಲ್ಪಡುವವನೂ, ಮಹಾಭಾಗ್ಯವಂತನೂ, ಅಟ್ಟ ಹಾಸಿಯೂ, ಘರ್ಜನತಾಡನವುಳ್ಳವನೂ, ಕೂಗುವವನೂ, ಅರಚುವವನೂ, ಸಂತುಷ್ಟನೂ, ಅದ್ಭುತಾಕಾರನೂ, ನಿದ್ರಿಸುವವನೂ, ಓಡುವವನೂ, ಹೊರಟಿರುವ ವನೂ, ಧ್ಯಾತನೂ, ಆಕಳಿಸುವವನೂ, ಪ್ರೇರಕನೂ, ಹರಿಯುವವನೂ ಆದ ಪರಮೇಶ್ವರನಿಗೆ ನಮಸ್ಕಾರವು.

೧೪೪-೧೪೫. ಮತ್ತು ಚಲಿಸುವವನೂ, ಕ್ರೀಡಿಸುವವನೂ, ನೇತಾಡುವ ಶರೀರವುಳ್ಳವನೂ, ಕರ್ಮಕಾರಿಯೂ, ಕಂಪಿಸುವವನೂ, ಮುಂಡನೂ, ಉನ್ಮತ್ತ ವೇಷಿಯೂ, ಗೆಜ್ಜೆಗಳಿಂದಲಂಕೃತನೂ, ವಿಕೃತವೇಷಿಯೂ, ಕ್ರೂರನೂ, ಉಗ್ರನೂ, ಕೋಪಿಷ್ಟನೂ ಆದ ಈಶ್ವರನಿಗೆ ವಂದನೆಗಳು.

**ಅಪ್ರಮೇಯಾಯ ದೀಪ್ತಾಯ ದೀಪ್ತಯೇ ನಿರ್ಗುಣಾಯ ಚ ।**
**ನಮಃ ಪ್ರಿಯಾಯ ವಾದಾಯ ಮುದ್ರಾಮಣಿ ಧರಾಯ ಚ ॥ ೧೪೬ ॥**

**ನಮಸ್ತೋಕಾಯ ತನವೇ ಗುಣೈರಪ್ರತಿಮಾಯ ಚ ।**
**ನಮೋ ಗಣಾಯ ಗುಹ್ಯಾಯ ಅಗಮ್ಯಾಗಮನಾಯ ಚ ॥ ೧೪೭ ॥**

**ಲೋಕಧಾತ್ರೀ ತ್ವಿಯಂ ಭೂಮಿಃ ಪಾದೌ ಸಜ್ಜನಸೇವಿತೌ ।**
**ಸರ್ವೇಷಾಂ ಸಿದ್ಧಯೋಗಾನಾಮಧಿಷ್ಠಾನಂ ತವೋದರಂ ॥ ೧೪೮ ॥**

**ಮಧ್ಯೇಂತರಿಕ್ಷಂ ವಿಸ್ತೀರ್ಣಂ ತಾರಾಗಣವಿಭೂಷಿತಂ ।**
**ತಾರಾಪಥ ಇವಾಭಾತಿ ಶ್ರೀಮಾನ್ ಹಾರಸ್ತವೋರಸಿ ॥ ೧೪೯ ॥**

**ದಿಶೋ ದಶಭುಜಾಸ್ತೇ ವೈ ಕೇಯೂರಾಂಗದಭೂಷಿತಾಃ ।**
**ವಿಸ್ತೀರ್ಣಪರಿಣಾಹಶ್ಚ ನೀಲಾಂಬುದ ಚಯೋಪಮಃ ॥ ೧೫೦ ॥**

**ಕಂಠಸ್ತೇ ಶೋಭತೇ ಶ್ರೀಮಾನ್ ಹೇಮಸೂತ್ರ ವಿಭೂಷಿತಃ ।**
**ದಂಷ್ಟ್ರಾಕರಾಲದುರ್ಧರ್ಷಮನೌಪಮ್ಯಂ ಮುಖಂ ತವ ॥ ೧೫೧ ॥**

---

೧೪೬-೧೪೭. ಅಪ್ರಮೇಯನೂ, ದೀಪ್ತನೂ, ಪ್ರಕಾಶಕನೂ, ನಿರ್ಗುಣನೂ, ಪ್ರಿಯನೂ, ವಾದಶೀಲನೂ, ಮುದ್ರಾರತ್ನಧಾರಿಯೂ, ಸೂಕ್ಷ್ಮಶರೀರಿಯೂ, ಗುಣಗಳಿಂದ ಅಸದೃಶನೂ, ಗುಣವಂತನೂ, ರಹಸ್ಯನೂ, ದುರ್ಲಭವಾದ ವಸ್ತುಗಳನ್ನು ಪಡೆಯುವವನೂ ಆದ ಈಶ್ವರನಿಗೆ ನಮಸ್ಕಾರಗಳು.

೧೪೮-೧೫೦. ಎಲೈ ಪರಮೇಶ್ವರನೇ, ಈ ಲೋಕಗಳೆಲ್ಲವನ್ನೂ ಧರಿಸಿರುವ ಈ ಭೂಮಿಯೇ ಸಜ್ಜನವಂದಿತವಾದ ನಿನ್ನ ಎರಡುಪಾದಗಳಾಗಿಯೂ, ನಿನ್ನ ಉದರವು ಸಮಸ್ತರಾದ ಸಿದ್ಧರು ಮತ್ತು ಯೋಗಿಗಳು ಇವರಿಗೆ ಆಶ್ರಯವಾಗಿಯೂ ಇರುತ್ತವೆ. ನಕ್ಷತ್ರಗಳಿಂದಲಂಕೃತವೂ, ವಿಸ್ತೀರ್ಣವೂ ಆದ ಅಂತರಿಕ್ಷವೇ ಕಾಂತಿಯುತವಾದ ನಿನ್ನ ಎದೆಯಲ್ಲಿ ಹಾರದಂತೆ ಪ್ರಕಾಶಿಸುತ್ತದೆ. ಮತ್ತು ದಶದಿಕ್ಕುಗಳೂ ಕೂಡ ಕೇಯೂರಕಂಕಣಾದಿಗಳಿಂದಲಂಕೃತವೂ, ದುಂಡಗೂ, ದೀರ್ಘವೂ, ನೀಲಮೇಘದಂತೆ ಪ್ರಕಾಶಕವೂ ಆದ ನಿನ್ನ ಭುಜಗಳಾಗಿಯೂ ಇರುತ್ತವೆ.

೧೫೧. ಐಶ್ವರ್ಯಪ್ರದವೂ, ಕಾಂತಿಯುತವೂ ಆದ ನಿನ್ನ ಈ ಕಂಠವು ಸುವರ್ಣಮಯವಾದ ಹಾರಗಳಿಂದ ಅಲಂಕೃತವಾಗಿದೆ. ನಿನ್ನ ಮುಖವೂ ಕೂಡ ಕೋರೆಹಲ್ಲುಗಳಿಂದ ಭಯಂಕರವೂ, ದುರ್ಧರ್ಷವೂ, ಅಸದೃಶವೂ ಆಗಿದೆ.

ಪದ್ಮಮಾಲಾಕೃತೋಷ್ಣೀಷಂ ಶೀರ್ಷಣ್ಯಂ ಶೋಭತೇ ಕಥಂ ।
ದೀಪ್ತಿಃ ಸೂರ್ಯೇವಪುಶ್ಚಂದ್ರೇ ಸ್ಥೈರ್ಯಂ ಭೂಮ್ಯನಿಲೋ ಬಲೇ॥೧೫೨॥

ಔಷ್ಣ್ಯಮಗ್ನೌ ಪ್ರಭಾ ಚಂದ್ರೇ ಖೇ ಶಬ್ದಃ ಶೈತ್ಯಮಪ್ಸು ಚ ।
ಅಕ್ಷರೋತ್ತಮ ನಿಷ್ಪಂದಾನ್ ಗುಣಾನೇತಾನ್ ವಿದುರ್ಬುಧಾಃ ॥ ೧೫೩ ॥

ಜಪೋ ಜಪ್ಯೋ ಮಹಾಯೋಗೀ ಮಹಾದೇವೋ ಮಹೇಶ್ವರಃ ।
ಪುರೇಶಯೋ ಗುಹಾವಾಸೀ ಖೇಚರೋ ರಜನೀಚರಃ ॥ ೧೫೪ ॥

ತಪೋನಿಧಿರ್ಗುಹಗುರುರ್ನಂದನೋ ನಂದಿವರ್ಧನಃ ।
ಹಯಶೀರ್ಷೋ ಧರಾಧಾತಾ ವಿಧಾತಾ ಭೂತಿವಾಹನಃ ॥ ೧೫೫ ॥

ಬೋದ್ಧವ್ಯೋ ಬೋಧನೋ ನೇತಾ ಧೂರ್ವಹೋ ದುಷ್ಪ್ರಕಂಪಕಃ ।
ಬೃಹದ್ರಥೋ ಭೀಮಕರ್ಮಾ ಬೃಹತ್ಕೀರ್ತಿರ್ಧನಂಜಯಃ ॥ ೧೫೬ ॥

---

೧೫೨. ನಿನ್ನ ತಲೆಯಲ್ಲಿರುವ ಈ ರುಮಾಲು ಪದ್ಮಮಾಲೆಗಳಿಂದ ಅಲಂಕೃತವಾಗಿ ಎಷ್ಟು ಅಂದವಾಗಿ ಶೋಭಿಸುತ್ತದೆ ನಿನ್ನ ಕಾಂತಿಯು ಸೂರ್ಯನಂತೆಯೂ, ಶರೀರವು ಚಂದ್ರನಂತೆಯೂ, ಸ್ಥೈರ್ಯವು ಭೂಮಿಯಂತೆಯೂ, ಶಕ್ತಿಯು ವಾಯುವಿನಂತೆಯೂ ಇವೆ. ನಿನ್ನ ಕಾಂತಿ, ಶಕ್ತಿ, ಸ್ಥೈರ್ಯ, ಶರೀರ ಇವು ಅಸದೃಶವಾಗಿವೆ.

೧೫೩, ಅಗ್ನಿಗೆ ಸಮವಾದ ಔಷ್ಣ್ಯವೂ, ಚಂದ್ರನಿಗೆ ಸದೃಶವಾದ ಕಾಂತಿಯೂ, ಆಕಾಶದಂತೆ ಶಬ್ದವೂ, ಜಲದಂತೆ ಶೈತ್ಯವೂ, ನಾಶರಹಿತವೂ, ಉತ್ತಮಗಳೂ ಆದ ಚಲನವಲನಗಳೂ ಇವು ನಿನ್ನ ಗುಣಗಳಾಗಿವೆ ಎಂದು ಜ್ಞಾನಿಗಳು ಹೇಳುವರು

೧೫೪-೧೫೮. ಜಪರೂಪನೂ, ಜಪಿಸುವನೂ, ಮಹಾಯೋಗಿಯೂ, ಮಹೇಶ್ವರನೂ, ಶರೀರವರ್ತಿಯೂ, ಗುಹಾವಾಸಿಯೂ, ಆಕಾಶಚಾರಿಯೂ, ರಾತ್ರಿ ಸಂಚಾರಿಯೂ, ತಪೋನಿಧಿಯೂ, ಗುಹನಿಗೆ ಗುರುವೂ, ಬಾಲರೂಪಿಯೂ, ಸಂತೋಷ ಪ್ರದನೂ, ನಂದಿವರ್ಧಕನೂ, ಅಶ್ವಮುಖಿಯೂ, ಭೂಧಾರಕನೂ, ಸೃಷ್ಟಿಕರ್ತೃನೂ, ಭಸ್ಮಧಾರಿಯೂ, ಜ್ಞಾತೃವೂ, ಬೋಧಕನೂ, ನೇತೃವೂ, ಭಾರವಾಹಿಯೂ, ಕಂಪ ಜನಕನೂ, ಬೃಹದ್ರಥನೂ, ಭಯಂಕರಕರ್ಮಿಯೂ, ಬಹುಕೀರ್ತಿವಂತನೂ,

ಘಂಟಾಪ್ರಿಯೋ ಧ್ವಜೀ ಛತ್ರೀ ಪತಾಕಾಧ್ವಜಿನೀಪತಿಃ ।
ಕವಚೀ ಪಟ್ಟಿಶೀ ಶಂಖೀ ಪಾಶಹಸ್ತಃ ಪರಶ್ವಭೃತ್ ॥ ೧೫೭ ॥

ಅಗಮುಸ್ತ್ವನಘಃ ಶೂರೋ ದೇವರಾಜಾರಿಮರ್ದನಃ ।
ತ್ವಾಂ ಪ್ರಸಾದ್ಯ ಪುರಾಸ್ಮಾಭಿರ್ದ್ವಿಷಂತೋ ನಿಹತಾ ಯುಧಿ ॥ ೧೫೮ ॥

ಅಗ್ನಿಸ್ತ್ವಂ ಚಾರ್ಣವಾನ್ ಸರ್ವಾನ್ ಪಿಬನ್ನೇವ ನ ತೃಪ್ಯಸೇ ।
ಕ್ರೋಧಾಗಾರಃ ಪ್ರಸನ್ನಾತ್ಮಾ ಕಾಮಹಾ ಕಾಮದಃ ಪ್ರಿಯಃ ॥ ೧೫೯ ॥

ಬ್ರಹ್ಮಣ್ಯೋ ಬ್ರಹ್ಮಚಾರೀ ಚ ಗೋಘ್ನಸ್ತ್ವಂ ಶಿಷ್ಟಪೂಜಿತಃ ।
ವೇದಾನಾಮವ್ಯಯಃ ಕೋಶಸ್ತ್ವಯಾ ಯಜ್ಞಃ ಪ್ರಕಂಪಿತಃ ॥ ೧೬೦ ॥

ಹವ್ಯಂ ಚ ವೇದಂ ವಹತಿ ವೇದೋಕ್ತಂ ಹವ್ಯವಾಹನಃ ।
ಪ್ರೀತೇ ತ್ವಯಿ ಮಹಾದೇವ ವಯಂ ಪ್ರೀತಾ ಭವಾಮಹೇ ॥ ೧೬೧ ॥

---

ಧನಂಜಯನೂ, ಗಂಟಾಪ್ರಿಯನೂ, ಧ್ವಜವುಳ್ಳವನೂ, ಛತ್ರಧಾರಿಯೂ, ಸೇನಾಪತಿಯೂ, ಕವಚಧಾರಿಯೂ, ಆಯುಧಪಾಣಿಯೂ, ಶಂಖವಂತನೂ, ಪಾಶಹಸ್ತನೂ ಪರಶುಧಾರಿಯೂ, ದುಲಾಸಾಧ್ಯನೂ, ನಿರ್ದೋಷಿಯೂ, ಶೂರನೂ, ದೇವೇಂದ್ರನೂ, ಶತ್ರುನಾಶಕನೂ ಆದ ನಿನ್ನನ್ನು ನಾವು ಪೂರ್ವದಲ್ಲಿ ಪ್ರಸನ್ನೀಕರಿಸಿಕೊಂಡು ಶತ್ರುಗಳನ್ನು ಸಂಹಾರಮಾಡಿದೆವು ಎಂದು ಪರಮೇಶ್ವರನನ್ನು ಹೊಗಳಿದರು.

೧೫೯-೧೬೦. ಎಲೈ ಪರಮೇಶ್ವರನೇ, ನೀನು ಅಗ್ನಿರೂಪಿಯಾಗಿ ಸಮಸ್ತವಾದ ಸಮುದ್ರಗಳನ್ನು ಪಾನಮಾಡಿದ್ದರೂ ತೃಪ್ತಿಯನ್ನು ಪಡೆಯದೇ ಇರುತ್ತೀಯೆ. ಮತ್ತು ನೀನು ಕ್ರೋಧರೂಪಿಯೂ, ಪ್ರಸನ್ನಾತ್ಮನೂ, ಕಾಮನಾಶಕನೂ, ಇಷ್ಟಪ್ರದನೂ, ಪ್ರಿಯನೂ, ಬ್ರಹ್ಮವಂದ್ಯನೂ, ಬ್ರಹ್ಮಚಾರಿಯೂ, ಗೋಸಂಹಾರಕನೂ, ಶಿಷ್ಟಪೂಜಿತನೂ, ವೇದವೇದ್ಯನೂ, ನಾಶರಹಿತನೂ, ಸರ್ವಧಾರಿಯೂ, ಯಜ್ಞನಾಶಕನೂ ಆಗಿರುತ್ತೀಯೆ ಎಂದು ಈಶ್ವರನನ್ನು ಹೊಗಳಿದರು.

೧೬೧. ಎಲೈ ಈಶ್ವರನೇ, ನೀನು ಅಗ್ನಿರೂಪನಾಗಿ ವೇದಮಂತ್ರಗಳಿಂದ ಹೋಮಮಾಡಿದ ಹವಿಸ್ಸನ್ನು ಸ್ವೀಕರಿಸುತ್ತೀಯೆ. ಮತ್ತು ಮಹಾದೇವನೇ, ನೀನು ಪ್ರೀತನಾದರೆ ನಾವೂ ಕೂಡ ಪ್ರೀತರಾಗುವೆವು ಎಂದು ಹೇಳಿದರು.

ಭವಾನೀಶೋ ನಾದಿಮಾನ್ ಧಾಮರಾಶಿ ।
ಬ್ರಹ್ಮಾ ಲೋಕಾನಾಂ ತ್ವಂ ಕರ್ತಾತ್ವಾದಿಸರ್ಗಃ ॥
ಸಾಂಖ್ಯಾಃ ಪ್ರಕೃತಿಭ್ಯಃ ಪರಮಂ ತ್ವಾಂ ವಿದಿತ್ವಾ ।
ಕ್ಷೀಣಧ್ಯಾನಾಸ್ತೇ ನ ಮೃತ್ಯುಂ ವಿಶಂತಿ ॥ ೧೬೨ ॥

ಯೋಗೇನ ತ್ವಾಂ ಧ್ಯಾನಿನೋ ನಿತ್ಯಯುಕ್ತಾಃ ।
ಜ್ಞಾತ್ವಾ ಭೋಗಾನ್ ಸಂತ್ಯಜಂತೇ ಪುನಸ್ತಾನ್ ॥
ಯೇಽನ್ಯೇ ಮರ್ತ್ಯಾಸ್ತ್ವಾಂ ಪ್ರಪನ್ನಾ ವಿಶುದ್ಧಾ ।
ಸ್ತೇ ಕರ್ಮಭಿರ್ದಿವ್ಯ ಭೋಗಾನ್ ಭಜಂತೇ ॥ ೧೬೩ ॥

ಅಪ್ರಮೇಯಸ್ಯ ತತ್ವಸ್ಯ ಯಥಾ ವಿದ್ಮಃ ಸ್ವಶಕ್ತಿತಃ ।
ಕೀರ್ತಿತಂ ತವ ಮಾಹಾತ್ಮ್ಯಮಪಾರಂ ಪರಮಾತ್ಮನಃ ॥
ಶಿವೋ ನೋ ಭವ ಸರ್ವತ್ರ ಯೋಽಸಿ ಸೋಽಸಿ ನಮೋಽಸ್ತು ತೇ ॥ ೧೬೪ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಶಾರ್ವಸ್ತವಂ"
ನಾಮ ಚತುರ್ವಿಂಶೋಽಧ್ಯಾಯಃ

---

೧೬೨ ಎಲೈ ಪರಮೇಶ್ವರನೇ, ನೀನು ಸ್ವಾಮಿಯೂ, ಅನಾದಿಯೂ, ತೇಜಃ ಪುಂಜನೂ, ಲೋಕಕರ್ತನೂ, ಆದಿಸೃಷ್ಟನೂ ಆಗಿರುತ್ತೀಯೆ. ಸಾಂಖ್ಯರು ನಿನ್ನನ್ನು ಪ್ರಕೃತಿವಿಲಕ್ಷಣನೆಂದೂ, ಉತ್ತಮನೆಂದೂ ತಿಳಿದು ಪಾಪರಹಿತರಾಗಿ ಯಮಲೋಕಕ್ಕೆ ಹೋಗದೆಯೇ ಶಾಶ್ವತವಾದ ಪರಮಪದವಿಯನ್ನು ಹೊಂದುವರು.

೧೬೩. ಯಾವ ಯೋಗಿಗಳು ಯೋಗಾಭ್ಯಾಸದ ಮಹಿಮೆಯಿಂದ ನಿನ್ನನ್ನು ತಿಳಿದು ವಿಷಯಸುಖಗಳನ್ನು ತ್ಯಜಿಸುತ್ತಾರೆಯೋ ಅವರು ಪ್ರಾಪಂಚಿಕಸುಖವನ್ನು ಬಿಟ್ಟು ಶಾಶ್ವತವಾದ ಪದವಿಯನ್ನು ಹೊಂದುವರು. ಯಾವ ಮನುಷ್ಯರು ಶುದ್ಧವಾದ ಮನಸ್ಸಿನಿಂದ ನಿನ್ನನ್ನು ಭಜಿಸುತ್ತಾರೆಯೋ ಅವರು ಸತ್ಕರ್ಮಗಳಿಂದ ದಿವ್ಯಭೋಜನಗಳನ್ನು ಪಡೆದು ಶಾಶ್ವತವಾದ ಪರಮಪದವಿಯನ್ನು ಹೊಂದುವರು.

೧೬೪. ಎಲೈ ಪರಮೇಶ್ವರನೇ, ಅಪ್ರಮೇಯನೂ, ಪರಮಾತ್ಮನೂ ಆದ ನಿನ್ನ ತತ್ವಗಳನ್ನು ಯಥಾರ್ಥವಾಗಿ ಯಥಾಶಕ್ತಿ ತಿಳಿದು ನಿನ್ನ ಮಹಿಮೆಗಳನ್ನು ಹೊಗಳಿರುತ್ತೇವೆ. ಸರ್ವವಿಷಯಗಳಲ್ಲಿಯೂ ನಮಗೆ ಮಂಗಳವನ್ನು ಕೊಡು. ಲೋಕವಂದಿತನೂ, ಪ್ರಖ್ಯಾತನೂ ಆದ ನಿನಗೆ ನಮಸ್ಕಾರಗಳು ಎಂದು ಶ್ರೀಹರಿಯು ಈಶ್ವರನಿಗೆ ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಈಶ್ವರಸ್ತೋತ್ರಕಥನ" ವೆಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು ಸಮಾಪ್ತವು.

# ಇಪ್ಪತ್ತನಾಲ್ಕನೆಯ ಅಧ್ಯಾಯದ ಸಾರಾಂಶವು

ಈ ಭಾರತವರ್ಷದಲ್ಲಿ ಕೃತ, ತ್ರೇತಾ, ದ್ವಾಪರ, ಕಲಿ ಎಂಬ ನಾಲ್ಕು ಯುಗಗಳು ಸಂಭವಿಸುವುವು. ಇಂತಹ ಒಂದುಸಹಸ್ರ ಚತುರ್ಯುಗಗಳು ಕಳೆಯಲು ಬ್ರಹ್ಮದೇವನಿಗೆ ಒಂದು ದಿನವಾಗುವುದು. ಜ್ಞಾನಿಗಳು ಉತ್ತಮಲೋಕಗಳನ್ನು ಹೊಂದಿ ಕೊನೆಗೆ ಬ್ರಹ್ಮನೊಡನೆ ಮುಕ್ತರಾಗುವರು.

ಆಗ ಲೋಕಗಳೆಲ್ಲವೂ ಪ್ರಲಯೋದಕದಲ್ಲಿ ಮುಳುಗಿ ಅಂಧಕಾರಮಯವಾಗುವುದು. ಆಗ ಶ್ರೀಹರಿಯು ಪ್ರಲಯೋದಕದಲ್ಲಿ ಶೇಷಶಾಯಿಯಾಗಿ ಮಲಗಿರುವನು. ಅವನ ನಾಭಿಯಲ್ಲಿ ಸುವರ್ಣದಂಡದಿಂದ ಅಲಂಕೃತವಾದ ಸಹಸ್ರದಳಗಳಿರುವ ಕಮಲವು ಉದ್ಭವಿಸುವುದು ಹೀಗೆ ಶ್ರೀಹರಿಯು ವಿನೋದದಲ್ಲಿರಲು ಬ್ರಹ್ಮನು ಅವನ ಬಳಿಗೆ ಬಂದು ಹೊಗಳಲು ಪರಸ್ಪರ ಸಲ್ಲಾಪವಾಗುವುದು. ಮೊದಲು ಹರಿಯು ಬ್ರಹ್ಮನ ಉದರವನ್ನು ಪ್ರವೇಶಿಸಿ ಲೋಕಗಳನ್ನು ನೋಡಿ ಹೊರಗೆ ಬರುವನು. ಬಳಿಕ ಬ್ರಹ್ಮನು ಹರಿಯ ಉದರವನ್ನು ಪ್ರವೇಶಿಸಿ ಸಮಸ್ತ ಲೋಕಗಳನ್ನು ನೋಡಲು ಆಗ ಹರಿಯು ದ್ವಾರಗಳೆಲ್ಲವನ್ನೂ ಮುಚ್ಚುವನು. ಬಳಿಕ ಬ್ರಹ್ಮನು ನಾಳದ ಸೂತ್ರದಮೂಲಕ ಕಮಲದಲ್ಲಿ ಬಂದಿರಲು ಪದ್ಮಜನೆಂದೂ, ಹರಿಯಕುಮಾರನೆಂದೂ ಪ್ರಸಿದ್ಧನಾಗುವುದು. ಆಗ ನಡೆದ ಪರಸ್ಪರಸಲ್ಲಾಪಗಳು ಉಕ್ತವಾಗಿದೆ. ಆಗ ಮಹಾಮಹಿಮೆಯುಳ್ಳ ಪರಮೇಶ್ವರನು ಅಲ್ಲಿಗೆ ಬರಲು ಆ ರಭಸದಿಂದ ಅಲೆಗಳು ಆಕಾಶಕ್ಕೆ ಚಿಮ್ಮಿಬೀಳುವುದು. ಆಗ ಬ್ರಹ್ಮನು ಈ ಪರಮಪುರುಷನು ಯಾರು ಎನಲು ಇವನೇ ಜಗದೊಡೆಯನು, ಸರ್ವಕರ್ತನು, ಸರ್ವಪ್ರೇರಕನು, ಸೂರ್ಯಾದಿಗಳಿಗೆ ಕಾಂತಿಪ್ರದನು, ಯೋಗಿವಂದ್ಯನು, ಭೀಮಕರ್ಮನು, ಯೋಗಿಗಮ್ಯನು ಇತ್ಯಾದಿ ನಾನಾರೀತಿಯಾಗಿ ಹೊಗಳುವುದು ವರ್ಣಿತವಾಗಿದೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಪಂಚವಿಂಶೋಽಧ್ಯಾಯಃ

॥ ಸೂತ ಉವಾಚ ॥

ಸಂಪಿಬನ್ನಿವ ತೌ ದೃಷ್ಟ್ವಾ ಮಧುಪಿಂಗಾಯತೇಕ್ಷಣಃ ।
ಪ್ರಹೃಷ್ಟವದನೋತ್ಯರ್ಥಮಭವಚ್ಚ ಸ್ವಕೀರ್ತನಾತ್ ॥ ೧ ॥

ಉಮಾಪತಿರ್ವಿರೂಪಾಕ್ಷೋ ದಕ್ಷಯಜ್ಞವಿನಾಶನಃ ।
ಪಿನಾಕೀ ಖಂಡಪರಶುರ್ಭೂತಸ್ತ್ರಾಂತಸ್ತ್ರಿಲೋಚನಃ ॥ ೨ ॥

ತತಃ ಸಭಗವಾನ್ ದೇವಃ ಶ್ರುತ್ವಾ ವಾಕ್ಯಾಮೃತಂ ತಯೋಃ ।
ಜಾನನ್ನಪಿ ಮಹಾಭಾಗಃ ಪ್ರೀತಪೂರ್ವಮಥಾಬ್ರವೀತ್ ॥ ೩ ॥

---

## ಇಪ್ಪತ್ತೈದನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :—ಆಗ ಪರಮೇಶ್ವರನು ಜೇನಿನಂತೆ ಕೆಂಪಗೂ, ವಿಶಾಲವೂ ಆದ ನೇತ್ರಗಳುಳ್ಳವನಾಗಿ ಅವರಿಬ್ಬರನ್ನೂ ನುಂಗಿಬಿಡುವಂತೆ ಆಗ್ರಹದಿಂದ ನೋಡಿದವನಾದರೂ ಕೂಡ ಅವರು ಮಾಡಿರುವ ಸ್ತೋತ್ರಗಳಿಂದ ಬಹಳವಾಗಿ ಸಂತೋಷಗೊಂಡು ಇಂತೆಂದನು.

೨-೩ ಉಮಾಪತಿಯೂ, ವಿರೂಪಾಕ್ಷನೂ, ದಕ್ಷಯಜ್ಞಧ್ವಂಸಕನೂ, ಪಿನಾಕಪಾಣಿಯೂ, ಖಂಡಪರಶುಧಾರಿಯೂ, ಭೂತಾಂತಕನೂ, ತ್ರಿಲೋಚನನೂ, ಮಹಾಭಾಗ್ಯವಂತನೂ, ಪೂಜ್ಯನೂ, ಆದ ಪರಮೇಶ್ವರನು ಅವರ ಮಧುರವಾದ ಸ್ತೋತ್ರಗಳನ್ನು ಕೇಳಿ ಸಂತುಷ್ಟನಾಗಿ ಎಲ್ಲವನ್ನು ತಿಳಿದಿದ್ದರೂ ವಿಶ್ವಾಸಪೂರ್ವಕವಾಗಿ ಇಂತೆಂದನು.

ಕೌ ಭವಂತೌ ಮಹಾತ್ಮಾನೌ ಪರಸ್ಪರ ಹಿತೈಷಿಣೌ ।
ಸಮೇತಾವಂಬುಜಾಭಾಕ್ಷೌ ತಸ್ಮಿನ್ ಘೋರೇ ಜಲಪ್ಲವೇ ॥ ೪ ॥

ತಾವೂಚತುರ್ಮಹಾತ್ಮಾನೌ ಸನ್ನಿರೀಕ್ಷ್ಯ ಪರಸ್ಪರಂ ।
ಭಗವನ್ ಕಿಂಚ ತಥ್ಯೇನ ವಿಜ್ಞಾತೇನ ತ್ವಯಾ ವಿಭೋ ॥
ಕುತ್ರ ವಾ ಸುಖಮಾನಂತ್ಯಮಿಚ್ಛಾಚಾರಮೃತೇ ತ್ವಯಾ ॥ ೫ ॥

ಉವಾಚ ಭಗವಾನ್ ದೇವೋ ಮಧುರ ಶ್ಲಕ್ಷ್ಣಯಾ ಗಿರಾ ।
ಭೋ ಭೋ ಹಿರಣ್ಯಗರ್ಭ ತ್ವಾಂ ತ್ವಾಂ ಚ ಕೃಷ್ಣ ವದಾಮ್ಯಹಂ ॥ ೬ ॥

ಪ್ರೀತೋಽಹಮನಯಾ ಭಕ್ತ್ಯಾ ಶಾಶ್ವತಾಕ್ಷರಯುಕ್ತಯಾ ।
ಭವಂತೌ ಮಾನನೀಯೌ ವೈ ಮಮ ಹ್ಯರ್ಹತರಾವುಭೌ ॥
ಯುವಾಭ್ಯಾಂ ಕಿಂ ದದಾಮ್ಯದ್ಯ ವರಾಣಾಂ ವರಮುತ್ತಮಂ ॥ ೭ ॥

---

೪. ಮಹಾತ್ಮರೂ, ಅನ್ಯೋನ್ಯ ಹಿತೈಷಿಗಳೂ, ವಿಶಾಲವಾದ ನೇತ್ರಗಳುಳ್ಳವರೂ, ಆದ ನೀವು ಯಾರು? ಈ ಭಯಂಕರವಾದ ಪ್ರಲಯೋದಕದಲ್ಲಿ ಕೂಡಿರಲು ಕಾರಣವೇನು? ಎಂದು ಈಶ್ವರನು ಹರಿಬ್ರಹ್ಮರನ್ನು ಕೇಳಿದನು.

೫. ಆಗ ಮಹಾತ್ಮರಾದ ಅವರಿಬ್ಬರೂ ಪರಸ್ಪರ ನೋಡುತ್ತಾ "ಎಲೈ ಪೂಜ್ಯನಾದ ಈಶ್ವರನೇ ನಿನ್ನನ್ನು ಬಿಟ್ಟರೆ ಈ ಲೋಕದಲ್ಲಿ ನಿಜವೂ, ಪಾರಮಾರ್ಥಿಕವೂ, ಆದ ಬೇರೆ ವಸ್ತುವು ಇದೆಯೇ? ಮತ್ತು ಸ್ವೇಚ್ಛಾವಿಹಾರಿಯಾದ ನಿನ್ನನ್ನು ಬಿಟ್ಟರೆ ಅಪರಿಮಿತವಾದ ಆನಂದವು ಮತ್ತೆಲ್ಲಿ ದೊರೆಯುವುದು?" ಎಂದು ಹೇಳಿದರು.

೬-೭. ಆಗ ಪೂಜ್ಯನಾದ ಈಶ್ವರನು ಮಧುರವೂ, ಮನೋಹರವೂ, ಆದ ಮಾತನ್ನು ಹೇಳಿದನು. ನಿಮ್ಮನ್ನು ಹಿರಣ್ಯಗರ್ಭನೆಂದೂ. ಮತ್ತು ಕೃಷ್ಣನೆಂದೂ, ನಾನು ತಿಳಿಯುತ್ತೇನೆ. ಅನ್ವರ್ಥಕವೂ, ನಿಜವೂ, ಆದ ನಿಮ್ಮ ಸ್ತೋತ್ರಗಳಿಂದ ನಾನು ಪ್ರೀತನಾಗಿರುತ್ತೇನೆ. ನೀವೂ ಸಹ ನನ್ನಂತೆಯೇ ಮಾನ್ಯರಾಗಿರುತ್ತೀರಿ. ನಿಮಗೆ ಅತ್ಯುತ್ತಮಗಳಾದ ಯಾವ ವರಗಳನ್ನು ಕೊಡಲಿ ಎಂದು ಈಶ್ವರನು ಅವರನ್ನು ಕೇಳಿದನು.

ತೇನೈವಮುಕ್ತೇ ವಚನೇ ಬ್ರಹ್ಮಾಣಂ ವಿಷ್ಣುರಬ್ರವೀತ್ ।
ಬ್ರೂಹಿ ಬ್ರೂಹಿ ಮಹಾಭಾಗ ವರೋ ಯಸ್ತೇ ವಿವಕ್ಷಿತಃ ॥ ೮ ॥

ಪ್ರಜಾಕಾಮೋಽಸ್ಮ್ಯಹಂ ವಿಷ್ಣೋ ಪುತ್ರಮಿಚ್ಛಾಮಿ ಧೂರ್ವಹಂ ।
ತತಃ ಸ ಭಗವಾನ್ ಬ್ರಹ್ಮಾ ವರೇಪ್ಸುಃ ಪುತ್ರಲಿಪ್ಸಯಾ ॥ ೯ ॥

ಅಥ ವಿಷ್ಣುರುವಾಚೇದಂ ಪ್ರಜಾಕಾಮಂ ಪ್ರಜಾಪತಿಂ ।
ವೀರಮಪ್ರತಿಮಂ ಪುತ್ರಂ ಯತ್ತ್ವಮಿಚ್ಛಸಿ ಧೂರ್ವಹಂ ॥ ೧೦ ॥

ಪುತ್ರತ್ವೇನಾಭಿಯುಙ್ಕ್ಷ್ವ ತ್ವಂ ದೇವದೇವಂ ಮಹೇಶ್ವರಂ ।
ಸ ತಸ್ಯ ವಾಕ್ಯಂ ಸಂಪೂಜ್ಯ ಕೇಶವಸ್ಯ ಪಿತಾಮಹಃ ॥ ೧೧ ॥

ಈಶಾನಂ ವರದಂ ರುದ್ರಮಭಿವಾದ್ಯ ಕೃತಾಂಜಲಿಃ ।
ಉವಾಚ ಪುತ್ರಕಾಮಸ್ತು ವಾಕ್ಯಾನಿ ಸಹ ವಿಷ್ಣುನಾ ॥ ೧೨ ॥

---

೮. ಹೀಗೆ ಈಶ್ವರನು ಹೇಳಲಾಗಿ ವಿಷ್ಣುವು ಬ್ರಹ್ಮನನ್ನು ಕುರಿತು ಎಲೈ, ಮಹಾನುಭಾವನೇ ನಿನಗೆ ಉತ್ತಮವಾದ ಯಾವ ವರವು ಬೇಕಾಗಿದೆ. ಹೇಳು ಹೇಳು ಎಂಬುದಾಗಿ ಕೇಳಿದನು.

೯. ಎಲೈ ಹರಿಯೇ ನನಗೆ ಪುತ್ರಾಪೇಕ್ಷೆಯಿರುತ್ತದೆ. ಧುರಂಧರನಾದ ಮಗನನ್ನು ಬಯಸುತ್ತೇನೆ. ಆದ್ದರಿಂದ ಪುತ್ರರೂಪವಾದ ವರವನ್ನು ಕೊಡಬೇಕೆಂದು ಕೇಳಿದನು.

೧೦. ಅನಂತರ ವಿಷ್ಣುವು ಪ್ರಜಾಕಾಮನಾದ ಬ್ರಹ್ಮನನ್ನು ನೋಡಿ, ವೀರನೂ ಅಸದೃಶನೂ, ಭಾರವಾಹಕನೂ, ಆದ ಪುತ್ರನನ್ನು ಇಚ್ಛಿಸುತ್ತೀಯಲ್ಲವೆ ಎಂದು ಕೇಳಿದನು.

೧೧-೧೨. ನೀನು ದೇವೋತ್ತಮನಾದ ಈಶ್ವರನಿಂದ ವರವನ್ನು ಬೇಡಿಕೋ, ಎಂದು ಹೇಳಲು ಅದನ್ನು ಕೇಳಿದ ಬ್ರಹ್ಮನು ಅವನನ್ನು ಹೊಗಳಿ, ಈಶಾನನೂ, ವರದನೂ, ಆದ ರುದ್ರದೇವನಿಗೆ ನಮಸ್ಕಾರಮಾಡಿ, ಅಂಜಲಿಬದ್ಧನಾಗಿ ಪುತ್ರಾಪೇಕ್ಷೆಯಿಂದ ಹರಿಯೊಡನೆ ಇಂತೆಂದನು.

ಯದಿ ಮೇ ಭಗವಾನ್ ಪ್ರೀತಃ ಪುತ್ರಕಾಮಸ್ಯ ನಿತ್ಯಶಃ ।
ಪುತ್ರೋ ಮೇ ಭವ ವಿಶ್ವಾತ್ಮನ್ ಸ್ವತುಲ್ಯೋ ವಾಪಿ ಧೂರ್ವಹಃ ॥
ನಾನ್ಯಂ ವರಮಹಂ ವವ್ರೇ ಪ್ರೀತೇ ತ್ವಯಿ ಮಹೇಶ್ವರ ॥ ೧೩ ॥

ತಸ್ಯ ತಾಂ ಪ್ರಾರ್ಥನಾಂ ಶ್ರುತ್ವಾ ಭಗವಾನ್ ಭಗನೇತ್ರಹಾ ।
ನಿಷ್ಕಲ್ಮಷಮಮಾಯಂ ಚ ಬಾಢಮಿತ್ಯಬ್ರವೀದ್ವಚಃ ॥ ೧೪ ॥

ಯದಾ ಕಾರ್ಯಸಮಾರಂಭೇ ಕಸ್ಮಿಂಶ್ಚಿತ್ತ್ವವ ಸುವ್ರತ ।
ಅನಿಷ್ಪತ್ತೌ ಚ ಕಾರ್ಯಸ್ಯ ಕ್ರೋಧಸ್ತ್ವಾಂ ಸಮುಪೇಷ್ಯತಿ ॥
ಆತ್ಮೈಕಾದಶ ಯೇ ರುದ್ರಾ ವಿಹಿತಾ ಪ್ರಾಣಹೇತವಃ ॥ ೧೫ ॥

ಸೋಽಹಮೇಕಾದಶಾತ್ಮಾ ವೈ ಶೂಲಹಸ್ತಃ ಸಹಾನುಗಃ ।
ಋಷಿರ್ಮಿತ್ರೋ ಮಹಾತ್ಮಾ ವೈ ಲಲಾಟಾದ್ಭವಿತಾ ತದಾ ॥ ೧೬ ॥

---

೧೩. ಎಲೈ ಭಗವಂತನೇ, ಪುತ್ರಾಪೇಕ್ಷೆಯುಳ್ಳ ನನ್ನ ಮೇಲೆ ಪ್ರೀತಿಯುಳ್ಳವನಾದರೆ ನೀನೇ ನನಗೆ ಮಗನಾಗಿ ಅವತರಿಸು, ಅಥವಾ ನಿನಗೆ ಸಮಾನನಾದ ಮಗನಾದರೂ ಹುಟ್ಟುವಂತೆ ಅನುಗ್ರಹಿಸುವನಾಗು. ಅವನು ಭಾರವಾಹಕನಾಗಬೇಕು. ನೀನು ಪ್ರೀತನಾದರೆ ಇಂತಹ ವರವನ್ನು ಕೊಡು. ನಾನು ಬೇರೆ ವರಗಳನ್ನು ಬೇಡುವುದಿಲ್ಲವೆಂದು ಬ್ರಹ್ಮದೇವನು ಹೇಳಿದನು.

೧೪. ಪೂಜ್ಯನಾದ ಈಶ್ವರನು ಅವನ ಆ ಪ್ರಾರ್ಥನೆಯನ್ನು ಕೇಳಿ ಹಾಗೆಯೇ ಆಗಲೆಂದು ನಿರ್ವಂಚನೆಯಾದ ಆ ಮಾತನ್ನು ಒಪ್ಪಿದನು.

೧೫. ಎಲೈ ಬ್ರಹ್ಮದೇವನೇ, ನೀನು ಯಾವುದಾದರೂ ಕಾರ್ಯವನ್ನು ಪ್ರಾರಂಭಮಾಡಿ ಅದು ಆಗದೇ ಹೋಗಲು ನಿನಗೆ ಯಾವಾಗ ಕೋಪವು ಉಂಟಾಗುವುದೋ, ಆಗ ನಾನು ಏಕಾದಶರುದ್ರನಾಗಿ ಅವತರಿಸುವೆನು, ಎಂದು ವರವನ್ನು ಕೊಟ್ಟನು.

೧೬. ಎಲೈ ಬ್ರಹ್ಮನೇ, ಆಗ ನಾನು ಏಕಾದಶರುದ್ರರೂಪಿಯೂ, ಶೂಲಪಾಣಿಯೂ, ಮಹಾತ್ಮನೂ ಮಿತನಾಮಕಋಷಿಯೂ ಆಗಿ ನಿನ್ನ ಲಲಾಟದಿಂದ ಅವತರಿಸುವೆನು.

ಪ್ರಸಾದಮತುಲಂ ಕೃತ್ವಾ ಬ್ರಹ್ಮಣಸ್ತಾದೃಶಂ ಪುರಾ ।
ವಿಷ್ಣುಂ ಪುನರುವಾಚೇದಂ ದದಾಮಿ ಚ ವರಂ ತವ ॥ ೧೭ ॥

ಸಹೋವಾಚ ಮಹಾಭಾಗೋ ವಿಷ್ಣುರ್ಭವಮಿದಂ ವಚಃ ।
ಸರ್ವಮೇತತ್ಕೃತಂ ದೇವ ಪರಿತುಷ್ಟೋಽಸಿ ಮೇ ಯದಿ ॥
ತ್ವಯಿ ಮೇ ಸುಪ್ರತಿಷ್ಠಾಸ್ತು ಭಕ್ತಿರಂಬುದವಾಹನ ॥ ೧೮ ॥

ಏವಮುಕ್ತಸ್ತತೋ ದೇವಃ ತಮುಭಾಷತ ಕೇಶವಂ ।
ವಿಷ್ಣೋ ಶೃಣು ಯಥಾದೇವ ಪ್ರೀತೋಽಹಂ ತವ ಶಾಶ್ವತ ॥ ೧೯ ॥

ಪ್ರಕಾಶಂ ಚಾಪ್ರಕಾಶಂ ಚ ಜಂಗಮಂ ಸ್ಥಾವರಂ ಚ ಯತ್ ।
ವಿಶ್ವರೂಪಮಿದಂ ಸರ್ವಂ ರುದ್ರನಾರಾಯಣಾತ್ಮಕಂ ॥ ೨೦ ॥

ಅಹಮಗ್ನಿರ್ಭವಾನ್ ಸೋಮೋ ಭವಾನ್ ರಾತ್ರಿರಹಂ ದಿನಂ ।
ಭವಾನೃತಮಹಂ ಸತ್ಯಂ ಭವಾನ್ ಕ್ರತುರಹಂ ಫಲಂ ॥ ೨೧ ॥

---

೧೭. ಹೀಗೆ ಈಶ್ವರನು ಮೊದಲು ಬ್ರಹ್ಮನಿಗೆ ಬಹಳವಾದ ಅನುಗ್ರಹವನ್ನು ಮಾಡಿ ವಿಷ್ಣುವನ್ನು ಕುರಿತು ನಿನಗೂ ವರವನ್ನು ಕೊಡುವೆನು ಕೇಳಿಕೋ ಎಂದು ಹೇಳಿದನು.

೧೮. ಆಗ ವಿಷ್ಣುವು ಈಶ್ವರನನ್ನು ಕುರಿತು ದೇವನೇ ನೀನು ಸಂತುಷ್ಟನಾದರೆ ಎಲ್ಲವನ್ನೂ ಮಾಡಿದಂತೆಯೇ ಆಗುವುದು. ಮೇಘವಾಹನನಾದ ಈಶ್ವರನೇ, ನನಗೆ ನಿನ್ನಲ್ಲಿ ಸಂಪೂರ್ಣವಾದ ಭಕ್ತಿಯು ಸ್ಥಿರವಾಗಿ ಇರಲೆಂದು ಕೇಳಿಕೊಂಡನು.

೧೯-೨೦. ಶ್ರೀಹರಿಯು ಹೀಗೆ ಹೇಳಲಾಗಿ ಪ್ರೀತನಾದ ಈಶ್ವರನು ಎಲೈ ಹರಿಯೇ, ನಿನ್ನ ಭಕ್ತಿಗೆ ನಾನು ಪ್ರೀತನಾಗಿರುತ್ತೇನೆ ಪ್ರಕಾಶಾಪ್ರಕಾಶರೂಪವೂ, ಸ್ಥಾವರಜಂಗಮರೂಪವೂ ಆದ ಈ ಸಮಸ್ತ ವಿಶ್ವವೂ, ರುದ್ರ ಮತ್ತು ನಾರಾಯಣ ಸ್ವರೂಪವಾಗಿ ಇರುತ್ತದೆ ಎಂದು ಹೇಳಿದನು.

೨೧-೨೨. ಎಲೈ ಹರಿಯೇ, ನಾನು ಅಗ್ನಿಯು, ನೀನು ಸೋಮನು, ನೀನು ರಾತ್ರಿಯು, ನಾನು ಹಗಲು, ನೀನು ಅನೃತನು, ನಾನು ಸತ್ಯಸ್ವರೂಪನು, ನೀನು ಯಾಗರೂಪಿಯು, ನಾನು ಫಲರೂಪನು, ನೀನು ಜ್ಞಾನನು, ನಾನು ಜ್ಞೇಯನು,

ಭವಾನ್ ಜ್ಞಾನಮಹಂ ಜ್ಞೇಯಂ ಯಜ್ಞಪಿತ್ವಾ ಸದಾ ಜನಾಃ ।
ಮಾಂ ವಿಶಂತಿ ತ್ವಯಿ ಪ್ರೀತೇ ಜನಾಃ ಸುಕೃತಕಾರಿಣಃ ॥
ಆವಾಭ್ಯಾಂ ಸಹಿತಾ ಚೈವ ಗತಿರ್ನಾನ್ಯಾ ಯುಗಕ್ಷಯೇ ॥ ೨೨ ॥

ಆತ್ಮಾನಂ ಪ್ರಕೃತಿಂ ವಿದ್ಧಿ ಮಾಂ ವಿದ್ಧಿ ಪುರಷಂ ಶಿವಂ ।
ಭವಾನರ್ಧಶರೀರಂ ಮೇ ತ್ವಹಂ ತವ ಯಥೈವ ಚ ॥ ೨೩ ॥

ವಾಮಪಾರ್ಶ್ವಮಹಂ ಮಹ್ಯಂ ಶ್ಯಾಮಂ ಶ್ರೀವತ್ಸಲಕ್ಷಣಂ ।
ತ್ವಂ ಚ ವಾಮೇತರಂ ಪಾರ್ಶ್ವಂ ತ್ವಹಂ ವೈ ನೀಲಲೋಹಿತಃ ॥ ೨೪ ॥

ತ್ವಂ ಚ ಮೇ ಹೃದಯಂ ವಿಷ್ಣೋ ತವ ಚಾಹಂ ಹೃದಿ ಸ್ಥಿತಃ ।
ಭವಾನ್ ಸರ್ವಸ್ಯ ಕಾರ್ಯಸ್ಯ ಕರ್ತಾಹಮಧಿದೈವತಂ ॥ ೨೫ ॥

ತದೇಹಿ ಸ್ವಸ್ತಿ ತೇ ವತ್ಸ ಗಮಿಷ್ಯಾಮ್ಯಂಬುಜಪ್ರಭ ।
ಏವಮುಕ್ತ್ವಾ ಗತೋ ವಿಷ್ಣೋರ್ದೇವೋಽಂತರ್ಧಾನಮೀಶ್ವರಃ ॥ ೨೬ ॥

---

ಸುಕೃತರಾದ ಜನರು ನಮ್ಮಲ್ಲಿ ಯಾರನ್ನು ಪ್ರೀತಿಸಿದರೂ ಮತ್ತೊಬ್ಬನಿಗೆ ಸಂತೋಷ ವಾಗುವುದು. ನಮ್ಮಿಬ್ಬರಿಂದಲೇ ಜನಗಳಿಗೆ ಗತಿಯೇ ವಿನಾ ಬೇರೆ ಮಾರ್ಗವೇ ಇಲ್ಲವೆಂದನು.

೨೩. ಎಲೈ ಹರಿಯೇ, ನೀನು ಪ್ರಕೃತಿಯು, ನಾನು ಪುರುಷನು, ನೀನು ನನಗೆ ಅರ್ಧಾಂಗಿಯಾಗಿರುವೆ, ನಾನೂ ನಿನಗೆ ಅರ್ಧಾಂಗಿಯಾಗಿರುವೆನು.

೨೪. ಈ ನನ್ನ ದೇಹದಲ್ಲಿ ಕಪ್ಪಾದ ಎಡಭಾಗವು ನನ್ನದಾಗಿದೆ. ಶ್ರೀವತ್ಸಾಂ ಕಿತವಾದ ಬಲಭಾಗವಾದರೋ ನಿನ್ನದಾಗಿರುತ್ತದೆ. ಹೀಗೆ ನಾನು ನೀಲಲೋಹಿತವಾದ ಶರೀರಧಾರಿಯಾಗಿರುವೆನು.

೨೫. ಎಲೈ ಹರಿಯೇ, ನೀನು ನನ್ನ ಹೃದಯದಲ್ಲಿರುತ್ತೀಯೆ. ನಾನು ನಿನ್ನ ಹೃದಯದಲ್ಲಿರುವೆನು. ನೀನು ಸಕಲ ಕಾರ್ಯಕರ್ತನು. ನಾನು ಸಕಲ ಜಗತ್ತಿಗೂ ಮುಖ್ಯ ದೈವವಾಗಿರುವೆನು.

೨೬. ಎಲೈ, ಕಮಲದಂತೆ ಕಾಂತಿವಂತನೂ, ಪ್ರಿಯನೂ ಆದ ಹರಿಯೇ, ಇಲ್ಲಿ ಬಾ, ನಿನಗೆ ಮಂಗಳವಾಗಲಿ, ನಾನು ಈಗ ಹೊರಡುವೆನು ಎಂದು ಪರಮೇಶ್ವರನು ಹೇಳಿ ಮಾಯವಾದನು.

ತತಃ ಸೋಽಂತರ್ಹಿತೇ ದೇವೇ ಸಂಪ್ರಹೃಷ್ಟಸ್ತದಾ ಪುನಃ ।
ಅಶೇತ ಶಯನೇ ಭೂಪ ಪ್ರವಿಶ್ಯಾಂತರ್ಜಲೇ ಹರಿಃ ॥ ೨೭ ॥

ತಂ ಪದ್ಮಂ ಪದ್ಮಗರ್ಭಾಭಂ ಪದ್ಮಾಕ್ಷಃ ಪದ್ಮಸಂಭವಃ ।
ಸಂಪ್ರಹೃಷ್ಟಮನಾ ಬ್ರಹ್ಮಾ ಭೇಜೇ ಬ್ರಾಹ್ಮಂ ತದಾಸನಂ ॥ ೨೮ ॥

ಅಥ ದೀರ್ಘೇಣ ಕಾಲೇನ ತತ್ರಾಪ್ಯಪ್ರತಿಮಾವುಭೌ ।
ಮಹಾಬಲೌ ಮಹಾಸತ್ತ್ವೌ ಭ್ರಾತರೌ ಮಧುಕೈಟಭೌ ॥ ೨೯ ॥

ಊಚತುಶ್ಚೈವ ವಚನಂ ಭಕ್ಷ್ಯೋ ವೈ ನೌ ಭವಿಷ್ಯಸಿ ।
ಏವಮುಕ್ತ್ವಾ ತು ತೌ ತಸ್ಮಿನ್ನಂತರ್ಧಾನಂ ಗತಾವುಭೌ ॥ ೩೦ ॥

ದಾರುಣಂ ತು ತಯೋರ್ಭಾವಂ ಜ್ಞಾತ್ವಾ ಪುಷ್ಕರಸಂಭವಃ ।
ಮಾಹಾತ್ಮ್ಯಂ ಚಾತ್ಮನೋ ಬುದ್ಧ್ವಾ ವಿಜ್ಞಾತು ಮುಪಚಕ್ರಮೇ ॥ ೩೧ ॥

---

೨೭. ಎಲೈ ರಾಜನೇ, ಅನಂತರ ಈಶ್ವರನು ಹೀಗೆ ಹೇಳಿ ಮಾಯವಾಗಲು ಪ್ರೀತನಾದ ಶ್ರೀಹರಿಯು ಪುನಃ ಜಲವನ್ನು ಪ್ರವೇಶಿಸಿ ಶೇಷಶಾಯಿಯಾಗಿ ಯೋಗ ನಿದ್ರೆಯನ್ನು ಮಾಡಿದನು.

೨೮. ಅನಂತರ ಪದ್ಮದ ಒಳಭಾಗದಂತೆ ಕಾಂತಿಯುಳ್ಳವನೂ, ಪದ್ಮದಂತೆ ವಿಶಾಲವಾದ ನೇತ್ರಗಳುಳ್ಳವನೂ, ಪದ್ಮಜನ್ಯನೂ ಆದ ಬ್ರಹ್ಮದೇವನು ಸಂತೋಷ ಗೊಂಡು ತನ್ನ ಆಸನವಾದ ಕಮಲವನ್ನು ಪ್ರವೇಶಿಸಿದನು.

೨೯-೩೦. ಹೀಗೆ ಬಹುಕಾಲ ಕಳೆಯಲಾಗಿ, ಅಸಹಾಯಶೂರರೂ, ಮಹಾ ಬಲಶಾಲಿಗಳೂ, ಮಹಾಕಾಯರೂ, ಸಹೋದರರೂ ಆದ ಮಧುಕೈಟಭರೆಂಬ ಇಬ್ಬರು ರಾಕ್ಷಸರು ಅವರ ಬಳಿಗೆ ಬಂದು ನೀವಿಬ್ಬರೂ ನಮ್ಮಿಬ್ಬರಿಗೂ ಆಹಾರವಾಗಿರುತ್ತೀರಿ ಎಂದು ಹೇಳಿ ಆಕ್ಷಣವೇ (ಅವರು) ಮಾಯವಾದರು.

೩೧. ಆಗ ಕಮಲೋತ್ಪನ್ನನಾದ ಬ್ರಹ್ಮದೇವನು ಆ ರಾಕ್ಷಸರ ಭಯಂಕರ ವಾದ ಭಾವವನ್ನು ತಿಳಿದು ತನ್ನ ಮಹಿಮೆಯನ್ನೂ ಆಲೋಚಿಸಿದನು. ಆಗ ಅವರ ವಿಷಯಗಳನ್ನರಿಯಲು ಉಪಕ್ರಮಿಸಿದನು.

ಕರ್ಣಿಕಾಘಟನಂ ಭೂಯೋ ನಾಭ್ಯಜಾನಾದ್ಯದಾಗತಿಂ ।
ತತಃ ಸ ಪದ್ಮನಾಲೇನ ಅವತೀರ್ಯ ರಸಾತಲಂ ॥
ಕೃಷ್ಣಾಜಿನೋತ್ತರಾಸಂಗಂ ದದೃಶೇಂತರ್ಜಲೇ ಹರಿಂ ॥ ೩೨ ॥

ಸ ಚ ತಂ ಬೋಧಯಾಮಾಸ ವಿಬುದ್ಧಂ ಚೇದಮಬ್ರವೀತ್ ।
ಭೂತೇಭ್ಯೋ ಮೇ ಭಯಂ ದೇವ ತ್ರಾಯಸ್ವೋತ್ತಿಷ್ಠ ಶಂಕುರು ॥ ೩೩ ॥

ತತಃ ಸ ಭಗವಾನ್ ವಿಷ್ಣುಃ ಸಪ್ರಹಾಸಮರಿಂದಮಃ ।
ನ ಭೇತವ್ಯಂ ನ ಭೇತವ್ಯಮಿತ್ಯುವಾಚ ಮುನಿಃ ಸ್ವಯಂ ॥ ೩೪ ॥

ತಸ್ಮಾತ್ಪೂರ್ವಂ ತ್ವಯಾ ಚೋಕ್ತಂ ಭೂತೇಭ್ಯೋ ಮೇ ಮಹದ್ಭಯಂ ।
ತಸ್ಮಾದ್ಭೂತಾದಿ ವಾಕ್ಯೈಸ್ತ್ರೈ ದೈತ್ಯೌ ತ್ವಂ ನಾಶಯಿಷ್ಯಸಿ ॥ ೩೫ ॥

---

೩೨. ಅನಂತರ ಬ್ರಹ್ಮದೇವನು ಕಮಲನಾಳದಸಂಬಂಧವನ್ನು ತಿಳಿಯದೇ ಯೋಚನೆಮಾಡಿ ಆ ನಾಳದಮೂಲಕವಾಗಿಯೇ ಪಾತಾಳಕ್ಕೆ ಹೋಗಿ ಅಲ್ಲಿ ಶೇಷ ಶಾಯಿಯೂ, ಕೃಷ್ಣಾಜಿನೋತ್ತರೀಯವುಳ್ಳವನೂ ಆದ ಶ್ರೀಮನ್ನಾರಾಯಣನನ್ನು ನೋಡಿದನು.

೩೩. ಬ್ರಹ್ಮದೇವನು ಶ್ರೀಹರಿಯನ್ನು ಎಚ್ಚರಿಸಿ, ಎದ್ದಂತಹ ಹರಿಯನ್ನು ಕುರಿತು ಎಲೈ ಸ್ವಾಮಿಯೇ, ನನಗೆ ಆ ಭೂತಗಳಿಂದ ಭಯವಾಗಿದೆ. ರಕ್ಷಿಸು, ಏಳು, ಮಂಗಳಪ್ರದನಾಗು ಎಂದು ಹೊಗಳಿದನು.

೩೪. ಅನಂತರ ಸ್ವಾಮಿಯೂ, ಯೋಗಿಯೂ, ಆದ ಶ್ರೀ ವಿಷ್ಣುವು ಎಲೈ ಬ್ರಹ್ಮದೇವನೆ, ಹೆದರಬೇಡ, ಭಯಪಡಬೇಕಿಲ್ಲವೆಂದು ಮಂದಹಾಸದೊಡನೆ ಸಮಾಧಾನಕರವಾಗಿ ಮಾತನಾಡಿದನು.

೩೫. ಆದುದರಿಂದ ಎಲೈ ಹರಿಯೇ, ನೀನು ಮೊದಲು ಯಾವ ಭೂತಗಳ ವಿಷಯವಾಗಿ ತಿಳಿಸಿದ್ದಿಯೋ ಅಂತಹ ಭೂತಗಳಿಂದ ನನಗೆ ಭಯವು ಉಂಟಾಗಿದೆ. ಅವುಗಳನ್ನು ನೀವು ನಾಶಮಾಡಬೇಕೆಂದು ಬ್ರಹ್ಮನು ಹೇಳಿದನು

ಭೂರ್ಭುವಃ ಸ್ವಸ್ತತೋ ದೇವಂ ವಿವಿಶುಸ್ತಮಯೋನಿಜಂ ।
ತತಃ ಪ್ರದಕ್ಷಿಣಂ ಕೃತ್ವಾ ತಮೇವಾಸೀನಮಾಗತಂ ॥ ೩೬ ॥

ಗತೇತಸ್ಮಿಂಸ್ತತೋಽನಂತ ಉದ್ಗೀರ್ಯ ಭ್ರಾತರೌ ಮುಖಾತ್ ।
ವಿಷ್ಣುಂ ಜಿಷ್ಣುಂ ಚ ಪ್ರೋವಾಚ ಬ್ರಹ್ಮಾಣಮಭಿರಕ್ಷತಾಂ ॥
ಮಧುಕೈಟಭಯೋರ್ಜ್ಞಾತ್ವಾ ತಯೋರಾಗಮನಂ ಪುನಃ ॥ ೩೭ ॥

ಚಕ್ರಾತೇ ರೂಪಸಾದೃಶ್ಯಂ ವಿಷ್ಣೋರ್ಜಿಷ್ಣೋಶ್ಚ ಸತ್ತಮೌ ।
ಕೃತಸಾದೃಶ್ಯರೂಪೌ ತೌ ತಾವೇವಾಭಿಮುಖೌ ಸ್ಥಿತೌ ॥ ೩೮ ॥

ತತಸ್ತೌ ಪ್ರೋಚತುರ್ದೈತ್ಯೌ ಬ್ರಹ್ಮಾಣಂ ದಾರುಣಂ ವಚಃ ।
ಅಸ್ಮಾಕಂ ಯುಧ್ಯಮಾನಾನಾಂ ಮಧ್ಯೇ ವೈ ಪ್ರಾಶ್ನಿಕೋ ಭವ ॥ ೩೯ ॥

---

೩೬. ಅನಂತರ ಭೂಃ, ಭುವಃ, ಸ್ವಃ ಎಂಬ ದೇವತೆಗಳು, ಅಯೋನಿಜನೂ, ಉಪವಿಷ್ಟನೂ ಆದ ಶ್ರೀ ಹರಿಯನ್ನು ನೋಡಿ ಪ್ರದಕ್ಷಿಣೆನಮಸ್ಕಾರಗಳನ್ನುಮಾಡಿ ಪ್ರವೇಶಿಸಿದರು.

೩೭. ಅವನು ಹೊರಟುಹೋಗಲು ಅನಂತನು ಮುಖದಿಂದ ಸಹೋದರರಾದ ಇಬ್ಬರನ್ನು ಸೃಷ್ಟಿಸಿದನು. ಅನಂತರ ಬ್ರಹ್ಮನನ್ನು ರಕ್ಷಿಸುತ್ತಿರುವವನೂ, ಜಯ ಶೀಲನೂ, ಆದ ವಿಷ್ಣುವಿಗೆ ಮಧುಕೈಟಭರೆಂಬ ರಾಕ್ಷಸರು ಬಂದುದನ್ನು ತಿಳಿದು ಹೇಳಿದನು.

೩೮. ಆಗ ಮಧುಕೈಟಭರೆಂಬ ಇಬ್ಬರು ದೈತ್ಯರು ವಿಷ್ಣುಜಿಷ್ಣುಗಳ ಆಕಾರ ದಂತಿರುವ ಆಕಾರವನ್ನು ಪಡೆದು ಅವರ ಸಂಗಡ ಯುದ್ಧಮಾಡಲು ಪರಸ್ಪರವಾಗಿ ಎದುರಿಗೆ ನಿಂತರು.

೩೯. ಅನಂತರ ಅವರಿಬ್ಬರು ದೈತ್ಯರು ಹರಿಯ ಸಂಗಡ ಯುದ್ಧಮಾಡುವು ದಕ್ಕೆ ಸಿದ್ಧರಾಗಿ ಎಲೈ ಬ್ರಹ್ಮನೇ, ನೀನು ಯುದ್ಧಮಾಡುವ ನಮಗೆ ಮಧ್ಯಸ್ಥನೂ ಜಯ ಪರಾಜಯಗಳನ್ನು ತಿಳಿಸುವ ಧರ್ಮಾಧಿಕಾರಿಯೂ ಆಗಿರು ಎಂಬುದಾಗಿ ಕಠಿಣ ವಾಗಿ ಹೇಳಿದರು.

ತತಸ್ತೌ ಜಲಮಾವಿಶ್ಯ ಸಂಸ್ತಂಭ್ಯಾಪಃ ಸ್ವಮಾಯಯಾ ।
ಚಕ್ರತುಸ್ತುಮುಲಂ ಯುದ್ಧಂ ಯಸ್ಯ ಯೇನೇಪ್ಸಿತಂ ತದಾ ॥ ೪೦ ॥

ತೇಷಾಂ ತು ಯುಧ್ಯಮಾನಾನಾಂ ದಿವ್ಯಂ ವರ್ಷಶತಂಗತಂ ।
ನ ಚ ಯುದ್ಧಮದೋತ್ಸೇಕೋ ಹ್ಯನ್ಯೋಽನ್ಯಂ ಸಂನ್ಯವರ್ತತ ॥ ೪೧ ॥

ಲಕ್ಷಣದ್ವಯಸಂಸ್ಥಾನಾದ್ರೂಪವಂತೌ ಸ್ಥಿತೇಂಗಿತೌ ।
ಸಾದೃಶ್ಯಾದ್ವ್ಯಾಕುಲಮನಾ ಬ್ರಹ್ಮಾ ಧ್ಯಾನಮುಪಾಗಮತ್ ॥ ೪೨ ॥

ಸ ತಯೋರಂತರಂ ಬುದ್ಧ್ವಾ ಬ್ರಹ್ಮಾ ದಿವ್ಯೇನ ಚಕ್ಷುಷಾ ।
ಪದ್ಮಕೇಸರಜಂ ಸೂಕ್ಷ್ಮಂ ಬಬಂಧ ಕವಚಂ ತಯೋಃ ॥ ೪೩ ॥

ಜಪತಸ್ತ್ವಭವತ್ಕನ್ಯಾ ವಿಶ್ವರೂಪಸಮುತ್ಥಿತಾ ।
ಪದ್ಮೇಂದುವದನಪ್ರಖ್ಯಾ ಪದ್ಮಹಸ್ತಾ ಶುಭಾ ಸತೀ ॥
ತಾಂ ದೃಷ್ಟ್ವಾ ವ್ಯಥಿತೌ ದೈತ್ಯೌ ಭಯಾದ್ವರ್ಣವಿವರ್ಜಿತೌ ॥ ೪೪ ॥

---

೪೦. ಅನಂತರ ಅವರಿಬ್ಬರು ಜಲವನ್ನು ಪ್ರವೇಶಿಸಿ ತಮ್ಮ ಮಾಯೆಯಿಂದ ಜಲಸ್ತಂಭವನ್ನು ಮಾಡಿ ಭಯಂಕರವಾದ ದ್ವಂದ್ವಯುದ್ಧವನ್ನು ಮಾಡಿದರು. ಯಾರು ಯಾರಿಗೆ ಏತರಲ್ಲಿ ಇಷ್ಟವಿರುತ್ತದೆಯೋ ಆಯಾ ಯುದ್ಧವನ್ನು ಮಾಡಿದರು.

೪೧. ಹೀಗೆ ಯುದ್ಧವು ನಡೆಯಲು ಒಂದುಸಹಸ್ರವರ್ಷಗಳು ಕಳೆದು ಹೋದರೂ ಕೂಡ ಯುದ್ಧದಲ್ಲಿ ಆಸಕ್ತಿಮಾತ್ರ ಸ್ವಲ್ಪವೂ ಕಡಿಮೆಯಾಗಲಿಲ್ಲ.

೪೨. ಆಗ ಬ್ರಹ್ಮನು ಸುಂದರರಾದ ಅವರಿಬ್ಬರೂ ಒಂದೇ ಸಮವಾದ ರೂಪವುಳ್ಳವರಾದ್ದರಿಂದ ಸಾದೃಶ್ಯದಿಂದ ಭೇದವನ್ನರಿಯದೇ ಧ್ಯಾನಮಾಡಿದನು.

೪೩. ಆಗ ಬ್ರಹ್ಮದೇವನು ದಿವ್ಯಜ್ಞಾನದಿಂದ ಅವರ ಅಂತರವನ್ನು ಅರಿತು ಪದ್ಮಕೇಸರದಿಂದ ಉಂಟಾದ ಸೂಕ್ಷ್ಮವಾದ ಕವಚವನ್ನು ಅವರಿಬ್ಬರಿಗೂ ಕೊಟ್ಟನು.

೪೪. ಬ್ರಹ್ಮನು ಹೀಗೆ ಜಪಿಸುತ್ತಿರಲು ವಿಶ್ವರೂಪಿಯಾದ ಭಗವಂತನಿಂದ ಪದ್ಮಚಂದ್ರರಂತೆ ಮುಖಕಾಂತಿಯುಳ್ಳವಳೂ, ಪದ್ಮಪಾಣಿಯೂ, ಮಂಗಳಾಂಗಿಯೂ ಆದ ನಾರಿಯು ಆವಿರ್ಭೂತಳಾದಳು. ಆಗ ಆ ದೈತ್ಯರಿಬ್ಬರೂ ಆಕೆಯನ್ನು ನೋಡಿ ಭಯಪಟ್ಟು ಕಾಂತಿರಹಿತರಾದರು.

ತತಃ ಪ್ರೋವಾಚ ತಾಂ ಕನ್ಯಾಂ ಬ್ರಹ್ಮಾ ಮಧುರಯಾ ಗಿರಾ ।
ಕಾತ್ರ ತ್ವಮವಗಂತವ್ಯಾ ಬ್ರೂಹಿ ಸತ್ಯಮನಿಂದಿತೇ ॥ ೪೫ ॥

ಸಾಪ್ಯಾ ಸಂಪೂಜ್ಯ ಸಾ ಕನ್ಯಾ ಬ್ರಹ್ಮಾಣಂ ಪ್ರಾಂಜಲಿಸ್ತದಾ ।
ಮೋಹಿನೀಂ ವಿದ್ಧಿ ಮಾಂ ಮಾಯಾಂ ವಿಷ್ಣೋಃ ಸಂದೇಶಕಾರಿಣೀಂ ॥ ೪೬ ॥

ತ್ವಯಾ ಸಂಕೀರ್ತ್ಯಮಾನಾಹಂ ಬ್ರಹ್ಮನ್ ಪ್ರಾಪ್ತಾ ತ್ವರಾಯುತಾ ।
ಅಸ್ಯಾಃ ಪ್ರೀತಮನಾ ಬ್ರಹ್ಮಾ ಗೌಣಂ ನಾಮ ಚಕಾರ ಹ ॥ ೪೭ ॥

ಮಯಾ ಚ ವ್ಯಾಹೃತಾ ಯಸ್ಮಾತ್ತ್ವಂಚೈವ ಸಮುಪಸ್ಥಿತಾ ।
ಮಹಾವ್ಯಾಹೃತಿರಿತ್ಯೇವ ನಾಮ ತೇ ವಿಚರಿಷ್ಯತಿ ॥ ೪೮ ॥

ಉತ್ಥಿತಾ ಚ ಶಿರೋಭಿತ್ವಾ ಸಾವಿತ್ರೀ ತೇನ ಚೋಚ್ಯತೇ ।
ಏಕೇನಾಂಶೇನ ಯಸ್ಮಾತ್ತ್ವಮನೇಕಾಂಶಾ ಭವಿಷ್ಯಸಿ ॥ ೪೯ ॥

---

೪೫. ಅನಂತರ ಬ್ರಹ್ಮನು ಆಕೆಯನ್ನು ಕುರಿತು ಮಧುರವಾದ ಮಾತಿನಿಂದ ಎಲೌ ಶತ್ರುನಾಶಕಳೇ, ನೀನು ಯಾರು? ನಿನ್ನ ನಾಮವಾವುದು? ನಿಜವನ್ನು ನುಡಿ ಎಂದು ಹೇಳಿದನು.

೪೬. ಆ ಕನ್ಯೆಯು ಬ್ರಹ್ಮದೇವನನ್ನು ಸಾವಧಾನದಾಗಿ ಪೂಜಿಸಿ ಕೈಗಳನ್ನು ಮುಗಿದುಕೊಂಡು ನಾನು ವಿಷ್ಣುವಿನ ಆಜ್ಞಾಧಾರಿಯೂ, ಮಾಯಾರೂಪಿಯೂ, ಆದ ಮೋಹಿನಿಯಾಗಿರುತ್ತೇನೆ. ನೀವು ಧ್ಯಾನಮಾಡಿರುವುದರಿಂದ ಪ್ರಾಪ್ತಳಾಗಿರುವೆನು. ಎಂದು ಅರಿಕೆಮಾಡಿಕೊಂಡಳು.

೪೭-೪೮ ಎಲೈ ಬ್ರಹ್ಮದೇವನೇ, ನೀನು ನನ್ನನ್ನು ಸ್ತುತಿಸಿದ್ದರಿಂದ ನಾನು ಬಂದಿರುವೆನೆಂದು ಮೋಹಿನಿಯು ಹೇಳಿದಳು. ಆಗ ಬ್ರಹ್ಮನು ನಾನು ವ್ಯಾಹೃತಿ ಯಿಂದ ನಿನ್ನನ್ನು ಧ್ಯಾನಮಾಡಿರುತ್ತೇನೆ. ಆದುದರಿಂದ ನೀನು ಮಹಾವ್ಯಾಹೃತಿ ಯೆಂದು ಪ್ರಖ್ಯಾತಳಾಗು. ಎಂದು ಅಲ್ಲಿಗೆ ಬಂದ ಮೋಹಿನಿಗೆ ಹೇಳಿದನು.

೪೯-೫೦. ನಾನು ಧ್ಯಾನಮಾಡಿದಾಗ ಶಿರಸ್ಸನ್ನು ಭೇದಿಸಿಕೊಂಡು ಬಂದಿರು ವುದರಿಂದ ಸಾವಿತ್ರಿಯೆಂದೂ, ಒಂದು ಅಂಶದಿಂದ ಅವತರಿಸಿರುವ ಕಾರಣ ಅನೇಕಾಂಶ

ಗೌಣಾನಿ ತಾವದೇತಾನಿ ಕರ್ಮಜಾನ್ಯಪರಾಣಿ ಚ ।
ನಾಮಾನಿ ತೇ ಭವಿಷ್ಯಂತಿ ಮತ್ಪ್ರಸಾದಾತ್ ಶುಭಾನನೇ ॥ ೫೦ ॥

ತತಸ್ತೌ ಪೀಡ್ಯಮಾನೌ ತು ವರಮೇನಮಯಾಚತಾಂ ।
ಅನಾವೃತಂ ನೌ ಮರಣಂ ಪುತ್ರತ್ವಂ ಚ ಭವೇತ್ತವ ॥ ೫೧ ॥

ತಥೇತ್ಯುಕ್ತ್ವಾ ತತಸ್ತೂರ್ಣಮನಯದ್ಯಮಸಾದನಂ ।
ಅನಯತ್ ಕೈಟಭಂ ವಿಷ್ಣುರ್ಜಿಷ್ಣುಶ್ಚಾಪ್ಯನಯನ್ಮಧುಂ ॥ ೫೨ ॥

ಏವಂ ತೌ ನಿಹತೌ ದೈತ್ಯೌ ವಿಷ್ಣುನಾ ಜಿಷ್ಣುನಾ ಸಹ ।
ಪ್ರೀತೇನ ಬ್ರಹ್ಮಣಾ ಚಾಥ ಲೋಕಾನಾಂ ಹಿತಕಾಮ್ಯಯಾ ॥ ೫೩ ॥

ಪುತ್ರತ್ವಮಿಹಾಶೇನ ಯಥಾ ಖ್ಯಾತಾ ದತ್ತೋ ನಿಬೋಧತ ।
ವಿಷ್ಣುನಾ ಜಿಷ್ಣುನಾ ಸಾರ್ಧಂ ಮಧುಕೈಟಭಯೋಸ್ತಥಾ ॥
ಸಂಪರಾಯೇ ವ್ಯತಿಕ್ರಾಂತೇ ಬ್ರಹ್ಮಾ ವಿಷ್ಣುಮಭಾಷತ ॥ ೫೪ ॥

---

ಳೆಂದೂ, ಪ್ರಸಿದ್ಧಳಾಗು. ಮತ್ತು ಎಲೌ ಮಂಗಳಾಂಗಿಯೇ, ನನ್ನ ಅನುಗ್ರಹದಿಂದ ನಿನಗೆ ಇನ್ನೂ ಅನೇಕ ನಾಮಗಳು ಬರಲೆಂದು .ನಾನು ಹಾರೈಸುತ್ತೇನೆ, ಎಂದು ಬ್ರಹ್ಮನು ಹೇಳಿದನು.

೫೧ ಅನಂತರ ಪೀಡಿತರಾದ ಅವರಿಬ್ಬರೂ, ಎಲೈ ಸ್ವಾಮಿಯೇ, ನಮಗೆ ಮರಣವು ಆಕಸ್ಮಿಕವಾಗಲಿ, ಮತ್ತು ನಿಮ್ಮ ಪುತ್ರರಾಗಿ ಜನಿಸುವಂತೆ ವರವನ್ನು ಅನುಗ್ರಹಿಸಬೇಕೆಂದು ವರವನ್ನು ಮಧುಕೈಟಭರಿಬ್ಬರೂ ಬೇಡಿಕೊಂಡರು.

೫೨. ಆಗ ವಿಷ್ಣುವು ಹಾಗೆಯೇ ಆಗಲೆಂದು ಹೇಳಿ, ತತ್ಕ್ಷಣವೇ ಕೈಟಭನನ್ನು ಸಂಹರಿಸಿ ಯಮಪುರಿಗೆ ಕಳುಹಿಸಿದನು. ಅದರಂತೆ ಜಿಷ್ಣುವು ಮಧುನಾಮಕ ದೈತ್ಯನನ್ನು ಕೊಂದು ಅವನನ್ನೂ ಯಮಪುರಿಗೆ ಅಟ್ಟಿದನು.

೫೩-೫೫. ಹೀಗೆ ವಿಷ್ಣು-ಜಿಷ್ಣುರು ಮಧುಕೈಟಭರೆಂಬ ರಾಕ್ಷಸರಿಬ್ಬರನ್ನೂ ಸಂಹಾರಮಾಡಿದರು. ಆಗ ಈಶ್ವರನು ಮಧುಕೈಟಭರಿಗೆ ವರವನ್ನು ಕೊಟ್ಟಂತೆಯೇ ವಿಷ್ಣು-ಜಿಷ್ಣುರೂ ಕೂಡ ಪುತ್ರರಾಗಿ ಹುಟ್ಟುವೆವೆಂದು ವರವನ್ನು ಕೊಟ್ಟರು. ಹೀಗೆ

**ಅದ್ಯ ವರ್ಷಶತಂ ಪೂರ್ಣಂ ಸಮಯಃ ಪ್ರತ್ಯುಪಸ್ಥಿತಃ ।**
**ಸಂಕ್ಷೇಪಸಂಪ್ಲವಂ ಘೋರಂ ಸ್ವಸ್ಥಾನಂ ಯಾಮಿ ಚಾಪ್ಯಹಂ ॥ ೫೫ ॥**

**ಸ ತಸ್ಯ ವಚಸಾ ದೇವಃ ಸಂಹಾರಮಕರೋತ್ತದಾ ।**
**ಮಹೀಂ ನಿಸ್ಥಾವರಾಂ ಕೃತ್ವಾ ಪ್ರಕೃತಿಸ್ಥಾಂಶ್ಚ ಜಂಗಮಾನ್ ॥ ೫೬ ॥**

**ಯದಿ ಗೋವಿಂದ ಭದ್ರಂ ತೇ ಕ್ಷಿಪ್ತಸ್ತೇ ಯಾದಸಾಂ ಪತಿಃ ।**
**ಬ್ರೂಹಿ ಯತ್ಕರಣೀಯಂ ಸ್ಯಾನ್ಮಯಾ ತೇ ಲಕ್ಷ್ಮೀವರ್ಧನ ॥ ೫೭ ॥**

**ಬಾಢಂ ಶೃಣು ತ್ವಂ ಹೇಮಾಭ ಪದ್ಮಯೋನೇ ವಚೋ ಮಮ ।**
**ಪ್ರಸಾದೋ ಯಸ್ತ್ವಯಾ ಲಬ್ಧ ಈಶ್ವರಾತ್ ಪುತ್ರಲಿಪ್ಸಯಾ ॥ ೫೮ ॥**

---

ಆ ಯುಗವು ಕಳೆಯಲು ಬ್ರಹ್ಮನು ವಿಷ್ಣುವಿಗೆ ಇತೆಂದನು. ಈಗ ನೂರುವರ್ಷಗಳು ಪೂರ್ಣವಾದುವು. ಘೋರವಾದ ಅವಾಂತರಪ್ರಲಯಕಾಲವು ಒದಗಿದೆ. ಆದುದರಿಂದ ನಾನು ಸ್ವಸ್ಥಾನಕ್ಕೆ ಹೋಗುವೆನೆಂದು ಬ್ರಹ್ಮನು ಹೇಳಿದನು.

೫೬. ಅವನ ಮಾತಿನಂತೆ ಸ್ವಾಮಿಯಾದ ಭಗವಂತನು ಸಂಹಾರಕ್ಕೆ ಉಪ ಕ್ರಮಿಸಿದನು. ಆಗ ಸ್ಥಾವರಜಂಗಮರೂಪವಾದ ಭೂಮಂಡಲವೆಲ್ಲವೂ ಪ್ರಕೃತಿಯಲ್ಲಿ ಲೀನವನ್ನಾಗಿ ಮಾಡಿದನು. ಅಂಥ ಪ್ರಪಂಚವೆಲ್ಲವೂ ಲೀನವಾಗಿ ಮೂಲಪ್ರಕೃತಿ ಮಾತ್ರ ಉಳಿಯುವುದು.

೫೭. ಎಲೈ ಸ್ವಾಮಿಯಾದ ಭಗವಂತನೇ, ನಿನಗೆ ಮಂಗಳವಾಗಲಿ. ಸಮುದ್ರ ರಾಜನೂ ಕೂಡ ನಿನಗೆ ಮರ್ಯಾದಿಸಿ, ಪೂಜಿಸಿ, ಗೌರವಿಸಿರುವನು. ಎಲೈ ಲಕ್ಷ್ಮೀ ಪತಿಯಾದ ಹರಿಯೇ, ನಾನು ಮಾಡಬೇಕಾದ ಕಾರ್ಯವು ಯಾವುದಿದೆ. ಆಜ್ಞಾಪಿಸ ಬೇಕೆಂದು ಕೇಳಿಕೊಂಡನು

೫೮. ಸುವರ್ಣವರ್ಣವುಳ್ಳ ಬ್ರಹ್ಮನೇ, ನನ್ನ ಮಾತನ್ನು ಕೇಳು. ಈಶ್ವರನು ನಿನಗೆ ಪುತ್ರನಾಗಿ ಹುಟ್ಟುವುದಾಗಿ ವರವನ್ನು ಕೊಟ್ಟಿರುವುದು ಸರಿಯಷ್ಟೆ, ಅದನ್ನು ವಿವರವಾಗಿ ವರ್ಣಿಸುವೆನು ಕೇಳು, ಎಂದು ಹೇಳಿದನು.

ತಂ ತಥಾ ಸಫಲಂ ಕೃತ್ವಾ ಮುಕ್ತೋಽಭೂದನೃಣೋ ಭವಾನ್ ।
ಚತುರ್ವಿಧಾನಿ ಭೂತಾನಿ ಸೃಜ ತ್ವಂ ವಿಸೃಜಸ್ವ ವಾ ॥ ೫೯ ॥

ಅವಾಪ್ಯ ಸಂಜ್ಞಾಂ ಗೋವಿಂದಾತ್ ಪದ್ಮಯೋನಿಃ ಪಿತಾಮಹಃ ।
ಪ್ರಜಾಃ ಸ್ರಷ್ಟುಮನಾಸ್ತೇಪೇ ತಪ ಉಗ್ರಂ ತತೋ ಮಹತ್ ॥ ೬೦ ॥

ತಸ್ಯೈವಂ ತಪ್ಯಮಾನಸ್ಯ ನ ಕಿಂಚಿತ್ಸಮವರ್ತತ ।
ತತೋ ದೀರ್ಘೇಣ ಕಾಲೇನ ದುಃಖಾತ್ ಕ್ರೋಧೋ ವ್ಯವರ್ಧತ ॥ ೬೧ ॥

ಸಕ್ರೋಧಾವಿಷ್ಟನೇತ್ರಾಭ್ಯಾಮಪತನ್ನಶ್ರುಬಿಂದವಃ ।
ತತಸ್ತೇಭ್ಯೋಽಶ್ರುಬಿಂದುಭ್ಯೋ ವಾತಪಿತ್ತಕಫಾತ್ಮಕಾಃ ॥ ೬೨ ॥

ಮಹಾಭಾಗಾ ಮಹಾಸತ್ವಾಃ ಸ್ವಸ್ತಿಕೈರಭ್ಯಲಂಕೃತಾಃ ।
ಪ್ರಕೀರ್ಣಕೇಶಾಃ ಸರ್ಪಾಸ್ತೇ ಪ್ರಾದುರ್ಭೂತಾ ಮಹಾವಿಷಾಃ ॥ ೬೩ ॥

ಸರ್ಪಾಂಸ್ತಥಾಗ್ರಜಾನ್ ದೃಷ್ಟ್ವಾ ಬ್ರಹ್ಮಾತ್ಮಾನಮನಿಂದತ ।
ಅಹೋ ಧಿಕ್ ತಪಸಾ ಮಹ್ಯಂ ಫಲಮೀದೃಶಕಂ ಯದಿ ॥
ಲೋಕವೈನಾಶಿಕೀ ಜಜ್ಞೇ ಆದಾವೇವ ಪ್ರಜಾ ಮಮ ॥ ೬೪ ॥

---

೫೯-೬೦. ನನ್ನ ಮಾತನ್ನು ಸಫಲವನ್ನಾಗಿ ಮಾಡು. ನೀನು ಋಣದಿಂದ ಮುಕ್ತನಾಗುವೆ. ನಾಲ್ಕುವಿಧಗಳಾದ ಭೂತಗಳನ್ನು ಸೃಷ್ಟಿಮಾಡು, ಅಥವಾ ಬಿಡು, ಹೀಗೆಂದು ಹರಿಯು ಹೇಳಲಾಗಿ ಬ್ರಹ್ಮನು ಗೋವಿಂದನಿಂದ ಆಜ್ಞೆಯನ್ನು ಪಡೆದು ಪ್ರಜೆಗಳನ್ನು ಸೃಷ್ಟಿಸಲಿಚ್ಛಿಸಿ, ಭಯಂಕರವಾದ ತಪಸ್ಸನ್ನು ಮಾಡಲುಪಕ್ರಮಿಸಿದನು.

೬೧-೬೩. ಬ್ರಹ್ಮದೇವನು ಹೀಗೆ ತಪಸ್ಸನ್ನು ಮಾಡಿದರೂ ಕೂಡ ಯಾವ ಕಾರ್ಯವೂ ಉಂಟಾಗಲಿಲ್ಲ. ಅನಂತರ ಕೆಲವು ಕಾಲ ಕಳೆಯಲಾಗಿ ಫಲವಾಗದೆಯೇ ದುಃಖದಿಂದ ಕೋಪವು ಉಂಟಾಯಿತು. ಕ್ರೋಧಾವಿಷ್ಟನಾದ ಅವನ ನೇತ್ರಗಳಿಂದ ಅಶ್ರುಬಿಂದುಗಳು ಬಿದ್ದುವು. ಅವುಗಳಿಂದ ವಾತಪಿತ್ತಕಫಗಳೂ, ಮತ್ತು ಮಹಾ ಮಹಿಮೆಯೂ, ಮಹಾಶಕ್ತಿಯೂ, ಸ್ವಸ್ತಿಕಾಲಂಕಾರವೂ, ವಿಸ್ತೃತ ಕೇಶಪಾಶಗಳೂ ಮಹಾವಿಷಗಳೂ, ಇರುವ ಭಯಂಕರಗಳಾದ ಸರ್ಪಗಳು ಜನಿಸಿದುವು.

೬೪. ಆಗ ಬ್ರಹ್ಮನು, ಹುಟ್ಟಿರುವ ಆ ಸರ್ಪಗಳನ್ನು ನೋಡಿ, ಮೊದಲೇ ನನಗೆ ಈ ಸರ್ಪಗಳು ಹುಟ್ಟಿವೆ. ಎಂದು ತನ್ನನ್ನೇ ದೂಷಿಸಿಕೊಂಡು ನನ್ನ ತಪಸ್ಸಿಗೆ ಲೋಕನಾಶಕಗಳಾದ ಈ ಸರ್ಪರೂಪವಾದ ಪ್ರಜೆಯೇ ಫಲವಾಗುವ ಪಕ್ಷದಲ್ಲಿ ತನ್ನ ತಪಸ್ಸು ನಿಷ್ಫಲವಾಯಿತೆಂದು ತನ್ನನ್ನೇ ದೂಷಿಸಿಕೊಂಡನು.

ತಸ್ಯ ತೀವ್ರಾಭವನ್ಮೂರ್ಛಾ ಕ್ರೋಧಾಮರ್ಷಸಮುದ್ಭವಾ ।
ಮೂರ್ಛಾಭಿತಾಪೇನ ತದಾ ಜಹೌ ಪ್ರಾಣಾನ್ ಪ್ರಜಾಪತಿಃ ॥ ೬೫ ॥

ತಸ್ಯಾಪ್ರತಿಮವೀರ್ಯಸ್ಯ ದೇಹಾತ್ ಕಾರುಣ್ಯಪೂರ್ವಕಂ ।
ಆತ್ಮೈಕಾದಶ ತೇ ರುದ್ರಾಃ ಪ್ರೋದ್ಭೂತಾ ರುದತಸ್ತದಾ ॥
ರೋದನಾತ್ ಖಲು ರುದ್ರಾಸ್ತೇ ರುದ್ರತ್ವಂ ತೇನ ತೇಷು ತತ್ ॥ ೬೬ ॥

ಯೇ ರುದ್ರಾಃ ಖಲು ತೇ ಪ್ರಾಣಾ ಯೇ ಪ್ರಾಣಾಸ್ತೇ ತದಾತ್ಮಕಾಃ ।
ಪ್ರಾಣಾಃ ಪ್ರಾಣಭೃತಾಂ ಜ್ಞೇಯಾಃ ಸರ್ವಭೂತೇಷ್ವವಸ್ಥಿತಾಃ ॥ ೬೭ ॥

ಅತ್ಯುಗ್ರಸ್ಯ ಮಹತ್ವಸ್ಯ ಸಾಧುನಾ ಚರಿತಸ್ಯ ಚ ।
ತಸ್ಯ ಪ್ರಾಣಾನ್ ದದೌ ಭೂಯಸ್ತ್ರಿಶೂಲೀ ನೀಲಲೋಹಿತಃ ॥
ಲಲಾಟಾತ್ ಪದ್ಮಯೋನೇಸ್ತು ಪ್ರಭುರೇಕಾದಶಾತ್ಮಕೇ ॥ ೬೮ ॥

---

೬೫. ಆಗ ಬ್ರಹ್ಮದೇವನು ಅತ್ಯಧಿಕವಾದ ಕೋಪತಾಪಾದಿಗಳಿಂದ ಮೂರ್ಛೆಯನ್ನು ಹೊಂದಿ, ಆ ಮೂರ್ಛೆಯ ತಾಪದಿಂದಲೇ ಪ್ರಾಣವನ್ನು ಬಿಟ್ಟನು.

೬೬. ಅಸದೃಶಪರಾಕ್ರಮಿಯೂ, ರೋದಿಸುವವನೂ, ಆದ ಆ ಬ್ರಹ್ಮದೇವನ ದೇಹದಿಂದ ದಯಾಸಹಿತರಾದ ಏಕಾದಶರುದ್ರರು ಅವತರಿಸಿದರು. ಅವರು ರೋದನ ಮಾಡುತ್ತಾ ಜನಿಸಿದ್ದರಿಂದ ರುದ್ರರೆಂಬ ಅನ್ವರ್ಥಕವಾದ ನಾಮವನ್ನು ಹೊಂದಿದರು.

೬೭. ಯಾರು ರುದ್ರರೋ ಅವರೇ ಪ್ರಾಣಗಳಾಗಿರುವರು. ಯಾರು ಪ್ರಾಣರೂಪರಾಗಿರುವರೋ,ಅವರೇ ರುದ್ರರಾಗಿರುವರು. ಆ ರುದ್ರರೂಪಿಗಳಾದ ಪ್ರಾಣಗಳೇ ಸರ್ವಪ್ರಾಣಿಗಳಲ್ಲಿಯೂ ಇರುತ್ತವೆ ಎಂದು ತಿಳಿಯಬೇಕು. (ಅವನೊಬ್ಬನೇ ಸರ್ವನಿಯಾಮಕನಾಗಿರುವನು.)

೬೮. ತ್ರಿಶೂಲಿಯೂ, ನೀಲಲೋಹಿತನೂ, ಏಕಾದಶರುದ್ರರೂಪಿಯೂ, ಆದ ಪರಮೇಶ್ವರನು ಬ್ರಹ್ಮದೇವನ ಲಲಾಟದಿಂದ ಆವಿರ್ಭವಿಸಿ ಮಹಾತ್ಮನೂ, ಪದ್ಮಜನ್ಮನೂ, ಆದ ಬ್ರಹ್ಮನು ಮಾಡಿದ ಅತ್ಯುಗ್ರವೂ, ಮಹತ್ತೂ, ಆದ ತಪಸ್ಸಿಗೆ ಫಲರೂಪವಾಗಿ ಅವನಿಗೆ ಪ್ರಾಣಗಳನ್ನು ಪುನಃ ಕೊಟ್ಟನು.

ಬ್ರಹ್ಮಣಃ ಸೋ ದದಾತ್ ಪ್ರಾಣಾನಾತ್ಮಜಃ ಸ ತದಾ ಪ್ರಭುಃ ।
ಪ್ರಹೃಷ್ಟವದನೋ ರುದ್ರಃ ಕಿಂಚಿತ್ ಪ್ರತ್ಯಾಗತಾಸವಂ ॥
ಅಭ್ಯಭಾಷತ್ತದಾ ದೇವೋ ಬ್ರಹ್ಮಾಣಂ ಪರಮಂ ವಚಃ ॥ ೬೯ ॥

ಉಪಯಾಚಸ್ವ ಮಾಂ ಬ್ರಹ್ಮನ್ ಸ್ಮರ್ತುಮರ್ಹಸಿ ಚಾತ್ಮನಃ ।
ಮಾಂ ಚ ವೇತ್ಥಾತ್ಮಜಂ ರುದ್ರಂ ಪ್ರಸಾದಂ ಕುರು ಮೇ ಪ್ರಭೋ ॥ ೭೦ ॥

ಶ್ರುತ್ವಾ ತ್ವಿದಂ ವಚಸ್ತಸ್ಯ ಪ್ರಭೂತಂ ಚ ಮನೋಗತಂ ।
ಪಿತಾಮಹಃ ಪ್ರಸನ್ನಾತ್ಮಾ ನೇತ್ರೇ ಫುಲ್ಲಾಂಬುಜಪ್ರಭೈಃ ॥ ೭೧ ॥

ತತಃ ಪ್ರತ್ಯಾಗತಪ್ರಾಣಃ ಸ್ನಿಗ್ಧಗಂಭೀರಯಾ ಗಿರಾ ।
ಉವಾಚ ಭಗವಾನ್ ಬ್ರಹ್ಮಾ ಶುದ್ಧಜಾಂಬೂನದಪ್ರಭಃ ॥ ೭೨ ॥

ಭೋ ಭೋ ವದ ಮಹಾಭಾಗ ಆನಂದಯಸಿ ಮೇ ಮನಃ ।
ಕೋ ಭವಾನ್ ವಿಶ್ವಭೂತಿಸ್ತ್ವಂ ಸ್ಥಿತ ಏಕಾದಶಾತ್ಮಕಃ ॥ ೭೩ ॥

---

೬೯. ಪುತ್ರರೂಪಿಯಾದ ಪರಮೇಶ್ವರನು ಬ್ರಹ್ಮದೇವನಿಗೆ ಪ್ರಾಣಗಳನ್ನು ಕೊಟ್ಟನು. ಅನಂತರ ಅವನು ಸಂತೋಷಚಿತ್ತನಾಗಿ ಬದುಕಿ ಎದ್ದಿರುವ ಬ್ರಹ್ಮನನ್ನು ಕುರಿತು, ಉತ್ತಮವಾದ ಮಾತುಗಳನ್ನಾಡಿದನು.

೭೦. ಎಲೈ, ಪಿತಾಮಹನಾದ ಬ್ರಹ್ಮನೇ, ನೀನು ನನ್ನನ್ನ ಮೊದಲೇ ವರವನ್ನು ಕೇಳಿದ್ದೆಯಲ್ಲವೆ? ಸ್ಮರಿಸಿಕೊಳ್ಳುವನಾಗು. ನಾನು ನಿನಗೆ ಪುತ್ರನಾಗಿ ಜನಿಸಿರುವೆನು. ಇದರಿಂದ ಪುತ್ರನೆಂದು ಭಾವಿಸಿ ಪರಮಾನುಗ್ರಹವನ್ನು ಮಾಡಬೇಕೆಂದು ಈಶ್ವರನು ಪ್ರಾರ್ಥಿಸಿಕೊಂಡನು.

೭೧-೭೨ ಅನಂತರ ವಿಕಸಿತವಾದ ಕಮಲದಂತಿರುವ ನೇತ್ರಗಳುಳ್ಳವನೂ, ನಿರ್ಮಲಾಂತಃಕರಣನೂ, ಪಿತಾಮಹನೂ, ಆದ ಬ್ರಹ್ಮನು ಈಶ್ವರನ ಮಾತುಗಳನ್ನು ಕೇಳಿ, ಅವನ ಮನೋಗತವಾದ ಅಭಿಮತವನ್ನು ತಿಳಿದನು. ಮತ್ತು ಸ್ವಚ್ಛವಾದ ಸುವರ್ಣಚ್ಛಾಯನೂ, ಪೂಜ್ಯನೂ, ಆದ ಬ್ರಹ್ಮನು ಪುನಃ ಪ್ರಾಣಗಳನ್ನು ಪಡೆದು ಮನೋಹರವೂ, ಗಂಭೀರವೂ, ಆದ ಮಾತುಗಳನ್ನು ಆಡಿದನು.

೭೩. ಮಹಾನುಭಾವನೂ, ವಿಶ್ವರೂಪಿಯೂ, ಏಕಾದಶರುದ್ರರೂಪಿಯೂ, ಆಗಿ ನನ್ನ ಮುಂಭಾಗದಲ್ಲಿ ನಿಂತಿರುವ ಎಲೈ ಭಗವಂತನೇ, ನೀನು ಯಾರು? ನಿನ್ನ ದರ್ಶನಮಾತ್ರದಿಂದಲೇ ನನಗೆ ಆನಂದದಾಯಕನಾಗಿರುತ್ತೀಯೆ ಎಂದು ಬ್ರಹ್ಮನು ಹೇಳಿದನು.

ಏವಮುಕ್ತೋ ಭಗವತಾ ಬ್ರಹ್ಮಣಾನಂತತೇಜಸಾ ।
ತತಃ ಪ್ರತ್ಯವದದ್ರುದ್ರೋ ಹ್ಯಭಿವಾದ್ಯಾತ್ಮಜೈಃ ಸಹ ॥ ೭೪ ॥

ಯತ್ತ್ವೇ ಪರಮಹಂ ಬ್ರಹ್ಮನ್ ಯಾಚಿತೋ ವಿಷ್ಣುನಾ ಸಹ ।
ಪುತ್ರೋ ನೋ ಭವ ದೇವೇತಿ ತ್ವತ್ತುಲ್ಯೋ ವಾಪಿ ಧೂರ್ವಹಃ ॥ ೭೫ ॥

ಲೋಕೇಷು ವಿಶ್ರುತೈಃ ಕಾರ್ಯಂ ಸರ್ವೈರ್ವಿಶ್ವಾತ್ಮಸಂಭವೈಃ ।
ವಿಷಾದಂ ತ್ಯಜ ದೇವೇಶ ಲೋಕಾಂಸ್ತ್ವಂ ಸ್ರಷ್ಟುಮರ್ಹಸಿ ॥ ೭೬ ॥

ಏವಂ ಸ ಭಗವಾನುಕ್ತೋ ಬ್ರಹ್ಮಾ ಪ್ರೀತಮನಾಭವತ್ ।
ರುದ್ರಂ ಪ್ರತ್ಯವದದ್ಭೂಯೋ ಲೋಕಾಂತೇ ನೀಲಲೋಹಿತಂ ॥ ೭೭ ॥

---

೭೪-೭೫. ಭಗವಂತನೂ, ಅತಿತೇಜಸ್ವಿಯೂ, ಆದ ಬ್ರಹ್ಮದೇವನು ಹೀಗೆ ಹೇಳಲಾಗಿ ರುದ್ರದೇವನು ತನ್ನ ಏಕಾದಶಸಂಖ್ಯಾಕರಾದ ಮಕ್ಕಳ ಸಹಿತನಾಗಿ ಬ್ರಹ್ಮದೇವನಿಗೆ ನಮಸ್ಕಾರಮಾಡಿ, ಎಲೈ ಬ್ರಹ್ಮನೇ- ನೀನು ಶ್ರೀಹರಿಯ ಸಂಗಡ ಬಂದು ನೀನೇ ನನಗೆ ಪುತ್ರನಾಗಿ ಹುಟ್ಟಬೇಕು. ಅಥವಾ ನಿನಗೆ ಸಮನೂ, ಸಮರ್ಥನೂ ಆದ ಕುಮಾರನು ಜನಿಸಬೇಕೆಂದು ವರವನ್ನು ಕೇಳಿಕೊಂಡಿದ್ದಿಯಲ್ಲವೇ ಅದನ್ನು ಸ್ಮರಿಸು ಎಂದು ಹೇಳಿದನು.

೭೬. ಎಲೈ ದೇವೇಶನಾದ ಬ್ರಹ್ಮನೇ, ನಿನಗೆ ಜನಿಸಿರುವ ವಿಶ್ವರೂಪಿಗಳೂ, ಲೋಕವಿಖ್ಯಾತರೂ ಆದ ಈ ಮಕ್ಕಳು ನಿನಗೆ ಬೇಕಾಗುವ ಸಕಲಕಾರ್ಯಗಳನ್ನೂ ಮಾಡಲು ಶಕ್ತರಾಗಿರುವರು. ಇನ್ನು ವ್ಯಸನವನ್ನು ಬಿಡು. ಲೋಕಗಳನ್ನು ಸ್ವೇಚ್ಛೆಯಾಗಿ ಸೃಷ್ಟಿಮಾಡಲು ಅರ್ಹನಾಗಿರುತ್ತೀಯೆ ಎಂದು ಹೇಳಿದನು.

೭೭. ಹೀಗೆ ರುದ್ರದೇವನು ಹೇಳಲು ಬ್ರಹ್ಮನು ಪ್ರೀತನಾಗಿ ಎಲೈ ನೀಲಲೋಹಿತನಾದ ರುದ್ರನೇ, ಲೋಕಸೃಷ್ಟಿಗೆ ನೀನು ಸಹಾಯಕನಾಗಬೇಕೆಂದು ಪುನಃ ಕೇಳಿಕೊಂಡನು.

**ಸಾಹಾಯ್ಯಂ ಮಮ ಕಾರ್ಯಾರ್ಥಂ ಪ್ರಜಾಃ ಸೃಜ ಮಯಾ ಸಹ ।**
**ಬೀಜೀ ತ್ವಂ ಸರ್ವಭೂತಾನಾಂ ತತ್ಪ್ರಪನ್ನಸ್ತಥಾ ಭವ ॥**

**ಬಾಢಮಿತ್ಯೇವ ತಾಂ ವಾಣೀಂ ಪ್ರತಿಜಗ್ರಾಹ ಶಂಕರಃ ॥ ೭೮ ॥**
**ತತಃ ಸ ಭಗವಾನ್ ಬ್ರಹ್ಮಾ ಕೃಷ್ಣಾಜಿನವಿಭೂಷಿತಃ ।**

**ಮನೋಗ್ರೇ ಸೋಽಸೃಜದ್ದೇವೋ ಭೂತಾನಾಂ ಧಾರಣಾಂ ತತಃ ॥**
**ಜಿಹ್ವಾಂ ಸರಸ್ವತೀಂ ಚೈವ ತತಸ್ತಾಂ ವಿಶ್ವರೂಪಿಣೀಂ ॥ ೭೯ ॥**

**ಭೃಗುಮಂಗಿರಸಂ ದಕ್ಷಂ ಪುಲಸ್ತ್ಯಂ ಪುಲಹಂ ಕ್ರತುಂ ।**
**ವಸಿಷ್ಠಂ ಚ ಮಹಾತೇಜಾಃ ಸಸೃಜೇ ಸಪ್ತ ಮಾನಸಾನ್ ॥ ೮೦ ॥**

**ಪುತ್ರಾನಾತ್ಮಸಮಾನನ್ಯಾನ್ ಸೋಽಸೃಜದ್ವಿಶ್ವಸಂಭವಾನ್ ।**
**ತೇಷಾಂ ಭೂಯೋಽನುಮಾರ್ಗೇಣ ಗಾವೋ ವಕ್ತ್ರಾದ್ವಿಜಜ್ಞಿರೆ ॥ ೮೧ ॥**

**ಓಂಕಾರಪ್ರಮುಖಾನ್ ವೇದಾನಭಿಮಾನ್ಯಾಶ್ಚ ದೇವತಾಃ ।**
**ಏವಮೇತಾನ್ ಯಥಾಪ್ರೋಕ್ತಾನ್ ಬ್ರಹ್ಮಾ ಲೋಕಪಿತಾಮಹಃ ॥ ೮೨ ॥**

---

೭೮. ಎಲೈ ದೇವನೇ, ಲೋಕಸೃಷ್ಟಿಗೆ ನೀನು ಸಹಾಯವನ್ನು ಮಾಡು. ನನ್ನ ಕಾರ್ಯವಾದ ಪ್ರಜಾಸೃಷ್ಟಿಯನ್ನು ನನ್ನ ಸಂಗಡ ನೀನೂ ಮಾಡು. ನೀನು ಸರ್ವಭೂತಗಳಿಗೆ ಆತ್ಮನಾಗಿರುತ್ತೀಯೆ. ಆದುದರಿಂದ ಪ್ರಖ್ಯಾತನಾಗಿರು ಎಂದು ಹೇಳಿದನು. ಅದಕ್ಕೆ ಈಶ್ವರನು ಹಾಗೆಯೇ ಆಗಲೆಂದು ಅಂಗೀಕರಿಸಿದನು.

೭೯-೮೦. ತರುವಾಯ ಕೃಷ್ಣಾಜಿನಾಲಂಕೃತನೂ, ಪೂಜ್ಯನೂ ಆದ ಬ್ರಹ್ಮನು ಮನಸ್ಸನ್ನು ಮೊದಲು ಸೃಷ್ಟಿಸಿ ಅನಂತರ ಸರ್ವಭೂತಗಳೂ, ಸರ್ವಭಾಷೆಗೂ ಆಶ್ರಯವಾದ ರಸನೆ, ಸರಸ್ವತೀ ಮತ್ತು ವಿಶ್ವರೂಪಿಣಿ ಇವರನ್ನೂ, ಅಂಗಿರಸ, ದಕ್ಷ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠರೆಂಬ ಸಪ್ತ ಮಾನಸಪುತ್ರರನ್ನೂ ಸೃಷ್ಟಿಸಿದನು.

೮೧. ಆಗ ಬ್ರಹ್ಮದೇವನು ತನಗೆ ಸಮರಾದ ಬೇರೆ ಪುತ್ರರನ್ನೂ, ಅವರನ್ನು ಅನುಸರಿಸಿರುವ ವಿಶ್ವಸಂಭೂತರಾದ ಇತರರನ್ನೂ ಮತ್ತು ಗೋವುಗಳನ್ನೂ ಮುಖ ಕಮಲದಿಂದ ಸೃಷ್ಟಿಮಾಡಿದನು.

೮೨-೮೩. ಲೋಕಪಿತಾಮಹನಾದ ಬ್ರಹ್ಮದೇವನು ಓಂಕಾರವೇ ಮೊದಲಾದ ಮಂತ್ರಗಳನ್ನೂ, ತದಭಿಮಾನಿಗಳಾದ ದೇವತೆಗಳನ್ನೂ, ದಕ್ಷನೇ ಮೊದಲಾದ

ದಕ್ಷಾದ್ಯಾನ್ ಮಾನಸಾನ್ ಪುತ್ರಾನ್ ಪ್ರೋವಾಚ ಭಗವಾನ್ ಪ್ರಭುಃ ।
ಪ್ರಜಾಃ ಸೃಜತ ಭದ್ರಂ ವೋ ರುದ್ರೇಣ ಸಹ ಧೀಮತಾ ॥ ೮೩ ॥

ಅನುಗಮ್ಯ ಮಹಾತ್ಮಾನಾಂ ಪ್ರಜಾನಾಂ ಪತಯಸ್ತದಾ ।
ವಯಮಿಚ್ಛಾಮಹೇ ದೇವ ಪ್ರಜಾಃ ಸ್ರಷ್ಟುಂ ತ್ವಯಾ ಸಹ ॥
ಬ್ರಹ್ಮಣಸ್ತ್ವೇಷ ಸಂದೇಶಸ್ತವ ಚೈವ ಮಹೇಶ್ವರ ॥ ೮೪ ॥

ತೈರೇವಮುಕ್ತೋ ಭಗವಾನ್ ರುದ್ರಃ ಪ್ರೋವಾಚ ತಾನ್ ಪ್ರಭುಃ ।
ಬ್ರಹ್ಮಣಶ್ಚಾತ್ಮಜಾ ಮಹ್ಯಂ ಪ್ರಾಣಾನ್ ಗೃಹ್ಯ ಚ ವೈ ಸುರಾಃ ॥ ೮೫ ॥

ಕೃತ್ವಾಗ್ರಜಾಗ್ರಜಾನೇತಾನ್ ಬ್ರಾಹ್ಮಣಾನಾತ್ಮಜಾನ್ಮಮ ।
ಬ್ರಹ್ಮಾದಿಸ್ತಂಬಪರ್ಯಂತಾನ್ ಸಪ್ತಲೋಕನ್ ಮಮಾತ್ಮಕಾನ್ ॥
ಭವಂತಸ್ರಷ್ಟುಮರ್ಹಂತಿ ವಚನಾನ್ಮಮ ಸ್ವಸ್ತಿ ವಃ ॥ ೮೬ ॥

ತೇನೈವಮುಕ್ತಾಃ ಪ್ರತ್ಯೂಚುಃ ರುದ್ರಮಾದ್ಯಂ ತ್ರಿಶೂಲಿನಂ ।
ಯಥಾ ಜ್ಞಾಪಯಸೇ ದೇವ ತಥಾ ತಸ್ಮೈ ಭವಿಷ್ಯತಿ ॥ ೮೭ ॥

---

ಮಾನಸಪುತ್ರರನ್ನೂ ಸೃಷ್ಟಿಸಿ ನೀನು ಮಹಾತ್ಮನಾದ ರುದ್ರದೇವನ ಸಂಗಡ ಪ್ರಜೆಗಳನ್ನು ಸೃಷ್ಟಿಮಾಡಿರಿ, ನಿಮಗೆ ಮಂಗಳವಾಗುವುದು ಎಂದು ಹೇಳಿದನು.

೮೪. ಆಗ ಪ್ರಜಾಪತಿಗಳಾದ ದಕ್ಷಾದಿಮಾನಸಪುತ್ರರು ಈಶ್ವರನ ಬಳಿಗೆ ಬಂದು ಎಲೈ ದೇವನಾದ ಈಶ್ವರನೇ, ನಿಮ್ಮ ಸಂಗಡ ನಾವೂ ಕೂಡ ಸೃಷ್ಟಿಮಾಡಲು ಬಯಸುತ್ತೇವೆ. ಹೀಗೆ ಬ್ರಹ್ಮದೇವನ ಆಜ್ಞೆಯು ಆಗಿದೆ. ಆದುದರಿಂದ ಸ್ವಾಮಿಯಾದ ಮಹೇಶ್ವರನೇ, ಇದನ್ನು ತಾವು ಒಪ್ಪಬೇಕೆಂದು ಬೇಡಿಕೊಂಡರು.

೮೫ ಅವರು ಹೀಗೆ ಹೇಳಲಾಗಿ ರುದ್ರದೇವನು ಅವರಿಗೆ ಹೇಳಿದ್ದೇನೆಂದರೆ:- ಬ್ರಹ್ಮಪುತ್ರರಾದ ದೇವತೆಗಳಿರಾ, ನನಗಾಗಿ ನೀವು ಪ್ರಾಣಗಳನ್ನು ಆಶ್ರಯಿಸಿ ಮುಂದಿನ ಸೃಷ್ಟಿಕ್ರಮಗಳನ್ನು ನಡಿಸಿರಿ ಎಂದನು.

೮೬. ಎಲೈ ಕುಮಾರರೇ, ನೀವು ಅಗ್ರಜರೂ ನನ್ನ ಪುತ್ರರೂ ಆದ ಬ್ರಾಹ್ಮಣರನ್ನು ಮುಂದೆ ಮಾಡಿಕೊಂಡು, ಬ್ರಹ್ಮಾದಿಯಾಗಿ ಸ್ತಂಬಪರ್ಯಂತರಗಳಾದ ಸಪ್ತಲೋಕಗಳನ್ನೂ ನನ್ನ ಮಾತಿನಂತೆ ಸೃಷ್ಟಿಮಾಡಿರಿ. ಈ ಕಾರ್ಯದಲ್ಲಿ ಆಸಕ್ತರಾದ ನಿಮಗೆ ವಿಘ್ನಗಳಿಲ್ಲದೆ, ಮಂಗಳವಾಗಲಿ ಎಂದನು.

೮೭. ಹೀಗೆ ಮಹೇಶ್ವರನು ಹೇಳಲಾಗಿ ಬ್ರಹ್ಮದೇವನ ಮಾನಸಪುತ್ರರು, ಆದಿಪುರುಷನೂ, ತ್ರಿಶೂಲಧಾರಿಯೂ, ಆದ ರುದ್ರದೇವನನ್ನು ಕುರಿತು, ಸ್ವಾಮಿಯೇ ತಾವು ಹೀಗೆ ಹೇಳುತ್ತೀರೋ ಹಾಗೆಯೇ ಆಗಲೆಂದು ಹೇಳಿದರು.

ಅನುಮಾನ್ಯಮಹಾದೇವಂ ಪ್ರಜಾನಾಂ ಪ್ರತಯಸ್ತದಾ ।
ಊಚುರ್ದಕ್ಷಂ ಮಹಾತ್ಮಾನಂ ಭವಾನ್ ಶ್ರೇಷ್ಠಃ ಪ್ರಜಾಪತಿಃ ॥
ತ್ವಾಂ ಪುರಸ್ಕೃತ್ಯ ಭದ್ರಂ ತೇ ಪ್ರಜಾಃ ಸ್ರಕ್ಷ್ಯಾಮಹೇ ವಯಂ ॥ ೮೮ ॥

ಏವಮುಸ್ತ್ವಿತಿ ವೈ ದಕ್ಷಃ ಪ್ರತ್ಯಪದ್ಯತ ಭಾಷಿತಂ ।
ತೈಃ ಸಹ ಸ್ರಷ್ಟುಮಾರೇಭೇ ಪ್ರಜಾಕಾಮಃ ಪ್ರಜಾಪತಿಃ ॥
ಸರ್ಗಸ್ಥಿತೇ ತತಃ ಸ್ಥಾಣೌ ಬ್ರಹ್ಮಾ ಸರ್ಗಮಥಾಸೃಜತ್ ॥ ೮೯ ॥

ಅಥಾಸ್ಯ ಸಪ್ತಮೇಽತೀತೇ ಕಲ್ಪೇ ವೈ ಸಂಬಭೂವತುಃ ।
ಋಭುಃ ಸನತ್ಕುಮಾರಶ್ಚ ತಪೋಲೋಕನಿವಾಸಿನೌ ॥
ತತೋ ಮಹರ್ಷೀನನ್ಯಾನ್ ಸ ಮಾನಸಾನಸೃಜತ್ಪ್ರಭುಃ ॥ ೯೦ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಮಧುಕೈಟಭೋತ್ಪತ್ತಿ ವಿನಾಶವರ್ಣನಂ " ನಾಮ ಪಂಚವಿಂಶೋಽಧ್ಯಾಯಃ

---

೮೮ ಆಗ ಪ್ರಜಾಪತಿಗಳು, ಮಹಾದೇವನಿಂದ ಆಜ್ಞೆಯನ್ನು ಪಡೆದು, ದಕ್ಷ ಪ್ರಜಾಪತಿಯ ಬಳಿಗೆ ಹೋಗಿ, ನೀನು ನಮ್ಮೆಲ್ಲರಿಗೂ ಹಿರಿಯವನಾಗಿರುತ್ತೀಯೆ, ಮತ್ತು ಶ್ರೇಷ್ಠನಾಗಿಯೂ, ಇರುವುದರಿಂದ ಪರಮೇಶ್ವರನ ಆಜ್ಞೆಯಂತೆ, ಸೃಷ್ಟಿ ಕಾರ್ಯದಲ್ಲಿ ಸಹಕಾರಿಯಾಗಬೇಕು, ಆದುದರಿಂದ ನೀನು ಮೊದಲು, ಸೃಷ್ಟಿಯನ್ನು ಮಾಡು, ನಾವು ನಿನ್ನನ್ನು ಅನುಸರಿಸುತ್ತೇವೆ ಎಂದರು.

೮೯. ಹಾಗೆಯೇ ಆಗಲೆಂದು ದಕ್ಷನು ಅಂಗೀಕರಿಸಿ ಪ್ರಜಾಕಾಮನಾಗಿ ಅವರೊಡನೆ ಸೃಷ್ಟಿಸಲು ಉಪಕ್ರಮಿಸಿದನು ಆಗ ಈಶ್ವರನು, ಸೃಷ್ಟಿಗೆ ಉಪಕ್ರಮಿಸಲು ದಕ್ಷನೂ ಸಹಕಾರಿಯಾಗಿದ್ದನು.

೯೦. ಅನಂತರ ಏಳನೆಯ ಕಲ್ಪವು ಅತೀತವಾಗಲು, ದಕ್ಷಬ್ರಹ್ಮನು ತಪೋಲೋಕದಲ್ಲಿ ವಾಸಮಾಡಿದ್ದ, ಋಭು ಸನತ್ಕುಮಾರರೆಂಬ ಇಬ್ಬರು ಕುಮಾರರನ್ನೂ ಬೇರೆಯಾದ, ಮಾನಸಪುತ್ರರನ್ನೂ ಮಹರ್ಷಿಗಳನ್ನೂ ಸೃಷ್ಟಿಸಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ಮಧುಕೈಟಭೋತ್ಪತ್ತಿ ವಿನಾಶವರ್ಣನೆ "ಯೆಂಬ ಇಪ್ಪತ್ತೈದನೆಯ ಅಧ್ಯಾಯವು ಸಮಾಪ್ತವಾದುದು.

## ಅಧ್ಯಾಯ ೨೫

# ಇಪ್ಪತ್ತೈದನೆಯ ಅಧ್ಯಾಯದ ಸಾರಾಂಶವು

ಜಗದೊಡೆಯರಾದ ಬ್ರಹ್ಮ ಮತ್ತು ವಿಷ್ಣು ಇವರಿಬ್ಬರೂ, ಪ್ರಲಯೋದಕದಲ್ಲಿ ಓಲಾಡುತ್ತಿರಲು ಪರಮೇಶ್ವರನು ಅಲ್ಲಿಗೆ ಬರುವುದು ಮತ್ತು ಪರಸ್ಪರ ಸಂವಾದಗಳೂ ವರ್ಣಿತವಾಗಿವೆ. ವಿಷ್ಣು ಜಿಷ್ಣುಗಳೊಡನೆ ಮಧು ಕೈಟಬರೆಂಬ ರಾಕ್ಷಸರ ಘೋರವಾದ ಕಾಳಗವೂ, ಆರಾಕ್ಷಸರ ಸಂಹಾರವೂ ಉಕ್ತವಾಗಿದೆ. ಮತ್ತು ಪರಮೇಶ್ವರನಿಂದ ವರವನ್ನು ಪಡೆದ ಬ್ರಹ್ಮದೇವನ ಮಾನಸಪುತ್ರರಾದ ಪ್ರಜಾಪ್ರತಿಗಳು ದಕ್ಷನನ್ನು ಮುಂದಿಟ್ಟುಕೊಂಡು ಪ್ರಜಾಸೃಷ್ಟಿಯನ್ನು ಮಾಡಿದವಿಷಯಗಳೂ ಪ್ರತಿಪಾದಿತವಾಗಿವೆ. ಹಾಗೆಯೇ ಸನಕ ಸನಂದನಾದಿಗಳು, ಮಹರ್ಷಿಗಳು, ಇವರೇ ಮೊದಲಾದವರ ಸೃಷ್ಟಿಕ್ರಮವೂ ನಿರೂಪಿತವಾಗಿವೆ.